# ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ

## (ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ)

(ಕನ್ನಡ ವಿಶ್ವವಿದ್ಯಾಲಯ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಕೃಷ್ಣಪ್ಪ ಕೊಂಬಾಡಿ

ಮಾರ್ಗದರ್ಶಕರು
ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು
ಚರಿತ್ರೆ ವಿಭಾಗ




ಚರಿತ್ರೆ ವಿಭಾಗ
ಸಮಾಜ ವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭-೧೮

# ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ

(ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ)

(ಕನ್ನಡ ವಿಶ್ವವಿದ್ಯಾಲಯ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ಕೃಷ್ಣಪ್ಪ ಕೊಂಚಾಡಿ**





ಮಾರ್ಗದರ್ಶಕರು

**ಡಾ. ವಿಜಯ್ ಪೂಣಚ್ಚ ತಂಬಂಡ**

ಪ್ರಾಧ್ಯಾಪಕರು

ಚರಿತ್ರೆ ವಿಭಾಗ





**ಚರಿತ್ರೆ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೧೭-೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

**ಕೃಷ್ಣಪ್ಪ ಕೊಂಚಾಡಿ** ಅವರು ನನ್ನ ಮಾರ್ಗದರ್ಶನದಲ್ಲಿ **"ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ"**(ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ) ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

ದಿನಾಂಕ : 19.12.17
ಸ್ಥಳ: ವಿದ್ಯಾರಣ್ಯ

**(ಡಾ. ವಿಜಯ್ ಪೂಣಚ್ಚ ತಂಬಂಡ)**
ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಸಂಶೋಧಕರ ಘೋಷಣಾ ಪತ್ರ

**ಡಾ. ವಿಜಯ್ ಪೂಣಚ್ಚ ತಂಬಂಡ,** ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ **"ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ"**(ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ) ಎಂಬ ಸಂಶೋಧನಾ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

ದಿನಾಂಕ: 19.12.2017

ಸ್ಥಳ : ವಿದ್ಯಾರಣ್ಯ

**(ಕೃಷ್ಣಪ್ಪ ಕೊಂಚಾಡಿ)**
ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಪರಿವಿಡಿ

# ಪಾರಿಭಾಷಿಕ ಪದಗಳು

೧. ಅಬಕಾರಿ ತೆರಿಗೆ– ಅಮಲು ದ್ರವ್ಯ ಮತ್ತು ಅಮಲು ಬರಿಸುವ ವಿವಿಧ ವಸ್ತುಗಳಿಗೆ ವಿಧಿಸುವ ಸರಕಾರಿ ತೆರಿಗೆ.

೨. ಅಳಿವೆ ಬಾಗಿಲು– ನದಿ ಸಮುದ್ರವನ್ನು ಸೇರುವ ಸ್ಥಳ.

೩. ಕಾಫಿ ಕ್ಯೂರಿಂಗ್– ಕಾಫಿ ಬೀಜದ ಸಂಸ್ಕರಣೆ ನಡೆದ ಮೇಲೆ ಫ್ಯಾಕ್ಟರಿಗಳಲ್ಲಿ ವಿವಿಧ ವೈಜ್ಞಾನಿಕ ಪ್ರಕ್ರಿಯೆಗಳಿಗೆ ಒಳಪಡಿಸಿ ಕಾಫಿಹುಡಿ ತಯಾರಿಸುವ ವಿಧಾನ.

೪. ಕರ್ಷಕ ಸಂಘಂ– ಕೃಷಿ ಸಂಬಂಧದ ಚಟುವಟಿಕೆಯಲ್ಲಿ ನಿರತರಾಗಿರುವವ ಸಂಘ (ರೈತಸಂಘ).

೫. ಕೂವೆ ಮರ– ಪಶ್ಚಿಮ ಘಟ್ಟದಲ್ಲಿ ಎತ್ತರಕ್ಕೆ ನೇರವಾಗಿ ಬೆಳೆಯುವ ಒಂದು ಜಾತಿ ಗಟ್ಟಿ ಮರ. ಇದನ್ನು ಹಡಗು ನಿರ್ಮಾಣದಲ್ಲಿ ಮತ್ತು ದೋಣಿಗಳ ನಿರ್ಮಾಣದಲ್ಲಿ ಉಪಯೋಗಿಸುತ್ತಾರೆ.

೬. ಗೇಣಿ ಪದ್ಧತಿ– ಕರಾವಳಿ ಕರ್ನಾಟಕದಲ್ಲಿ ಭೂಮಾಲೀಕರ ಕೃಷಿ ಭೂಮಿಗೆ ಪಾವತಿಸುವ ಬಾಡಿಗೆಯನ್ನು ಗೇಣಿ ಪದ್ಧತಿ.

೭. ಚಾಪೆಲ್– ಕ್ರೈಸ್ತ ಧರ್ಮದ ಧಾರ್ಮಿಕ ಶ್ರದ್ಧಾ ಕೇಂದ್ರ ಚರ್ಚನ್ನು ಹೊರತುಪಡಿಸಿ ಇತರೆ ಕಟ್ಟಡಗಳಲ್ಲಿ ಪ್ರಾರ್ಥನೆಗಾಗಿ ಉಪಯೋಗಿಸಲ್ಪಡುವ ಸ್ಥಳ.

೮. ಜನ್ಮಿ ಪದ್ಧತಿ– ಕೇರಳದಲ್ಲಿ ರಾಜ್ಯವಂಶಗಳಾಗಿರುವ ನಂಬೂದಿರಿ ಮತ್ತು ನಾಯರ್ ಮನೆತನಗಳು ಹೊಂದಿರುವ ವಂಶಪಾರಂಪರ್ಯವಾದ ಭೂ ಹಿಡುವಳಿ ಪದ್ಧತಿ.

೯. ಜಮಾಬಂಧಿ– ಸರ್ಕಾರದ ಭೂ ಕಂದಾಯವನ್ನು ಪಾವತಿಸುವ ಪ್ರಕ್ರಿಯೆ.

೯. ದಾಲ್ಚೀನಿ– ಇದೊಂದು ಕಾಡಿನಲ್ಲಿ ದೊರೆಯುವ ಸುವಾಸನೆಯುಕ್ತ ಮರ. ಇದರ ಚಕ್ಕೆಯನ್ನು ಮತ್ತು ಎಲೆಯನ್ನು ಸಾಂಬಾರ ಪದಾರ್ಥಗಳಿಗೆ ಉಪಯೋಗಿಸುತ್ತಾರೆ.

೧೦. ಪೋಪ್– ರೋಮನ್ ಕ್ಯಾಥೋಲಿಕ್ ಧರ್ಮದ ಪರಮೋಚ್ಛ ಗುರು. ಇವರು ವೆಟಿಕನ್‌ನಲ್ಲಿ ಇರುತ್ತಾರೆ.

೧೧. ಪೋಪ್‌ಬುಲ್– ಪೋಪ್‌ರವರ ಅಧಿಕಾರ ಮುದ್ರೆ (ಮೊಹರು) ಒಳಗೊಂಡಿರುವ ಆಡಳಿತಾತ್ಮಕ ಆದೇಶ ಪ್ರಪತ್ರ.

೧೨. ಬ್ಯಾರಿ ಭಾಷೆ– ಅವಿಭಜಿತ ದಕ್ಷಿಣ ಕನ್ನಡ ಮತ್ತು ಕಾಸರಗೋಡಿನಲ್ಲಿ ವಾಸಿಸುತ್ತಿರುವ ಸುನ್ನಿ ಮುಸ್ಲಿಂ ಸಮುದಾಯದಲ್ಲಿ ಶಾಫಿ ಪಂಗಡಕ್ಕೆ ಸೇರಿರುವ ಜನತೆಯ ಮಾತೃಭಾಷೆ. ಮಲಯಾಳಂ ಮತ್ತು ತುಳು ಭಾಷೆಯ ಪದ ಪ್ರಯೋಗಗಳನ್ನು ಈ ಭಾಷೆಯಲ್ಲಿ ಕಾಣಬಹುದು.

೧೩. ಬಿಲ್ಲವ ಸಮುದಾಯ– ಕರಾವಳಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವರನ್ನು ಪೂಜಾರಿ, ಶಿವಮೊಗ್ಗ ಜಿಲ್ಲೆಯಲ್ಲಿ ಇವರನ್ನು ಈಡಿಗರೆಂದು, ಚಿಕ್ಕಮಗಳೂರು ಜಿಲ್ಲೆಯಲ್ಲಿ ಹಳೆಪೈಕರೆಂದು, ಕೇರಳದಲ್ಲಿ ತೀಯ ಸಮುದಾಯ, ಬೆಳ್ಚಡ ಸಮುದಾಯ ಎಂದು ಕರೆಯುತ್ತಾರೆ.

೧೪. ಬೀಡಿ ಕೈಗಾರಿಕೆ– ಇದೊಂದು ಗೃಹ ಕೈಗಾರಿಕೆಯಾಗಿದ್ದು ಮಹಿಳೆಯರು ಕಚ್ಚಾವಸ್ತುಗಳನ್ನು ಬೀಡಿಬ್ರಾಂಚ್‌ನಿಂದ ತಂದು ಬೀಡಿಯನ್ನು ತಯಾರಿಸುತ್ತಾರೆ.

೧೫. ಭೂಸುಧಾರಣಾ ಕಾನೂನು– ಭೂಮಿಯ ಹಕ್ಕನ್ನು ಉಳುವವನಿಗೆ ನೀಡುವ ಕಾನೂನು.

೧೬. ಮಂಜಿ– ಸಾಧಾರಣ ಗಾತ್ರಕ್ಕಿಂತ ದೊಡ್ಡದಾದ ಸರಕು ಸಾಗಾಣಿಕೆಗಾಗಿ ಉಪಯೋಗಿಸುವ ಹಡಗು.

೧೭. ವಿಕಾರ್– ಚರ್ಚಿನ ಧರ್ಮಗುರು.

೧೮. ಸಫಾವಿದ್– ಅಪಘಾನಿಸ್ತಾನದ ಭಾರತಕ್ಕೆ ಹೊಂದಿರುವ ಗಡಿ ಪ್ರದೇಶದಲ್ಲಿ ಮಧ್ಯಯುಗೀನ ಕಾಲದಲ್ಲಿ ಇದ್ದ ಒಂದು ಬುಡಕಟ್ಟು ರಾಜಮನೆತನ.

೧೯. ಸರಕು– ಉಪಯುಕ್ತ ಮತ್ತು ವಿನಿಮಯ ಮೌಲ್ಯಗಳನ್ನು ಹೊಂದಿರುವ ಚರ ಮತ್ತು ಸ್ಥಿರ ಆಸ್ತಿ.

೨೦. ಸೀಳ್ನಿರು ಪ್ರವಾಹ– ಅತೀ ಹೆಚ್ಚಾದ ವೇಗದಿಂದ ಬಲವಾಗಿ ಸಮುದ್ರ ಮಧ್ಯದಿಂದ ದಂಡೆಗೆ ಅಪ್ಪಳಿಸಿ ಅಷ್ಟೇ ವೇಗದಲ್ಲಿ ಹಿಂತಿರುಗಿ ಪ್ರವಾಹಿಸುವ ಸಮುದ್ರದ ಅಲೆ.

೨೧. ಶೇಂದಿ ಮೂರ್ತೆದಾರಿಕೆ– ತಾಳೆಮರ, ತೆಂಗಿನಮರ ಹಾಗೂ ಈಚಲು ಮರಗಳ ಫಲಭರಿಕೆಯ ಕೊಂಬಿನ ತುದಿಯನ್ನು ಕತ್ತರಿಸಿ ರಸ ಸಂಗ್ರಹಿಸುವ ಕಾಯಕ (ಈ ರಸ ಅಮಲು ದ್ರವ್ಯವಾಗಿರುತ್ತದೆ).

೨೨. ಷಾಷಂಡಿ ವಿಚಾರಣೆ– ರೋಮನ್ ಕ್ಯಾಥೋಲಿಕ್ ಧರ್ಮದ ಅನುಯಾಯಿಗಳನ್ನು ಧರ್ಮ ವಿರೋಧಿ ಕಾರಣ ನೀಡಿ ನಡೆಸುವ ವಿಚಾರಣಾ ಪದ್ಧತಿ.

೨೩. ಹಂಚು ಕೈಗಾರಿಕೆ– ನದಿ ಬದಿಯಲ್ಲಿ ದೊರೆಯುವ ಮೆದು ಮಣ್ಣನ್ನು ತಂದು ಕೈಗಾರಿಕಾ ಘಟಕದಲ್ಲಿ ವಿವಿಧ ಪ್ರಕ್ರಿಯೆಗೆ ಒಳಪಡಿಸಿ ಮನೆಯ ಮೇಲ್ಹಾವಣೆಗೆ ಮಳೆ ಮತ್ತು ಬಿಸಿಲಿನಿಂದ ರಕ್ಷಣೆ ಒದಗಿಸಲು ತಯಾರು ಮಾಡುವ ಮಣ್ಣಿನ ಪರಿಕರ ಮತ್ತು ಅಲಂಕಾರಿಕ ಮಣ್ಣಿನ ವಸ್ತುಗಳನ್ನು ತಯಾರಿಸುವ ಉದ್ಯಮ.

ಅಧ್ಯಾಯ ೧

# ಪ್ರಸ್ತಾವನೆ

ಕರಾವಳಿ ಕರ್ನಾಟಕದ ಸುಮಾರು ೪೫೦ ವರ್ಷಗಳ ಚಾರಿತ್ರಿಕ ಬೆಳವಣಿಗೆಯನ್ನು ವಿಶ್ಲೇಷಿಸಿದಾಗ ವಾಣಿಜ್ಯೋದ್ಯಮ ಮತ್ತು ಸಂಘರ್ಷ ನಿರ್ಣಾಯಕ ಪಾತ್ರ ವಹಿಸಿದೆ. ಕರಾವಳಿ ಕರ್ನಾಟಕ ಭೌಗೋಳಿಕವಾಗಿ ಕಾರವಾರದ ಕಾಳಿ ನದಿಯಿಂದ ದಕ್ಷಿಣದ ನೀಲೇಶ್ವರದವರೆಗಿನ ಭೂಪ್ರದೇಶವಾಗಿದೆ. ಚಾರಿತ್ರಿಕವಾಗಿ ಈ ಪ್ರದೇಶವು ಸಾಂಬಾರು ಪದಾರ್ಥಗಳಿಗೆ ಮತ್ತು ಆಹಾರದ ಬೆಳೆಗಳ ಯಥೇಚ್ಛ ಉತ್ಪಾದನೆಗೆ ಪ್ರಸಿದ್ಧವಾಗಿದೆ. ಕರಾವಳಿ ಕರ್ನಾಟಕವು ಸಾಂಬಾರು ಪದಾರ್ಥಗಳಿಗೆ ಅದರಲ್ಲೂ ನಿರ್ದಿಷ್ಟವಾಗಿ ಕರಿಮೆಣಸಿಗೆ ಅಂತರಾಷ್ಟ್ರೀಯ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಇದಲ್ಲದೆ ಆಹಾರ ಬೆಳೆಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಈ ಭಾಗದಲ್ಲಿ ಉತ್ಪಾದಿಸಲ್ಪಟ್ಟ ಅಕ್ಕಿಯು ಗೋವಾ, ಮಲಬಾರ್, ಮುಂಬಯಿ ಮಾತ್ರವಲ್ಲದೆ ಪರ್ಷಿಯಾ ದೇಶಗಳಿಗೆ ಸಾಕಷ್ಟು ಪ್ರಮಾಣದಲ್ಲಿ ರಫ್ತಾಗುತ್ತಿತ್ತು. ಇಂತಹ ಕಾಲಘಟ್ಟದಲ್ಲಿ ಪೋರ್ಚುಗೀಸರ ಯಶಸ್ವಿ ನೌಕಾಯಾನವು ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಹೊಸ ಶಕೆಯನ್ನು ಪ್ರಾರಂಭಿಸಿತು. ಪೋರ್ಚುಗೀಸರ ಪ್ರಾರಂಭದ ೨೫೦ ವರ್ಷಗಳ ಕಾಲಾವಧಿಯಲ್ಲಿ ಕರಾವಳಿ ಕರ್ನಾಟಕವು ಕೃಷಿ ಪ್ರಧಾನ ಆರ್ಥಿಕತೆಯಿಂದ ವಾಣಿಜ್ಯೋದ್ಯಮದತ್ತ ಪಲ್ಲಟಗೊಂಡಿತ್ತು. ಇದು ಬಂಡವಾಳಶಾಹಿ ಆರ್ಥಿಕ ಬೆಳವಣಿಗೆಯ ಮೊತ್ತ ಮೊದಲ ಹಂತವಾಗಿದೆ. ಅಂದರೆ ಪೋರ್ಚುಗೀಸರ ಆಗಮನವು ಕರಾವಳಿ ಕರ್ನಾಟಕದ ಬಂಡವಾಳಶಾಹಿ ಬೆಳವಣಿಗೆಯ ಪ್ರಾರಂಭದ ಘಟ್ಟಕ್ಕೆ ಮುನ್ನುಡಿಯಾಯಿತು. ಎರಡನೆಯ ಹಂತವು ಇನ್ನೂ ಚಲನಶೀಲವಾಗಿತ್ತು. ಕೆಳದಿ ಸಂಸ್ಥಾನದ ಆಳ್ವಿಕೆಯಡಿಯಲ್ಲಿ ಈ ಪ್ರಕ್ರಿಯೆಗೆ ಪೂರಕವಾಗಿ ಬಂಡವಾಳಶಾಹಿ ಬೆಳವಣಿಗೆಯು ಮತ್ತಷ್ಟು ವೇಗದಿಂದ ನಡೆಯಿತು. ಇವರ ಆಳ್ವಿಕೆಯ ಅವಧಿಯಲ್ಲಿ ಕರಿಮೆಣಸಿನ ವಾಣಿಜ್ಯೋದ್ಯಮವನ್ನು ಕೇಂದ್ರೀಕರಿಸಿ ಹಲವಾರು ಸಂಘರ್ಷ ಮತ್ತು ಒಪ್ಪಂದಗಳು ನಡೆದವು. ಪೋರ್ಚುಗೀಸರ ವಸಾಹತುಶಾಹಿ ಸ್ವರೂಪದ ಶೋಷಣೆಗೆ ಇಕ್ಕೇರಿ ಸಂಸ್ಥಾನ ತಡೆಯೊಡ್ಡಿದ ಪರಿಣಾಮವಾಗಿ ಪೋರ್ಚುಗೀಸರು ಕೇವಲ ವಾಣಿಜ್ಯೋದ್ಯಮದ ಏಕಸ್ವಾಮ್ಯತೆಗೆ ಮಾತ್ರ ಸೀಮಿತವಾಗಿ ಕಾರ್ಯಾಚರಿಸಿದರು.

ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಬಂಡವಾಳಶಾಹಿ ಬೆಳವಣಿಗೆಯು ತನ್ನ ಪ್ರಬುದ್ಧ ಹಂತವನ್ನು ಕ್ರಮಿಸಿತು. ಹೈದರಾಲಿಯು ಹಲವಾರು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಕಂಪೆನಿಗಳಿಗೆ ಕರಾವಳಿ ಕರ್ನಾಟಕದಿಂದ ಮರ ಸಾಗಾಣಿಕೆ ಹಾಗೂ ಇನ್ನಿತರೆ ಹಲವಾರು ವಾಣಿಜ್ಯೋದ್ಯಮದ ಕಾಂಟ್ರಾಕ್ಟ್‌ಗಳನ್ನು ನೀಡುವ ಮೂಲಕ ಬಂಡವಾಳಶಾಹಿ ಬೆಳವಣಿಗೆಗೆ ಸ್ಪಂದಿಸಿತು. ಕರಿಮೆಣಸು ಕೂಡ ಇದಕ್ಕೆ ಪೂರಕವಾಗಿ ಬಳಕೆಯಾಯಿತು. ಟಿಪ್ಪುಸುಲ್ತಾನ್‌ನ ಕಾಲಾವಧಿಯಲ್ಲಿ ಅಂತರಾಷ್ಟ್ರೀಯ ಮಟ್ಟದ ನಿಯೋಗಗಳು, ವ್ಯಾಪಾರ ಕೇಂದ್ರಗಳು, ವ್ಯಾಪಾರ ವ್ಯವಹಾರಗಳ ಸ್ವರೂಪ ಹಾಗೂ ತೆರಿಗೆಯ ಪುನರ್ ರಚನೆ, ನಗದು ವಹಿವಾಟು, ಮಧ್ಯವರ್ತಿ ಲೇವಾದೇವಿ ಮುಖಾಂತರ ಬಂಡವಾಳಶಾಹಿ ಆರ್ಥಿಕತೆಯ ಪ್ರಮುಖ ಲಕ್ಷಣಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಬ್ರಿಟಿಷ್ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕದಲ್ಲಿ ಬಂಡವಾಳಶಾಹಿ ಆರ್ಥಿಕತೆಯ ಕ್ರೋಡೀಕರಣ ಪ್ರಬಲವಾಗಿ ನಡೆಯಿತು. ಈ ವಸಾಹತುಶಾಹಿ ಶೋಷಣೆಯ ಪರಿಣಾಮವಾಗಿ ರೈತಾಪಿ ಜನರ ವ್ಯಾಪಕ ಶೋಷಣೆ ನಡೆಯಿತು. ಜನತೆ ಅಸಂಖ್ಯಾತ ಕಷ್ಟ ಕಾರ್ಪಣ್ಯಗಳಿಗೆ ಬಲಿಯಾದರು. ಗುಡಿ ಕೈಗಾರಿಕೆಗಳು ನಾಶವಾಯಿತು. ಮಧ್ಯವರ್ತಿ ಲೇವಾದೇವಿಗಾರರು, ಭೂಮಾಲೀಕರು ಮತ್ತು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಐಕ್ಯ ಕಾರ್ಯಾಚರಣೆಯಿಂದ ಕರಾವಳಿ ಕರ್ನಾಟಕದ ರೈತಾಪಿ ವಿಭಾಗ ಮತ್ತು ಜನಸಾಮಾನ್ಯರು ತೊಂದರೆಗೆ ಒಳಗಾದರು. ಇದರ ವಿರುದ್ಧ ಬೆಳೆದು ಬಂದ ವಿವಿಧ ರೀತಿಯ ಪ್ರತಿರೋಧಗಳನ್ನು ವಿವರವಾಗಿ ಚರ್ಚಿಸಲಾಗಿದೆ. ಒಟ್ಟಿನಲ್ಲಿ ಈ ಕಾಲಘಟ್ಟದಲ್ಲಿ ಒಂದೆಡೆ ಬಂಡವಾಳದ ಪ್ರಬಲ ಕ್ರೋಡೀಕರಣವಾದರೆ, ಮತ್ತೊಂದೆಡೆ ಭೂಮಾಲೀಕ ಜಮೀನ್ದಾರಿ ಪದ್ಧತಿಯ ಬೆಳವಣಿಗೆಗೆ ಪೂರಕ ವಾತಾವರಣಗಳು ನಿರ್ಮಾಣವಾದವು. ೨೦ನೇ ಶತಮಾನದಲ್ಲಿ ಸಾಮ್ರಾಜ್ಯಶಾಹಿ ಆರ್ಥಿಕ ಬಿಕ್ಕಟ್ಟಿನಿಂದ ಪಾರಾಗಲು ಸಾಮ್ರಾಜ್ಯಶಾಹಿ ದೇಶಗಳ ಮಧ್ಯೆ ಹೊಸ ಹೊಸ ದೇಶಗಳನ್ನು ವಸಾಹತುಶಾಹಿ ಶೋಷಣೆಗೆ ಒಳಪಡಿಸಲು ಪರಸ್ಪರ ಸ್ಪರ್ಧೆ ಬೆಳೆದು ಬಂತು. ಇದರ ಪರಿಣಾಮವಾಗಿ ಮೂಡಿ ಬಂದ ಎರಡು ಮಹಾಯುದ್ಧಗಳಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷವು ಕರಾವಳಿ ಕರ್ನಾಟಕದಲ್ಲಿ ನಿರ್ವಹಿಸಿದ ಚಾರಿತ್ರಿಕ ಪಾತ್ರವನ್ನು ವಿಶ್ಲೇಷಿಸಲಾಗಿದೆ. ವ್ಯಾಪಕವಾಗಿ ಬೆಳೆದು ಬಂದ ರೈತಾಪಿ ಜನರ ಹೋರಾಟ, ಕೃಷಿ ಕೂಲಿ ಕಾರ್ಮಿಕರ ಹೋರಾಟ, ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕ ವರ್ಗದ ಹೋರಾಟಗಳು ಸ್ವಾತಂತ್ರ್ಯ ಚಳುವಳಿಯೊಂದಿಗೆ ಬ್ರಿಟಿಷ್ ವ್ಯವಸ್ಥೆಗೆ ನೀಡಿದ ಅಂತಿಮ ಪ್ರಹಾರಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಕರ್ನಾಟಕ ಚರಿತ್ರೆ ಬರವಣಿಗೆಗಳಲ್ಲಿ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಆಯಾಮಗಳನ್ನು ಕೇಂದ್ರೀಕರಿಸಿದ ಅಧ್ಯಯನಗಳು ಪ್ರಬಲವಾಗಿವೆ. ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ಈ ನಿಟ್ಟಿನಲ್ಲಿ ಬಹಳ ಕಡಿಮೆ ಎನ್ನುವ ವಿಚಾರವನ್ನು ಗಮನಿಸಬಹುದಾಗಿದೆ. ವಸಾಹತು ಪೂರ್ವ ಕಾಲದಲ್ಲಾಗಲೀ, ವಸಾಹತು ಕಾಲದಲ್ಲಾಗಲೀ ಹಾಗೂ ವಸಾಹತ್ತೋತ್ತರ ಕಾಲಘಟ್ಟಗಳಲ್ಲಾಗಲೀ ಕಂಡು ಬರುವ ಸಾಮಾನ್ಯ ಅಂಶವೆಂದರೆ, ಅಧಿಕಾರಕ್ಕೆ ಸಂಬಂಧಿಸಿದ ಮೂಲಭೂತ ವಿಷಯವಾದ ವಾಣಿಜ್ಯೋದ್ಯಮವು ಒಂದು ರಾಜ್ಯದ ಆಂತರಿಕ ಹಾಗೂ ಬಾಹ್ಯ ಶಕ್ತಿಗಳೆರಡನ್ನೂ ಬೆಸೆದುಕೊಂಡಿರುವ ಅಧಿಕಾರ ಕೇಂದ್ರವಾಗಿದೆ. ಭಾರತ ಉಪಖಂಡದ ಕರಾವಳಿ ಪ್ರದೇಶಗಳಲ್ಲಿ ಇದರ ಪ್ರಕ್ರಿಯೆಯನ್ನು ಮತ್ತು

ಪರಿಣಾಮಗಳನ್ನು ಗುರುತಿಸುವ ಉದ್ದೇಶಗಳನ್ನು ಪ್ರಸ್ತುತ ಮಹಾಪ್ರಬಂಧವು ಇಟ್ಟುಕೊಂಡಿದೆ. ಪೋರ್ಚುಗೀಸರು ಆರಂಭದಲ್ಲಿ ವಿಜಯನಗರದ ಸಾಮಂತ ಅರಸರಾದ ಹೊನ್ನಾವರದ ಮಲ್ಲಾರಾವ್ ಜೊತೆಗೆ ಉತ್ತಮ ಸಂಬಂಧವನ್ನು ಬೆಳೆಸಿಕೊಂಡರು. ನಂತರ ಅವರು ಉಳ್ಳಾಲದ ರಾಣಿ ಅಬ್ಬಕ್ಕದೇವಿಯೊಂದಿಗೆ ರಾಜಕೀಯ ಮತ್ತು ವಾಣಿಜ್ಯ ಸಂಬಂಧಗಳನ್ನು ಇಟ್ಟುಕೊಂಡರು. ರಾಣಿಯು ಪೋರ್ಚುಗೀಸರೊಂದಿಗೆ ವಾಣಿಜ್ಯ ಸಂಬಂಧಗಳನ್ನು ಬೆಳೆಸಿಕೊಳ್ಳುವ ಮೂಲಕ ತನ್ನ ರಾಜ್ಯದ ಅಭಿವೃದ್ಧಿಗಾಗಿ ಆ ಸಂಬಂಧದ ಪ್ರತಿಫಲ ಪಡೆಯಲು ಶ್ರಮಿಸಿದರೂ, ನಂತರ ನಡೆದ ರಾಜಕೀಯ ವಿದ್ಯಮಾನಗಳಿಂದಾಗಿ ಆಕೆಯು ಪೋರ್ಚುಗೀಸರ ನಿಯಂತ್ರಣಕ್ಕೆ ಒಳಗಾಗಬೇಕಾಯಿತು. ಪೋರ್ಚುಗೀಸರು ಮುಂದೆ ತಮ್ಮ ವ್ಯಾಪಾರ ವ್ಯವಹಾರ, ವಾಣಿಜ್ಯ ಸಂಬಂಧಗಳನ್ನು ಕೆಳದಿ ಅರಸರೊಂದಿಗೆ ಇಟ್ಟುಕೊಂಡರು. ಅಬ್ಬಕ್ಕದೇವಿಯ ರೀತಿಯಲ್ಲಿಯೇ ಕೆಳದಿ ಸಂಸ್ಥಾನದ ಅರಸರು ಕೂಡ ಆರಂಭದಲ್ಲಿ ಸಮಾನ ಸಂಬಂಧಗಳನ್ನು ಇಟ್ಟುಕೊಂಡಿದ್ದರೂ ನಂತರದ ದಿನಗಳಲ್ಲಿ ವ್ಯಾಪಾರ – ವ್ಯವಹಾರದಲ್ಲಿ ಪೋರ್ಚುಗೀಸರು ಮೇಲುಗೈ ಸಾಧಿಸಲು ಆರಂಭಿಸಿದಾಗ ಕೆಳದಿಯ ಅರಸರುಗಳಿಗೆ ಸಂಘರ್ಷ ಅನಿವಾರ್ಯವಾಯಿತು. ದೀರ್ಘ ಕಾಲ ನಡೆದ ಈ ಸಂಘರ್ಷಗಳಲ್ಲಿ ಪೋರ್ಚುಗೀಸರು ಕೆಳದಿ ಅರಸರುಗಳಿಗೆ ಶರಣಾಗತರಾಗಬೇಕಾಯಿತು. ಅಲ್ಲಿಂದ ಕೆಳದಿ ಸಂಸ್ಥಾನವು ಶಕ್ತಿಶಾಲಿ ರಾಜ್ಯವಾಗಿ ಹೊರಹೊಮ್ಮಿತ್ತು. ಮುಂದೆ ಮೈಸೂರಿನ ಹೈದರಾಲಿಯ ಆಕ್ರಮಣದಿಂದಾಗಿ ಕೆಳದಿ ಅರಸರ ಅಂತ್ಯವಾಯಿತು. ಹೈದರಾಲಿಯ ಮರಣಾನಂತರ ಅಧಿಕಾರಕ್ಕೆ ಬಂದ ಟಿಪ್ಪು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯನ್ನು ನೇರವಾಗಿ ಎದುರಿಸಿ ಶ್ರೀರಂಗಪಟ್ಟಣದಲ್ಲಿ ಹತನಾದ ನಂತರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ವಾಣಿಜ್ಯೋದ್ಯಮವನ್ನು ಸೇರಿದಂತೆ ಕರಾವಳಿ ಕರ್ನಾಟಕದ ಎಲ್ಲಾ ಆರ್ಥಿಕತೆಯನ್ನು ತನ್ನ ಕೈವಶ ಮಾಡಿಕೊಂಡು ಪ್ರಬಲ ಶಕ್ತಿಯಾಗಿ ಮೆರೆಯಿತು. ಇಂಗ್ಲೀಷರ ಆಳ್ವಿಕೆಯ ಕಾಲದಲ್ಲಿ ಪ್ರಬಲಗೊಂಡ ವಸಾಹತುಶಾಹಿ ಅರ್ಥ ವ್ಯವಸ್ಥೆಯು ಕೃಷಿ ಬಂಡವಾಳ ಹೂಡಿಕೆಯಿಂದ ನಿಧಾನವಾಗಿ ಕೈಗಾರಿಕಾ ಬಂಡವಾಳ ಹೂಡಿಕೆಯ ಪ್ರಕ್ರಿಯೆಗೆ ಒಳಗಾಯಿತು.

ಇಪ್ಪತ್ತನೇ ಶತಮಾನದಲ್ಲಿ ಕೈಗಾರಿಕಾ ಬಂಡವಾಳ ಮತ್ತು ಅದಕ್ಕೆ ಸಾಟಿಯಾದ ಕಾರ್ಮಿಕರು/ ದುಡಿಯುವ ವರ್ಗಗಳ ಆರ್ಥಿಕ ಸಂಬಂಧಗಳ ಹೋರಾಟವನ್ನು ಕಾಣಬಹುದು. ಭಾರತದ ಸ್ವಾತಂತ್ರ್ಯ ಹೋರಾಟವು ಈ ಕಾಲದಲ್ಲಿಯೇ ಒಟ್ಟೊಟ್ಟಿಗೆ ಸಾಗಿರುವುದನ್ನು ನಾವು ಗಮನಿಸಬಹುದು. ಹೀಗೆ ಪೋರ್ಚುಗೀಸರ ಕಾಲಘಟ್ಟದಿಂದ ಬ್ರಿಟಿಷ್ ವಸಾಹತು ಕಾಲಘಟ್ಟದ ವರೆಗೆ ವಾಣಿಜ್ಯ ವ್ಯವಹಾರಗಳಿಗೆ ಸಂಬಂಧಿಸಿದಂತೆ ಕರಾವಳಿ ಕರ್ನಾಟಕದಲ್ಲಿ ನಡೆದ ಹೋರಾಟ, ಸಂಘರ್ಷ ಮತ್ತು ಅಧಿಕಾರದ ಆಳ್ವಿಕೆಯ ನೆಲೆಗಳನ್ನು ಅಧ್ಯಯನ ಮಾಡಲು ಪ್ರಸ್ತುತ ಅಧ್ಯಯನವು ಪ್ರಯತ್ನಿಸುತ್ತದೆ.

* * * *

ಕರಾವಳಿ ಕರ್ನಾಟಕದ ಚರಿತ್ರೆಯನ್ನು ವಾಣಿಜ್ಯೋದ್ಯಮದ ಚರಿತ್ರೆ ಹಾಗೂ ಅವುಗಳಿಗೆ ಸಂಬಂಧಿಸಿ ನಡೆದ ಪ್ರತಿರೋಧ, ಸಂಘರ್ಷಗಳ ಹಾಗೂ ವಾಣಿಜ್ಯ ಸಂಬಂಧಗಳ ಬಗೆಗೆ ಹೆಚ್ಚಿನ ಅಧ್ಯಯನಗಳಾಗಲೀ, ಚರ್ಚೆಗಳಾಗಲೀ ನಡೆದಿರುವುದಿಲ್ಲ. ಈ ನಿಟ್ಟಿನಲ್ಲಿ ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗಿನ ಕರಾವಳಿ ಕರ್ನಾಟಕಕ್ಕೆ ಅನ್ವಯಿಸಿದಂತೆ ಈ ಅಧ್ಯಯನವು ಪ್ರಪ್ರಥಮವಾದುದಾಗಿದೆ.

ಆದುದರಿಂದ ಪ್ರಸ್ತುತ ಚರ್ಚಿಸಲ್ಪಟ್ಟಿರುವ ಕಾಲಘಟ್ಟದಲ್ಲಿ ಹಲವಾರು ಸೈದ್ಧಾಂತಿಕ ಚರ್ಚೆಗಳಿಗೆ ಉತ್ತರವನ್ನು ಕಂಡು ಹಿಡಿಯುವ ಪ್ರಯತ್ನವನ್ನು ಮಾಡಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿ ವ್ಯಾಪಕ ಪ್ರಮಾಣದಲ್ಲಿ ಆಕರಗಳನ್ನು, ಮಾಹಿತಿಗಳನ್ನು, ವಿವರಗಳನ್ನು ಸಂಗ್ರಹಿಸಲಾಗಿದೆ. ಪ್ರಾಥಮಿಕ ಆಕರಗಳ ನೆಲೆಯಲ್ಲಿ ಗೋವಾದ ಪಣಜಿ, ಚೆನ್ನೈ ಪತ್ರಾಗಾರ, ಮುಂಬಯಿ ಪತ್ರಾಗಾರ, ಮಂಗಳೂರಿನ ಕೆಟಿಸಿ ಪತ್ರಾಗಾರ, ಮುಂಬಯಿನ ಸೆಂಟ್ ಝೇವಿಯರ್ ಹಿಸ್ಟೋರಿಕಲ್ ರಿಸರ್ಚ್ ಸೆಂಟರ್‌ಗಳಿಗೆ ಭೇಟಿ ನೀಡಿ ವಿವರಗಳನ್ನು ಸಂಗ್ರಹಿಸಲಾಗಿದೆ. ಈ ಕಾಲಘಟ್ಟಕ್ಕೆ ಸಂಬಂಧಿಸಿದ ಹೆಚ್ಚಿನ ದಾಖಲೆಗಳು ಈಗಾಗಲೇ ಪ್ರಕಟಿತ ಕೃತಿಗಳಲ್ಲಿ ಪ್ರಸ್ತಾಪಿಸಲಾಗಿದೆ. ಇದೇ ರೀತಿಯಲ್ಲಿ ಸುಮಾರು ನೂರಕ್ಕೂ ಹೆಚ್ಚಿನ ದ್ವಿತೀಯ ಆಕರಗಳನ್ನು ಪ್ರಬಂಧದಲ್ಲಿ ಅಳವಡಿಸಿಕೊಳ್ಳಲಾಗಿದೆ. ಸ್ವಾತಂತ್ರ್ಯ ಪೂರ್ವದ ಪತ್ರಿಕಾ ಸುದ್ದಿಗಳನ್ನು ಹಾಗೂ ಮೌಖಿಕ ಮಾಹಿತಿಗಳನ್ನು, ಕ್ಷೇತ್ರ ಸಂದರ್ಶನ, ವಿಚಾರ ಸಂಕಿರಣ ಹಾಗೂ ವಿದ್ವಾಂಸರುಗಳೊಂದಿಗೆ ಮಾಹಿತಿಗಳನ್ನು, ಸಂವಾದ ನಡೆಸುವ ಮೂಲಕ ಮಹಾಪ್ರಬಂಧವನ್ನು ರೂಪಿಸಲಾಗಿದೆ.

ವಾಣಿಜ್ಯೋದ್ಯಮದ ಮೂಲ ಆಧಾರ ಸರಕು. ಕಚ್ಚಾವಸ್ತುಗಳು ಪ್ರಕೃತಿಯಿಂದ ದೊರೆತ ಕೂಡಲೇ ತನ್ನಷ್ಟಕ್ಕೆ ತಾನೇ ಅದು ಮೌಲ್ಯವನ್ನು ಅಂದರೆ ಉಪಯುಕ್ತ ಅಥವಾ ವಿನಿಮಯ ಮೌಲ್ಯವನ್ನು ಹೊಂದಿರುವುದಿಲ್ಲ. ಇದನ್ನೇ ಸರಳೀಕರಿಸಿ ಹೇಳುವುದಾದರೆ, ಕಚ್ಚಾ ವಸ್ತುಗಳು ತನ್ನಷ್ಟಕ್ಕೆ ತಾನೇ ಸರಕಾಗುವುದಿಲ್ಲ. ಅದು ನಿರ್ದಿಷ್ಟವಾದ ಪೂರ್ವಭಾವಿ ಕಾರ್ಯಗಳನ್ನು ಪೂರೈಸಲೇಬೇಕು. ಯಾವುದೇ ಉತ್ಪನ್ನಗಳು ಕೆಲವು ನಿರ್ದಿಷ್ಟ ಸಾಮಾಜಿಕ ಸಂಬಂಧಗಳೊಂದಿಗೆ ಉತ್ಪಾದನಾ ಸಂಬಂಧವೇರ್ಪಟ್ಟಾಗ ಮಾತ್ರವೇ ಅದು ಸರಕಿನ ರೂಪ ಪಡೆಯುತ್ತದೆ. ಆದುದರಿಂದ ಸರಕಿನ ಉತ್ಪಾದನೆ ಎಂದರೆ ಒಂದು ನಿರ್ದಿಷ್ಟ ಚಾರಿತ್ರಿಕ ಘಟ್ಟದಲ್ಲಿ ಕಾಣಿಸಿಕೊಂಡಿರುವ ನಿರ್ದಿಷ್ಟ ಪೂರ್ವ ನಿರ್ಧಾರಿತ ಪ್ರಕ್ರಿಯೆಯಾಗಿದೆ. ಸರಕು ಯಾವತ್ತೂ ಕೇವಲ ಸರಕಾಗಿರುವುದಿಲ್ಲ. ಬದಲಾಗಿ ಅದು ಆಯಾ ಕಾಲಘಟ್ಟದ ಸಮಜೋ– ಆರ್ಥಿಕದ ಕೇಂದ್ರ ಬಿಂದುವಾಗಿರುತ್ತದೆ. ಅದು ಆರ್ಥಿಕತೆಯ ಕೇಂದ್ರ ಬಿಂದುವಾಗಿರುವುದರಿಂದ ಚಾರಿತ್ರಿಕ ವಿಶ್ಲೇಷಣೆಗೆ ಒಳಪಡುತ್ತದೆ. ಇದು ಸಹಜವಾಗಿಯೇ ಆಯಾ ಸಂದರ್ಭದ ಪ್ರಭುತ್ವಗಳ ವಿಶ್ಲೇಷಣೆಗೂ ದಾರಿ ಮಾಡಿಕೊಡುತ್ತದೆ. ಆದುದರಿಂದ ವಾಣಿಜ್ಯೋದ್ಯಮದ ಮೂಲ ಸರಕು ಆಗಿರುವುದರಿಂದ ಸಹಜವಾಗಿಯೇ ಅದು ಸರಕು ಮತ್ತು ಆ ಸರಕುಗಳೊಂದಿಗೆ ಅಂತರ್ಗತವಾಗಿರುವ ವೈರುಧ್ಯಗಳ, ಸಂಘರ್ಷಗಳ, ಸಹಕಾರಗಳ ಅಧ್ಯಯನ ಎಂದೇ ಅರ್ಥವಾಗುತ್ತದೆ. ಹೀಗಾಗಿ, ಒಟ್ಟಾರೆ ಈ ವಿಶ್ಲೇಷಣೆಯನ್ನು ನಿರ್ದಿಷ್ಟ ಕಾಲಘಟ್ಟದ ಪ್ರಭುತ್ವದ ವಿಶ್ಲೇಷಣೆಯಾಗಿಯೂ ಗಮನಿಸಬಹುದು.

ಈ ನಾಲ್ಕೂವರೆ ಶತಮಾನಗಳ ಅವಧಿಯಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷಕ್ಕೆ ಸಂಬಂಧಿಸಿದ ವಿವಿಧ ಆಯಾಮಗಳನ್ನು ಮೂರು ಪ್ರಮುಖ ಘಟ್ಟಗಳಲ್ಲಿ ಗುರುತಿಸಲಾಗಿದೆ.

ಒಂದನೆಯದಾಗಿ, ೧೪೯೮ರಿಂದ ೧೭೬೩ರವರೆಗಿನ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಘಟ್ಟದಲ್ಲಿ ಪೋರ್ಚುಗೀಸರು ತಮ್ಮ ಯಶಸ್ವಿ ನೌಕಾಯಾನದೊಂದಿಗೆ ಕರಾವಳಿ ಕರ್ನಾಟಕದ ಸಾಮಂತ ರಾಜರುಗಳ ಮೇಲೆ ಹತೋಟಿಯನ್ನು ಸಾಧಿಸಿ ವಾಣಿಜ್ಯೋದ್ಯಮವನ್ನು ಕೈವಶ ಮಾಡಿಕೊಂಡಿರುವ ಕಾಲಾವಧಿಯಾಗಿದೆ. ಇದೇ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕದಲ್ಲಿ ಕೆಳದಿಯ ನಾಯಕರು ಪ್ರವರ್ಧಮಾನಕ್ಕೆ ಬಂದು

ಹದಿನೆಂಟನೇ ಶತಮಾನದಲ್ಲಿ ಪೋರ್ಚುಗೀಸರನ್ನು ನಿಯಂತ್ರಿಸಲು ಸಾಧ್ಯವಾಯಿತು. ಈ ಸಂದರ್ಭದಲ್ಲಿ ನಡೆದ ವಾಣಿಜ್ಯೋದ್ಯಮ ಸಂಘರ್ಷಗಳ ವಿವಿಧ ಘಟ್ಟಗಳನ್ನು ವಿಶ್ಲೇಷಿಸಲಾಗಿದೆ.

ಎರಡನೆಯದಾಗಿ, ೧೭೬೩ರ ನಂತರ ಕೆಳದಿ ರಾಜವಂಶದ ಪತನದೊಂದಿಗೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್‌ರ ಅಧಿಕಾರಾವಧಿಯಲ್ಲಿ ಕರಾವಳಿ ಕರ್ನಾಟಕದಲ್ಲಿ ನಡೆದ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ವಿವಿಧ ಸ್ವರೂಪಗಳನ್ನು ಮತ್ತೊಂದು ಘಟ್ಟವನ್ನಾಗಿ ಗುರುತಿಸಲಾಗಿದೆ. ಈ ಅವಧಿಯಲ್ಲಿ ಹೈದರಾಲಿಗೆ ಬ್ರಿಟಿಷರ ಮೇಲೆ ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಸಂಪೂರ್ಣ ಮೇಲುಗೈ ಸಾಧಿಸಿ, ಒಪ್ಪಂದಗಳನ್ನು ನಿರ್ದೇಶಿಸಿ, ಯುದ್ಧೋಪಕರಣಗಳನ್ನು ಪಡೆಯಲು ಸಾಧ್ಯವಾಯಿತು. ಹೈದರಾಲಿಯ ನಂತರ ಟಿಪ್ಪುಸುಲ್ತಾನ್ ವಾಣಿಜ್ಯೋದ್ಯಮವನ್ನು ಸಮರ್ಥವಾಗಿ ಉಪಯೋಗಿಸಿ ತನ್ನ ರಾಜ್ಯದ ಆರ್ಥಿಕತೆಗಾಗಿ ಹಾಗೂ ಯುದ್ಧದ ಖರ್ಚು ವೆಚ್ಚಕ್ಕಾಗಿ ಉಪಯೋಗಿಸಿರುವುದನ್ನು ವಿಶ್ಲೇಷಿಸಲಾಗಿದೆ. ಅಂತರಾಷ್ಟ್ರೀಯ ಮಟ್ಟದಲ್ಲಿ ವಿವಿಧ ನಿಯೋಗಗಳನ್ನು ಕಳುಹಿಸಿ ಬ್ರಿಟಿಷರ ವಿರುದ್ಧ ಮೇಲುಗೈ ಸಾಧಿಸಲು ಶತಾಯಗತಾಯ ಪ್ರಯತ್ನಿಸಿರುವುದು ಎರಡನೆಯ ಘಟ್ಟದ ಪ್ರಮುಖ ಅಂಶವಾಗಿದೆ.

ಮೂರನೆಯದಾಗಿ, ಟಿಪ್ಪು ಶ್ರೀರಂಗ ಪಟ್ಟಣದಲ್ಲಿ ಮಡಿಯುವುದರೊಂದಿಗೆ, ಸಮಗ್ರ ಕರಾವಳಿ ಕರ್ನಾಟಕ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸುಪರ್ದಿಗೆ ಬಂದಿತು. ಆದುದರಿಂದ ೧೭೯೯ರಿಂದ ವಸಾಹತುಶಾಹಿಯ ಕೊನೆಯವರೆಗಿನ ಹಂತದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ವಿವಿಧ ಆಯಾಮಗಳನ್ನು ಪಡೆದುಕೊಂಡಿದೆ. ೧೯ನೇ ಶತಮಾನದಲ್ಲಿ ಕರಾವಳಿ ಕರ್ನಾಟಕದ ರೈತಾಪಿ ಜನತೆ ಬ್ರಿಟಿಷರ ವಿರುದ್ಧ ತೆರಿಗೆಯನ್ನು ಪಾವತಿಸದೆ ಎರಡು ಬಾರಿ ತೀವ್ರ ಪ್ರತಿರೋಧ ಒಡ್ಡಿದೆ. ಅನಂತರ ಅಮರಸುಳ್ಯ ದಂಗೆಯ ಸ್ವರೂಪದಲ್ಲೂ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಆಯಾಮಗಳನ್ನು ಗುರುತಿಸಬಹುದು. ೧೮೬೩ರಲ್ಲಿ ಅಂತರರಾಷ್ಟ್ರೀಯ ಹತ್ತಿ ಕೈಗಾರಿಕಾ–ವಾಣಿಜ್ಯೋದ್ಯಮಿಗಳ ಸಂಘರ್ಷದ ಪರಿಣಾಮವಾಗಿ ಉಂಟಾದ ಕೆನರಾ ವಿಭಜನೆಯ ವಿವಿಧ ಆಯಾಮಗಳನ್ನು ವಿಶ್ಲೇಷಿಸಲಾಗಿದೆ. ಬಳಿಕ ಬಾಸೆಲ್ ಮಿಶನ್ ಸಂಸ್ಥೆಯು ಕೈಗಾರಿಕೆ ಮತ್ತು ವಾಣಿಜ್ಯೋದ್ಯಮ ರಂಗವನ್ನು ಪ್ರವೇಶಿಸುವ ಮೂಲಕ ಕರಾವಳಿ ಕರ್ನಾಟಕದಲ್ಲಿ ಹೊಸ ಸ್ವರೂಪದ ವಾಣಿಜ್ಯೋದ್ಯಮ ಸಂಬಂಧಗಳು ಬೆಳೆದು ಬಂದವು. ಪ್ರಥಮ ಮಹಾಯುದ್ಧ ಮತ್ತು ಎರಡನೇ ಮಹಾಯುದ್ಧದಲ್ಲಿ ಬ್ರಿಟಿಷ್ ಸರಕಾರ ಈ ಸಂಸ್ಥೆಗಳ ಕೈಗಾರಿಕಾ ಘಟಕ ಮತ್ತು ವಾಣಿಜ್ಯ ಸಂಸ್ಥೆಗಳ ಮೇಲೆ ನಿರ್ಬಂಧ ಹೇರಿ ಹೊಸ ಸಂಘರ್ಷಕ್ಕೆ ಹೇತುವಾಯಿತು. ಇಪ್ಪತ್ತನೇ ಶತಮಾನದ ಪ್ರಥಮಾರ್ಧದಲ್ಲಿ ಕರಾವಳಿ ಕರ್ನಾಟಕದಲ್ಲಿ ರೈತಾಪಿ – ಕೃಷಿ ಕೂಲಿ ಕಾರ್ಮಿಕರ ಹೋರಾಟ, ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಹೋರಾಟ ಹಾಗೂ ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ವಿಮೋಚನಾ ಹೋರಾಟಗಳೊಂದಿಗೆ ವಾಣಿಜ್ಯೋದ್ಯಮ ಮತ್ತು ಸಂಘರ್ಷವನ್ನು ಗುರುತಿಸಲಾಗಿದೆ. ನಿರ್ದಿಷ್ಟವಾಗಿ ೧೯೪೭ರ ನಂತರದ ಅವಧಿಯಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಸ್ವರೂಪದಲ್ಲಿ ನಿರ್ಣಾಯಕ ವ್ಯತ್ಯಾಸವಿದೆ. ಈ ರೀತಿ ವಿವಿಧ ಹಂತಗಳಲ್ಲಿ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಬೆಳೆದು ಬಂದ ಸ್ವರೂಪಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ.

ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ನಡೆದು ಬಂದ ಘಟ್ಟಗಳನ್ನು ಹೀಗೆ ವಿವರಿಸಬಹುದು. ಕರಾವಳಿ ಕರ್ನಾಟಕದಲ್ಲಿ ೧೬ನೇ ಶತಮಾನದ ಪ್ರಾರಂಭದಿಂದ ವಸಾಹತುಶಾಹಿ ಕಾಲಘಟ್ಟದವರೆಗಿನ ವಾಣಿಜ್ಯೋದ್ಯಮ ಸಂಘರ್ಷದ ಸ್ವರೂಪದ ವಿಶ್ಲೇಷಣೆ ನೇರವಾಗಿ ಉತ್ಪಾದನೆ, ವಿತರಣೆ, ವಿನಿಮಯ ಮತ್ತು ಅನುಭೋಗ ಎಂಬ ಅರ್ಥಶಾಸ್ತ್ರದ ನಾಲ್ಕು ಎಳೆಗಳನ್ನು ವಿಶ್ಲೇಷಿಸುವುದೇ ಆಗಿರುತ್ತದೆ. ಭಾರತಕ್ಕೆ ಪೋರ್ಚುಗೀಸರು ಸಮುದ್ರ ಮಾರ್ಗವನ್ನು ಕಂಡು ಹಿಡಿಯುವ ಮೂಲಕ ೧೬ನೇ ಶತಮಾನದಿಂದ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮಕ್ಕೆ ವೇಗ ದೊರೆಯಿತು. ವಾಣಿಜ್ಯೋದ್ಯಮದಿಂದ ದೊರೆಯುವ ಲಾಭ ಯುರೋಪಿಯನ್ ದೇಶಗಳ ಆಕ್ರಮಣಕಾರಿ ವಸಾಹತುಶಾಹಿ ಧೋರಣೆಗೆ ಕಾರಣವಾಯಿತು. ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ, ವ್ಯವಹಾರಗಳು ಈ ಪ್ರಕ್ರಿಯೆಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

ಕರಾವಳಿ ಕರ್ನಾಟಕದ ವಿವಿಧ ಹಂತಗಳಲ್ಲಿ ನಡೆದ ಸಂಘರ್ಷಗಳಲ್ಲಿ ವಾಣಿಜ್ಯೋದ್ಯಮ ಹಿತಾಸಕ್ತಿಯು ವಹಿಸಿದ ಪಾತ್ರವನ್ನು ಕಟ್ಟಿಕೊಡುವುದು ಈ ಅಧ್ಯಯನದ ಮೂಲಭೂತ ಉದ್ದೇಶವಾಗಿದೆ. ಪ್ರಾರಂಭದ ಮೂರು ಶತಮಾನದಲ್ಲಿ ರಾಜಪ್ರಭುತ್ವಗಳು ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನಾಯಕತ್ವ ವಹಿಸಿತು. ಅನಂತರ ಬ್ರಿಟಿಷರ ವಿರುದ್ಧದ ಸಂಘರ್ಷದಲ್ಲಿ ಜನಸಾಮಾನ್ಯರು, ರೈತಾಪಿ, ಕಾರ್ಮಿಕ ವರ್ಗ ಭಾಗವಹಿಸುವ ಮೂಲಕ ಸಂಘರ್ಷದ ವಿಭಿನ್ನ ಸ್ವರೂಪವನ್ನು ಗುರುತಿಸುವುದು ಈ ಅಧ್ಯಯನದ ಮೂಲಭೂತ ಉದ್ದೇಶವಾಗಿದೆ.

## ಅಧ್ಯಯನದ ಸಮೀಕ್ಷೆ, ಮಹತ್ವ, ವ್ಯಾಪ್ತಿ ಮತ್ತು ಸ್ವರೂಪ

ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷವನ್ನು ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲ ಘಟ್ಟದವರೆಗೆ ಸಂಬಂಧಿಸಿ ನಡೆದಂತಹ ಅಧ್ಯಯನಗಳ ಸಮೀಕ್ಷೆಯನ್ನು ಮಂಡಿಸಲಾಗಿದೆ. ಈ ಅಧ್ಯಯನದ ಪ್ರಾರಂಭದ ಘಟ್ಟವಾಗಿರುವ ಪೋರ್ಚುಗೀಸರ ಆಗಮನಕ್ಕೆ ಸಂಬಂಧಿಸಿ ಕೆಲವೇ ಕೆಲವು ಸಂಖ್ಯೆಯಲ್ಲಿ ನಮ್ಮ ದೇಶದ ಇತಿಹಾಸಕಾರರು ಅಧ್ಯಯನ ನಡೆಸಿರುತ್ತಾರೆ. ಅವರುಗಳಲ್ಲಿ ಬಹಳ ಮುಖ್ಯವಾಗಿ ಕೆ.ಎಂ.ಪಣಿಕ್ಕರ್‌ರವರು ಮೊದಲಿಗರು ಇವರು ರಚಿಸಿರುವ ಮಲಬಾಲ್ ಎಂಡ್ ದ ಪೋರ್ಚುಗ್ರೀಸ್ (೧೯೨೯) ಎಂಬ ಕೃತಿಯಲ್ಲಿ ೧೫ನೇ ಶತಮಾನದ ಯುರೋಪಿನ ವಾಣಿಜ್ಯದ ಸನ್ನಿವೇಶ ಹಾಗೂ ನೌಕಾಯಾನದ ಅನಿವಾರ್ಯತೆಗಳ ಬಗ್ಗೆ ವಿವರವಾಗಿ ವಿಶ್ಲೇಷಿಸಲಾಗಿದೆ. ಉಳಿದಂತೆ ವಾಸ್ಕೋಡಗಾಮನು ಭಾರತ ಪಶ್ಚಿಮ ಕರಾವಳಿಯಲ್ಲಿ ಕಲ್ಲಿ ಕೋಟೆಗೆ ಬಂದು ಅನಂತರ ಅಲ್ಲಿ ಆತನು ವ್ಯಾಪಾರ ವ್ಯವಹಾರ ಕುದುರಿಸುವುದರೊಂದಿಗೆ ನಡೆಸಿದ ಸಂಘರ್ಷಗಳ ವಿವರವನ್ನು ನೀಡಲಾಗಿದೆ. ಬಹಳ ಮುಖ್ಯವಾಗಿ ಆತನು ಪೋರ್ಚಗಲ್‌ಗೆ ಹಿಂತಿರುಗಿ ನಡೆಸಿದ ಮರು ಪ್ರಯಾಣದಲ್ಲಿ ಕರಾವಳಿ ಕರ್ನಾಟಕದಲ್ಲಿ ನಡೆಸಿದ ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ನಡೆದ ಸಂಘರ್ಷ ಪ್ರಕ್ರಿಯೆಗಳ ಬಗ್ಗೆ ಹೆಚ್ಚಿನ ವಿವರಗಳು ಈ ಕೃತಿಯಲ್ಲಿ ಲಭ್ಯವಿರುವುದಲ್ಲ. ಆದರೂ ಸಹ ಈ ಕೃತಿಯು ಈ ಅಧ್ಯಯನದ ಪ್ರಾರಂಭಿಕ ಹಂತದ ಬೆಳವಣಿಗಳನ್ನು ಅಭ್ಯಸಿಸಲು ಅತೀ ಅಗತ್ಯವಿದೆ. ಈ ಗ್ರಂಥದಲ್ಲಿ ವಾಸ್ಕೋಡಗಾಮನಿಂದ ಪ್ರಾರಂಭಗೊಂಡು ಮಲಬಾರ್ ಪ್ರಾಂತ್ಯದಲ್ಲಿ ಪೋರ್ಚುಗೀಸರು ನಡೆಸಿದ ವಾಣಿಜ್ಯೋದ್ಯೊಮಕ್ಕೆ ಸಂಬಂಧಿಸಿದ

ವಿವರಗಳನ್ನು ಸಮಗ್ರವಾಗಿ ನೀಡಲಾಗಿದೆ. ಪ್ರಾರಂಭದ ೧೬ನೇ ಶತಮಾನದ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ವಾಣಿಜ್ಯೋದ್ಯಮಕ್ಕೆ ಅಗತ್ಯ ಮಾಹಿತಿ ಒದಗಿಸುತ್ತದೆ.

ಎಚ್. ಮೂರ್ಸ್‌ಸ್ಟೆನ್‌ರವರು ರೂಲರ್ಸ್ ಆಫ್ ಇಂಡಿಯಾ ಮಾಲಿಕೆಯಲ್ಲಿ ೧೮೯೭ರಲ್ಲಿ ರಚಿಸಿರುವ 'ಆಲ್ಬುಕರ್ಕ್' (೧೮೯೭) ಎಂಬ ಕೃತಿ ಪ್ರಾರಂಭದ ಅವಧಿಯಲ್ಲಿ ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರು ನಡೆಸಿದ ನಡೆಸಿದ ವಾಣಿಜ್ಯೋದ್ಯಮಕ್ಕಾಗಿನ ಸಂಘರ್ಷಗಳ ಬಗ್ಗೆ ಸಾಕಷ್ಟು ಮಹತ್ವ ಪೂರ್ಣ ವಿವರಣೆ ನೀಡುತ್ತದೆ. ಪೋರ್ಚುಗೀಸ್ ಪ್ರಭುತ್ವ ಮುಂದಿನ ದಿನಗಳಲ್ಲಿ ಭಾರತದಲ್ಲಿ ಪ್ರಬಲವಾಗಿ ನೆಲೆಯೂರಲು ಹೊನ್ನಾವರದ ಸಾಮಂತ ರಾಜರ ದಂಡನಾಯಕ ತಿಮೋಜ (ತಿಮ್ಮನಾಯಕ)ನ ನಿರ್ಣಾಯಕ ಪಾತ್ರವನ್ನು ಗುರುತಿಸಲಾಗಿದೆ. ಇದೇ ರೀತಿ ಪೋರ್ಚುಗೀಸರಿಗೆ ಪ್ರಾರಂಭದ ದಿನಗಳಲ್ಲಿ ಕೆಲ ಸಾಮಂತ ರಾಜರುಗಳು ನೀಡಿದ ಪ್ರತಿರೋಧದ ವಿವರಣೆಗಳೂ ಒಳಗೊಂಡಂತೆ ಬಹಳ ಮುಖ್ಯವಾಗಿ ಸ್ಥಳೀಯ ವ್ಯಾಪಾರಿಗಳು ಮತ್ತು ಸ್ಥಳೀಯ ಜನತೆ ತೋರಿಸಿದ ಪ್ರತಿರೋಧಗಳ ಬಗ್ಗೆ ಸಾಕಷ್ಟು ವಿವರಗಳನ್ನು ಈ ಕೃತಿಯು ನೀಡುತ್ತದೆ.

ಸುಮಾರು ೧೪೯೮ ರಿಂದ ೧೭೬೩ ರ ಅವಧಿಯ ವರೆಗಿನ ಸಮಗ್ರ ವಿವರಗಳ ಬಗ್ಗೆ ಬಿ.ಎಸ್.ಶಾಸ್ತ್ರಿಯವರ 'ಕರಾವಳಿ ಕರ್ನಾಟಕ ಮತ್ತು ಪೋರ್ಚುಗೀಸ್ ರಿಲೇಷನ್ಸ್ ೧೪೯೮-೧೭೬೩(೨೦೦೦)' ಎಂಬ ಕೃತಿಯೂ ಮಹತ್ವ ಪೂರ್ಣ ದಾಖಲೆಯಾಗಿದೆ. ಇದು ಪೋರ್ಚುಗೀಸ್ ದಾಖಲೆಗಳನ್ನು ಅಭ್ಯಸಿಸಿ ರಚಿಸಿರುವ ಕೃತಿಯಾಗಿದ್ದು ಕರಾವಳಿ ಕರ್ನಾಟಕದ ಸಾಮಂತ ರಾಜರುಗಳು ಪೋರ್ಚುಗೀಸರೊಂದಿಗೆ ಸಂಘರ್ಷದ ಬದಲು ಸೌಹಾರ್ದತೆಯನ್ನು ಬಯಸಿರುವುದನ್ನು ವಿಶ್ಲೇಷಿಸಲಾಗಿದೆ. ಆದರೆ ಪ್ರಾರಂಭದಿಂದಲೇ ಸ್ಥಳೀಯ ವರ್ತಕ ಸಮುದಾಯಗಳು ಅದರಲ್ಲೂ ನಿರ್ದಿಷ್ಟವಾಗಿ ಭಟ್ಕಳ ಬಂದರು ಹೊನ್ನಾವರ, ಗಂಗೊಳ್ಳಿ ಮತ್ತು ಬಸ್ರೂರುಗಳಲ್ಲಿ ನಡೆಸಿರುವ ಪ್ರತಿರೋಧಗಳನ್ನು ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಈ ರೀತಿಯ ಪ್ರತಿರೋಧಗಳು ಮತ್ತು ಅದರಲ್ಲಿ ಅಡಕವಾಗಿರುವ ವಾಣಿಜ್ಯದ ಹಿತಾಸಕ್ತಿಗಳನ್ನು ವಿಶೇಷ ಮಹತ್ವ ನೀಡಿ ಚರ್ಚಿಸಲಾಗಿದೆ ಈ ರೀತಿಯ ವಿಶ್ಲೇಷಣೆಗೆ ಪೂರಕವಾಗುವಂತೆ ಆರ್.ಎಸ್.ವೈಟ್‌ವೇ, ಗಜೆಟಿಯರ್ ಮತ್ತು ಪತ್ರಾಗಾರದ ದಾಖಲೆಗಳನ್ನು ಬಳಸಿಕೊಂಡು ನನ್ನ ವಿಶ್ಲೇಷಣೆಯನ್ನು ವಾಣಿಜ್ಯೋದ್ಯಮದ ದೃಷ್ಟಿಯಿಂದ ವಿಶ್ಲೇಷಿಸಿರುತ್ತೇನೆ.

ಪ್ರಾರಂಭದಿಂದ ಅಂದರೆ ೧೪೯೮-೧೭೬೩ರವರೆಗಿನ ಪೋರ್ಚುಗೀಸ್ ಮತ್ತು ಕೆಳದಿಯ ರಾಜರುಗಳ ನಡುವಿನ ಸಂಬಂಧಗಳನ್ನು ಬಿ.ಎಸ್.ಶಾಸ್ತ್ರಿಯವರು ಕೇವಲ ಯುದ್ಧಗಳು ಮತ್ತು ಒಪ್ಪಂದಗಳೆಂಬ ಹಿನ್ನೆಲೆಯಲ್ಲಿ ವಿಶ್ಲೇಷಿಸಿರುತ್ತಾರೆ. ಆದರೆ ಈ ಎಲ್ಲಾ ಯುದ್ಧಗಳ ಮೂಲ ಹಿತಾಸಕ್ತಿ ವ್ಯಾಪಾರ ಮತ್ತು ವ್ಯವಹಾರವಾಗಿದ್ದು, ಅದರಲ್ಲಿ ಕರಿ ಮೆಣಸು ನಿರ್ಣಾಯಕ ಪಾತ್ರವಹಿಸಿರುವುದನ್ನು ಸ್ಪಷ್ಟವಾಗಿ ಗುರುತಿಸಿ ವಿಶ್ಲೇಷಿಸಲಾಗಿದೆ ಪೋರ್ಚುಗೀಸ್ ಮತ್ತು ಕೆಳದಿಯ ರಾಜರುಗಳ ಮಧ್ಯೆ ನಡೆದ ಯುದ್ಧದ ನಂತರ ನಡೆದ ಎಲ್ಲಾ ಒಪ್ಪಂದಗಳಲ್ಲಿ ಕರಿಮೆಣಸಿನ ಪ್ರಮಾಣ, ದರ, ಮತ್ತು ಸಂಗ್ರಹಣೆ ಸಂಬಂಧಿಸಿ ನಿಯಮಗಳು ಇದ್ದುದನ್ನು ವಿಶ್ಲೇಷಿಸಲಾಗಿದೆ. ಬಿ.ಎಸ್ ಶಾಸ್ತ್ರಿಯವರು ವಿಶ್ಲೇಷಿಸಿರುವ ಅಂಶಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಪರಸ್ಪರ ತೌಲನಿಕ ನೆಲೆಯಲ್ಲಿ ಉಪಯೋಗಿಸಲಾಗಿದೆ. ವ್ಯಾಪಾರ ವ್ಯವಹಾರದಲ್ಲಿ ದರ ಸಮರದ ಪ್ರಕ್ರಿಯೆ

ಈ ಅವಧಿಯಲ್ಲಿ ಮೊಟ್ಟ ಮೊದಲ ಬಾರಿಗೆ ಕೆಳದಿಯ ರಾಜರುಗಳು ಕರಾವಳಿ ಕರ್ನಾಟಕದಲ್ಲಿ ಪ್ರಾರಂಭಿಸಿರುವುದನ್ನು ಚರ್ಚೆಗೆ ಕೈಗೆತ್ತಿಕೊಳ್ಳಲಾಗಿದೆ.

ಪ್ರಸ್ತುತ ಪ್ರಬಂಧದ ಅಧ್ಯಯನಕ್ಕೆ ಸೈದ್ಧಾಂತಿಕ ಚೌಕಟ್ಟನ್ನು ನಿರೂಪಿಸಲು ನೆರವಾದ ಕೃತಿ ಸಂಜಯ್ ಸುಬ್ರಹ್ಮಣ್ಯಂರವರ 'ದಿ ಪೊಲಿಟಿಕಲ್ ಇಕಾನಮಿ ಆಫ್ ಕಾಮರ್ಸ್ ಸದರನ್ ಇಂಡಿಯಾ ೧೫೦೦-೧೬೫೦' (೨೦೦೪) ಬಹಳ ಮುಖ್ಯವಾಗಿರುತ್ತದೆ. ಈ ಕೃತಿಯಲ್ಲಿ ಈಗಾಗಲೇ ವಿವರಿಸಿರುವ ಚರಿತ್ರೆಗಾರರ ವಿಶ್ಲೇಷಣಾ ವಿಧಾನಕ್ಕೆ ವ್ಯತಿರಿಕ್ತವಾಗಿ ಪ್ರತಿಯೊಂದು ಪ್ರಮುಖ ಬಂದರುಗಳಲ್ಲಿ ಪೋರ್ಚುಗೀಸರಿಗೆ ಎದುರಾದ ಪ್ರತಿರೋಧವನ್ನು ವರ್ತಕರು ಮತ್ತು ಜನತೆಯ ಭಾಗವಹಿಸುವಿಕೆಯ ಹಿನ್ನೆಲೆಯಿಂದ ವಿಶ್ಲೇಷಿಸುವ ಮುಖಾಂತರ ವಾಣಿಜ್ಯ ಹಿತಾಸಕ್ತಿ ಮತ್ತು ರಾಜಕೀಯವನ್ನು ಜತೆ ಜತೆಯಲ್ಲಿ ವಿಶ್ಲೇಷಿಸಿರುತ್ತಾರೆ. ಇವರು ಈ ಕೃತಿಯಲ್ಲಿ ಬಂಡವಾಳದ ಬೆಳವಣಿಗೆಯ ಸ್ಥಿತ್ಯಂತರದ ಕಾಲಘಟ್ಟವನ್ನು ಪೋರ್ಚುಗೀಸರ ಅವಧಿಗೆ ಸಂಬಂಧಿಸಿದಂತೆ ದಕ್ಷಿಣ ಭಾರತದ ಮಟ್ಟಿಗೆ ಬೆಳೆದು ಬಂದ ವಿವಿಧ ಹಂತಗಳನ್ನು ವಿಶ್ಲೇಷಿಸಿರುತ್ತಾರೆ ಈ ದೃಷ್ಟಿಕೋನದ ಪಡಿಯಚ್ಚಿನಲ್ಲಿ ಸಂಜಯ್ ಸುಬ್ರಹ್ಮಣ್ಯಂರವರ ಶೈಲಿಯನ್ನು ಕರಾವಳಿ ಕರ್ನಾಟಕಕ್ಕೆ ಅನ್ವಯಿಸುವ ಪ್ರಯತ್ನವನ್ನು ಮಾಡಲಾಗಿದೆ.

ಈ ಕಾಲಘಟ್ಟಕ್ಕೆ ಸಂಬಂಧಿಸಿ ಪ್ರಮುಖ ಅಂತರಾಷ್ಟ್ರೀಯ ಮಟ್ಟದ ಇಂಡೋ ಪೋರ್ಚುಗೀಸ್ ಚರಿತ್ರೆಕಾರರಾದ ಆರ್.ಎಸ್. ವೈಟ್ ವ್ಹೇ, ಎಂ.ಎನ್. ಪಿಯರ್ಸ್‌ಸನ್, ಎ.ಆರ್. ಡಿಸ್ಕಿ ಮೊದಲಾದವರ ಕೃತಿಗಳನ್ನು ಉಪಯೋಗಿಸಲಾಗಿದೆ. ಆರ್.ಎಸ್.ವೈಟ್ ವ್ಹೇಯವರ 'ದಿ ರೈಸ್ ಆಫ್ ಪೋರ್ಚುಗೀಸ ಪವರ್ ಇನ್ ಇಂಡಿಯಾ' (೧೮೯೯) ಎಂಬ ಕೃತಿಯನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ. ಇದು ಇಂಗ್ಲೀಷ್ ಅಧಿಕಾರಿಯಾಗಿ ಪೋರ್ಚುಗೀಸರ ಕಾಲದ ಚರಿತ್ರಕಾರರ ಕೃತಿಗಳನ್ನು ಉಪಯೋಗಿಸಿಕೊಂಡು ೧೮ನೇ ಶತಮಾನದಲ್ಲಿ ರಚಿಸಿರುವ ಕೃತಿಯಾಗಿದೆ ಇದರಲ್ಲಿ ಯುರೋಪಿಯನ್ನರ ಆಗಮನದ ಪ್ರಾರಂಭದ ೫೦ ವರ್ಷಗಳ ಪೋರ್ಚುಗೀಸರ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಂಘರ್ಷಗಳನ್ನು ತೌಲನಿಕವಾಗಿ ವಿಮರ್ಶೆ ಮಾಡಲಾಗಿದೆ ಇವುಗಳಿಗೆ ವ್ಯಾಪಾರ ಮತ್ತು ವಾಣಿಜ್ಯೋದ್ಯಮ ಕಣ್ಣೋಟವನ್ನು ಅಳವಡಿಸಿ ಮರು ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಇದೇ ರೀತಿ ಎ.ಆರ್. ಡಿಸ್ನಿಯವರ 'ಟ್ವಿ ಲೈಟ್ ಆಫ್ ದ ಪೆಪ್ಪರ್ ಎಂಪೈರ್- ಪೋರ್ಚುಗೀಸ್ ಟ್ರೇಡ್ ಇನ್ ಸೌತ್ ವೆಸ್ಟ್ ಇಂಡಿಯಾ ಇನ್ ದ ಅರ್ಲಿ ಸೆವೆಂಟೀನ್ತ್ ಸೆಂಚುರಿ' (೨೦೧೧) ಎಂಬ ಕೃತಿಯು ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಪೋರ್ಚುಗೀಸರು ರೂಪಿಸಿದ ತಂತ್ರಗಳು, ನಡೆಸಿದ ಯುದ್ಧಗಳ ಬಗ್ಗೆ ವಿವರಣೆಗಳಿವೆ. ಬಹಳ ನಿರ್ದಿಷ್ಟವಾಗಿ ಕೆನರಾ ಪ್ರಾಂತ್ಯದ ಪೆಪ್ಪರ್ ರಾಜಕೀಯ, ಪೋರ್ಚುಗೀಸರ ಭಾರತದ ರಾಜಕೀಯ ಭವಿಷ್ಯವನ್ನು ಬರೆದ ಘಟನೆಗಳನ್ನು ಸಾಮಾನ್ಯ ಘಟನೆಯೆಂಬ ರೀತಿಯಲ್ಲಿ ವಿವರಿಸಿರುತ್ತಾರೆ. ಈ ಅವಧಿಯಲ್ಲಿ ಕರಾವಳಿ ಕರ್ನಾಟಕದಿಂದ ರಫ್ತು ಆದ ಕರಿಮೆಣಸಿನ ಪ್ರಮಾಣ, ಅದರ ಮಹತ್ವ ಹಾಗೂ ಇದರಿಂದಾಗಿ ಪೋರ್ಚುಗೀಸ್ ಸಾಮ್ರಾಜ್ಯ ಅನುಭವಿಸಿದ ಆರ್ಥಿಕ ಬಿಕ್ಕಟ್ಟು ಇವುಗಳನ್ನು ಮುಖಾಮುಖಿಗೊಳಿಸಲ್ಪಟ್ಟಿದೆ. ಈ ಪ್ರಕ್ರಿಯೆಯಲ್ಲಿ ಕೆಳದಿ ಸಂಸ್ಥಾನ ನಡೆಸಿದ ಸಂಘರ್ಷಗಳ ವಾಣಿಜ್ಯ ಮಹತ್ವವನ್ನು ಕೂಡಾ ಗಮನಿಸಲಾಗಿದೆ.

ಇದೇ ರೀತಿ ಎಂ.ಎನ್. ಪಿಯರ್ ಸನ್‌ರವರ ಕೃತಿ 'ಕೋಸ್ಟಲ್ ವೆಸ್ಟರ್ನ್ ಇಂಡಿಯಾ–ಸ್ಟಡೀಸ್ ಫ್ರಮ್ ದ ಪೋರ್ಚುಗೀಸ್ ರೆಕಾರ್ಡ್' (೨೦೦೪) ಎಂಬ ಕೃತಿಯಲ್ಲಿ ಪೋರ್ಚುಗೀಸರ ೧೭೬೩ರ ವರೆಗಿನ ವ್ಯಾಪಾರ ವ್ಯವಹಾರಗಳ ಬಗ್ಗೆ ಎಳೆಎಳೆಯಾಗಿ ವಿಶ್ಲೇಷಣೆಯನ್ನು ಮಾಡಲಾಗಿದೆ. ವಾಸ್ತವಿಕವಾಗಿ ಇದು ಸಮಗ್ರ ಪೋರ್ಚುಗೀಸ್ ಭಾರತದ ವ್ಯಾಪಾರ ವ್ಯವಹಾರದ ಚಿತ್ರಣವನ್ನು ಕೊಡುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧಕ್ಕೆ ಸಂಬಂಧಿಸಿ ಆ ಕೃತಿಯ ಒಟ್ಟಾರೆ ವಿಶ್ಲೇಷಣೆಯ ಅಂಶಗಳನ್ನು ಅನ್ವಯಿಕ ನೆಲೆಯಲ್ಲಿ ವಾಣಿಜ್ಯದ ಹಿನ್ನೆಲೆಯಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಪ್ರಬಂಧದ ಎರಡನೆಯ ಪ್ರಮುಖ ಕಾಲಘಟ್ಟವಾಗಿರುವ ಹೈದರಾಲಿ ಮತ್ತು ಟಿಪ್ಪು ಹಾಗೂ ಬ್ರಿಟಿಷರೊಂದಿಗಿನ ಮುಖಾಮುಖಿಗೆ ಸಂಬಂಧಿಸಿ ಮುಂಬೈ ಪತ್ರಾಗಾರ, ಚನ್ನೈ ಪತ್ರಾಗಾರದ ದಾಖಲೆಗಳನ್ನು ಉಪಯೋಗಿಸಲಾಗಿದೆ. ಆದರೆ ಈ ಎಲ್ಲಾ ದಾಖಲೆಗಳು ಈಗಾಗಲೇ ಚರಿತ್ರೆಕಾರರಾದ ಷೇಕ್ ಅಲಿ,(೨೦೧೫), ಆಲ್ ಫ್ರೈಡ್‌ಲ್ಯಾಲ್ (೧೯೦೨), ಅಸಿಯಾ ಸಿದ್ದಿಕ್ (೧೯೯೫), ಲಕ್ಷ್ಮಿ ಸುಬ್ರಹ್ಮಣ್ಯನ್(೨೦೧೦), ಜಾರ್ಜ್ ಎಂ. ಮೋರಾಸ್ (೧೯೨೭), ಜೋನ್ ಕೊರಿಯಾ (೧೯೮೦),ಪೊಬೀಸ್ ಜೇಮ್ಸ್ (೧೮೩೪) ಮೊದಲಾದವರ ಕೃತಿಗಳನ್ನು ಪ್ರಸ್ತುತ ಪ್ರಬಂಧದಲ್ಲಿ ವಿವಿಧ ಸಂದರ್ಭಗಳಲ್ಲಿ ಉಲ್ಲೇಖಿಸಲಾಗಿದೆ. ಎಂ.ಎಂ.ಡಿ.ಎಲ್.ಟಿ. ಯವರ ಹೈದರಾಲಿ ಆ್ಯಂಡ್ ರೆವೆಲ್ಯೂಶನ್ ಇನ್ ಇಂಡಿಯಾ, (೧೯೮೮) ಎಂಬ ಕೃತಿ, ಫ್ರಾನ್ಸಿಸ್ ಬುಕನನ್‌ರವರ (೧೯೮೮) ಮೂರು ಸಂಪುಟಗಳು, ಷೇಕ್ ಅಲಿಯವರ (೧೯೬೩) ಕೃತಿ, ರುಚಿರಾ ಬ್ಯಾನರ್ಜಿಯವರ(೨೦೦೧) ಕೃತಿಗಳು, ಬಿಪನ್ ಚಂದ್ರರವರ(೧೯೭೨) (೨೦೧೭) ಕೃತಿಗಳು, ಮಾರ್ಕ್ ವಿಲ್ಕ್ಸ್‌ರವರ (೧೮೭೨) ಕೃತಿಗಳು, ಲಕ್ಷ್ಮೀ ಸುಬ್ರಹ್ಮಣಿಯನ್‌ರವರ (೨೦೧೦) ಕೃತಿಗಳನ್ನು, ಟಿ. ಡಬ್ಲ್ಯೂವೆನ್‌ರವರ (೧೯೪೫) ಕೃತಿಗಳನ್ನು ವ್ಯಾಪಕವನ್ನು ಬಳಸಿಕೊಳ್ಳಲಾಗಿದೆ.

ಎಂ.ಎಂ.ಡಿ.ಎಲ್.ಟಿ.ಯವರ 'ಹೈದರಾಲಿ ಎಂಡ್ ರೆವೆಲ್ಯೂಶನ್ ಇನ್ ಇಂಡಿಯಾ' ಕೃತಿಯು ಕೆನರಾ ಪ್ರಾಂತ್ಯದಲ್ಲಿ ಹೈದರಾಲಿಯು ಪ್ರಾರಂಭದ ದಿನಗಳಲ್ಲಿ ನಡೆಸಿದ ಸಂಘರ್ಷಗಳು ಮತ್ತು ವಾಣಿಜ್ಯ ಧೋರಣೆಗಳನ್ನು ಪ್ರತಿವಾದಿಸುತ್ತದೆ. ಇದು ಸಾಂಪ್ರದಾಯಿಕ ಶೈಲಿಯಲ್ಲಿ ಸ್ವಾಮಿ ನಿಷ್ಠೆಯ ಭಾಗವಾಗಿ ಯಥಾ ಪ್ರಕಾರ ತನ್ನ ರಾಜನನ್ನು ವೈಭವೀಕರಿಸುವ ದೃಷ್ಟಿಕೋನ ಹೊಂದಿದೆ. ಆದರೆ ಇನ್ನೊಂದು ದೃಷ್ಟಿಯಿಂದ ವಿವರಿಸಿದಾಗ ಹೈದರಾಲಿಯು ಕರಾವಳಿ ಕರ್ನಾಟಕದ ವಾಣಿಜ್ಯ ಮಹತ್ವದ ಬಗ್ಗೆ ಅದನ್ನು ಯಶಸ್ವಿಯಾಗಿ ಯುದ್ಧ ಸಾಮಾಗ್ರಿಗಳನ್ನು ಪಡೆಯಲು ಉಪಯೋಗಿಸಿದ ಬಗ್ಗೆ ಬೆಳಕು ಚೆಲ್ಲುತ್ತದೆ.

ಬಹಳ ನಿರ್ದಿಷ್ಟವಾಗಿ ಷೇಕ ಅಲಿಯವರ ಕೃತಿ ಇಂಗ್ಲೀಷ ರಿಲೇಷನ್ಸ್ ವಿದ್ ಹೈದರಾಲಿ, ವಾಸ್ತವಿಕವಾಗಿ ರಾಜಕೀಯ ದೃಷ್ಟಿಕೋನದಿಂದ ಹೈದರಾಲಿಯು ಬ್ರಿಟೀಷರೊಂದಿಗೆ ನಡೆಸಿದ ವ್ಯಾಪಾರ, ವ್ಯವಹಾರ ಮತ್ತು ಯುದ್ಧಗಳನ್ನು ಕಾಲಾನುಕ್ರಮದಲ್ಲಿ ಚರ್ಚಿಸಲಾಗಿದೆ. ಈ ಕೃತಿಯನ್ನು ವಾಣಿಜ್ಯೋದ್ಯಮ ಮತ್ತು ಸಂಘರ್ಷಕ್ಕೆ ಪೂರಕವಾಗಿ ವಿಮರ್ಶಿಸುತ್ತಾ "ಪೆಪ್ಪರ್ ಫಾರ್ ಗನ್" ಎಂಬ ವಾಣಿಜ್ಯ ಮತ್ತು ರಾಜಕೀಯ ಸಿದ್ಧಾಂತವನ್ನು ಪ್ರತಿಪಾದಿಸಿರುತ್ತದೆ. ಕರಿಮೆಣಸು ಕರಾವಳಿ ಕರ್ನಾಟಕದ ಸಂಘರ್ಷದಲ್ಲಿ ಹೈದರಾಲಿ ಮತ್ತು ಟಿಪ್ಪುವಿಗೆ ಸಹಾಯಕವಾಗಿ ಕಾರ್ಯಚರಿಸಿರುವುದನ್ನು ವಿಶ್ಲೇಷಿಸಲಾಗಿದೆ. ಇದರೊಂದಿಗೆ ಟಿ.ಡಬ್ಲ್ಯೂ.ವೆನ್‌ರವರ 'ಮಂಗಳೂರು' ಎಂಬ ಕೃತಿಯಲ್ಲಿ ವೆನ್‌ರವರು ಹೈದರಾಲಿ ಮತ್ತು ಟಿಪ್ಪುವಿನ

ಅವಧಿಯ ಕೆನರಾ ಪ್ರಾಂತ್ಯದ ಸಂಘರ್ಷಗಳು, ವ್ಯಾಪಾರಗಳು ಮತ್ತು ಒಪ್ಪಂದಗಳನ್ನು ಪುನರ್ ನಿರೂಪಣೆ ಮಾಡಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನೆಲೆಗಟ್ಟಿನಲ್ಲಿ ವಿಶ್ಲೇಷಿಸಲಾಗಿದೆ. ರುಚಿರಾ ಬ್ಯಾನರ್ಜಿಯವರು ಇಂಡಿಕಾ ಎಂಬ ಅರ್ಧವಾರ್ಷಿಕ ಜರ್ನಲ್‌ನಲ್ಲಿ ಪ್ರಕಟವಾಗಿರುವ ಲೇಖನದಲ್ಲಿ ಯುದ್ಧ ವ್ಯಾಪಾರಿಗಳು ಹಾಗೂ ಈಸ್ಟ್ ಇಂಡಿಯಾ ಕಂಪನಿಯ ಧೋರಣೆಗಳ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಉಪಯೋಗಿಸಲಾಗಿದೆ. ಸಾಮಾನ್ಯ ನೆಲೆಯಲ್ಲಿ ನಿರೂಪಿತವಾಗಿರುವ ಈ ಬರಹವನ್ನು ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನೆಲೆಯಲ್ಲಿ ವಿಮರ್ಷಿಸಲಾಗಿದೆ. ಈ ಪ್ರಕ್ರಿಯೆಯಲ್ಲಿ ಹಲವಾರು ಪೂರಕ ದಾಖಲೆಗಳೊಂದಿಗೆ ಮುಂಬೈ ಮತ್ತು ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯ ಮದ್ರಾಸ್ಸು ಪ್ರಾಂತೀಯ ಸರಕಾರದ ಮಧ್ಯದ ಶೀತಲ ಸಮರ ಹಾಗೂ ಕೋರ್ಟ್ ಆಫ್ ಡೈರೆಕ್ಟರ್ಸ್‌ರವರುಗಳ ಮಧ್ಯೆ ಇದ್ದ ಭಿನ್ನಾಭಿಪ್ರಾಯಗಳನ್ನು ವಿಶ್ಲೇಷಿಸಲಾಗಿದೆ.

ಫ್ರಾನ್ಸಿಸ್ ಬುಕಾನನ್‌ರವರ ಸಂಪುಟಗಳನ್ನು ಕೃಷಿ ಆದಾಯ, ವಾಣಿಜ್ಯ ಮತ್ತು ಕೈಗಾರಿಕಾ ಧೋರಣೆಗಳನ್ನು ಪುನರ್ ಕಟ್ಟಿ ಕೊಡಲು ಪ್ರಯತ್ನಿಸಲಾಗಿದೆ. ಸಾಮ್ಯುವೆಲ್ ಮಿಲ್ಲೆರವರ (೧೮೭೩) ಕೃತಿ, ಸ್ಟರಕ್‌ರವರ (೧೮೯೪) ಗಜೆಟಿಯರ್‌ಗಳನ್ನು ಉಪಯೋಗಿಸಲಾಗಿದೆ.

ಮುಂದಿನ ಕಾಲ ಘಟ್ಟ ನಿರ್ದಿಷ್ಟವಾಗಿ ೧೮೯೯ರಿಂದ ವಸಾಹತುಶಾಹಿ ಕಾಲ ಘಟ್ಟದವರೆಗೆ ಕಾರ್ಲ್ ಮಾರ್ಕ್ಸ್‌ರವರ ಹಲವಾರು ಕೃತಿಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಮಾರ್ಕ್ಸ್‌ರವರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ೧೭೫೭-೧೮೫೯; ಇದನ್ನು ಆಧಾರವಾಗಿ ಬ್ರಿಟೀಷ ಈಸ್ಟ್ ಇಂಡಿಯಾ ಕಂಪನಿಯ ದರೋಡೆಕೋರ ಸ್ವರೂಪ, ಬ್ರಿಟೀಷರು ನಡೆಸಿದ ಹಿಂಸಾಚಾರಗಳು, ಕಂದಾಯ ನೀತಿ ಅದರ ವಿರುದ್ಧವಾಗಿ ಜನರ ಪ್ರತಿರೋಧಗಳನ್ನು ಕರಾವಳಿ ಕರ್ನಾಟಕಕ್ಕೆ ಅನ್ವಯಿಸಿಕೊಳ್ಳಲಾಗಿದೆ. ಬ್ರಿಟೀಷ ತೆರಿಗೆ ನೀತಿ, ಅದರ ವಿರುದ್ಧ ನಡೆದ ಪ್ರತಿರೋಧಗಳು ೧೮೩೭ರ ಅಮರ ಸುಳ್ಯ ದಂಗೆ ಬ್ರಿಟಿಷರ ವಾಣಿಜ್ಯ ನೀತಿ, ಆರ್ಥಿಕ ನೀತಿ ಇವುಗಳ ಬಗ್ಗೆ ಹಾಗೂ ಎನ್. ಶ್ಯಾಮ್ ಭಟ್‌ರವರ 'ಸೌತ್ ಕೆನರಾ (೧೮೯೯-೧೮೬೦) ಎ ಸ್ಟಡಿ ಇನ್ ಕೊಲೋನಿಯಲ್ ಎಡ್‌ಮಿನಿಸ್ಟ್ರೇಶನ್ ರೀಜನಲ್ ರೆಸ್ಪಾನ್ಸ್' (೧೯೯೮) ಎಂಬ ಕೃತಿಯನ್ನು ಕೆಲವೊಂದು ಸಂದರ್ಭಗಳಲ್ಲಿ ಬಳಸಿಕೊಳ್ಳಲಾಗಿದೆ. ಈ ಕೃತಿಯಲ್ಲಿ ಸೌತ್ ಕೆನರಾಕ್ಕೆ ಸಂಬಂಧಿಸಿ ಆಡಳಿತಾತ್ಮಕ, ರಾಜಕೀಯ ಬೆಳವಣಿಗೆಗಳನ್ನು ಹಾಗೂ ಪ್ರತಿರೋಧಗಳನ್ನು ಯಾವುದೇ ಸೈದ್ಧಾಂತೀಕರಣಗೊಳಿಸದೇ ನಿರೂಪಿಸಲಾಗಿದೆ. ಆದುದರಿಂದ ಈ ಅವಧಿಯಲ್ಲಿ ನಡೆದ ಘಟನೆಗಳ ರಾಜಕೀಯು, ಆರ್ಥಿಕ ಮತ್ತು ವಾಣಿಜ್ಯದ ಹಿತಾಸಕ್ತಿಯುನ್ನು ಪ್ರತ್ಯೇಕವಾಗಿ ಗಮನಿಸಿ ಸೈದ್ಧಾಂತೀಕರಣಗೊಳಿಸಲಾಗಿದೆ. ವಸಾಹತುಶಾಹಿ ಕಾಲ ಘಟ್ಟದಲ್ಲಿ ಬಂಡವಾಳ ಕ್ರೋಡೀಕರಣದ ವಿವಿಧ ಹಂತಗಳನ್ನು ವಿಮರ್ಶಿಸಲು ಪ್ರಯತ್ನಿಸಲಾಗಿದೆ.

ವಾಣಿಜ್ಯ ಮತ್ತು ಉದ್ಯಮಕ್ಕೆ ಸಂಬಂಧಿಸಿ ಕೇವಲ ಎರಡು ಪಿಎಚ್.ಡಿ ಪ್ರಬಂಧಗಳು ಬಂದಿರುತ್ತವೆ. ವಾಸ್ತವಿಕವಾಗಿ ಅದರ ವಿಷಯವು ನೇರವಾಗಿ ಪ್ರಸ್ತುತ ಅಧ್ಯಯನ ವ್ಯಾಪ್ತಿಗೆ ಒಳಪಡುವುದಿಲ್ಲ. ಮುಖ್ಯವಾಗಿ ಮಾಲತಿ. ಕೃಷ್ಣಮೂರ್ತಿಯವರು ಮಂಗಳೂರು ವಿಶ್ವವಿದ್ಯಾನಿಲಯುಕ್ಕೆ ೧೯೯೧ರಲ್ಲಿ ಪಿಎಚ್.ಡಿ ಪದವಿಗಾಗಿ ಸಲ್ಲಿಸಿರುವ 'ಟ್ರೇಡ್ ಎಂಡ್ ಕಾಮರ್ಸ್ ಇನ್ ಕೊಲೋನಿಯಲ್ ಸೌತ್ ಕೆನರಾ ೧೮೯೯-೧೮೬೨'

ಎಂಬ ಪ್ರಬಂಧವನ್ನು ವಿಶ್ಲೇಷಿಸಲಾಗಿದೆ. ಈ ಪ್ರಬಂಧವು ಕೇವಲ ೬೩ ವರ್ಷಗಳ ಅವಧಿಯಲ್ಲಿ ಸೌತ್ ಕೆನರಾ ಜಿಲ್ಲೆಯಲ್ಲಿ ಟ್ರೇಡ್ ಎಂಡ್ ಕಾಮರ್ಸ್‌ನ ಸ್ಥಿತಿಗತಿ, ಬೆಳವಣಿಗೆಗಳ ಅಂಕಿ ಅಂಶಗಳನ್ನು ಒಳಗೊಂಡಿರುವುದನ್ನು ಹೊರತು ಪಡಿಸಿ, ಅಂದಿನ ಬ್ರಿಟೀಷ ಸರಕಾರದ ವಸಾಹತುಶಾಹಿ ಶೋಷಣೆಯ ಬಗ್ಗೆಯಾಗಲೀ, ರಾಜಕೀಯ ಅನಿವಾರ್ಯತೆಯ ಬಗ್ಗೆಯಾಗಲೀ, ಜನರ ಪ್ರತಿರೋಧದ ಬಗ್ಗೆಯಾಗಲೀ ಯಾವುದೇ ಉಲ್ಲೇಖಗಳಿರುವುದಿಲ್ಲ. ಈ ಅವಧಿಯಲ್ಲಿ ಬಂಡವಾಳದ ಕೇಂದ್ರಿಕರಣದ ಸ್ವರೂಪ, ವಾಣಿಜ್ಯೋದ್ಯಮಿಗಳ ಮತ್ತು ಕೈಗಾರಿಕೋದ್ಯಮಿಗಳ ಪ್ರಭಾವದ ಬಗ್ಗೆಯಾಗಲೀ ವಿಶ್ಲೇಷಿಸಿರುವುದಿಲ್ಲ. ನಿರ್ದಿಷ್ಟವಾಗಿ ಅವರು ಗುರುತಿಸಿರುವ ೧೮೬೨ರ ಕಾಲಘಟ್ಟ ಕೆನರಾ ಪ್ರಾಂತ್ಯವು ಉತ್ತರ ಕೆನರಾ ಮತ್ತು ದಕ್ಷಿಣ ಕೆನರಾ ಎಂಬ ಎರಡು ಪ್ರತ್ಯೇಕ ಜಿಲ್ಲೆಗಳಾಗಿ,ಇಬ್ಭಾಗವಾದ ಅವಧಿಯವರೆಗೆ ಸಂಬಂಧಿಸಿದೆ. ಆದರೆ ಈ ವಿಭಜನೆಯ ಕಾರಣಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಿರುವುದಿಲ್ಲ ಈ ಪ್ರಬಂಧದಲ್ಲಿ ಸೈದ್ಧಾಂತೀಕರಣದ ಯಾವುದೇ ಚರ್ಚೆಗಳು ನಡೆದಿರುವುದಿಲ್ಲ.

ಪೀಟರ್ ಮಿಲ್ಲನ್ ಪ್ರಭಾಕರ್‌ರವರ ಪಿಎಚ್.ಡಿ ಪ್ರಬಂಧ ಬಾಶೆಲ್ ಮಿಶನ್ ಇನ್ ಸೌತ್ ಕೆನರಾ (೧೯೯೧) ಇದು ೧೮ ಮತ್ತು ೧೯ನೇ ಶತಮಾನದಲ್ಲಿ ಬ್ರಿಟೀಷ ಸರಕಾರ ಅನುಸರಿಸಿದ ಕೈಗಾರಿಕಾ ಮತ್ತು ವಾಣಿಜ್ಯ ಧೋರಣೆಯಿಂದ ಅಧೋಗತಿಗೆ ಇಳಿದಿರುವ ಸನ್ನಿವೇಶಗಳನ್ನು ವಿಮರ್ಶಿಸಲಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಬಾಶೆಲ್ ಮಿಶನ್‌ನ ವಾಣಿಜ್ಯ ಮತ್ತು ಕೈಗಾರಿಕ ಘಟ್ಟಗಳ ಬೆಳವಣಿಗೆ ಮತ್ತು ಸಂಘರ್ಷಗಳಿಗೆ ಸಂಬಂಧಿಸಿ ವಿಶ್ಲೇಷಿಸಲಾಗಿದೆ. ಬಿಪನ್ ಚಂದ್ರರವರ ಆಧುನಿಕ ಭಾರತದ ಇತಿಹಾಸ ಎಂಬ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಸಾಹತೀಕರಣ ಮತ್ತು ಸಾಮ್ರಾಜ್ಯಶಾಹಿ ಆರ್ಥಿಕ ಧೋರಣೆಗಳ ಹಿನ್ನೆಲೆಯಲ್ಲಿ ೨೦ನೇ ಶತಮಾನದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳನ್ನು ವಿಮರ್ಶಿಸಲಾಗಿದೆ. ಅಸ್ಸಿಯಾ ಸಿದ್ಧಿಕ್, ಇರ್ಫಾನ್ ಹಬೀಬ್‌ರವರ ಕೃತಿಗಳಲ್ಲಿ ಮಂಡಿಸಲ್ಪಟ್ಟಿರುವ ವಿಷಯದ ಆಧಾರದಲ್ಲಿ ೨೧ನೇ ಶತಮಾನದ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಹಂತಗಳನ್ನು ವಿಶ್ಲೇಷಿಸಲಾಗಿದೆ.

ಮೇಲೆ ಉಲ್ಲೇಖಿಸಿರುವ ಇತಿಹಾಸಕಾರರು, ವಸಾಹತುಶಾಹಿ ದೃಷ್ಟಿಕೋನದಿಂದ ಪ್ರಭಾವಿತರಾದ ೧೮ ಮತ್ತು ೧೯ನೇ ಶತಮಾದ ಚರಿತ್ರೆಕಾರರು ಪೋರ್ಚುಗೀಸರು ಭಾರತದ ಪಶ್ಚಿಮ ಕರಾವಳಿಯಲ್ಲಿ ನೆಲೆಯೂರಿ ಅನಂತರ ಜಾರಿಗೊಳಿಸಿದ ಆಡಳಿತಾತ್ಮಕ, ಸೈನಿಕ ಮತ್ತು ವಾಣಿಜ್ಯಾತ್ಮಕ ಉಪಕ್ರಮಗಳನ್ನು ಉಲ್ಲೇಖಿಸಿ ವಿಶ್ಲೇಷಿಸಿದ ವಿಧಾನಕ್ಕೂ ಅನಂತರದಲ್ಲಿ ರಾಷ್ಟ್ರೀಯವಾದಿ ಬರಹಗಾರರು ಉಲ್ಲೇಖಿಸಿ ವಿಶ್ಲೇಷಿಸಿದ ವಿಧಾನಕ್ಕೂ ವ್ಯತ್ಯಾವಿದೆ. ಈ ದೃಷ್ಟಿಕೋನದ ಚರಿತ್ರೆಕಾರರಾದ ಆರ್.ಎಸ್ ವೈಟ್ ವ್ವೆ, ಎಚ್.ಮೂರ್‌ಸ್ಟೈನ್ ಮತ್ತು ಎಫ್.ಸಿ. ಧನ್‌ವೀರ್‌ರವರುಗಳು ತಮ್ಮ ಚರಿತ್ರೆ ಬರವಣಿಗೆಯ ಶೈಲಿಯಲ್ಲಿ ಪೋರ್ಚುಗೀಸರ ಸೈನಿಕ ಕಾರ್ಯಾಚರಣೆಗಳನ್ನು ಹಾಗೂ ಸ್ಥಳೀಯ ಜನತೆಯ, ವ್ಯಾಪಾರಿಗಳ ಮತ್ತು ಸಾಮಂತರಾಜರುಗಳ ಪ್ರತಿರೋಧಗಳನ್ನು ಸಾಮಾನ್ಯ ಸ್ವರೂಪದಲ್ಲಿ ಚಿತ್ರಿಸಿರುತ್ತಾರೆ. ಸ್ಥಳೀಯ ಸಾಮಂತ ರಾಜರುಗಳನ್ನು ನಿರಂಕುಶ ಆಡಳಿತ ಮತ್ತು ಜನರಿಂದ ದೂರವಾಗಿದ್ದರೆಂಬುದನ್ನು ಪ್ರತಿಪಾದಿಸಿದ್ದಾರೆ. ಅದೇ ರೀತಿಯಲ್ಲಿ ಪೋರ್ಚುಗೀಸ್ ವೈಸ್‌ರಾಯ್‌ಗಳು, ಗವರ್ನರ್ ಜನರಲ್‌ರವರುಗಳು ನಡೆಸಿದ ದಾಂಧಲೆ ಮತ್ತು ಅಮಾನುಷ ಹಿಂಸೆಗಳನ್ನು ಪೂರ್ಣ ಪ್ರಮಾಣದಲ್ಲಿ ವಿವರಿಸಿರುವುದಿಲ್ಲ. ಈ ರೀತಿಯ

ಚರಿತ್ರೆ ಬರವಣಿಗೆಯ ಕ್ರಮವನ್ನು ಎಫ್.ಸಿ.ಧನ್‌ವೀರ್‌ರವರ "ಪೋರ್ಚುಗೀಸ್ ಇನ್ ಇಂಡಿಯಾ" ಸಂಪುಟಗಳಲ್ಲಿ ಗಮನಿಸಬಹುದು. ಆದರೆ ಆರ್.ಎಸ್.ವೈಟ್ ವೆಯವರು ಪೋರ್ಚುಗೀಸರ ವಿರುದ್ಧ ಪೂರ್ವಾಗ್ರಹ ಪೀಡಿತ ದೃಷ್ಟಿಕೋನ ಹೊಂದಿದ್ದನು. ಆತನು ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ಸರಕಾರದ ಪರವಾದ ಮನೋಭಾವ ಹೊಂದಿದ್ದನು. ಆದುದರಿಂದ ಆತನು ವಾಸ್ಕೋಡಗಾಮ, ಅಲ್ಬುಕರ್ಕ್ ಮೊದಲಾದ ಪ್ರಾರಂಭದ ವೈಸ್‌ರಾಯ್‌ರವರುಗಳ ಕ್ರೂರ, ದಬ್ಬಾಳಿಕೆಯ, ಹಿಂಸಾತ್ಮಕ ಮನೋಭಾವದ ಸಂಘರ್ಷ ಮತ್ತು ಸಾಮಾಜಿಕ, ಆರ್ಥಿಕ, ವಾಣಿಜ್ಯ ನೀತಿಗಳ ಬಗ್ಗೆ ವ್ಯಾಪಕವಾಗಿ ವಿವರಿಸಿದ್ದಾನೆ.

ಎಚ್. ಮೂರ್‌ಸ್ಟೈನ್‌ರವರ ಕೃತಿ 'ಅಲ್ಬುಕರ್ಕ್' ರೂಲರ್ಸ್ ಆಫ್ ಇಂಡಿಯಾ ಮಾಲಿಕೆಯಡಿಯಲ್ಲಿ ಹೊರ ಬಂದಿರುತ್ತದೆ. ಈ ಕೃತಿಯಲ್ಲಿ ಇಂಗ್ಲೀಷರ ಆಡಳಿತಕ್ಕೆ ಸೈದ್ಧಾಂತಿಕ ತಳಹದಿ ನೀಡುವ ಮೂಲಭೂತ ಉದ್ದೇಶ ರೂಲರ್ಸ್ ಆಫ್ ಇಂಡಿಯಾ ಪುಸ್ತಕ ಮಾಲಿಕೆಗಿತ್ತು. ಆದರೆ ಮೂರ್‌ಸ್ಟೈನ್‌ರವರ ಕೃತಿ ಅಲ್ಬುಕರ್ಕ್ ಮತ್ತು ಆತನ ಭಾರತದ ಕಾಲಾವಧಿಯಲ್ಲಿ ನಡೆಸಿರುವ ಯುದ್ಧಗಳು, ದೌರ್ಜನ್ಯಗಳು ಮತ್ತು ಮುಸ್ಲಿಂ ವ್ಯಾಪಾರಿಗಳ ಮಾರಣ ಹೋಮ ಇವೇ ಮೊದಲಾದವುಗಳ ಬಗ್ಗೆ ಸುದೀರ್ಘ ವಿವರಣೆಗಳನ್ನು ಒಳಗೊಂಡಿದೆ. ಪೋರ್ಚುಗೀಸರು ಹೆಚ್ಚು ಕ್ರೂರಿಗಳು ಮತ್ತು ಅಪಾಯಕಾರಿಗಳು ಎಂಬ ಚಿತ್ರಣ ನೀಡುವ ಮೂಲಕ ಇಂಗ್ಲೀಷರ ಪರವಾದ ಆಡಳಿತಕ್ಕೆ ಭಾವನಾತ್ಮಕ ಮತ್ತು ತಾತ್ವಿಕ ಬೆಂಬಲ ನೀಡುವ ಮನೋಭೂಮಿಕೆ ಸಿದ್ಧಪಡಿಸುವ ಉದ್ದೇಶಗಳನ್ನು ಈ ಮಾಲಿಕೆ ಹೊಂದಿತ್ತು.

ರಾಷ್ಟ್ರೀಯವಾದಿ ಚಿಂತನೆಯಿಂದ ಪ್ರಭಾವಿತರಾದ ಚರಿತ್ರೆ ಬರಹಗಾರರಲ್ಲಿ ಕೆ.ಎಂ. ಪಣಿಕ್ಕರ್ ಪ್ರಮುಖರಾಗುತ್ತಾರೆ. ಇವರು ಈಗಾಗಲೇ ಮೇಲೆ ಉಲ್ಲೇಖಿಸಿದ ಕೃತಿಯಲ್ಲಿ ಪೋರ್ಚುಗೀಸರ ಬಗ್ಗೆ ನೀಡುವ ಚಿತ್ರಣ ಅವರ ಅಮಾನುಷ ಧೋರಣೆಗಳನ್ನು ಬಹಿರಂಗ ಪಡಿಸುತ್ತಿದೆ. ಮಲಬಾರ್ ಪ್ರಾಂತ್ಯದಲ್ಲಿ ನಾಯರ್ ಸಮುದಾಯ, ಮಾಪಿಳ್ಳೆ ಸಮುದಾಯ ಮತ್ತು ಜಾಮೋರಿನ್‌ಗಳ ವಿರುದ್ಧ ಅವರ ಆಡಳಿತದ ಕಾಲಾವಧಿಯ ಉದ್ದಕ್ಕೂ ನಡೆಸಿದ ಕ್ರೂರ ದಬ್ಬಾಳಿಕೆ ಮತ್ತು ಸಂಘರ್ಷಗಳನ್ನು ಪೋರ್ಚುಗೀಸ್ ದಾಖಲೆಗಳ ಆಧಾರದಲ್ಲಿ ಚಿತ್ರಿಸಿದ್ದಾರೆ. ಇದೇ ಸ್ವರೂಪದಲ್ಲಿ ಬಿ.ಎಸ್. ಶಾಸ್ತ್ರಿಯವರು ರಾಷ್ಟ್ರೀಯವಾದಿ ದೃಷ್ಟಿಕೋನದಿಂದ ತಮ್ಮ ಕೃತಿಯಲ್ಲಿ ವಿವರಗಳನ್ನು ವಿಮರ್ಶಿಸಿದ್ದಾರೆ. ಇವರ ಕೆನರಾ, ಗೋವಾ ಪೋರ್ಚುಗೀಸ್ ರಿಲೇಷನ್ಸ್ ಎಂಬ ಕೃತಿಯಲ್ಲಿ ವಸ್ತು ನಿಷ್ಠತೆಗೆ ಹೆಚ್ಚಿನ ಗಮನ ನೀಡಲಾಗಿದೆ.

ಕೆ.ಎಂ. ಮ್ಯಾಥ್ಯು ಮತ್ತು ಕೆ.ಎಸ್. ಮ್ಯಾಥ್ಯು ಕೃತಿಗಳು ಕೂಡ ರಾಷ್ಟ್ರೀಯವಾದಿ ನಿಲುವುಗಳಿಂದ ಪ್ರಭಾವಿತವಾಗಿದೆ. ಸಂಜಯ್ ಸುಬ್ರಹ್ಮಣ್ಯಂರವರ 'ಪೊಲಿಟಿಕಲ್ ಇಕಾನಮಿ ಆಫ್ ಕಾಮರ್ಸ್ ಸದರ್ನ್ ಇಂಡಿಯಾ' ಎಂಬ ಕೃತಿಯಲ್ಲಿ ಮಾರ್ಕ್ಸ್‌ವಾದಿ ಪ್ರಭಾವ ಕಂಡುಬರುತ್ತದೆ. ಇಲ್ಲಿ ಉಲ್ಲೇಖಿಸಿರುವ ಹಾಗೂ ವಿಶ್ಲೇಷಿಸಿರುವ ವಾದ ಸರಣಿಯು ಮಾರ್ಕ್ಸ್‌ವಾದಿ ಅರ್ಥಶಾಸ್ತ್ರದಿಂದ ಪ್ರಭಾವಿತವಾಗಿದೆ. ಅದೇ ರೀತಿ ಪರಿಸರದ ಪ್ರಭಾವಕ್ಕೆ ಸಂಬಂಧಿಸಿದ ವಿಶ್ಲೇಷಣೆಯು ಜನಮುಖಿ ದೃಷ್ಟಿಕೋನದಿಂದ ಕೂಡಿದ್ದು ಪೋರ್ಚುಗೀಸರ ಕಾಲಾವಧಿಯಲ್ಲಿ ಬಂಡವಾಳಶಾಹಿ ಬೆಳವಣಿಗೆಯ ಹಂತಗಳನ್ನು ಗುರುತಿಸಿರುವ ಕೃತಿಯಾಗಿದೆ. ಸಂಜಯ್ ಸುಬ್ರಹಮಣ್ಯಂರವರ ಕೃತಿಯ ಸೈದ್ಧಾಂತಿಕ ಚೌಕಟ್ಟನ್ನು ಈ ಪ್ರಬಂಧದಲ್ಲಿ

ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ. ಮಾಲತಿ ಕೃಷ್ಣಮೂರ್ತಿಯವರ ಪಿಎಚ್.ಡಿ ಪ್ರಬಂಧ ಕೂಡಾ ಮಾರ್ಕ್ಸ್‌ವಾದಿ ಚಿಂತನೆಯ ಕೆಲವು ಲಕ್ಷಣಗಳನ್ನು ಹೊಂದಿದೆ ಅಸ್ಸಿಯಾ ಸಿದ್ಧಿಕ್ಕಿ, ಲಕ್ಷ್ಮೀ ಸುಬ್ರಹ್ಮಣ್ಯನ್‌ರವರು ಕೃತಿಗಳು ಮಾರ್ಕ್ಸ್‌ವಾದಿ ಚರಿತ್ರೆ ಬರವಣಿಗೆಯ ಪ್ರಭಾವಕ್ಕೆ ಒಳಗಾಗಿರುವ ಕೃತಿಗಳಾಗಿವೆ. ಉಳಿದಂತೆ ಇ.ಎಂ.ಎಸ್. ನಂಬೂದಿರಿಪಾಡ್‌ರವರೇ ಭಾರತದ ಪ್ರಖ್ಯಾತ ಮಾರ್ಕ್ಸ್‌ವಾದಿ ಚಿಂತರಾಗಿದ್ದಾರೆ. ಶಾಮ್‌ಭಟ್‌ರವರ ಕೃತಿಯು ಕೂಡಾ ಮಾರ್ಕ್ಸ್‌ವಾದಿ ಪ್ರಭಾವಕ್ಕೆ ಒಳಗಾಗಿದೆ.

ಎ.ಆರ್.ಡಿಸ್ಸಿ, ಎಂ.ಎಸ್.ಪಿಯರ್ ಸನ್ ಮೊದಲಾದವರು ಅಂತರಾಷ್ಟ್ರೀಯ ಪ್ರಖ್ಯಾತ ಚರಿತ್ರೆಗಾರರಾಗಿದ್ದು ಇವರ ಬರವಣಿಗೆ ಕೂಡ ಮಾರ್ಕ್ಸ್‌ವಾದಿ ಪ್ರಭಾವದ ಚರಿತ್ರೆ ಬರವಣಿಗೆಯ ಕ್ರಮವನ್ನು ಅನುಸರಿಸಿದೆ. ಉಳಿದಂತೆ ಈ ಪ್ರಬಂಧದಲ್ಲಿ ಅಳವಡಿಸಿಕೊಂಡಿರುವ ಹೆಚ್ಚಿನ ಕೃತಿಗಳು ಮಾರ್ಕ್ಸ್‌ವಾದಿ ಚರಿತ್ರೆ ಬರವಣಿಗೆಯ ಕ್ರಮದಿಂದ ನಿರೂಪಿತವಾಗಿದೆ.

೨೦ನೇ ಶತಮಾನದದಲ್ಲಿ ಬೆಳೆದು ಬಂದ ರೈತ ಕಾರ್ಮಿಕ ಚಳವಳಿ, ಸ್ವಾತಂತ್ರ್ಯ ಹೋರಾಟಗಳ ರಾಜಕೀಯ, ಆರ್ಥಿಕ ಮತ್ತು ವಾಣಿಜ್ಯಾತ್ಮಕ ಸಂಘರ್ಷಗಳನ್ನು ವಿಶ್ಲೇಷಿಸಲು ಇ.ಎಂ.ಎಸ್ ನಂಬೂದಿರಿ ಪಾದ್‌ರವರ ಕೃತಿ, ಸುಂದರಯ್ಯರವರ ಕೃತಿ, ಶಿರಿ.ಜಿ.ಯವರ ಕೃತಿಗಳಲ್ಲಿ ಕಾಣಬಹುದು. ಇದೇ ರೀತಿ ಹಲವಾರು ಸ್ಮರಣ ಸಂಚಿಕೆಗಳು, ವೃತ್ತ ಪತ್ರಿಕೆಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನದ ಮತ್ತು ವಿಷಯಕ್ಕೆ ಸಂಬಂಧಿಸಿ ವ್ಯಾಪಕ ಅಧ್ಯಯನ ಮಾಡಲಾಗಿದೆ. ಈ ತನಕದ ಪ್ರಕಟಿತ ಗ್ರಂಥಗಳಾಗಲ್ಲೀ, ಪಿಎಚ್.ಡಿ ಪ್ರಬಂಧಗಳಾಗಲೀ, ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮವನ್ನು ರಾಜಕೀಯ ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ವಿವರಿಸಿರುವುದಿಲ್ಲ. ವ್ಯಾಪಾರ ಮತ್ತು ವ್ಯವಹಾರಕ್ಕೆ ಸಂಬಂಧಿಸಿ ಯಾವುದೇ ಸಂಶೋಧನೆಗಳು ನಡೆದಿರುವುದಿಲ್ಲ. ಕರಾವಳಿ ಕರ್ನಾಟಕದಲ್ಲಿ ಯುರೋಪಿಯನ್ನರ ಆಗಮನದೊಂದಿಗೆ ಬೆಳದು ಬಂದ ಬಂಡವಾಳಶಾಹಿ ಪ್ರಕ್ರಿಯೆಯ ವಿವಿಧ ಹಂತಗಳನ್ನು ಸೈದ್ಧಾಂತಿಕವಾಗಿ ಕಟ್ಟಿಕೊಡುವ ಪ್ರಯತ್ನ ನಡೆದಿರುವುದಿಲ್ಲ. ಇದಕ್ಕೆ ತೀರಾ ಬಿನ್ನವಾಗಿ ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ ಕರಾವಳಿ ಕರ್ನಾಟಕದಲ್ಲಿ ನಡೆದಿರುವಂತಹ ವಿವಿಧ ಸಂಘರ್ಷಗಳನ್ನು ವಾಣಿಜ್ಯೋದ್ಯಮದ ಹಿನ್ನೆಲೆಯಿಂದ ನಡೆದ ವಾಣಿಜ್ಯೋದ್ಯಮದ ಸಂಘರ್ಷಗಳಲ್ಲಿ ಕೇವಲ ರಾಜಮಹಾರಾಜರುಗಳು ಮಾತ್ರ ಭಾಗವಹಿಸಿರುವುದಲ್ಲ, ಬದಲಾಗಿ ವ್ಯಾಪಾರಿಗಳು, ಸಾಮಾನ್ಯಜನತೆ ೧೭೬೩ರ ಅವಧಿಯವರೆಗೆ ಭಾಗವಹಿಸಿದರೆ ಅನಂತರ ರೈತಾಪಿಜನತೆ ದುಡಿಯುವ ವರ್ಗ ಕೂಡ ಭಾಗವಹಿಸಿದೆ ಎಂಬುದನ್ನು ಪ್ರತಿಪಾದಿಸಲಾಗಿದೆ.ಪ್ರತಿಯೊಂದು ರಾಜಕೀಯ ಸಂಘರ್ಷದಲ್ಲೂ, ಬೆಳವಣಿಗೆಯಲ್ಲೂ ವಾಣಿಜ್ಯ ಹಿತಾಸಕ್ತಿ ನಿರ್ಣಾಯಕವಾಗಿತ್ತು.

ಈ ಅಧ್ಯಯನದ ಪ್ರಾರಂಭದ ಘಟ್ಟವಾಗಿರುವ ಪೋರ್ಚುಗೀಸರ ಆಗಮನಕ್ಕೆ ಸಂಬಂಧಿಸಿ ಕೆಲವೇ ಕೆಲವು ಸಂಖ್ಯೆಯಲ್ಲಿ ನಮ್ಮ ದೇಶದ ಇತಿಹಾಸಕಾರರು ಅಧ್ಯಯನ ನಡೆಸಿರುತ್ತಾರೆ.

ಇಲ್ಲಿಯವರೆಗೆ ಕರಾವಳಿ ಕರ್ನಾಟಕದಲ್ಲಿ ಯುರೋಪಿಯನ್ನರ ಆಗಮನದ ನಂತರ ನಡೆದಿರುವಂತಹ ಚಾರಿತ್ರಿಕ ಬೆಳವಣಿಗೆಗಳನ್ನು ಕುರಿತು ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನೆಲೆಗಟ್ಟಿನಲ್ಲಿ ಅಧ್ಯಯನ

ನಡೆದಿರುವುದಿಲ್ಲ. ಸಂಜಯ್ ಸುಬ್ರಹ್ಮಣ್ಯಂ, ಎ ಆರ್ ಡಿಸ್ನೀ, ಪಿಯರ್‌ಸನ್, ಬಿ ಎಸ್ ಶಾಸ್ತ್ರಿ, ಕೆ. ಎಂ. ಪಣಿಕ್ಕರ್, ಕೆ ಎಸ್ ಮ್ಯಾಥ್ಯೂ ಇವರುಗಳು ಈ ಕಾಲ ಘಟ್ಟಕ್ಕೆ ಸಂಬಂಧಿಸಿ ರಾಜಕೀಯ ಮತ್ತು ಆರ್ಥಿಕ ಹಿನ್ನೆಲೆಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಸಂಶೋಧನೆ ನಡೆಸಿರುತ್ತಾರೆ. ಇದೇ ರೀತಿ ಮಾಲತಿ ಕೃಷ್ಣಮೂರ್ತಿಯವರು ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ೧೯೯೧ರಲ್ಲಿ ಸಲ್ಲಿಸಿರುವ 'ಟ್ರೇಡ್ ಆ್ಯಂಡ್ ಕಾಮರ್ಸ್ ಇನ್ ಕೊಲ್ಹೋನಿಯಲ್ ಸೌತ್ ಕೆನರಾ ೧೭೯೯-೧೮೬೨' ಎಂಬ ಪ್ರಬಂಧದಲ್ಲಿ ಟಿಪ್ಪುವಿನ ಮರಣಾ ನಂತರದ ವ್ಯಾಪಾರ ವ್ಯವಹಾರಗಳ ಬಗ್ಗೆ ಸಮಗ್ರ ವಿಶ್ಲೇಷಣೆಯನ್ನು ಮಾಡಿರುತ್ತಾರೆ. ಆದರೆ ಇದರಲ್ಲಿ ಈ ಕಾಲಘಟ್ಟದ ವ್ಯಾಪಾರ ಮತ್ತು ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಸೈದ್ಧಾಂತಿಕ ವ್ಯಾಖ್ಯಾನವನ್ನು ಮಾಡಿರುವುದಿಲ್ಲ. ಇದೇ ರೀತಿಯಲ್ಲಿ ಯಾವುದೇ ಸಂಶೋಧಕರುಗಳು ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷವನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಾಗಲೀ ಅಥವಾ ವಿಶ್ಲೇಷಣಾತ್ಮಕ ಹಿನ್ನೆಲೆಯಿಂದ ಸಂಶೋಧನೆಗಳನ್ನು ನಡೆಸಿರುವುದಿಲ್ಲ. ಇದಕ್ಕೆ ತೀರಾ ಭಿನ್ನವಾಗಿ ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ ಕರಾವಳಿ ಕರ್ನಾಟಕದಲ್ಲಿ ನಡೆದಿರುವಂತಹ ವಿವಿಧ ಸಂಘರ್ಷಗಳನ್ನು ವಾಣಿಜ್ಯೋದ್ಯಮದ ಹಿನ್ನೆಲೆಯಿಂದ ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನವು ಪ್ರಪ್ರಥಮವಾಗಿದೆ. ಪ್ರತಿಯೊಂದು ರಾಜಕೀಯ ಸಂಘರ್ಷದಲ್ಲೂ ಅಂತಿಮವಾಗಿ ರೂಪಿತವಾದಂತಹ ಒಪ್ಪಂದಗಳಲ್ಲಿ ವಾಣಿಜ್ಯೋದ್ಯಮವು ಪ್ರಮುಖ ಅಂಶವಾಗಿತ್ತು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಂಶೋಧನೆಯನ್ನು ಕೈಗೊಂಡಿದ್ದು ಇದಕ್ಕೆ ಪೂರಕವಾಗಿ ಕ್ಷೇತ್ರಾಧ್ಯಯನ, ಪ್ರಕಟಿತ ಮತ್ತು ಅಪ್ರಕಟಿತ ದಾಖಲೆಗಳ ಅಧ್ಯಯನ ಸ್ವಾತಂತ್ರ್ಯ ಪೂರ್ವದ ಪತ್ರಿಕೆಗಳು ಮತ್ತು ಸ್ಮರಣ ಸಂಚಿಕೆಗಳಿಂದ ಹಾಗೂ ದೇಶದ ವಿವಿಧ ಭಾಗಗಳ ಪತ್ರಾಗಾರಗಳಿಂದ ವಿವರಗಳನ್ನು ಸಂಗ್ರಹಿಸಲಾಗಿದೆ.

### ಕರಾವಳಿ ಕರ್ನಾಟಕದ ಭೌಗೋಳಿಕ ರೂಪುರೇಷೆ

ಈ ವಿಶ್ಲೇಷಣೆಯಲ್ಲಿ ಒಟ್ಟು ಮೂರು ಭಾಗಗಳಿವೆ. ಇದರಲ್ಲಿ ಕರಾವಳಿ ಕರ್ನಾಟಕವು ಕ್ರಿ. ಶ. ೧೪೯೮ರಿಂದ ವಸಾಹತುಶಾಹಿ ಕಾಲಘಟ್ಟ ೧೯೪೭ರ ತನಕ ಸುಮಾರು ೪೫೦ ವರ್ಷಗಳ ಅವಧಿಗೆ ಸಂಬಂಧಿಸಿದಂತೆ ಇಲ್ಲಿನ ರಾಜಕಾರಣ, ಆರ್ಥಿಕತೆ ಮತ್ತು ಬಹು ಮುಖ್ಯವಾಗಿ ವಾಣಿಜ್ಯೋದ್ಯಮದ ಬೆಳವಣಿಗೆ- ಸಂಘರ್ಷ ಇತ್ಯಾದಿ ವಿಷಯಗಳನ್ನು ಚರ್ಚಿಸಲಾಗಿದೆ. ಇದಕ್ಕೆ ಪೂರಕವಾಗಿ ಇಲ್ಲಿನ ಭೌಗೋಳಿಕ ಸನ್ನಿವೇಶ, ನೆಲ, ಜಲ ಮತ್ತು ಮಾನವ ಸಂಬಂಧಗಳು ಪರಸ್ಪರ ಪೂರಕವಾಗಿ ಪ್ರತಿಕ್ರಿಯಿಸಿರುವುದನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಪೂರ್ವ ಕರಾವಳಿಗೆ ಹೋಲಿಸಿದರೆ ಪಶ್ಚಿಮ ಕರಾವಳಿ ಅದರಲ್ಲೂ ಕರ್ನಾಟಕ ಕರಾವಳಿಯ ಮೇಲ್ಕಂಡ ಭೌಗೋಳಿಕ ಸನ್ನಿವೇಶಗಳು ಆಹಾರದ ಬೆಳೆಗಳಿಗೆ ಮತ್ತು ವಾಣಿಜ್ಯ ಬೆಳೆಗಳಿಗೆ ಹೆಚ್ಚು ಸಹಕಾರಿಯಾಗಿದೆ. ಪರಿಣಾಮವಾಗಿ ಈ ಪ್ರಾಂತ್ಯದಲ್ಲಿ ವಾಣಿಜ್ಯೋದ್ಯಮವು ವಿಸ್ತೃತ ರೂಪದಲ್ಲಿ ಬೆಳೆದು ಬರಲು ಕಾರಣವಾಗಿರುವುದನ್ನು ವಿವರಿಸಲಾಗಿದೆ. ಯುರೋಪಿಯನ್ನರ ಆಗಮನದ ನಂತರ ಇದಕ್ಕೆ ಹೆಚ್ಚಿನ ವೇಗ ದೊರೆಯಿತು. ಅದರೊಂದಿಗೆ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಇಲ್ಲಿಯ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಬೆಳವಣಿಗೆಗಳನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪಾತ್ರವಹಿಸಿದೆ ಎಂಬುದನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಇದರಲ್ಲಿ ಕೆಳಕಂಡಂತೆ ಉಪ ವಿಭಾಗಗಳಲ್ಲಿ ವಿವಿಧ ಅಂಶಗಳ ಬಗ್ಗೆ ವಿವರಿಸಲಾಗಿದೆ.

ಮೊದಲನೇ ಭಾಗದಲ್ಲಿ ಕರಾವಳಿ ಕರ್ನಾಟಕವನ್ನು ಭೌಗೋಳಿಕವಾಗಿ ಚಿತ್ರೀಕರಿಸಲಾಗಿದೆ. ಇದಕ್ಕೆ ಪೂರಕವಾಗಿ ಅಕ್ಷಾಂಶ ಮತ್ತು ರೇಖಾಂಶದ ಲೆಕ್ಕಾಚಾರವನ್ನು ನೀಡಲಾಗಿದೆ. ಅಕ್ಷಾಂಶ, ರೇಖಾಂಶದ ಮೂಲಕ ಕರಾವಳಿ ಕರ್ನಾಟಕದ ಭೂಭಾಗವನ್ನು ಚಿತ್ರಿಸಿದ ನಂತರ ಭಾರತದ ಸಮಗ್ರ ಭೌಗೋಳಿಕ ವರ್ಗೀಕರಣದ ಹಿನ್ನೆಲೆಯಲ್ಲಿ ಪಶ್ಚಿಮ ಕರಾವಳಿಯ ವಿಭಾಗೀಕರಣವನ್ನು ನೀಡಲಾಗಿದೆ. ಏಕೆಂದರೆ ಈ ಅಧ್ಯಾಯದಲ್ಲಿ ಆಗಾಗ ಮಲಬಾರ್ ಕರಾವಳಿಯ ಪ್ರಸ್ತಾಪ, ಕೊಂಕಣ ಕರಾವಳಿಯ ಪ್ರಸ್ತಾಪ ಮತ್ತು ಗುಜರಾತ್ ಕರಾವಳಿಯ ಪ್ರಸ್ತಾಪಗಳು ಅಭಿವ್ಯಕ್ತಪಡುವುದರಿಂದ ಕರಾವಳಿ ಕರ್ನಾಟಕದ ನಿರ್ದಿಷ್ಟ ಪ್ರಾಂತ್ಯವನ್ನು ಕಲ್ಪಿಸಿಕೊಡುವ ಅಗತ್ಯವಿದೆ.

ಎರಡನೇ ಭಾಗದಲ್ಲಿ ಕರಾವಳಿ ಕರ್ನಾಟಕದ ಮೇಲ್ಮೈ ಲಕ್ಷಣಗಳ ಬಗ್ಗೆ ವೈಜ್ಞಾನಿಕ ವಿಶ್ಲೇಷಣೆಯನ್ನು ಮತ್ತು ಅದರಲ್ಲಿ ಅಂತರ್ಗತವಾಗಿರುವ ವೈರುಧ್ಯಗಳನ್ನು ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯಿಂದ ಚಾರಿತ್ರಿಕವಾಗಿ ಕರಾವಳಿ ಕರ್ನಾಟಕದ ಬಂದರುಗಳ ಸಂರಚನೆ ಹಾಗೂ ಅದು ಪಶ್ಚಿಮ ಘಟ್ಟಗಳೊಂದಿಗೆ ಹೊಂದಿರುವ ಸಂಬಂಧವನ್ನು ವಿಶ್ಲೇಷಿಸಲು ಸಹಾಯಕವಾಗುತ್ತದೆ. ಯುರೋಪಿಯನ್ನರ ಆಗಮನದ ನಂತರ ವಾಣಿಜ್ಯೋದ್ಯಮಗಳಲ್ಲಿ ನಿರತರಾಗಿದ್ದ ದೊಡ್ಡ ದೊಡ್ಡ ಹಡಗುಗಳ ಸಂಚಾರ, ತೆರೆಗಳ ವೇಗ ಮತ್ತು ಅದರ ಸ್ವರೂಪವನ್ನು ಆಧರಿಸಿಕೊಂಡು ಲಂಗರು ಹಾಕುವ ಅವಕಾಶಗಳ ಸಾಧ್ಯತೆಗಳನ್ನು ಚರ್ಚಿಸಲಾಗಿದೆ. ಪೂರ್ವ ಕರಾವಳಿ ಮತ್ತು ಪಶ್ಚಿಮ ಕರಾವಳಿಯ ಮಧ್ಯೆ ಇರುವ ವ್ಯತ್ಯಾಸಗಳನ್ನು ಪರಸ್ಪರ ತೌಲನಿಕ ನೆಲೆಯಲ್ಲಿ ಚರ್ಚಿಸಲಾಗಿದೆ. ಒಳನಾಡ ಜಲಸಾರಿಗೆ ವ್ಯವಸ್ಥೆ ಹಾಗೂ ಇಲ್ಲಿರುವ ನದಿಗಳ ಮಹತ್ವವನ್ನು ವಾಣಿಜ್ಯ ದೃಷ್ಟಿಕೋನದಿಂದ ಚರ್ಚಿಸಲಾಗಿದೆ.

ಮೂರನೇ ಭಾಗದಲ್ಲಿ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮದ ಬೆಳವಣಿಗೆ ಮತ್ತು ನಿರೂಪಣೆಯಲ್ಲಿ ಪಶ್ಚಿಮ ಘಟ್ಟಗಳು ಮತ್ತು ಇಲ್ಲಿಯ ಹವಾಗುಣದ ಚಾರಿತ್ರಿಕ ಪಾತ್ರವನ್ನು ವಿಶ್ಲೇಷಿಸಲಾಗಿದೆ. ಇಲ್ಲಿಯೂ ಕೂಡ ಪೂರ್ವ ಘಟ್ಟದೊಂದಿಗೆ ಪಶ್ಚಿಮ ಘಟ್ಟಗಳ ವಾತಾವರಣ, ಹವಾಗುಣ, ಮಳೆಯ ಪ್ರಮಾಣಗಳು, ಕೃಷಿ ಮತ್ತು ಆಹಾರದ ಬೆಳೆಗಳ ಸ್ವರೂಪ, ಸಾಂಬಾರ ಪದಾರ್ಥಗಳ ಲಭ್ಯತೆ ಇವೇ ಮೊದಲಾದವುಗಳನ್ನು ಚರ್ಚಿಸಲಾಗಿದೆ. ಇದಕ್ಕೆ ಪೂರಕವಾಗಿ ಚರಿತ್ರಕಾರರಾದ ಸಂಜಯ್ ಸುಬ್ರಹ್ಮಣ್ಯಂರವರ ವಾದವನ್ನು ಬಳಸಿ ವಿಸ್ತರಿಸಲಾಗಿದೆ. ಒಟ್ಟಿನಲ್ಲಿ ಇಲ್ಲಿಯ ಮಳೆಯ ಪ್ರಮಾಣ ಕೂಡ ಕೃಷಿ ಉತ್ಪನ್ನ ಬೆಳೆಗಳಿಗೆ ಚಾರಿತ್ರಿಕ ಕಾಲದಿಂದಲೇ ಪೂರಕವಾಗಿತ್ತು ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಮುಂದಿನ ಭಾಗದಲ್ಲಿ ೧೫೦೦ರ ಯುರೋಪಿಯನ್ನರ ಆಗಮನದ ನಂತರ ವಿವಿಧ ಕಾಲಘಟ್ಟಗಳಲ್ಲಿ ಕರಾವಳಿ ಕರ್ನಾಟಕದ ಮೇರೆಗಳನ್ನು ಚರ್ಚಿಸಲಾಗಿದೆ. ಈ ಪ್ರಕ್ರಿಯೆಯಲ್ಲಿ ವಿಜಯನಗರದ ಕಾಲಘಟ್ಟಕ್ಕೆ ಸಂಬಂಧಿಸಿ ವಿವಿಧ ದೇಶಗಳ ಪ್ರವಾಸಿಗರ ಬರಹಗಳ ಆಧಾರದ ಮೇಲೆ ಗಡಿಗುರುತುಗಳನ್ನು ಚರ್ಚಿಸಲಾಗಿದೆ. ಆಸ್ಥಾನ ಬರಹಗಾರ ದಾಖಲೆಗಳನ್ನೂ ಉಲ್ಲೇಖಿಸಲಾಗಿದೆ. ಕೆಳದಿಯ ಆಳ್ವಿಕೆಯ ಸಂದರ್ಭದಲ್ಲಿ, ಹೈದರ್–ಟಿಪ್ಪು ಸುಲ್ತಾನ್ ಇವರ ಅಧಿಕಾರಾವಧಿಯಲ್ಲಿ ವ್ಯಾಪಿಸಿದ್ದ ಕರಾವಳಿ ಕರ್ನಾಟಕವನ್ನು ಚರ್ಚಿಸಲಾಗಿದೆ. ಅದೇ ರೀತಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಆಳ್ವಿಕೆ ಪ್ರಾರಂಭವಾದ ಮೇಲೆ ವ್ಯತ್ಯಾಸಗೊಂಡ ಕರಾವಳಿ ಕರ್ನಾಟಕದ ಭೌಗೋಳಿಕ ವಿಸ್ತಾರವನ್ನು ಚರ್ಚಿಸಲಾಗಿದೆ. ಕೆನರಾ ವಿಭಜನೆಯು ಸೇರಿದಂತೆ ವಿವಿಧ ರೀತಿಯ ಆಡಳಿತಾತ್ಮಕ ಕಾರಣಗಳಿಗಾಗಿ ನಡೆದ ಗಡಿಗುರುತುಗಳನ್ನು ಚರ್ಚಿಸಲಾಗಿದೆ.

ಒಟ್ಟಿನಲ್ಲಿ ಈ ಅಧ್ಯಾಯದ ಮೂಲಕ ಕರಾವಳಿ ಕರ್ನಾಟಕದ ವ್ಯಾಪಾರ ವ್ಯವಹಾರ ವಾಣಿಜ್ಯೋದ್ಯಮಗಳಿಗೆ ಸಂಬಂಧಿಸಿದಂತೆ ಭೌಗೋಳಿಕ ಮತ್ತು ಚಾರಿತ್ರಿಕ ನೆಲೆಗಟ್ಟನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿದೆ. ಬಹಳ ಮುಖ್ಯವಾಗಿ ಕರಾವಳಿ ಕರ್ನಾಟಕದ ಭೌಗೋಳಿಕ ಸನ್ನಿವೇಶದಿಂದ ವಾಣಿಜ್ಯೋದ್ಯಮವು ಬಹುಸ್ತರೀಯ ನೆಲೆಯಲ್ಲಿ ಯುರೋಪಿಯನ್ನರ ಆಗಮನದ ನಂತರ ಬೆಳೆದು ಬಂತು. ಜೊತೆ ಜೊತೆಯಲ್ಲೇ ವಾಣಿಜ್ಯೋದ್ಯಮದ ಲಾಭವನ್ನು ಪಡೆಯಲು ಸಂಘರ್ಷವೂ ವಿವಿಧ ಕಾಲಘಟ್ಟಗಳಲ್ಲಿ ವಿವಿಧ ಮಜಲುಗಳಲ್ಲಿ ನಡೆಯಿತು. ಈ ಎಲ್ಲಾ ಅಂಶಗಳನ್ನು ಅರ್ಥೈಸಿಕೊಳ್ಳಲು ಪೂರ್ವಭಾವಿಯಾಗಿ ಈ ವಿಶ್ಲೇಷಣೆ ಅವಶ್ಯಕವಾಗಿದೆ.

ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಎಳೆಗಳನ್ನು ಯುರೋಪಿಯನ್ನರ ಆಗಮನದಿಂದ ಅಂದರೆ ೧೪೯೮ರಿಂದ ವಸಾಹತುಶಾಹಿ ಕಾಲಘಟ್ಟ ೧೯೪೭ರ ವರೆಗಿನ ಸುಮಾರು ೪೫೦ ವರ್ಷಗಳ ಅವಧಿಗೆ ಸಂಬಂಧಿಸಿದಂತೆ ರಾಜಕಾರಣ, ಆರ್ಥಿಕತೆ, ಭೌಗೋಳಿಕ ಸನ್ನಿವೇಶ ಮತ್ತು ಮುಖ್ಯವಾಗಿ ವಾಣಿಜ್ಯೋದ್ಯಮದ ಬೆಳವಣಿಗೆ ಇತ್ಯಾದಿ ವಿಷಯಗಳ ವಿಶ್ಲೇಷಣೆ ಈ ಅಧ್ಯಾಯದ ವಸ್ತು ವಿಷಯಗಳ ವ್ಯಾಪ್ತಿಯಲ್ಲಿ ಬರುತ್ತದೆ.

ರಾಜ ಪ್ರಭುತ್ವದಡಿಯಲ್ಲಿ ಯಾವುದೇ ಪ್ರಾಂತ್ಯ, ಸೀಮೆಗಳ ಭೌಗೋಳಿಕ ಗಡಿಗಳು ಏಕಪ್ರಕಾರವಾಗಿರುವುದಿಲ್ಲ. ಹಲವಾರು ಕಾರಣಗಳಿಗಾಗಿ ಆಗಾಗ ಬದಲಾವಣೆಗಳನ್ನು ಹೊಂದುತ್ತವೆ. ಈ ಪ್ರಕ್ರಿಯೆಗೆ ಕರಾವಳಿ ಕರ್ನಾಟಕವೂ ಹೊರತಾಗಿಲ್ಲ. ವಸಾಹತುಶಾಹಿ ಕಾಲಘಟ್ಟದಲ್ಲಿ ಸಹಜವಾಗಿಯೇ ಭೌಗೋಳಿಕ ಮೇರೆಗಳು ಆಡಳಿತಾತ್ಮಕ ಕಾರಣಗಳಿಗಾಗಿ ಆಗಾಗ ಬೇರೆ ಬೇರೆ ಸ್ವರೂಪಗಳನ್ನು ಹೊಂದಿರುವುದು ಅನಿವಾರ್ಯವಾಗಿದೆ. ಸುಮಾರು ೪೫೦ ವರ್ಷಗಳ ಕಾಲಘಟ್ಟದಲ್ಲಿ ಇಲ್ಲಿಗೆ ಆಗಮಿಸಿದ್ದ ವಿವಿಧ ವಿದೇಶಿ ಪ್ರವಾಸಿಗರು, ಚರಿತ್ರೆ ಬರಹಗಾರರು ಮತ್ತು ರಾಜ ಪ್ರಭುತ್ವದಡಿಯಲ್ಲಿ ಇದ್ದ ದಿನನಿತ್ಯದ ಘಟನಾವಳಿಗಳನ್ನು ದಾಖಲಿಸಿದ ಆಸ್ಥಾನ ಬರಹಗಾರರು ಕರಾವಳಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ವಿವಿಧ ಮೇರೆಗಳನ್ನು ಆಯಾಯ ಸಮಯಕ್ಕೆ ಅನುಗುಣವಾಗಿ ಗುರುತಿಸಿರುವುದನ್ನು ಅರಿತುಕೊಳ್ಳಲು ಈ ಸಂದರ್ಭದಲ್ಲಿ ಪ್ರಯತ್ನಿಸಲಾಗಿದೆ. ಆರಂಭದಲ್ಲಿ ೧೬ನೇ ಶತಮಾನದ ಬೆಳವಣಿಗೆಗಳನ್ನು ಗುರುತಿಸಲಾಗಿದೆ. ಮುಂದೆ ಕೆಳದಿಯ ಅಧಿಕಾರಾವಧಿಯಲ್ಲಿ ಮತ್ತು ಹೈದರಾಲಿ ಟಿಪ್ಪುವಿನ ಕಾಲಾವಧಿಯ ಬೆಳವಣಿಗೆಯನ್ನು ಚರ್ಚಿಸಲಾಗಿದೆ. ಬ್ರಿಟಿಷರು ಅಧಿಕಾರ ವಹಿಸಿಕೊಂಡ ನಂತರ ೧೯ನೇ ಶತಮಾನ ಹಾಗೂ ೨೦ನೇ ಶತಮಾನದಲ್ಲಿ ಕರಾವಳಿ ಕರ್ನಾಟಕ ಭೌಗೋಳಿಕವಾಗಿ ಸ್ಥಿತ್ಯಂತರಗೊಂಡ ಘಟನೆಗಳನ್ನು ಚರ್ಚಿಸಲಾಗಿದೆ.

ಯಾವುದೇ ಭೂಪ್ರದೇಶವನ್ನು ವಿಷದಪಡಿಸಲು ಮತ್ತು ಭೌಗೋಳಿಕ ಮೇರೆಗಳನ್ನು ನಿರ್ಧರಿಸಲು ಸ್ಥಳೀಯ ಅಕ್ಷಾಂಶ ಮತ್ತು ರೇಖಾಂಶವನ್ನು ವಿವರಿಸುವುದು ಅತ್ಯಂತ ವೈಜ್ಞಾನಿಕ ವಿಧಾನವಾಗಿದೆ. ಕರಾವಳಿ ಕರ್ನಾಟಕದ ಉತ್ತರದ ಗಡಿಯನ್ನಾಗಿ 'ಕಾರವಾರ'ವನ್ನು ಪರಿಗಣಿಸುವುದರಿಂದ ಅದು ಅಕ್ಷಾಂಶ ೧೪° ೪೮' ೪೮" ಉತ್ತರಕ್ಕೂ, ರೇಖಾಂಶ ೭೪° ೮' ೦" ದಕ್ಷಿಣಕ್ಕೂ ಇದೆ (ಸ್ಟರಕ್ ೧೮೯೪(I):೩). ಅದೇ ರೀತಿ ದಕ್ಷಿಣದ ಗಡಿ ಗುರುತು ವಿವಿಧ ಕಾಲಘಟ್ಟದಲ್ಲಿ ಮಂಗಳೂರಿನಿಂದ ಪಯಸ್ವಿನಿ ನದಿ ಮತ್ತು ಕೊವ್ವಾ ನದಿ ತೀರದವರೆಗೆ ವಿಸ್ತರಿಸಿತ್ತು. ಮಂಗಳೂರನ್ನು ಸರ್ವಸಾಮಾನ್ಯ ಅಕ್ಷಾಂಶ, ರೇಖಾಂಶವನ್ನು

ಗುರುತಿಸುವ ಕೇಂದ್ರವನ್ನಾಗಿ ಪರಿಗಣಿಸಿದರೆ ಆಗ ಅಕ್ಷಾಂಶ ೧೨° ೫೫' ೨" ಉತ್ತರಕ್ಕೂ, ೭೪° ೫೧' ೨೧" ರೇಖಾಂಶ ಪೂರ್ವಕ್ಕೂ ಇದೆ (ಸ್ಮರಕ್ ೧೮೯೪(I)):೩). ಭಾರತದಲ್ಲಿ ಹಾದು ಹೋಗುವ ಅಕ್ಷಾಂಶ ಮತ್ತು ರೇಖಾಂಶಗಳ ಎರಡು ಪ್ರಮುಖ ಕೇಂದ್ರಗಳಲ್ಲಿ ಮಂಗಳೂರು ಒಂದಾಗಿದೆ ಎಂದು ಮದ್ರಾಸ್ ಡಿಸ್ಟ್ರಿಕ್ ಮ್ಯಾನ್ಯುವೆಲ್‌ನಲ್ಲಿ ವಿವರಿಸಲಾಗಿದೆ. ಇದು ದಖ್ಖನ್ ಪ್ರಸ್ಥಭೂಮಿಯನ್ನು ಸರಿಯಾಗಿ ವಿಭಾಗಿಸುವ ಸಮಾನಾಂತರ ಅರ್ಧವೃತ್ತದ ಕೊನೆಯ ಭಾಗವಾಗಿದ್ದು (೧೩° ರೇಖಾಂಶ) ಮದ್ರಾಸ್ ಮತ್ತು ಮಂಗಳೂರನ್ನು ನೇರವಾಗಿ ಸಂಧಿಸುತ್ತದೆ. ಇವೆರಡರ ಮಧ್ಯೆ ಬೆಂಗಳೂರು ಸಂಧಿಸಲ್ಪಡುತ್ತದೆ (ಸ್ಮರಕ್ ೧೮೯೪(I)):೭). ಅಂದರೆ ಅಕ್ಷಾಂಶ ರೇಖಾಂಶದ ನಿರೂಪಣೆಯಲ್ಲೂ ಕರಾವಳಿ ಕರ್ನಾಟಕ ಮಹತ್ವದ ಸ್ಥಾನವನ್ನು ಹೊಂದಿದೆ.

ಕರಾವಳಿ ಕರ್ನಾಟಕವನ್ನು ಭೌಗೋಳಿಕವಾಗಿ ವಿವರಿಸುವ ನಿಟ್ಟಿನಲ್ಲಿ ಭಾರತದ ಮೇಲ್ಮೈ ವಿಭಾಗೀಕರಣದ ಚಿತ್ರಣ ಅಗತ್ಯವಿದೆ. ಏಕೆಂದರೆ ಕರಾವಳಿ ಕರ್ನಾಟಕವು ಭಾರತದ ಎಲ್ಲಾ ನಾಲ್ಕು ಪ್ರಮುಖ ಭೌಗೋಳಿಕ ವಿಭಾಗಗಳ ಸಂಕೀರ್ಣತೆಯನ್ನು ಒಳಗೊಂಡಿದೆ.

**ಭಾರತದ ೪ ಪ್ರಮುಖ ಭೌಗೋಳಿಕ ವಿಭಾಗಗಳೆಂದರೆ,**

ಅ. ಉತ್ತರ ಮತ್ತು ಈಶಾನ್ಯ ಭಾರತದ ಮುಗಿಲು ಮುಟ್ಟುವ ಪರ್ವತ ಶಿಖರಗಳ ಭೂಸಂರಚನೆ.

ಬ. ಗಂಗಾ, ಯಮುನಾ, ದೋಆಬ್ ವಿಶಾಲ ಬಯಲು ಪ್ರದೇಶಗಳ ಉತ್ತರ ಭಾರತ

ಕ. ಉತ್ತರದ ಬಯಲು ಪ್ರದೇಶಗಳ ಕೆಳಭಾಗದ ಭೂಭಾಗವನ್ನು ಹೊಂದಿರುವ ದಖ್ಖನ್ ಪ್ರಸ್ಥಭೂಮಿ (ಸಮತಲ ಪ್ರದೇಶ-ಬೆಟ್ಟಪ್ರದೇಶ)

ಇ. ಪೂರ್ವ ಮತ್ತು ಪಶ್ಚಿಮ ಘಟ್ಟಗಳಿಂದ ಇಳಿಮುಖವಾಗಿ ರೂಪಿತಗೊಂಡಿರುವ ಕರಾವಳಿಯ ತಗ್ಗು ಪ್ರದೇಶಗಳು (ಇಗ್ನೋ ಎಂಎಚ್ಐ-೦೮(೦೧) ೨೦೦೫:೧೮).

ಮೇಲ್ಕಂಡ ನಾಲ್ಕು ವರ್ಗೀಕರಣವನ್ನು ಭಾರತದ ಭೌಗೋಳಿಕ ಭೂಮಿಯ ಮೇಲ್ಮೈ ಸಂರಚನೆಯನ್ನು ಆಧರಿಸಿ ಮಾಡಲಾಗಿದೆ. ಇವುಗಳು ಒಂದಕ್ಕೊಂದು ಪರಸ್ಪರ ಭಿನ್ನವಾದ ಸಂರಚನೆಯಾಗಿದೆ. ಹಿಮಾಲಯದ ರಚನೆ ತೀರಾ ಇತ್ತೀಚೆಗೆ ರೂಪುಗೊಂಡ ಭೂಗರ್ಭದ ಪ್ರಕ್ರಿಯೆಯಾಗಿದೆ. ಇದು ಮಡಿಕೆ ಪರ್ವತಗಳ ಶ್ರೇಣಿಯಾಗಿದೆ. ಇಲ್ಲಿ ಅತೀ ಎತ್ತರದ ಗಿರಿ ಶಿಖರಗಳು, ಕಣಿವೆಗಳು, ಅಲ್ಲಲ್ಲಿ ಸಮತಟ್ಟಾದ ಪ್ರದೇಶಗಳು ಕಂಡು ಬರುತ್ತದೆ. ಇಳಿಜಾರಾದ ಬೆಟ್ಟಗಳು ಹಲವಾರು ನದಿ, ತೊರೆ, ಕಣಿವೆಗಳ ಉಗಮಕ್ಕೆ ಕಾರಣವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ದಖ್ಖನ್ ಪ್ರಸ್ಥಭೂಮಿಯ ಸಂರಚನೆ ಮತ್ತು ಸ್ಥಿತ್ಯಂತರವನ್ನು ಕಾಣಬಹುದು. ದಖ್ಖನ್ ಪ್ರಸ್ಥಭೂಮಿಯನ್ನು ಪೆನಿನ್‌ಸ್ಯುಲಾರ್ ಇಂಡಿಯಾ[೧] ಎಂದು ಕರೆಯುತ್ತಾರೆ. ಇದು ವಿಂಧ್ಯಾ ಪರ್ವತ ಶ್ರೇಣಿಗಳ ಕೆಳಭಾಗದ ಸರಿಸುಮಾರು ರಾಜ್ಯಗಳಾದ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ರಾಜ್ಯಗಳನ್ನು ಒಳಗೊಂಡಿದೆ (ಇಗ್ನೋ ಎಂಎಚ್ಐ-೦೮ (೦೧) ೨೦೦೫:೧೮). ಪೆನಿನ್‌ಸ್ಯುಲಾರ್ ಇಂಡಿಯಾದ ಭೂಗರ್ಭ ಸಂರಚನೆ ಹಿಮಾಲಯಕ್ಕಿಂತ ಹಿಂದಿನದ್ದಾಗಿದೆ. ಇದು ಗೊಂಡಾವನ ಭೂ ತೊಗಟೆಯ ಮೇಲೆ ನಿಂತಿದೆ (ಕಲ್ಪನಾ ರಾಜಾರಾಮ್ ೨೦೦೯:೪೩೭). ಸಮತಟ್ಟಾದ

ವಿಶಾಲ ಭೂಪ್ರದೇಶಗಳೂ, ಪಳೆಯುಳಿಕೆಯ ಪರ್ವತಗಳೂ, ಹಳೆಯ ನದಿ ಕಣಿವೆಗಳೂ ಇವೆ. ಉತ್ತರ ಭಾರತದ ಬಯಲು ಭೂಮಿಯ ಫಲವತ್ತತೆ ದಖ್ಖನ್ ಪ್ರಸ್ಥಭೂಮಿಯ ಬಯಲು ಪ್ರದೇಶದ ಭೂಮಿ ಹೊಂದಿರುವುದಿಲ್ಲ (ಇಗ್ನೋ ಎಂಎಚ್ಐ-೦೮ (೦೧) ೨೦೦೫:೨೫). ಭಾರತ ಪರ್ಯಾಯ ಪ್ರಸ್ಥಭೂಮಿಯು ತ್ರಿಕೋನಾಕಾರದ ಭೂಭಾಗದಿಂದ ರೂಪಿತಗೊಂಡಿದೆ. ಇದರ ತುತ್ತ ತುದಿಯೇ ದಕ್ಷಿಣದ ತುತ್ತ ತುದಿಯಾಗಿದ್ದು, ಉತ್ತರದ ವಿಂಧ್ಯಾ ಪರ್ವತದ ಕೆಳಭಾಗಕ್ಕೆ ವಿಶಾಲ ಅಡಿಪಾಯದ ರೀತಿಯಲ್ಲಿ ಅಲ್ಲಲ್ಲಿ ಅರ್ಧ ತುಂಡಾಗಿರುವ ಭೂಸಂರಚನೆಯನ್ನು ಒಳಗೊಂಡಿದೆ. ಆದುದರಿಂದ ವಿಶಾಲ ಭೂಪ್ರದೇಶದ 'ಬೆನ್ನುಹುರಿ ಮೂಳೆ'ಯೆಂದೇ ದಖ್ಖನ್ ಪ್ರಸ್ಥಭೂಮಿಯನ್ನು ಪರಿಗಣಿಸಲಾಗಿದೆ (ಸುಬ್ರಹ್ಮಣ್ಯಂ ೨೦೦೪:೯). ಇದರ ಇಕ್ಕೆಲಗಳಲ್ಲಿ ಸಮುದ್ರಕ್ಕೆ ಚಾಚಿರುವ ತಗ್ಗಾದ ಹಾಗೂ ಎರಡು ಎತ್ತರದ ಘಟ್ಟಗಳಿಂದ ಪ್ರತ್ಯೇಕಿಸಲ್ಪಟ್ಟಿರುವ ಸಾಧಾರಣ ಇಕ್ಕಟ್ಟಾಗಿರುವ ಭೂಪ್ರದೇಶವನ್ನು ಭಾರತದ ಕರಾವಳಿ ಪ್ರದೇಶವೆಂದು ಕರೆಯುತ್ತಾರೆ. ಇದನ್ನು ಚರಿತ್ರೆಕಾರರಾದ ಸಂಜಯ್ ಸುಬ್ರಹ್ಮಣ್ಯಂರವರು, "ದಿ ಪೊಲಿಟಿಕಲ್ ಇಕಾನಮಿ ಆಫ್ ಕಾಮರ್ಸ್ ಆಫ್ ಸದರ್ನ್ ಇಂಡಿಯಾ" ಎಂಬ ಕೃತಿಯಲ್ಲಿ ಅತ್ಯಂತ ಪ್ರಖರ ವಿಶ್ಲೇಷಣೆಯಲ್ಲಿ ಈ ರೀತಿ ವಿವರಿಸಿರುತ್ತಾರೆ.

> ಕರಾವಳಿಯ ತೀರವು ಎತ್ತರವಾದ ಸಮತಟ್ಟು ಭೂಪ್ರದೇಶದಿಂದ ಪ್ರತ್ಯೇಕಗೊಂಡಿದ್ದು ಈ ಪ್ರಸ್ಥಭೂಮಿಯ ಒಳಭಾಗದ ಪರ್ವತಗಳಲ್ಲಿ ವೈರುಧ್ಯಮಯ ಕೌತುಕಗಳನ್ನು ಒಳಗೊಂಡಿದ್ದು ಈ ಘಟ್ಟಪ್ರದೇಶಗಳನ್ನು ಪೂರ್ವದ ಮತ್ತು ಪಶ್ಚಿಮದ ಘಟ್ಟಗಳೆಂದು ಕರೆಯುತ್ತಾರೆ(ಸುಬ್ರಹ್ಮಣ್ಯಂ ೨೦೦೪:೯).

ಈ ಪ್ರಕಾರ ಪೆನಿನ್‌ಸ್ಯುಲಾರ್ ಇಂಡಿಯಾದ ದಖ್ಖನ್ ಪ್ರಸ್ಥಭೂಮಿಯು ಇಕ್ಕಟ್ಟಾದ ತಗ್ಗು ಪ್ರದೇಶದ ಕರಾವಳಿಯ ಅಂಚಿನಲ್ಲಿ ಇದೆ. ಎತ್ತರದ ಸಮುದ್ರ ದಂಡೆಗಳು ಮತ್ತು ಅಲ್ಲಲ್ಲಿ ತೆರೆಗಳು ಬಂದು ಅಪ್ಪಳಿಸುವ ಬಂಡೆಕಲ್ಲುಗಳು ಸಮುದ್ರದಿಂದ ಪ್ರತ್ಯೇಕಿಸಲ್ಪಟ್ಟವುಗಳೆಂಬುದನ್ನು ಸ್ಪಷ್ಟವಾಗಿ ತೋರಿಸುತ್ತದೆ. ಈ ತಗ್ಗಾದ ತೀರ ಪ್ರದೇಶಗಳು ರೂಪೀಕರಣಗೊಂಡ ಮೇಲೆ ಸಮುದ್ರ ಮಟ್ಟದಲ್ಲಿ ಆಗಾಗ ಏರಿಳಿತಗಳು, ಸಣ್ಣಮಟ್ಟದಲ್ಲಿ ಸಮುದ್ರ ಒಳಬರುವಿಕೆಗಳು (ಕಡಲು ಕೊರೆತ) ಕಂಡು ಬರುತ್ತಿದೆ. ಇವು ಭಾರತದ ಕರಾವಳಿ ತೀರದ ಸಾಮಾನ್ಯ ಲಕ್ಷಣಗಳಾಗಿದೆ (ಇಗ್ನೋ ಎಂಎಚ್ಐ-೦೮ (೦೧) ೨೦೦೫:೨೫).

ಭಾರತದ ಪಶ್ಚಿಮ ಕರಾವಳಿ ಗುಜರಾತಿನ ಕಚ್ ತೀರದಿಂದ ಪ್ರಾರಂಭವಾಗಿ ಮಲಬಾರ್‌ವರೆಗೆ ಸುಮಾರು ೩೦೦೦ ಕಿ.ಮೀ. ಉದ್ದ ಹೊಂದಿದೆ. ಭಾರತದ ಪಶ್ಚಿಮ ಕರಾವಳಿಯನ್ನು ೪ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ,

ಅ. ಗುಜರಾತ್ ಕರಾವಳಿ ತೀರ– ಕಚ್‌ನಿಂದ ದಮನ್‌ವರೆಗಿನ ತೀರ.

ಬ. ಕೊಂಕಣ ಕರಾವಳಿ– ದಮನ್ ಮತ್ತು ಗೋವಾದ ವರೆಗಿನ ಮಧ್ಯದ ಕರಾವಳಿ ತೀರ.

ಕ. ಕರ್ನಾಟಕ ಕರಾವಳಿ– ಕಾರವಾರದಿಂದ ಮಂಗಳೂರು(ತಲಪಾಡಿ)ವರೆಗಿನ ವಿಸ್ತರಿಸಿರುವ ತೀರ.

ಇ. ಮಲಬಾರ್ ಕರಾವಳಿ[೨] – ಕಾಸರಗೋಡುನಿಂದ ತಿರುವನಂತಪುರದವರೆಗೆ ವಿಸ್ತರಿಸಿರುವ ತೀರ.

ಮೇಲೆ ವಿವರಿಸಿದ ಪ್ರಕಾರ ಕರಾವಳಿ ಕರ್ನಾಟಕವು ಭಾರತದ ಪಶ್ಚಿಮ ಕರಾವಳಿಯ ನಾಲ್ಕು

ಪ್ರಮುಖ ವಿಭಾಗಗಳಲ್ಲಿ ಒಂದಾಗಿರುವುದನ್ನು ತೋರಿಸಿ ಕೊಡುತ್ತದೆ. ಆದರೆ ಈ ನಾಲ್ಕು ಪಶ್ಚಿಮ ಕರಾವಳಿ ವಿಭಾಗಗಳ ಮಧ್ಯೆಯೂ ಪರಸ್ಪರ ವೈರುಧ್ಯಮಯ ಲಕ್ಷಣಗಳಿವೆ. ಪ್ರಸ್ತುತ ಕರಾವಳಿ ಕರ್ನಾಟಕ ಹೊಂದಿರುವ ವೈವಿಧ್ಯಮಯ ಹಾಗೂ ಪರಸ್ಪರ ವೈರುಧ್ಯಗಳಿಂದ ಕೂಡಿರುವ ಮೇಲ್ಮೈ ಲಕ್ಷಣಗಳನ್ನೂ ಹಾಗೂ ಅವು ನಿರೂಪಿಸಿದ ವಾಣಿಜ್ಯೋದ್ಯಮಕ್ಕೆ ಪೂರಕವಾದ ಸನ್ನಿವೇಶಗಳನ್ನು ಮುಂದೆ ಚರ್ಚಿಸಲಾಗಿದೆ.

**ಕರಾವಳಿ ಕರ್ನಾಟಕದ ಮೇಲ್ಮೈ ಲಕ್ಷಣ ಮತ್ತು ವೈರುಧ್ಯಗಳ ವೈಜ್ಞಾನಿಕ ವಿಶ್ಲೇಷಣೆ**

ಈಗಾಗಲೇ ವಿವರಿಸಿರುವಂತೆ ಕರಾವಳಿ ಕರ್ನಾಟಕದ ಮೇಲ್ಮೈ ಲಕ್ಷಣಗಳು ಭಾರತದ ಸಮಗ್ರ ಲಕ್ಷಣಗಳ ಪ್ರತಿರೂಪವನ್ನು ಹೊಂದಿದೆ. ಅಷ್ಟು ಮಾತ್ರವಲ್ಲದೆ ಪರಸ್ಪರ ವೈರುಧ್ಯಮಯ ಸ್ಥಿತಿಗತಿಗಳನ್ನೂ ಒಳಗೊಂಡಿದೆ. ಕರ್ನಾಟಕ ಕರಾವಳಿಯ ಉತ್ತರ ಭಾಗದ ಭೌಗೋಳಿಕ ಲಕ್ಷಣಕ್ಕೂ, ದಕ್ಷಿಣ ಕರಾವಳಿಯ ಭೌಗೋಳಿಕ ಲಕ್ಷಣಕ್ಕೂ ವ್ಯತ್ಯಾಸಗಳಿವೆ. ಕರಾವಳಿಯ ಒಳನಾಡಿನ ಪರಿಸರಕ್ಕೂ ಸಮುದ್ರ ತೀರದ ಪರಿಸರಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಕೃಷಿ ಸಂಬಂಧಗಳೂ, ವಾಣಿಜ್ಯ ಬೆಳೆಗಳೂ ಮತ್ತು ಅದು ಪ್ರಭಾವಿಸಿದ ವ್ಯಾಪಾರ ವ್ಯವಹಾರಕ್ಕೂ ನೇರ ಸಂಬಂಧವಿದೆ. ಇವುಗಳೆಲ್ಲವನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಸಾಹಿತಿ ಹಾಗೂ ವೈಜ್ಞಾನಿಕ ಲೇಖಕರಾದ ಕೆ. ಶಿವರಾಮ ಕಾರಂತರ ಪ್ರಕಾರ

> ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡಿನಿಂದ ತೊಡಗಿ, ಕಾರವಾರದ ತನಕವೂ ಮತ್ತು ತುಸು ಮುಂದೆಯೂ ನಮ್ಮ ಕಡಲ ಕರಾವಳಿ ಚಾಚಿಕೊಂಡಿದೆ. ಇದರ ಒಟ್ಟು ಉದ್ದ ೨೦೦ ಮೈಲು ಆಗಬಹುದು (ಕಾರಂತ ೧೯೮೪:೭೭).

ಎಂದು ಅಭಿಪ್ರಾಯಪಟ್ಟಿದ್ದಾರೆ. ಕಾರಂತರು ಗುರುತಿಸಿರುವ ೨೦೦ ಮೈಲು ಉದ್ದದ ಕಡಲ ತೀರವು ಭೂಪಟದಲ್ಲಿ ನಾವು ಕಂಡಂತೆ ಸರಳರೇಖೆಯಲ್ಲಿ ವಿಸ್ತರಿಸಿಕೊಂಡಿಲ್ಲ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗಳ ಸುಮಾರು ನೂರು ಮೈಲುಗಳಷ್ಟು ಉದ್ದದ ಕರಾವಳಿ ಹೆಚ್ಚು ಕಡಿಮೆ ನೇರವಾಗಿ ಕಾಣುವಂತಹ ರೀತಿಯಲ್ಲಿ 'ಮರಳಿ'ನ(ಹೊೖಗೆ) ಹಾಸುಗೆ ಕಾಣಿಸುತ್ತದೆ[೩].ಆದರೆ ಅನಂತರದ ನೂರು ಮೈಲು ದೂರದ ಸಮುದ್ರ ತೀರದಲ್ಲಿ ಹಲವಾರು ಬೆಟ್ಟದ ಸಾಲುಗಳು ಸಮುದ್ರದೊಳಕ್ಕೆ ಚಾಚಿಕೊಂಡಿದೆ. ಸಮುದ್ರ ತೀರದಿಂದ ಪೂರ್ವಕ್ಕೆ ವಿಸ್ತರಿಸಿರುವ ತಗ್ಗಾದ ಭೂಮಿಯನ್ನು ಪಶ್ಚಿಮ ಘಟ್ಟಗಳ ಸಾಲುಗಳು ಪ್ರತ್ಯೇಕಿಸುತ್ತದೆ. ಉತ್ತರದಿಂದ ದಕ್ಷಿಣಕ್ಕೆ ಬಂದಂತೆ ಈ ತಗ್ಗಾದ ಬಯಲು ಪ್ರದೇಶದ ವಿಸ್ತೀರ್ಣವು ಅಗಲವಾಗುತ್ತದೆ. ಬಹಳ ಮುಖ್ಯವಾಗಿ ಕಾರವಾರ ಭಾಗದಲ್ಲಿ ಪರ್ವತಗಳೇ ಸಮುದ್ರದ ಬಳಿಯಿಂದ ಪ್ರಾರಂಭವಾಗುವ ಕಾರಣ ಹೇಳಿಕೊಳ್ಳುವಂತಹ ತಗ್ಗಾದ ಭೂಪ್ರದೇಶ ಇಲ್ಲ. ಆದರೆ ದಕ್ಷಿಣಕ್ಕೆ ಬಂದಂತೆ ಸುಮಾರು ೮೦ ಕಿ.ಮೀ. ಅಗಲದ ತಗ್ಗು ಪ್ರದೇಶವಿದೆ. ತಗ್ಗು ಪ್ರದೇಶ ಎಂದಾಕ್ಷಣ ಸಮತಟ್ಟಾದ ಬಯಲು ಪ್ರದೇಶ ಎಂದು ಅರ್ಥವಲ್ಲ. ಇದರಲ್ಲಿ ಗುಡ್ಡ, ಕಾಡು, ತೊರೆ- ನದಿ, ಕಣಿವೆ, ಮುಖಜಭೂಮಿ, ದ್ವೀಪಗಳು, ಅಳಿವೆ ಬಾಗಿಲುಗಳನ್ನು ಒಳಗೊಂಡ ವಿನ್ಯಾಸಗಳಿವೆ. ಸಮುದ್ರ ತೀರ ಎಂದರೆ ಮರಳು ದಂಡೆ, ಸಮುದ್ರದ ಉಪ್ಪು ನೀರು ಮತ್ತು ತೆರೆಗಳು ಅಗಾಧವಾದ ಮತ್ಸ್ಯ ಸಂಪತ್ತು ಮಾತ್ರವಲ್ಲ; ಇದರ ಹೊರತಾಗಿ ಭಾರೀ ಮಹತ್ವದ ಅಂಶಗಳು ಇವೆ ಎಂಬುದನ್ನು ಗುರುತಿಸಲೇಬೇಕು.

ಭಾರತದ ಪೂರ್ವ ಕರಾವಳಿ ಮತ್ತು ಪಶ್ಚಿಮ ಕರಾವಳಿಯ ಮಧ್ಯೆ ಇರುವ ಗಂಭೀರ ಪ್ರಮಾಣದ ವೈರುಧ್ಯಗಳಂತೆ ಕೇವಲ ೨೦೦ ಮೈಲು ವ್ಯಾಪ್ತಿಯ ಕರ್ನಾಟಕ ಕರಾವಳಿಯ ಸಮುದ್ರ ಮತ್ತು ತೀರ, ತೆರೆಗಳ ಸ್ವರೂಪ, ಅಲೆಗಳ ಅಬ್ಬರ, ಸಮುದ್ರದ ಆಳಗಳಲ್ಲಿಯೂ ವ್ಯತ್ಯಾಸವಿದೆ. ಸರಿಸುಮಾರು ಕಾಸರಗೋಡಿನಿಂದ ಕುಂದಾಪುರದ ಮರವಂತೆಯವರೆಗೆ ಸಮುದ್ರದ ಅಲೆಗಳು ಪ್ರಬಲವಾದ ಶಕ್ತಿಯೊಂದಿಗೆ ದಡಕ್ಕೆ ಬಂದು ಅಪ್ಪಳಿಸುತ್ತದೆ. ಈ ಭಾಗದಲ್ಲಿ ಋತುಮಾನಗಳಿಗೆ ಅನುಗುಣವಾಗಿ ಸಮುದ್ರದ ದಡ ಮತ್ತು ಸಮುದ್ರಮಟ್ಟ ವ್ಯತ್ಯಾಸವನ್ನು ಹೊಂದುತ್ತದೆ. ಈ ಭಾಗದಲ್ಲಿ ಮಳೆಗಾಲದ ಸಮಯದಲ್ಲಿ ಸಮುದ್ರದ ಅಲೆಗಳು ತೀವ್ರ ರಭಸದಿಂದ ದಡಕ್ಕೆ ಬಂದು ಅಪ್ಪಳಿಸಿ ಕಡಲು ಕೊರೆತವನ್ನು ಉಂಟು ಮಾಡುವ ಮೂಲಕ ನೆಲವನ್ನು ಅಕ್ರಮಿಸಿಕೊಳ್ಳುವ ಪ್ರಕ್ರಿಯೆ ನಡೆಯುತ್ತದೆ. ಈ ರೀತಿಯ ಕಡಲು ಕೊರೆತದ ತೀವ್ರತೆ ಭಾರತದ ಇತರ ಕರಾವಳಿಗಳಲ್ಲಿ ಇಲ್ಲ. ಆದರೆ ಬೇಸಿಗೆಯಲ್ಲಿ ಮತ್ತೆ ಅದು ತನ್ನ ಹಿಂದಿನ ಮೂಲ ಸ್ತರಕ್ಕೆ ಸರಿಯುತ್ತದೆ. ಕಡಲು ಕೊರೆತ ಸಂಭವಿಸುವ ಭಾಗದಲ್ಲಿ ಮಳೆಗಾಲದಲ್ಲಿ ಏನಿಲ್ಲವೆಂದರೂ ಕನಿಷ್ಠ ಪಕ್ಷ ೨೦೦ ಮೀಟರು ನೆಲದ ಭಾಗವನ್ನು ಸಮುದ್ರ ಅಪೋಶನಗೈಯುತ್ತದೆ. ಆದರೆ ಅಲೆಗಳ ಅಬ್ಬರ, ಎತ್ತರ ಮತ್ತು ತೀವ್ರತೆ ಮಳೆಗಾಲ ಕಳೆದ ಮೇಲೆ ಮೊದಲಿನಷ್ಟು ಇಲ್ಲದಿದ್ದರೂ ಭಾರತದ ಇತರ ಕರಾವಳಿಗಳಿಗೆ ಹೋಲಿಸಿದರೆ ಹೆಚ್ಚಾಗಿಯೇ ಇದೆ. ಭಾರತದ ತಮಿಳುನಾಡು ತೀರ, ಗೋವಾ ತೀರಗಳಲ್ಲಿ ಸಮುದ್ರದ ಅಲೆಗಳು ಸಮಾನಾಂತರ ರೂಪದಲ್ಲಿ ಬಂದು ಅಪ್ಪಳಿಸಿ ಸಾಮಾನ್ಯ ವೇಗದಲ್ಲಿ ಹಿಂದಕ್ಕೆ ಹೋಗುತ್ತದೆ. ಸುಮಾರು ೨೦೦ ಅಡಿಗಳಷ್ಟು ದೂರಕ್ಕೆ ಒಂದೆರಡು ಅಡಿ ಮಟ್ಟದ ನೀರು ಇರುತ್ತದೆ. ಅದಕ್ಕೆ ತೀವ್ರತೆಯೂ ಇರುವುದಿಲ್ಲ. ಆದರೆ ಕರ್ನಾಟಕದ ಕರಾವಳಿಯ ದಕ್ಷಿಣ ಭಾಗವು ಇದಕ್ಕೆ ವ್ಯತಿರಿಕ್ತವಾಗಿದ್ದು ತೀವ್ರ ಸ್ವರೂಪದ ಅಲೆಗಳು ಮಾತ್ರವಲ್ಲದೆ ಅಷ್ಟೇ ವೇಗವಾಗಿ ಹಿಂದಕ್ಕೆ ಚಲಿಸುತ್ತದೆ. ಸಮುದ್ರದ ಆಳವು ಅಂಚಿನ ತಕ್ಷಣದಿಂದಲೇ ಪ್ರಾರಂಭವಾಗುತ್ತದೆ. ಆದುದರಿಂದ ಕರಾವಳಿ ಕರ್ನಾಟಕದ ತೀರ ಅತ್ಯಂತ ಅಪಾಯಕಾರಿಯಾಗಿದೆ. ಈ ಬಗ್ಗೆ ವೈಜ್ಞಾನಿಕ ಪ್ರಕ್ರಿಯೆಯನ್ನು "ಸೀಳ್ನೀರು" (rip current) ಎಂದು ಕರೆಯುತ್ತಾರೆ. ಬಲವಾದ ಗಾಳಿಯ ಅಬ್ಬರಕ್ಕೆ ಸಿಕ್ಕಿದ ಅಲೆಗಳು ವೇಗಯುತವಾಗಿ ದಂಡೆಗೆ ಅಪ್ಪಳಿಸುವಾಗ ಅದು ತಂದಿರುವ ಹೆಚ್ಚಿನ ಪ್ರಮಾಣದ ನೀರು ದಡಕ್ಕೆ ಅಪ್ಪಳಿಸಿ ಪುನಃ ಸಮುದ್ರಕ್ಕೆ ಹಿಂತಿರುಗಿ ಸೇರುವ ಕ್ರಿಯೆಗೆ ಅಡಚಣೆ ಉಂಟಾಗುತ್ತದೆ. ಸಮುದ್ರಕ್ಕೆ ಹಿಂತಿರುಗಿ ಹೋಗುವ ನೀರು ಮರಳನ್ನು ಸೆಳೆದುಕೊಂಡು ಹೋಗುತ್ತದೆ. ಆಗ ಅದು ಬಲಿಷ್ಠ ಪ್ರವಾಹವಾಗಿ ಪರಿವರ್ತನೆ ಹೊಂದಿ ಸಮುದ್ರ ತಳದ ಮೇಲಿನಿಂದ ಹರಿಯಬೇಕಾಗುತ್ತದೆ. ಇಂತಹ ಪ್ರವಾಹಗಳನ್ನು ಸೀಳ್ನೀರು ಪ್ರವಾಹ (rip current) ಎಂದು ಕರೆಯುತ್ತಾರೆ. ಈ ಅಬ್ಬರದ ತೆರೆಯನ್ನು ಅಸ್ವಾದಿಸುವ ವಿಹಾರಿಗಳು, ಸಮುದ್ರ ಸ್ನಾನ ಮಾಡುವವರು ಈ ಪ್ರವಾಹದ ಸೆಳೆತಕ್ಕೆ ಸಿಕ್ಕಿದಾಗ ಇವರುಗಳ ಕಾಲಿನ ಅಡಿಯ ಮರಳು ಕೊಚ್ಚಿ ಹೋಗಿ ಸಮುದ್ರ ಪಾಲಾಗುತ್ತಾರೆ. ಆದುದರಿಂದ ಈ ರೀತಿಯ ಪ್ರವಾಹಕ್ಕೆ ಕರಾವಳಿ ಕರ್ನಾಟಕದ ದಕ್ಷಿಣ ಭಾಗವೇ ಪ್ರಖ್ಯಾತವಾಗಿದೆ (ಕಾರಂತ ೧೯೮೪:೬೧). ಸಮುದ್ರದಲ್ಲಿ ಉತ್ತರಕ್ಕೆ ಚಲಿಸಿದಂತೆ ಈ ಪ್ರಕ್ರಿಯೆಯ ತೀವ್ರತೆ ಕಡಿಮೆಯಾಗುತ್ತಾ ಹೋಗುತ್ತದೆ. ಕಾರವಾರದ ಸುತ್ತಮುತ್ತ ಮತ್ತು ಭಟ್ಕಳದ ಸುತ್ತಮುತ್ತ ಗ್ರಾನೈಟ್‌ಗಳಿಂದ ಆವೃತವಾದ ಹಲವಾರು ದ್ವೀಪಗಳು ಇವೆ. ಆದರೆ ಮೇಲೆ ವಿವರಿಸಿದ ದಕ್ಷಿಣದ ಕರಾವಳಿಯಲ್ಲಿ ಕೇವಲ ಮಲ್ಪೆಯಲ್ಲಿ

ಮಾತ್ರ ಅಂತಹ ಒಂದು ದ್ವೀಪ ಇದೆ. ಇಡೀ ಕರಾವಳಿ ಕರ್ನಾಟಕದಲ್ಲಿ ಕಾರವಾರವನ್ನು (ಸದಾಶಿವಘಡ) ಹೊರತುಪಡಿಸಿದರೆ ಎಲ್ಲಿಯೂ ಆಳವಾದ ನೈಸರ್ಗಿಕ ಬಂದರು ಇಲ್ಲ. ಚಾರಿತ್ರಿಕವಾಗಿ ಅರಬ್ಬರ ೧೫೦ ಟನ್ ಭಾರದ ಹಡಗುಗಳು ಭಾರೀ ಕಷ್ಟಪಟ್ಟು ಇತರ ಬಂದರುಗಳಲ್ಲಿ ಲಂಗರು ಹಾಕಬೇಕಾಗಿತ್ತು ಎಂದು ಬಿ.ಎಸ್. ಶಾಸ್ತ್ರಿಯವರು ಉಲ್ಲೇಖಿಸುತ್ತಾರೆ.

ಇತಿಹಾಸಕಾರರಾದ ಸಂಜಯ್ ಸುಬ್ರಹ್ಮಣ್ಯಂರವರು, ಪಶ್ಚಿಮ ಘಟ್ಟ, ಪಶ್ಚಿಮ ಕರಾವಳಿ ಮತ್ತು ಇಲ್ಲಿಯ ಹವಾಗುಣವನ್ನು ವಿಶ್ಲೇಷಿಸುತ್ತಾ,

> ಪಶ್ಚಿಮ ಘಟ್ಟಗಳು ಪೂರ್ವ ಘಟ್ಟಗಳಿಗಿಂತ ಅತ್ಯಂತ ಎತ್ತರವಾಗಿ ಇಳಿಜಾರಾಗಿದ್ದು ಸಮುದ್ರದಿಂದ ಬೀಸುವ ಮಾರುತಗಳನ್ನು ತಡೆದು ಕರಾವಳಿ ತೀರಕ್ಕೆ ಹೆಚ್ಚಿನ ಉಪಯುಕ್ತತೆ ಲಭಿಸಿದೆ (ಸುಬ್ರಹ್ಮಣ್ಯಂ ೨೦೦೪:೯).

ಈ ವಿಶ್ಲೇಷಣೆಯ ಗತಿಯನ್ನು ವಿಸ್ತರಿಸಿ ಹೇಳುವುದಾದರೆ, ಪೂರ್ವ ಘಟ್ಟದಲ್ಲಿ ಹುಟ್ಟುವ ನದಿಗಳು ಮತ್ತು ಅವುಗಳ ಮುಖಜ ಭೂಮಿಗೂ, ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಪೂರ್ವಕ್ಕೆ ಹರಿಯುವ ನದಿಗಳಿಗೂ, ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಪಶ್ಚಿಮಕ್ಕೆ ಹರಿಯುವ ನದಿಗಳ ಮುಖಜ ಭೂಮಿಗೂ ವ್ಯತ್ಯಾಸವಿದೆ. ಪೂರ್ವಕ್ಕೆ ಹರಿಯುವ ಪ್ರಮುಖ ನದಿಗಳು ಪಶ್ಚಿಮ ಘಟ್ಟದಲ್ಲಿ ಹುಟ್ಟಿ ನೂರಾರು ಕಿ.ಮೀ. ಹರಿದು ಕೊನೆಗೆ ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಆದರೆ ಅರಬ್ಬೀ ಸಮುದ್ರಕ್ಕೆ ಹರಿಯುವ ಎಲ್ಲಾ ನದಿಗಳು ಪಶ್ಚಿಮ ಘಟ್ಟದಲ್ಲಿ ಮಾತ್ರ ಹುಟ್ಟುತ್ತವೆ. ನಿರ್ದಿಷ್ಟವಾಗಿ ಕರಾವಳಿ ಕರ್ನಾಟಕ ಭಾಗದಲ್ಲಿ ನೂರು ಕಿ.ಮೀ. ಅಂತರದ ಒಳಗೆ ಮಾತ್ರ ಹರಿದು ಸಮುದ್ರ ಸೇರುವ ಅತ್ಯಂತ ಚಿಕ್ಕ ಜಲಾನಯನ ಪ್ರದೇಶವನ್ನು ಹೊಂದಿರುತ್ತದೆ. ಘಟ್ಟದಿಂದ ಇಳಿದು ಗುಡ್ಡಗಾಡುಗಳ ಮಧ್ಯೆ ಹರಿಯುವ ನೀರು ಅತ್ಯಂತ ರಭಸದಿಂದ ಕೂಡಿದ್ದು ಸಮುದ್ರವನ್ನು ಸೇರುತ್ತದೆ.[೫] ಈ ಪ್ರಕ್ರಿಯೆಯಲ್ಲಿ ಪಶ್ಚಿಮದ ತಗ್ಗು ಬಯಲು ಪ್ರದೇಶದ ಅಗಲ ಕಿರಿದಾಗಿದ್ದರೂ, ಫಲವತ್ತತೆಯನ್ನು ಹೊಂದಿರುವ ಪ್ರಮಾಣವು ಪೂರ್ವದ ತಗ್ಗು ಪ್ರದೇಶಗಳಿಗಿಂತ ಜಾಸ್ತಿಯಾಗಿದ್ದು, ಅದು ಹೆಚ್ಚು ಕೃಷಿಯೋಗ್ಯವಾಗಿರುತ್ತದೆ(ಸುಬ್ರಹ್ಮಣ್ಯಂ ೨೦೦೪:೧೦).

ಘಟ್ಟದಿಂದ ಇಳಿದು ಬರುವ ಈ ನದಿಗಳು ಕ್ರಮಿಸುವ ದೂರ ಅತ್ಯಲ್ಪವಾಗಿದ್ದರೂ, ದೊಡ್ಡ ಪ್ರಮಾಣದಲ್ಲಿ ಮಡ್ಡಿಯುಕ್ತ ಮಣ್ಣುಗಳನ್ನು ತಂದು ಅಳಿವೆ ಬಾಗಿಲಿನಲ್ಲಿ ಹೂಳುಗಳು ತುಂಬಲು ಕಾರಣವಾಗುತ್ತಿದೆ. ಕೆಲವೆಡೆಗಳಲ್ಲಿ ಇದು ಮರಳಿನ ದಿಬ್ಬ ರಚನೆಯಾಗಿ 'ಬೆಂಗರೆ'[೬] ಎಂದು ಕರೆಯಲ್ಪಡುತ್ತದೆ. ಶರಾವತಿ, ಕಾಳಿನದಿ, ಅಘನಾಶಿನಿ ಇವುಗಳು ಉತ್ತರ ಕನ್ನಡದ ಪ್ರಮುಖ ನದಿಗಳಾದರೆ, ನೇತ್ರಾವತಿ, ವಾರಾಹಿ, ಶಾಂಭವಿ, ಸೌಪರ್ಣಿಕ ಮೊದಲಾದುವುಗಳು ಅವಿಭಜಿತ ದಕ್ಷಿಣ ಕನ್ನಡದ ಪ್ರಮುಖ ನದಿಗಳಾಗಿವೆ. ಈ ನದಿಗಳು ಸಮುದ್ರ ಸೇರುವ ಭಾಗದಲ್ಲಿ ಮಾತ್ರ ವಿಶಾಲವಾಗಿದೆ. ಆದರೆ ಅದು ಕ್ರಮಿಸುವ ದಾರಿಯಲ್ಲಿ ಸಾಕಷ್ಟು ವಿಶಾಲವಾಗಿರುವುದಿಲ್ಲ. ಇದೇ ರೀತಿ ಅಳಿವೆ ಬಾಗಿಲಿನಲ್ಲಿ ಅಗಾಧ ಪ್ರಮಾಣದ ಹೂಳು ಶೇಖರವಾಗುವುದರಿಂದ ದೊಡ್ಡ ಗಾತ್ರದ ಹಡಗು, 'ಮಂಜಿ'ಗಳಿಗೆ ಹಿನ್ನೀರಿಗೆ ಪ್ರವೇಶಿಸಲು ಸಾಧ್ಯವಾಗುತ್ತಿಲ್ಲ. ಇದು ಪೋರ್ಚುಗೀಸರ ಆಗಮನದ ಪ್ರಾರಂಭದಿಂದಲೇ ಸಮಸ್ಯೆಯಾಗಿಯೇ ಇದ್ದುಕೊಂಡು ಪ್ರಸ್ತುತವೂ ಮುಂದುವರಿಯುತ್ತಿದೆ.

**ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮದ ನಿರೂಪಣೆಯಲ್ಲಿ ಪಶ್ಚಿಮ ಘಟ್ಟಗಳ ಸಾಲು**

ಕರಾವಳಿ ಕರ್ನಾಟಕದ ಆರ್ಥಿಕತೆ, ಸಾಮಾಜಿಕ ಜೀವನ, ಬದುಕು, ಆಚಾರ–ವಿಚಾರಗಳ ನಿರೂಪಣೆಯಲ್ಲಿ ಕರಾವಳಿ ಕರ್ನಾಟಕದ ಭಾಗದಲ್ಲಿ ಸಂಪನ್ನಗೊಂಡಿರುವ ಪಶ್ಚಿಮ ಘಟ್ಟಗಳ ಸಾಲಿನ ಪಾತ್ರ ಮಹತ್ವದ್ದಾಗಿದೆ. ಮಾನ್ಸೂನ್ ಮೋಡಗಳನ್ನು ತಡೆ ಹಿಡಿದು ಮಳೆ ಭರಿಸುವುದರಲ್ಲಿ ನಿರ್ಣಾಯಕ ಪಾತ್ರ ಈ ಘಟ್ಟಗಳ ಸಾಲಿಗೆ ಇದೆ[೭]. ಹತ್ತಾರು ನದಿಗಳು ಇಲ್ಲೇ ಉಗಮಗೊಂಡು ಅರಬ್ಬೀ ಸಮುದ್ರಕ್ಕೆ ಸೇರುವ ಪ್ರಕ್ರಿಯೆಯಲ್ಲಿ ಬೆಟ್ಟಗುಡ್ಡಗಳಿಂದ ಫಲವತ್ತಾದ ಲವಣಯುಕ್ತ ಮಣ್ಣನ್ನು ತರುವುದರಿಂದ ಕೃಷಿ ಉತ್ಪಾದಕತೆಗೆ ಪೂರಕವಾಗಿದೆ. ಇದನ್ನು ಸಂಜಯ್ ಸುಬ್ರಹ್ಮಣ್ಯಂರವರು ಈ ರೀತಿ ವ್ಯಾಖ್ಯಾನಿಸಿದ್ದಾರೆ.

> ಈ ಘಟ್ಟಗಳ ಸಾಲುಗಳು ಕೃಷಿಯಾಧಾರಿತ ಆರ್ಥಿಕತೆಗೆ ಅತ್ಯಂತ ಹೆಚ್ಚಿನ ಪ್ರಯೋಜನವಾಗಿದೆ. ಇವೆಲ್ಲವುಗಳ ಪರಿಣಾಮವಾಗಿ ಇಡೀ ಆರ್ಥಿಕತೆಯು ಮಾನ್ಸೂನ್ ಆಧಾರಿತವಾಗಿದೆ (ಸುಬ್ರಹ್ಮಣ್ಯಂ ೨೦೦೪:೧೦).

ಪಶ್ಚಿಮ ಘಟ್ಟದ ಬೆಟ್ಟಗಳ ಸಂರಚನೆ, ಸ್ವರೂಪ ವಿನ್ಯಾಸದಲ್ಲಿ ವ್ಯತ್ಯಾಸವಿದೆ. ಕರಾವಳಿಯ ಹಲವಾರು ಕಡೆ ಸಮುದ್ರವನ್ನೇ ಬಾಚಿಕೊಂಡಿದೆ. ಸರಿಸುಮಾರು ೨೦೦೦ದಿಂದ ೬೦೦೦ ಅಡಿ ಎತ್ತರದ ಬೆಟ್ಟಗಳೂ ಇವೆ. ಭಾರತದಲ್ಲಿ ಎರಡು ಮೆಗಾ ವೈವಿಧ್ಯಮಯ ಸಸ್ಯ ಮತ್ತು ಜೀವ ಸಂಕುಲ ತಾಣಗಳಲ್ಲಿ ಉತ್ತರ ಪೂರ್ವ ಹಿಮಾಲಯವನ್ನು ಬಿಟ್ಟರೆ ಪಶ್ಚಿಮಘಟ್ಟ ಮುಖ್ಯವಾಗುತ್ತದೆ (ಇಗ್ನೋ ಎಂಎಚ್‌ಐ–೦೮ (೦೧) ೨೦೦೫:೧೯). ಮಳೆನೀರಿನ ನಿರಂತರ ಪ್ರವಹಿಸುವಿಕೆಯ ನದಿ ಜಾಲಗಳು, ತೊರೆಗಳು ಜಲಾಶಯಗಳಲ್ಲಿ ಮಳೆ ನೀರು ಜೂನ್‌ನಿಂದ ಅಕ್ಟೋಬರ್‌ವರೆಗೆ ನಾಲ್ಕು ತಿಂಗಳು ಹರಿದರೆ ಅನಂತರದ ಅವಧಿಯಲ್ಲಿ ಘಟ್ಟದ ಮೇಲ್ಭಾಗದ ನೀರಿನ ಅಂತರ್ಜಲದ ಹೊರಸೂಸುವಿಕೆಯ ನಿರಂತರ ಪ್ರಕ್ರಿಯೆಯಿಂದ ಮುಂದಿನ ಜನವರಿ, ಫೆಬ್ರವರಿಯವರೆಗೆ ಎಲ್ಲಾ ನದಿಗಳಲ್ಲೂ ನೀರು ಇರುತ್ತದೆ[೮]. ಮಾರ್ಚ್ ತಿಂಗಳಿನಿಂದ ಮೇ ತಿಂಗಳವರೆಗೆ ಬತ್ತಿಹೋದರೂ ಅಲ್ಲಲ್ಲಿ ನೀರಿನ ಆಶ್ರಯಗಳು ಸಣ್ಣ ಪ್ರಮಾಣದಲ್ಲಿ ಶೇಖರಣೆಗೊಂಡು ನೀರಿನ ತೊರೆ ಹರಿಯುತ್ತದೆ. ಆದುದರಿಂದ ಹೆಚ್ಚು ನೀರನ್ನೇ ಆಶ್ರಯಿಸಿರುವ ಭತ್ತ, ತೆಂಗು ಮತ್ತು ಕಂಗಿನ ಬೆಳೆಗಳ ಕಣಜ ಎಂದು ಕರಾವಳಿ ಕರ್ನಾಟಕ ಪರಿಗಣಿತವಾಗಿದೆ. ನಿರ್ವಿವಾದವಾಗಿ ಇದರ ಹಿಂದೆ ಇರುವ ಚಾಲಕ ಶಕ್ತಿ ಪಶ್ಚಿಮ ಘಟ್ಟ ಎಂದು ಸಂಜಯ್ ಸುಬ್ರಹ್ಮಣಂ ಅವರ ವಿಶ್ಲೇಷಣೆ ಸೂಕ್ತವಾದುದೇ ಆಗಿದೆ(ಸಂಜಯ್ ೨೦೦೪:೮).

ಘಟ್ಟ ಪ್ರದೇಶದ ತಂಪಾದ ಫಲವತ್ತಾದ ಮಲೆನಾಡಿನ ಮಣ್ಣಲ್ಲಿ ಬೆಳೆಯುವ ಕಾಡುತ್ಪತ್ತಿಗಳು, ಸಾಂಬಾರ ಪದಾರ್ಥಗಳು ತೀರ ಪ್ರದೇಶದ ಬಂದರುಗಳಿಗೆ ಸಾಗಿಸುವವರಿಗೆ  ಘಟ್ಟದಿಂದ ಇಳಿದು ಬರುವ ನದಿಗಳು ಅಲ್ಪಪ್ರಮಾಣದ ಸಾಗಾಣಿಕಾ ಮಾಧ್ಯಮವಾಗಿತ್ತು. ಚರಿತ್ರೆಕಾರರಾದ ಸಂಜಯ್ ಸುಬ್ರಹ್ಮಣ್ಯಂರವರ ಪ್ರಕಾರ ದಖ್ಖನ್ ಪ್ರಸ್ಥಭೂಮಿಯ ಕೆಲವೇ ಕೆಲವು ನದಿಗಳನ್ನು ಹೊರತು ಪಡಿಸಿ ಉಳಿದಂತೆ ಹೆಚ್ಚಿನ ನದಿಗಳು ಸಮುದ್ರದ ಬಂದರುಗಳಿಂದ ಮೇಲ್ಮುಖವಾಗಿ ನದಿಯಲ್ಲಿ ಕೆಲವೇ ಕೆಲವು ಕಿ.ಮೀ.ಗಳಷ್ಟು ನೌಕಾಯಾನಕ್ಕೆ ಉಪಯೋಗವಾಗುತ್ತಿದೆ. ಅದು ಕೂಡ ಸಣ್ಣ ಗಾತ್ರದ ಹಡಗುಗಳಿಗೆ ಮಾತ್ರ ಸಾಧ್ಯವಾಗುತ್ತದೆ. ಆದುದರಿಂದ ಈ ಪ್ರಸ್ಥದ್ವೀಪದ ಎರಡೂ ಕರಾವಳಿಯಲ್ಲಿ ವ್ಯಾಪಾರವು ಹೆಚ್ಚಿನ ಪ್ರಮಾಣದಲ್ಲಿ ಭೂ ಆಧಾರಿತವಾಗಿದೆ (ಸುಬ್ರಹ್ಮಣ್ಯಂ ೨೦೦೪:೧೨).

ಕರಾವಳಿ ಕರ್ನಾಟಕದಲ್ಲಿ ಉಷ್ಣ ವಲಯದ ಹವಾಗುಣ ಇದೆ. ಸಮುದ್ರದಿಂದ ಬೀಸುವ ಗಾಳಿ ತೇವಾಂಶವನ್ನು ಒಳಗೊಂಡಿದ್ದರೂ ಸಮುದ್ರದ ಸಕ್ರಿಯ ಪ್ರವಹಿಸುವಿಕೆಯಿಂದ ಬಿಸಿಯಾಗಿರುತ್ತದೆ. ಜೂನ್‌ನಿಂದ ಸಪ್ಟೆಂಬರ್ ತನಕ ಮಾನ್ಸೂನ್ ಮಾರುತದ ಪರಿಣಾಮವಾಗಿ ನಿರಂತರವಾಗಿ ಮಳೆ ಸುರಿದರೂ ಮಧ್ಯೆಮಧ್ಯೆ ಬಿಡುವಿನಲ್ಲಿ ಕಾಣಿಸಿಕೊಳ್ಳುವ ಉರಿಬಿಸಿಲಿನ ತಾಪ ೨೮° ಸೆಲ್ಸಿಯಸ್ ಇರುತ್ತದೆ. ಬೇಸಿಗೆಯಲ್ಲಿ ಗರಿಷ್ಠ ತಾಪಮಾನ ೩೬° ಸೆಲ್ಸಿಯಸ್ ಇರುತ್ತದೆ.

ಈ ಹವಾಗುಣ ತೆಂಗು, ಕಂಗು, ಗೋಡಂಬಿ, ಮಾವಿನ ಹಣ್ಣು ಮೊದಲಾದ ಕೃಷಿಗಳಿಗೆ ಅತ್ಯುತ್ತಮವಾಗಿದೆ. ನೀರಿನ ಆಶ್ರಯವಿರುವ ಕಡೆಗಳಲ್ಲಿ ಭತ್ತ, ಕೊಕೊ, ಬಾಳೆ ಮತ್ತಿತರ ಬೆಳೆಗಳನ್ನು ಬೆಳೆಸುತ್ತಾರೆ. ಗುಡ್ಡಕಾಡು ಪ್ರದೇಶಗಳಲ್ಲದೆ ದಟ್ಟವಾದ ಅರಣ್ಯಗಳಲ್ಲಿ ಬೆಲೆಬಾಳುವ ಮರಗಳೂ ಇವೆ (ಶಾಸ್ತ್ರಿ ೨೦೦೦:೩). ಅಂತರಾಷ್ಟ್ರೀಯ ಮಟ್ಟದ ಪೋರ್ಚುಗೀಸ್ ಚರಿತ್ರೆಕಾರರಾದ ಎ ಆರ್ ಡಿಸ್ಸಿಯವರು ಪಶ್ಚಿಮ ಕರಾವಳಿಯ ವ್ಯಾಪಾರ ವ್ಯವಹಾರ ವಾಣಿಜ್ಯೋದ್ಯಮ, ಸಂಸ್ಕೃತಿಯ ಬಗ್ಗೆ ವಿವರಿಸುತ್ತಾ

> ಗುಜರಾತಿನಿಂದ ಟ್ರಾವಂಕೂರ್ ತನಕ ಇಡೀ ಕರಾವಳಿ ತೀರದ ಜನರ ಸಾಂಪ್ರದಾಯಿಕ ಒತ್ತಾಸೆಯು ಸಮುದ್ರ ಮತ್ತು ಸಮುದ್ರ ಆಧಾರಿತ ವ್ಯಾಪಾರಿಗಳ ಬಗ್ಗೆಯೂ ಮತ್ತು ಸಾಮಾಜಿಕವಾಗಿ ಕಾಸ್ಮೋಪೋಲಿಟನ್ ಸಂಸ್ಕೃತಿಯ ಬಗ್ಗೆಯೂ ಒಲವು ಹೊಂದಿದೆ (ಡಿಸ್ಸಿ ೨೦೧೦:೨).

ಆದರಿಂದ ವ್ಯಾಪಾರ ವ್ಯವಹಾರ ಮತ್ತು ಸಂಸ್ಕೃತಿಯು ಸಮುದ್ರ ಆಧಾರಿತವಾಗಿ ರೂಪುಗೊಂಡಿದೆ ಎಂದು ವಿವರಿಸುವ ಡಿಸ್ಸಿಯವರ ವಿಮರ್ಶೆ ಪ್ರಶ್ನಾತೀತವಾಗಿದೆ. ಇದರ ಛಾಯೆಗಳು ಸಮಕಾಲೀನ ಸನ್ನಿವೇಶದಲ್ಲೂ ಕಂಡುಬರುತ್ತದೆ.

ಒಟ್ಟಿನಲ್ಲಿ ಮೇಲ್ಕಂಡ ಅಂಶಗಳು ಕರಾವಳಿ ಕರ್ನಾಟಕವನ್ನು ವಾಣಿಜ್ಯೋದ್ಯಮದ ವಲಯವನ್ನಾಗಿ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ ಎಂದು ತಿಳಿದು ಬರುತ್ತದೆ.

**ಯುರೋಪಿಯನ್ನರ ಆಗಮನದ ನಂತರದ ಚಾರಿತ್ರಿಕ ಸಂದರ್ಭದಲ್ಲಿ ಕರಾವಳಿ ಕರ್ನಾಟಕದ ಮೇರೆಗಳು**

ಪ್ರಸ್ತುತ ಕರಾವಳಿ ಕರ್ನಾಟಕವೆಂದು ಗುರುತಿಸಲ್ಪಡುವ ಬಹುಮುಖ್ಯ ಭಾಗವನ್ನು ೧೬ನೇ ಶತಮಾನದ ಪ್ರಾರಂಭದಿಂದ ೧೯ನೇ ಶತಮಾನದವರೆಗೆ ಕೆನರಾ ಜಿಲ್ಲೆಯೆಂದು ಪೋರ್ಚುಗೀಸರ, ಬ್ರಿಟಿಷರ ಮತ್ತು ಅಂದಿನ ಸಮಕಾಲೀನ ಚರಿತ್ರೆ ಬರಹಗಳಲ್ಲಿ ಗುರುತಿಸಲಾಗಿದೆ. ಈಗಾಗಲೇ ಉಲ್ಲೇಖಿಸಿರುವಂತೆ ಯಾವುದೇ ಒಂದು ಪ್ರಾಂತ್ಯದ ಭೌಗೋಳಿಕ ಮೇರೆಗಳು ಯಾವತ್ತೂ ಶಾಶ್ವತವಾಗಿ ಒಂದೇ ಆಗಿರುವುದಿಲ್ಲ. ಅದು ಒಂದಲ್ಲ ಒಂದು ಕಾರಣಕ್ಕೆ ಬದಲಾಗುತ್ತಿರುತ್ತದೆ(ಶಾಸ್ತ್ರಿ ೨೦೦೦:೫). ಚಾರಿತ್ರಿಕವಾಗಿ ಆಡಳಿತಾತ್ಮಕ ಮತ್ತು ಯುದ್ಧದ ಕಾರಣಗಳಿಗಾಗಿ ಆಗಿರುವ ಈ ಬದಲಾವಣೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಇವುಗಳಿಗೆ ಪೂರಕವಾಗಿ ಕೆಲವು ಚಾರಿತ್ರಿಕ ವಿವರಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಕರಾವಳಿ ಕರ್ನಾಟಕ ಅಂದರೆ ಪ್ರಸ್ತುತ ಸರಕಾರದ ಆಡಳಿತಾತ್ಮಕ ಜಿಲ್ಲೆಗಳಾದ ಉತ್ತರ ಕನ್ನಡ, ಉಡುಪಿ, ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಜಿಲ್ಲೆಯ ೭೫% ಭಾಗವನ್ನು ಒಳಗೊಂಡ

ನೀಲೇಶ್ವರದವರೆಗೂ ವಿಸ್ತರಿಸಲ್ಪಟ್ಟಿತು. ಚರಿತ್ರಕಾರರಾದ ಬಿ.ಎಸ್. ಶಾಸ್ತ್ರಿಯವರು ತಮ್ಮ "ಕೆನರಾ-ಗೋವಾ ಪೋರ್ಚುಗೀಸ್ ರಿಲೇಷನ್ಸ್" ಎಂಬ ಸಂಶೋಧನಾ ಕೃತಿಯಲ್ಲಿ ಕೆಳಕಂಡಂತೆ ವಿವರಿಸಿದ್ದಾರೆ.

> ಕೆನರಾವು ಸಂಪೂರ್ಣವಾಗಿ ಅರೇಬಿಯನ್ ಸಮುದ್ರದ ಅಪ್ಪಳಿಸುವಿಕೆಯಿಂದ ತೊಯ್ದಿರುತ್ತದೆ. ಇದು ಕಾರವಾರದ ಉತ್ತರಕ್ಕೆ ೫ ಮೈಲು ದೂರ ಇರುವ ಮಾಜೋಲಿ ಎಂಬ ಗ್ರಾಮದಿಂದ ಪ್ರಾರಂಭವಾಗಿ ದಕ್ಷಿಣದಲ್ಲಿ ನೇತ್ರಾವತಿ ನದಿಯಿಂದ ಎಂಟು ಮೈಲು ದೂರಕ್ಕಿರುವ ತಲಪಾಡಿ ಗ್ರಾಮವನ್ನೂ ಒಳಗೊಂಡಿರುತ್ತದೆ(ಶಾಸ್ತ್ರಿ ೨೦೦೦:೫).

ಪೋರ್ಚುಗೀಸರ ಆಗಮನದ ಕಾಲಘಟ್ಟದಲ್ಲಿ ಹಲವಾರು ವಿದೇಶಿ ಪ್ರವಾಸಿಗರು, ಅಸ್ಥಾನದ ಘಟನಾವಳಿಗಳ ದಸ್ತಾವೇಜು ಬರಹಗಾರರು ಗುರುತಿಸಿದ ಕೆನರಾ ಜಿಲ್ಲೆಯ ಗಡಿ ಗುರುತುಗಳ ಚರ್ಚೆಯು ಅಂದು ಇದ್ದ ಭೌಗೋಳಿಕ ಮೇರೆಗಳ ವಿವಿಧ ಆಯಾಮಗಳನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗುತ್ತದೆ. ದೂರ್ತೆ ಬಾರ್ಬೊಸಾರವರ ಪ್ರಕಾರ ಗೋವಾ ನಗರದಿಂದ ಮಲಬಾರಿಗೆ ಕರಾವಳಿ ತೀರದಲ್ಲಿ ಮುಂದುವರಿದಾಗ ಎದುರಾಗುವ "ಅಂಗುವಾ" (ಕಾಳಿ ನದಿ)ನದಿ ವಿಜಯನಗರದ ನರಸಿಂಗರಾಜನ ಸಾಮ್ರಾಜ್ಯ ಮತ್ತು ದಖ್ಖನ್ ಸಾಮ್ರಾಜ್ಯವನ್ನು ಪ್ರತ್ಯೇಕಿಸುವ ಹೆಗ್ಗುರುತು ಆಗಿತ್ತು. ಆ ನದಿಯ ಮುಖಜ ಭೂಮಿಯ ಗುಡ್ಡದಲ್ಲಿ ಇರುವ ಕೋಟೆಯನ್ನು ಸಿಂಚ್‌ಕೋರ(ಚಿತ್ರಕೂಟ ಅಥವಾ ಪ್ರಸ್ತುತ ಸದಾಶಿವ ಗಢ) ಎಂದು ಹೇಳುತ್ತಾರೆ. ಈ ಕೋಟೆಯನ್ನು ಸಬ್ಯಾಯ್(ಬಿಜಾಪುರದ ಆದಿಲ್‌ಷಾಹಿ) ದೊರೆಯು ಅಧಿಪತ್ಯ ಹೊಂದಿದ್ದನು. ಆತನ ಸಾಮ್ರಾಜ್ಯದ ರಕ್ಷಣಾ ಕೋಟೆಯಾಗಿ ಇದನ್ನು ಉಪಯೋಗಿಸಿಕೊಂಡು ನಿರಂತರವಾಗಿ ಕಾಲಾಳು ಸೈನಿಕರು ಮತ್ತು ಅಶ್ವಾರೋಹಿ ಸೈನಿಕರು ಸದಾ ಸಿದ್ದರಾಗಿದ್ದರು. ಇಲ್ಲಿಂದ ದಕ್ಷಿಣಾಭಿಮುಖವಾಗಿ ಮಲಬಾರ್ ವರೆಗಿನ ತೀರ ಪ್ರದೇಶವನ್ನು ತೋಳಿನಾಟ್(ತುಳುನಾಡು) ಎಂದು ಕರೆಯುತ್ತಿದ್ದುದನ್ನು ವಿವಿಧ ಪ್ರವಾಸಿಗರು ಉಲ್ಲೇಖಿಸಿರುತ್ತಾರೆ(ಶಾಸ್ತ್ರಿ ೨೦೦೦:೫). ಈ ರೀತಿ ದಕ್ಷಿಣಕ್ಕೆ ಮುಂದುವರಿದಾಗ ಸಿಗುವ ಮಿರ್ಜಾನ, ಹೊನ್ನಾವರ, ಬೈಂದೂರು, ಬಸ್ರೂರು, ಬಾರ್‌ಕೂರ್ ಮತ್ತು ಮಂಗಳೂರು ಬಂದರುಗಳ ನಂತರ ಕುಂಬಳೆಯವರೆಗಿನ ಪ್ರದೇಶವನ್ನು ತುಳುನಾಡಿನ ಪ್ರದೇಶವೆಂದು ಗುರುತಿಸಲಾಗಿದೆ. ಬಾರ್ಬೊಸಾ ಪ್ರಸ್ತಾಪಿಸಿರುವ ತೊಳಿನಾಟ್ ಎಂಬ ಭೂಭಾಗವೇ ಕೆನರಾ ಪ್ರಾಂತ್ಯ ಎಂಬ ಬಗ್ಗೆ ಸಂದೇಹವೇ ಇಲ್ಲ ಎಂದು ಬಿ.ಎಸ್. ಶಾಸ್ತ್ರಿಯವರು ಅಭಿಪ್ರಾಯ ಪಡುತ್ತಾರೆ(ಶಾಸ್ತ್ರಿ ೨೦೦೦:೫).

ಆದುದರಿಂದ ಅಂದಿನ ವಿಜಯನಗರ ಸಾಮ್ರಾಜ್ಯದ ಪ್ರಾಂತ್ಯಗಳಲ್ಲಿ ಒಂದಾದ ಕೆನರಾ ಪ್ರಾಂತ್ಯದ ವಿಸ್ತಾರವು ಕಾಳಿನದಿ ತೀರದಿಂದ ಪ್ರಸ್ತುತ ಕೇರಳದಲ್ಲಿರುವ ಕುಂಬಳೆಯ ವರೆಗಿನ ಭೂಪ್ರದೇಶ ಆಗಿತ್ತು ಎಂದು ವೇದ್ಯವಾಗುತ್ತದೆ. ಪೋರ್ಚುಗೀಸರು ಭಾರತದ ಪಶ್ಚಿಮ ಕರಾವಳಿಗೆ ಆಗಮನದ ಸಮಯದಲ್ಲಿ ಜಾವೋ ಡಿ ಬಾರೋಸ್ಸ್ ಪ್ರಕಾರ ದಕ್ಷಿಣದ ಗಡಿ ಗುರುತು ಇನ್ನೂ ಮುಂದಕ್ಕೆ ವಿಸ್ತರಿಸಲ್ಪಟ್ಟಿದೆ. ಆತನ ಪ್ರಕಾರ "ಅಗಿಲ(ಕಾಳಿನದಿ) ನದಿಯಿಂದ ದಕ್ಷಿಣಕ್ಕೆ ಇನ್ನೊಂದು ನದಿ ಕಂಗೆರೆಕೋರ್ಡು(ಚಂದ್ರಗಿರಿ) ವರೆಗೆ ಅಂದರೆ ಮೌಂಟ್‌ಡೆಲಿ ದ್ವೀಪದಿಂದ ೫ ಲೀಗ್ ದೂರಕ್ಕೆ ಇದು ವಿಸ್ತರಿಸಲ್ಪಟ್ಟಿತ್ತು. ಈ ಸಮುದ್ರ ತೀರವು ಅನ್‌ಕೋಲಾ(ಅಂಕೋಲ) ಎಗೋರಾಟಾ(?) ಯೇರ್ಗು(ಮಿರ್ಜಾನಾ) ಓನರ್‌ನಗರ (ಹೊನ್ನಾವರ) ಇದು ರಾಜ್ಯದ ರಾಜಧಾನಿ, ಭಾಟಿಕಳ (ಭಟ್ಕಳ), ಬೆಂದೂರ್ (ಬೈಂದೂರು), ಬ್ರಾಸೆಲೋರ್

(ಬಸ್ರೂರು), ಬಾಕನೂರು (ಬಾರ್ಕೂರ್), ಕಾರ್ನಾಟ (ಕಾರ್ನಾಡು), ಮ್ಯಾಂಗಲೂರು (ಮಂಗಳೂರು), ಮ್ಯಾಂಗೇರಾವೋ (ಮಂಜೇಶ್ವರ), ಕುಂಬಳು (ಕುಂಬಳೆ), ಕಂಗೆರೆಕೋರ್ಡು (ಕಾಸರಗೋಡು) ಇವೆಲ್ಲವುಗಳು ಕೆನರಾ ಪ್ರಾಂತ್ಯದ ಪ್ರಮುಖ ಸ್ಥಳಗಳು. ಇವುಗಳೆಲ್ಲವು ವಿಜಯನಗರದ ಅಧಿಪತ್ಯದ ನಗರಗಳಾಗಿದ್ದವು (ಶಾಸ್ತ್ರಿ ೨೦೦೦:೫). ಇಲ್ಲಿ ಗಮನಿಸಲ್ಪಡಬೇಕಾದ ಅಂಶವೆಂದರೆ ಬಂದರು ಪ್ರದೇಶಗಳೇ ನಗರದ ರಾಜಧಾನಿಯಾಗಿರುವುದು ಕಂಡು ಬರುತ್ತದೆ. ಈ ಬಂದರು ನಗರಗಳಲ್ಲಿ ವಾಣಿಜ್ಯೋದ್ಯಮವು ಜೀವನಾಡಿಯಾಗಿತ್ತು ಎಂದು ತಿಳಿದು ಬರುತ್ತದೆ.

ಕೆನರಾದ ಉತ್ತರ ಪ್ರಾಂತ್ಯಕ್ಕೆ ಸಂಬಂಧಿಸಿ ಆಲ್ಫಾನ್ಸೋ ಅಲ್ಬುಕರ್ಕನು ಪೋರ್ಚುಗೀಸ್ ದೊರೆಗೆ ಬರೆದಿರುವ ಪತ್ರವೊಂದರಲ್ಲಿ "ಚಿಂತಕೂಟದಿಂದ ಗೋವಾದವರೆಗಿನ ಭೂಭಾಗ ನಿಮ್ಮ ರಾಜ್ಯಾಧಿಕಾರದ ಪ್ರದೇಶವೆಂದು" ಬರೆಯುತ್ತಾನೆ. ಚಿಂತಕೂಟವೆಂದರೆ ಪೋರ್ಚುಗೀಸರು ಚಿಟ್‌ಕುಲ್‌ಗೆ ಉಪಯೋಗಿಸುತ್ತಿದ್ದ ಶಬ್ದವಾಗಿದ್ದು ಇದು ಕಾಳಿನದಿಯ ದಡದ ಮೇಲಿರುವ ಪ್ರಸ್ತುತ ಸದಾಶಿವಗಢ ಎಂದು ಗುರುತಿಸಿರುವ ಪ್ರದೇಶವಾಗಿದೆ. ಆ ಪ್ರಕಾರ ಕಾಳಿನದಿಯು ಸ್ಪಷ್ಟವಾಗಿ ಕೆನರಾ ಜಿಲ್ಲೆಯ ಉತ್ತರದ ಗಡಿಯಾಗಿದೆ. ಕಾಳಿನದಿಯ ದಂಡೆಯ ಬಲಭಾಗಕ್ಕೆ ಇರುವ ಸದಾಶಿವಗಢ ಗುಡ್ಡದ ಅರ್ಧಭಾಗವನ್ನು ಇತ್ತೀಚೆಗೆ ಕಡಿದು ಹೆದ್ದಾರಿಯನ್ನು ಮಾಡಲಾಗಿದೆ. ಈ ಗುಡ್ಡದಿಂದ ಸಮುದ್ರಕ್ಕೆ ಇಳಿದಿರುವ ಕಗ್ಗಲ್ಲು ಬಂಡೆಗಳನ್ನು ಕಡಿದು ಸಮತಟ್ಟು ಮಾಡಲಾಗಿದೆ.[೧೧]

ಆದುದರಿಂದ ಪೋರ್ಚುಗೀಸರ ಆಗಮನದ ಆ ಸಮಯದಲ್ಲಿ ಮೇಲ್ಕಂಡ ದಾಖಲೆಗಳ ಆಧಾರದ ಮೇಲೆ ಕೆನರಾ ಪ್ರಾಂತ್ಯ ಅಥವಾ ಕರಾವಳಿ ಕರ್ನಾಟಕ ಎಂದರೆ ಉತ್ತರದ ಕಾಳಿನದಿಯಿಂದ ದಕ್ಷಿಣದ ಚಂದ್ರಗಿರಿ ನದಿಯವರೆಗೆ ವಿಸ್ತರಿಸಲ್ಪಟ್ಟಿದೆ. ಪೂರ್ವದಲ್ಲಿ ಪಶ್ಚಿಮ ಘಟ್ಟಗಳ ತಪ್ಪಲಿನಿಂದ ಪ್ರಾರಂಭಗೊಂಡು ಪಶ್ಚಿಮದಲ್ಲಿ ಸಮುದ್ರ ತೀರದವರೆಗಿನ ಭೂಪ್ರದೇಶವೆಂದು ಕರೆಯಲ್ಪಡುತ್ತದೆ.

**ಕೆಳದಿಯ ಕಾಲಘಟ್ಟದಲ್ಲಿ ಕೆನರಾ ಪ್ರಾಂತ್ಯ**

ಪೋರ್ಚುಗೀಸ್ ಭಾಷೆಯಲ್ಲಿ ಕರಾವಳಿ ಕರ್ನಾಟಕಕ್ಕೆ ಕೆನರಾ ಪ್ರಾಂತ್ಯವೆಂದು ಕರೆಯುತ್ತಿದ್ದು ಮುಂದೆ ಇಂಗ್ಲೀಷರ ಕಾಲಾವಧಿಯಲ್ಲೂ ಇದೇ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಬಾರೋಸ್, ಬಾರ್ಬೋಸ್‌ರವರುಗಳು ಉಲ್ಲೇಖಿಸಿರುವ ಗಡಿ ಗುರುತುಗಳು ಕೆಳದಿಯ ಸೋಮಶೇಖರನ ಕಾಲದಲ್ಲಿ, ಅಂದರೆ ೧೬೬೩ರಲ್ಲಿ ದಕ್ಷಿಣದಲ್ಲಿ ಪಯಸ್ವಿನಿ ನದಿಯನ್ನು ದಾಟಿ ಕವ್ವಾ ಅಥವಾ ಕವ್ವಾಯಿ ನದಿಯವರೆಗೂ ವಿಸ್ತರಿಸಲ್ಪಟ್ಟಿತು. ನೀಲೇಶ್ವರದ ರಾಜನನ್ನು ಕೆಳದಿಯ ಸೋಮಶೇಖರನು ಸೋಲಿಸಿದ ಮೇಲೆ ಕಾಸರಗೋಡಿನಿಂದ ೫೦ ಕಿ.ಮೀ. ದೂರದಲ್ಲಿರುವ ನೀಲೇಶ್ವರದವರೆಗೂ ಕೆನರಾ ಪ್ರಾಂತ್ಯ ವಿಸ್ತರಿಸಲ್ಪಟ್ಟಿತ್ತು. ಕಾಸರಗೋಡಿನಿಂದ ೫೦ ಕಿ.ಮೀ. ದೂರವಿರುವ ಕವ್ವಾ ನದಿಯ ತನಕ ಗಡಿ ಗುರುತು ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾಗುವವರೆಗೂ ಇತ್ತು (ಶ್ಯಾಮ್ ಭಟ್ ೧೯೯೮:೪).

ಅಂದರೆ ಕೆಳದಿಯ ಆಡಳಿತಾವಧಿಯಲ್ಲಿ ಕೆನರಾ ಪ್ರಾಂತ್ಯವು ಮಲಬಾರಿನ ಕೆಲವು ಭಾಗಗಳನ್ನೂ ಒಳಗೊಂಡಿದ್ದಿತ್ತು ಎಂದು ತಿಳಿದು ಬರುತ್ತದೆ.

## ಕೆನರಾ ಪ್ರಾಂತ್ಯದ ಸುಪರ್ದಿಗೆ ಲಕ್ಷದ್ವೀಪ

ಕೆನರಾ ಅಥವಾ ಕರಾವಳಿ ಕರ್ನಾಟಕದ ಭೌಗೋಳಿಕ ಸ್ವರೂಪ ಅಥವಾ ಎಲ್ಲೆಗಳು ೧೪೯೮ರಿಂದ ೧೭೩೭ರ ವರೆಗೆ ವಿಸ್ತರಣೆ, ಕ್ರೋಢೀಕರಣದ ಪ್ರಕ್ರಿಯೆಗಳು ರಾಜಕೀಯ ಕಾರಣಗಳಿಗಾಗಿ ನಡೆಯಿತು. ಮುಂದೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸುಪರ್ದಿಗೆ ಒಳಪಟ್ಟ ನಂತರ ಅದರಲ್ಲೂ ನಿರ್ದಿಷ್ಟವಾಗಿ ೧೭೯೯ರ ನಂತರ ಆಡಳಿತಾತ್ಮಕ ಮತ್ತು ವಾಣಿಜ್ಯೋದ್ಯಮದ ಕಾರಣಕ್ಕಾಗಿ ಸೇರ್ಪಡೆ – ಬೇರ್ಪಡೆಗಳೆಂಬ ದ್ವಂದ್ವಕ್ಕೆ ಸಿಲುಕಿತು. ಕಣ್ಣನೂರಿನ ಬೀಬಿಯ ಆಳ್ವಿಕೆಗೆ ಸೇರಿದ್ದ ಅರಬ್ಬೀ ಸಮುದ್ರದಲ್ಲಿದ್ದ ಉತ್ತರ ಲಕ್ಷದ್ವೀಪ ಸಮೂಹಗಳಿಗೆ ಒಳಪಟ್ಟ ಅಮ್ಮಿದೀವ್ ದ್ವೀಪಗಳು ಕೆನರಾ ಪ್ರಾಂತ್ಯದ ಆಡಳಿತಾತ್ಮಕ ಭಾಗವಾಗಿತ್ತು. ಇದು ಸುಮಾರು ಎರಡೂವರೆ ಶತಮಾನಗಳ ಕಾಲ ಕಣ್ಣನೂರಿನ ಒಂದು ಸಣ್ಣ ಸಂಸ್ಥಾನ ಆಗಿತ್ತು. ಮುಂದೆ ೧೫೫೦ರಲ್ಲಿ ಚಿರಕ್ಕಲ್ ರಾಜನ ಜಾಗೀರು ಆಗಿತ್ತು. ಇಲ್ಲಿಯ ಪ್ರಜೆಗಳು ೧೭೮೬ರಲ್ಲಿ ರಾಜನ ವಿರುದ್ಧ ದಂಗೆ ಎದ್ದು ಟಿಪ್ಪುಸುಲ್ತಾನನಿಗೆ ನಿಷ್ಠೆಯನ್ನು ಬದಲಾಯಿಸಿ ಕೊಂಡರು(ಶ್ಯಾಮ್ ಭಟ್ ೧೯೯೮:೪). ೧೭೯೯ರಲ್ಲಿ ಟಿಪ್ಪುಸುಲ್ತಾನನು ಯುದ್ಧದಲ್ಲಿ ಮರಣವನ್ನಪ್ಪಿದಾಗ ಆತನ ಪ್ರಾಂತ್ಯ ಬ್ರಿಟಿಷ್ ಮದ್ರಾಸ್ಸು ಪ್ರಾಂತ್ಯಕ್ಕೆ ಒಳಪಟ್ಟರೂ ಈ ದ್ವೀಪ ಪ್ರದೇಶವನ್ನು ಬ್ರಿಟಿಷರು ಪುನಃ ಕಣ್ಣನೂರಿನ ಬೀಬಿಗೆ ವರ್ಗಾಯಿಸಲಿಲ್ಲ. ಬ್ರಿಟಿಷರು ಇಲ್ಲಿದ್ದ ತೆಂಗು ಮತ್ತು ತೆಂಗಿನನಾರಿನ ಉದ್ಯಮದ ಆದಾಯವನ್ನು ವಾಣಿಜ್ಯದ ದೃಷ್ಟಿಯಿಂದ ಪರಿಗಣಿಸಿಕೊಂಡು ಕೆನರಾ ಪ್ರಾಂತ್ಯಕ್ಕೆ ಸೇರಿಸಿದರು(ಶ್ಯಾಮ್ ಭಟ್ ೧೯೯೮:೬). ಕ್ರಮೇಣ ಇದು ಮಂಗಳೂರು ತಾಲೂಕಿನ ಉಪವಿಭಾಗವಾಗಿತ್ತು. ತೆಂಗು ಉದ್ಯಮದ ಹಿನ್ನೆಲೆಯಲ್ಲಿ ಈ ದ್ವೀಪವು ಬ್ರಿಟಿಷ್ ಆರ್ಥಿಕತೆ ಮತ್ತು ವಾಣಿಜ್ಯೋದ್ಯಮದ ನಿರೂಪಣೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತ್ತು. ೧೮೦೦ರಲ್ಲಿ ಬ್ರಿಟಿಷರು ಕೆನರಾ ಪ್ರಾಂತ್ಯವನ್ನು ನಾರ್ತ್ ಡಿವಿಷನ್ ಮತ್ತು ಸೌತ್ ಡಿವಿಷನ್ ಎಂಬ ಆಡಳಿತಾತ್ಮಕ ವರ್ಗೀಕರಣ ಮಾಡಿದರು. ಆದರೆ ೧೮೦೫ರಲ್ಲಿ ಮತ್ತೆ ನಾರ್ತ್ ಮತ್ತು ಸೌತ್ ಡಿವಿಷನ್‌ಗಳನ್ನು ಏಕೀಕರಣಗೊಳಿಸಿ ಓರ್ವ ಕಲೆಕ್ಟರ್‌ರವರ ಅಡಿಯಲ್ಲಿ ತಂದರು. ಈ ಆಡಳಿತಾತ್ಮಕ ವ್ಯವಸ್ಥೆ ೧೮೬೦ರ ವರೆಗೂ ಜಾರಿಯಲ್ಲಿ ಇತ್ತು(ಶ್ಯಾಮ್ ಭಟ್ ೧೯೯೮:೮). ೧೮೬೩ರಲ್ಲಿ ಮದ್ರಾಸ್ಸು ಬ್ರಿಟಿಷ್ ಪ್ರಾಂತೀಯ ಸರಕಾರ ಮತ್ತು ಮುಂಬಯಿ ಬ್ರಿಟಿಷ್ ಪ್ರಾಂತೀಯ ಸರಕಾರದ ಮಧ್ಯೆ ವಾಣಿಜ್ಯಾತ್ಮಕ ಕಾರಣಗಳಿಗಾಗಿ ಭಿನ್ನಾಭಿಪ್ರಾಯಗಳು ಬೆಳೆದು ಬಂದವು. ಇದು ಆಡಳಿತಾತ್ಮಕ ಜವಾಬ್ದಾರಿಕೆಯಲ್ಲೂ ವಿಭಜನೆಯಾಗಿ ಉತ್ತರ ಕನ್ನಡ ಜಿಲ್ಲೆಯು ಮದ್ರಾಸ್ಸು ಪ್ರಾಂತ್ಯದಿಂದ ಬೇರ್ಪಟ್ಟು ಮಂದೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಮುಂಬಯಿ ಪ್ರಾಂತೀಯ ಸರಕಾರಕ್ಕೆ ಒಳಪಟ್ಟಿತ್ತು. ಈ ರೀತಿ ಪ್ರಸ್ತುತ ೪೫೦ ವರ್ಷಗಳ ಕಾಲಘಟ್ಟದಲ್ಲಿ ಕೆನರಾ ಪ್ರಾಂತ್ಯ ಹಲವಾರು ಆಯಾಮಗಳನ್ನು ಹೊಂದಿ ಬದಲಾಗುತ್ತಾ ಬಂದಿದೆ. ಇದು ವಾಣಿಜ್ಯೋದ್ಯಮ ಮತ್ತು ವ್ಯವಹಾರದ ಮೇಲೂ ಪ್ರಭಾವವನ್ನು ಬೀರಿದೆ.

ಭಾರತದ ಪಶ್ಚಿಮ ಕರಾವಳಿ ತೀರಕ್ಕೂ ಪೂರ್ವ ಕರಾವಳಿ ತೀರಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಅದೇ ರೀತಿ ಪಶ್ಚಿಮ ಕರಾವಳಿಯ ಅರಬ್ಬೀ ಸಮುದ್ರ, ಅದರ ತೆರೆ, ಆ ತೆರೆಯ ವೇಗ, ಸಮುದ್ರದ ದಡ ಮತ್ತು ಆಳಕ್ಕೂ, ಪೂರ್ವದ ಕರಾವಳಿಯ ಬಂಗಾಳಕೊಲ್ಲಿಗೂ ಅದರ ತೆರೆ, ಆ ತೆರೆಯ ವೇಗ, ಸಮುದ್ರದ ದಡ ಮತ್ತು ಸಮುದ್ರದ ಆಳಕ್ಕೂ ವ್ಯತ್ಯಾಸವಿದೆ. ಪಶ್ಚಿಮ ಕರಾವಳಿ ತೀರ ಹಾಗೂ ಪಶ್ಚಿಮ

ಘಟ್ಟಗಳ ಸಸ್ಯರಾಶಿ, ಜೀವ ಸಂಕುಲಕ್ಕೂ ಅದು ರೂಪಿಸುವ ಹವಾಗುಣ, ಬದುಕು ಮತ್ತು ಸಾಮಾಜಿಕ ಜೀವನ ಹಾಗೂ ವಾಣಿಜ್ಯೋದ್ಯಮ ಮತ್ತು ಆರ್ಥಿಕತೆಗೂ ಪೂರ್ವ ಕರಾವಳಿ ತೀರ ಹಾಗೂ ಪೂರ್ವ ಘಟ್ಟಗಳ ಸಸ್ಯರಾಶಿ, ಜೀವಸಂಕುಲ ಅದು ರೂಪಿಸುವ ಹವಾಗುಣ, ಬದುಕು ಮತ್ತು ಸಾಮಾಜಿಕ ಜೀವನ ಹಾಗೂ ವಾಣಿಜ್ಯೋದ್ಯಮ ಮತ್ತು ಆರ್ಥಿಕತೆಗೂ ಬಹಳಷ್ಟು ವ್ಯತ್ಯಾಸವಿದೆ. ಪೂರ್ವ ತೀರ ಮತ್ತು ಪಶ್ಚಿಮ ತೀರ ಹಾಗೂ ಘಟ್ಟಗಳ ಮಧ್ಯೆ ವೈರುಧ್ಯಗಳಿರುವಂತೆಯೇ ಪಶ್ಚಿಮ ಕರಾವಳಿಯಲ್ಲೂ, ಪಶ್ಚಿಮ ಘಟ್ಟಗಳ ಮಧ್ಯೆಯೂ ಇದೆ. ಪಶ್ಚಿಮ ಕರಾವಳಿಯ ಮಧ್ಯೆ ಇರುವ ವೈರುಧ್ಯವನ್ನು ಗಮನಿಸುವುದಾದರೆ, ಗುಜರಾತ್ ಕರಾವಳಿ, ಕೊಂಕಣ ಕರಾವಳಿ, ಕೆನರಾ ಕರಾವಳಿ ಮತ್ತು ಮಲಬಾರ್ ಕರಾವಳಿ ಎಂಬ ನಾಲ್ಕು ವಿಭಾಗಗಳಿವೆ. ಈ ನಾಲ್ಕು ಪ್ರದೇಶಗಳೆಲ್ಲವೂ ಒಂದೇ ಕರಾವಳಿಯ ಭಾಗವಾದರೂ, ಜನಾಂಗೀಯ ವ್ಯತ್ಯಾಸ, ಭಾಷಾ ವ್ಯತ್ಯಾಸ, ಆಚಾರ – ವಿಚಾರ ಉಡುಗೆ – ತೊಡುಗೆ, ಧಾರ್ಮಿಕ ನಂಬಿಕೆ, ಸಾಮಾಜಿಕ ಜೀವನ, ಆರ್ಥಿಕತೆ ವಾಣಿಜ್ಯೋದ್ಯಮದಲ್ಲೂ ವ್ಯತ್ಯಾಸವಿದೆ. ಸಮುದ್ರದ ತೀರ ಮತ್ತು ಅದರ ಸ್ವರೂಪದಲ್ಲೂ ವ್ಯತ್ಯಾಸವಿದೆ. ದ್ವೀಪಗಳ ಸಂರಚನೆಯಲ್ಲೂ ವ್ಯತ್ಯಾಸವಿದೆ. ಸಮುದ್ರದ ತೆರೆಯ ವೇಗದಲ್ಲೂ ವ್ಯತ್ಯಾಸವಿದೆ. ಇಲ್ಲಿ ದೊರೆಯುವ ಮತ್ಸ್ಯ ಸಂಪತ್ತಿನಲ್ಲೂ ವ್ಯತ್ಯಾಸವಿದೆ. ಹವಾಗುಣ, ಗಾಳಿಯ ವೇಗದಲ್ಲೂ ವ್ಯತ್ಯಾಸವಿದೆ. ನದಿ ಮುಖಜಭೂಮಿ ಮತ್ತು ಹಿನ್ನೀರಿನ ಪ್ರವಾಹದಲ್ಲಿ ವ್ಯತ್ಯಾಸವಿದೆ. ಈ ನಾಲ್ಕು ಪ್ರದೇಶಗಳು ನಿರೂಪಿಸಿರುವ ಒಳನಾಡಿನ ಜನಜೀವನ, ಆಚಾರ-ವಿಚಾರ, ಕೃಷಿ ಜೀವನದಲ್ಲಿ ವ್ಯತ್ಯಾಸವಿದೆ. ಈ ರೀತಿ ಹತ್ತಾರು ವೈವಿಧ್ಯಮಯ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುವಾಗಲೇ ಅಷ್ಟೇ ಸಂಖ್ಯೆಯ ಸಾಮ್ಯತೆಯನ್ನು ಗುರುತಿಸಲು ಸಾಧ್ಯವಿದೆ. ವೈರುಧ್ಯಗಳು ಸಂಘರ್ಷಗಳು ಇರುವಂತೆಯೇ ಐಕ್ಯತೆಯ ಎಳೆಗಳಿವೆ. ಆದುದರಿಂದ ಭಾರತದ ಕರಾವಳಿ ತೀರ ಎಂದ ಕೂಡಲೇ ಸೂಕ್ಷ್ಮ ವ್ಯತ್ಯಾಸಗಳಿರುವಂತೆಯೇ ಅದರಲ್ಲಿ ಲೀನವಾಗಿರುವ ಸಾಮಾನ್ಯ ಅಂಶಗಳನ್ನು ಸಾಮಾನ್ಯೀಕರಣ ಮಾಡಲೇಬೇಕಾಗುತ್ತದೆ. ಇದರ ಬದಲಾಗಿ ಏಕತ್ವ ಸ್ವರೂಪದ ಚಿತ್ರಣ ಅವಾಸ್ತವತೆಯಾಗುತ್ತದೆ.

ಈ ನಿಟ್ಟಿನಲ್ಲಿ ಪ್ರಸ್ತುತ ಕರಾವಳಿ ಕರ್ನಾಟಕ ಎಂದಾಕ್ಷಣ ಏಕ ತೆರನಾದ ಸಂಸ್ಕೃತಿ, ಭಾಷೆ ಆಚಾರ – ವಿಚಾರಗಳು ಎಂದು ಅರ್ಥವಲ್ಲ. ಭೌಗೋಳಿಕ ಭಿನ್ನತೆಗಳಿರುವಂತೆಯೇ ವಿವಿಧ ಭಾಷಿಕ ನೆಲೆಗಳಿವೆ. ಕನ್ನಡ, ತುಳು, ಮಲಯಾಳಂ ಎಂಬ ಮೂರು ದ್ರಾವಿಡ ಭಾಷೆಗಳೂ, ಕೊಂಕಣಿ ಎಂಬ ಇಂಡೋ ಆರ್ಯನ್ ಭಾಷಿಕ ನೆಲೆಗಟ್ಟು ಇದೆ. ಇವೆಲ್ಲವುಗಳ ಮಧ್ಯೆ 'ಬ್ಯಾರಿ' ಭಾಷೆಯನ್ನಾಡುವ ಸಮುದಾಯವೂ ಇದೆ. ಉತ್ತರ ಕನ್ನಡ ಜಿಲ್ಲೆಯ ಕುಣುಬಿ, ನವಾಯತ್ ಸಮುದಾಯ ಸೇರಿದಂತೆ ಗೌಡ ಸಾರಸ್ವತ ಸಮಾಜದ ಮಾತೃಭಾಷೆ ಕೊಂಕಣಿಯಾಗಿದೆ.

ಆದಿವಾಸಿ-ಮೂಲನಿವಾಸಿಗಳಾದ ಕೊರಗರು, ಮಲೆಕುಡಿಯರು, ದಲಿತರು, ಆದಿ ದ್ರಾವಿಡರೂ ಇದ್ದಾರೆ. ಇವರ ನಡುವೆ ಅರಬ್ ಜನಾಂಗೀಯ ಕುರುಹುಗಳನ್ನು ಒಳಗೊಂಡಿರುವ ಮಾಪಿಳ್ಳೆಗಳೂ, ಬ್ಯಾರಿಗಳೂ, ಆಫ್ರಿಕನ್ ಬುಡಕಟ್ಟು ಜನಾಂಗೀಯತೆಯ ಸಿದ್ಧಿ ಸಮುದಾಯವೂ ಇದೆ. ಹಿಂದೂ-ಮುಸ್ಲಿಂ ಮತ್ತು ಕ್ರೈಸ್ತ ಈ ಮೂರು ಮತಾನುಯಾಯಿಗಳನ್ನು ಹೊಂದಿರುವುದೇ ಸಿದ್ದಿ ಸಮುದಾಯದ

ವಿಶಿಷ್ಟ ಪರಂಪರೆಯಾಗಿದೆ. ಭಟ್ಕಳದ ನವಾಯತ್ ಮುಸ್ಲಿಮರು ಇರಾನ್ ಮೂಲದವರಾಗಿ ಕೊಂಕಣಿ ಭಾಷಿಗರಾಗಿದ್ದಾರೆ. ಈ ರೀತಿ ವೈವಿಧ್ಯಮಯ ಸಾಂಸ್ಕೃತಿಕ ಆಯಾಮಗಳನ್ನು ಚಹರೆಗಳನ್ನು ಒಳಗೊಂಡಿರುವ ವಿಶಿಷ್ಟ ಭೌಗೋಳಿಕ ಪ್ರದೇಶವೇ ಕರಾವಳಿ ಕರ್ನಾಟಕವಾಗಿದೆ. ಈ ಭೌಗೋಳಿಕ ವೈಶಿಷ್ಟಮಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಭೌತಿಕ ಉತ್ಪಾದನಾ ಸಂಬಂಧದ ಮೂಲಕಾರಣ ಸಮುದ್ರ ಮತ್ತು ಸಮುದ್ರ ವ್ಯಾಪಾರದ ನಿರಂತರ ಪ್ರಕ್ರಿಯೆಯಾಗಿದೆ.

ಒಟ್ಟಿನಲ್ಲಿ ಕರಾವಳಿ ಕರ್ನಾಟಕವು ಅರಣ್ಯ ಸಂಪತ್ತು, ಕೃಷಿ ಸಂಪತ್ತು ಮತ್ತು ವಿಶಾಲವಾದ ಸಮುದ್ರ ಸಂಪನ್ಮೂಲಗಳ ಸಂಗಮವಾಗಿ ವಾಣಿಜ್ಯೋದ್ಯಮಕ್ಕೆ ಚರಿತ್ರ ಪೂರ್ವದಿಂದಲೇ ತೆರೆದುಕೊಂಡ ಪ್ರಾಂತ್ಯವಾಗಿದೆ. ಭಾರತದ ಎಲ್ಲಾ ಭೌಗೋಳಿಕ ಲಕ್ಷಣಗಳೊಂದಿಗೆ ಪ್ರಾಣಿ ಸಂಕುಲಗಳು, ಭಾಷೆ ಮತ್ತು ಜನಾಂಗೀಯ ನೆಲೆಗಟ್ಟುಗಳೊಂದಿಗೆ ಹಾಸು ಹೊಕ್ಕಾಗಿ ಬೆಳೆದು ಬಂದಿದೆ. ಕೆಲವು ವ್ಯಾಪಾರಿ ಸಮುದಾಯಗಳು ಕಾಸ್ಮೋಪೋಲಿಟನ್ ಸಂಸ್ಕೃತಿಯ ಪ್ರತಿರೂಪವಾಗಿದೆ. ನಿರಂತರವಾದ ವಾಣಿಜ್ಯೋದ್ಯಮ ಮತ್ತು ವ್ಯಾಪಾರದ ಸಂಬಂಧಗಳು ಇಲ್ಲಿನ ಜನರ ಬದುಕಿನ ವಿಧಾನವನ್ನು ತೀವ್ರವಾಗಿ ಪ್ರಭಾವಿಸಿದೆ.

ಆದುದರಿಂದ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಸ್ವರೂಪಗಳನ್ನು ವಿಶ್ಲೇಷಿಸುವಾಗ ಮೇಲ್ಕಂಡ ಸಾಮಾಜಿಕ, ರಾಜಕೀಯ, ಭೌಗೋಳಿಕ ಮತ್ತು ಆರ್ಥಿಕ ಹಿನ್ನೆಲೆಗಳನ್ನು ಅರ್ಥೈಸಲೇ ಬೇಕಾಗುತ್ತದೆ.

# ಟಿಪ್ಪಣಿಗಳು

೧. ಪೆನಿನ್‌ಸ್ಯೂಲಾರ್ ಎಂದರೆ ಒಂದು ಭೂಪ್ರದೇಶದ ಹೆಚ್ಚಿನ ಗಡಿ ಭಾಗಗಳನ್ನು ನೀರಿನಿಂದ ಆವೃತವಾಗಿರುವ ಪ್ರದೇಶ ಎಂದು ಅರ್ಥ. ಭಾರತದ ದಖ್ಖನ್ ಭಾಗವನ್ನು ಪ್ರಸ್ಥಭೂಮಿ (ಪೆನಿನ್‌ಸ್ಯೂಲಾರ್ ಇಂಡಿಯಾ) ಎಂದು ಕರೆಯುತ್ತಾರೆ. ವಿಂದ್ಯಾ ಪರ್ವತದಿಂದ ಕೆಳ ಭಾಗಕ್ಕೆ ತ್ರಿಕೋನಾಕಾರದಲ್ಲಿರುವ ಭಾರತದ ದಕ್ಷಿಣದ ಭಾಗವನ್ನು ಪೂರ್ವ, ಪಶ್ಚಿಮ, ದಕ್ಷಿಣದಲ್ಲಿ ಕ್ರಮವಾಗಿ ಅರಬ್ಬೀ ಸಮುದ್ರ, ಬಂಗಾಳಕೊಲ್ಲಿ ಮತ್ತು ಹಿಂದೂ ಮಹಾಸಾಗರದಿಂದ ಆವೃತವಾಗಿದೆ. ಸಾಮಾನ್ಯವಾಗಿ ಇಂತಹ ಪ್ರಸ್ಥಭೂಮಿ(ಪೆನಿನ್‌ಸ್ಯೂಲಾರ್) ಪ್ರದೇಶಗಳು ವೈವಿಧ್ಯಮಯ ಜೀವ ಸಂಕುಲ ಮತ್ತು ಹವಾಗುಣವನ್ನು ಹೊಂದಿರುತ್ತದೆ. ಹೆಚ್ಚಿನ ವಿವರಗಳಿಗಾಗಿ ಜಾರ್ಜ್ ಎಂ ಹಾರ್ಟ್‌ರವರ(೧೯೯೯) "ದಿ ಡೆಲ್ಟಾಸ್ ಆಫ್ ಪೆನಿನ್‌ಸ್ಯೂಲಾರ್ ಇಂಡಿಯಾ" ಕೃತಿಯನ್ನು ಓದಬಹುದು.

೨. ಮಲಬಾರ್ ಕರಾವಳಿಯನ್ನು ರೂಡಿ ಬಾಷೆಯಲ್ಲಿ ಮಲಬಾರ್ ಎಂದು ಹೇಳುತ್ತಾರೆ. ಇದೇ ರೀತಿಯಲ್ಲಿ ಇಡೀ ಕೇರಳ ಪ್ರಾಂತ್ಯವನ್ನು ಮಲಬಾರ್ ಎಂದೇ ಕರೆಯುವುದು ರೂಡಿಯಾಗಿದೆ. ಮಲಬಾರ್ ಎಂಬ ಪದವು ಸಮುದ್ರದೊಂದಿಗೆ ಅವಿನಾಭಾವ ಸಂಬಂಧವನ್ನು ನಿರೂಪಿಸುವ ಫ್ರೆಂಚ್ ಪದವಾಗಿದೆ. ಹಡಗುಕಟ್ಟೆ ಎಂಬ ಪಾರಿಭಾಷಿಕ ಅರ್ಥವೂ ಇದೆ. ಇದೇ ರೀತಿ ಮಲಬಾರ್ ಎಂದರೆ ಘಟ್ಟಪ್ರದೇಶ ಎಂದೂ ಅರ್ಥ.

೩. ಸಾಮಾನ್ಯವಾಗಿ ನಕ್ಷೆಯಲ್ಲಿ ಸಮುದ್ರ ತೀರವು ಸರಳರೇಖೆಯಂತೆ ಕಂಡುಬರುತ್ತದೆ. ಆದರೆ ಭೌಗೋಳಿಕವಾಗಿ ಅಂಕುಡೊಂಕಾಗಿ, ಕೆಲವು ಭಾಗಗಳಲ್ಲಿ ಸಮುದ್ರವು ಒಳಭಾಗಕ್ಕೆ ಬಂದಿರುತ್ತದೆ.

೪. ಮಂಗಳೂರಿನ ಪ್ರಮುಖ ಬೀಚ್‌ಗಳಾದ ತಣ್ಣೀರುಬಾವಿ, ಪಣಂಬೂರು ಮತ್ತು ಉಳ್ಳಾಲ ಬೀಚ್‌ಗಳಲ್ಲಿ ಸೀಳ್ನೀರು ಪ್ರವಾಹಕ್ಕೆ ಅಗಾಧ ಶಕ್ತಿ ಇದೆ. ಇದರ ಪರಿಣಾಮವಾಗಿ ಪ್ರತೀ ವರ್ಷವು ಹತ್ತಾರು ಅವಘಡಗಳು ಸಂಭವಿಸಿ ಸಮುದ್ರ ವಿಹಾರಕ್ಕೆ ಇಳಿದ ಪ್ರವಾಸಿಗರು ಮರಣ ಹೊಂದುತ್ತಿರುತ್ತಾರೆ. ಇಲ್ಲಿ ಸಮುದ್ರವು ಕೆಲವೇ ಕೆಲವು ಮೀಟರ್‌ಗಳ ನಂತರ ತಕ್ಷಣವೇ ಆಳವನ್ನು ಹೊಂದಿದೆ.

೫. ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಪಶ್ಚಿಮಕ್ಕೆ ಹರಿಯುವ ನದಿಗಳು ಸಾಮಾನ್ಯವಾಗಿ ವೇಗದಿಂದ ಹರಿಯುತ್ತದೆ. ಏಕೆಂದರೆ ಎತ್ತರ ತಗ್ಗು ಗುಡ್ಡ ಪ್ರದೇಶಗಳಲ್ಲಿ ಇದು ದುಮುಕುತ್ತಿರುವ ಕಾರಣ ಅಪರಿಮಿತ ವೇಗ ದೊರೆಯುತ್ತದೆ. ಅಲ್ಲಲ್ಲಿ ಗ್ರಾನೈಟ್ ಶಿಲೆಗಳು ಇರುವುದರಿಂದ ದೊಡ್ಡ ಗಾತ್ರದ ಹಡಗುಗಳಿಗೆ ಒಳ ನಾಡಿಗೆ ಪ್ರವೇಶಿಸಲು ಸಾಧ್ಯವಾಗುತ್ತಿಲ್ಲ. ಪೋರ್ಚುಗೀಸರಿಗೆ ಈ ಸಮಸ್ಯೆ ಪ್ರಾರಂಭದಿಂದಲೇ ಕಾಡಿತ್ತು. ನದಿ ಸಮುದ್ರಕ್ಕೆ ಸೇರುವ ಅಳಿವೆ ಬಾಗಿಲುಗಳಲ್ಲಿ ನದಿಯು ತಂದಿರುವ ಮಡ್ಡಿ ಮಿಶ್ರಿತ ಮಣ್ಣು ಮತ್ತು ಮರಳುಗಳಿಂದ ಹೂಳು ತುಂಬಿ ಸಮುದ್ರದಿಂದ ಹಡಗುಗಳು ಒಳ ಭಾಗಕ್ಕೆ ಪ್ರವೇಶಗೈಯಲು ಸಾಧ್ಯವಾಗುತ್ತಿಲ್ಲ. ಸಣ್ಣ ಗಾತ್ರದ ದೋಣಿಗಳಿಗೂ ಇದು ಅಪಾಯದ ಹೆಬ್ಬಾಗಿಲು ಆಗಿರುತ್ತದೆ.

೬. ಬೆಂಗರೆ ಎಂದರೆ ಪ್ರಾಕೃತಿಕವಾಗಿ ರೂಪಿತವಾಗಿರುವ ದ್ವೀಪ ಎಂದು ಹೆಸರು. ಸಾಮಾನ್ಯವಾಗಿ ಬೆಂಗರೆಯನ್ನು ನದಿಗಳು ನಿರ್ಮಿಸುತ್ತದೆ. ನದಿಗಳಲ್ಲಿ ಹರಿದು ಬರುವ ಮಣ್ಣು, ಮರಳು ಮತ್ತಿತರ ವಸ್ತುಗಳು ನದಿ ಪಾತ್ರದಲ್ಲಿ ಶೇಖರಣೆಗೊಂಡು ದಿಬ್ಬಗಳಾಗುತ್ತವೆ. ಕ್ರಮೇಣ ನೂರಾರು ವರ್ಷಗಳ ಪ್ರಕ್ರಿಯೆಯಲ್ಲಿ ಇದು ದ್ವೀಪವಾಗಿ ಪರಿವರ್ತಿತಗೊಳ್ಳುತ್ತದೆ.

೭. ಕರಾವಳಿ ಕರ್ನಾಟಕದ ನದಿಗಳು ಮಳೆಗಾಲದಲ್ಲಿ ಅಗಾಧ ಪ್ರಮಾಣದಲ್ಲಿ ನೀರು ಹರಿದು ಸಮುದ್ರವನ್ನು ಸೇರುತ್ತದೆ. ಶರಾವತಿ, ಕಾಳಿ ಮತ್ತು ನೇತ್ರಾವತಿ ನದಿಗಳು ಬಹಳ ವಿಶಾಲವಾಗಿದೆ. ಪ್ರವಾಹದ ಸಮಯದಲ್ಲಿ ಸಾವಿರಾರು ಎಕರೆಗೆ ನೀರು ಹರಿದು ಸಮುದ್ರದಂತೆ ಕಂಡು ಬರುತ್ತದೆ. ಒಂದು ವಾರಗಳ ಕಾಲ ಈ ಪ್ರವಾಹದ ನೀರು ಇದ್ದು ಅನಂತರ ಅದರ ಅರ್ಧ ಭಾಗವನ್ನು ಸಮುದ್ರವೂ ಉಳಿದರ್ಧ ಭಾಗವನ್ನು ಭೂಮಿಯೂ ಹೀರಿಕೊಳ್ಳುತ್ತದೆ. ಸರಿಸುಮಾರು ಅಕ್ಟೋಬರ್‌ದಿಂದ ಮೇ ತಿಂಗಳ ತನಕ ನದಿಗಳಲ್ಲಿ ಹರಿಯುವ ನೀರು ಘಟ್ಟದ ಮೇಲ್ಭಾಗದ ಅಂತರ್ಜಲ ಮತ್ತು ನದಿಪಾತ್ರದ ಅಂತರ್ಜಲಗಳ ಪರಿಣಾಮವಾಗಿ ಸಾಧಾರಣ ಪ್ರಮಾಣದಲ್ಲಿ ನೀರು ಹರಿಯುತ್ತದೆ. ಉತ್ತರ ಮತ್ತು ಮಧ್ಯ ಭಾರತದಂತೆ ಇಲ್ಲಿಯ ನದಿಗಳು ಸಂಪೂರ್ಣವಾಗಿ ಬತ್ತಿ ಹೋಗುವುದೇ ಇಲ್ಲ.

೮. ಪಶ್ಚಿಮ ಘಟ್ಟಗಳು ಅರಬ್ಬೀ ಸಮುದ್ರದಿಂದ ಬೀಸುವ ಮಳೆಯ ಮಾರುತಗಳನ್ನು ತಡೆಯುವುದನ್ನು ಪ್ರಾಯೋಗಿಕವಾಗಿಯೂ ನಾವು ಕಾಣಬಹುದು. ಮಳೆಗಾಲದ ಸಮಯದಲ್ಲಿ ಆಗುಂಬೆ ಘಾಟಿ, ಶಿರಾಡಿ ಘಾಟಿ ಮತ್ತು ಚಾರ್ಮಾಡಿ ಘಾಟಿಯಲ್ಲಿ ಪ್ರಯಾಣಿಸುವಾಗ ಮೋಡಗಳು ಸಾಲು ಸಾಲಾಗಿ ಚಲಿಸಿ ಬೆಟ್ಟಗಳಿಗೆ ಸಂದಿಸಿ ಅನಂತರ ಕೆಲವೇ ಕೆಲವು ನಿಮಿಷಗಳಲ್ಲಿ ಮಳೆಹನಿ ಉದುರುವುದನ್ನು ಗಮನಿಸಬಹುದು. ಇದಾದ ನಂತರ ೧೫–೨೦ ನಿಮಿಷಗಳ ಅವಧಿಯಲ್ಲಿ ಇಂತಹುದೇ ಚಿತ್ರಣ ಪುನರಾವರ್ತನೆ ಆಗುತ್ತದೆ.

೯. ಜಾವೋ ಡಿ'ಬಾರೋನ್ಸ್, ಪೋರ್ಚುಗೀಸ್ ಭಾಷೆಯಲ್ಲಿ ಕರಾವಳಿ ಕರ್ನಾಟಕದ ವಿವಿಧ ಬಂದರು ನಗರಗಳಿಗೆ ಕರೆಯುತ್ತಿದ್ದ ಹೆಸರುಗಳನ್ನು ಪ್ರಸ್ತಾಪಿಸಲಾಗಿದೆ. ಡಾ.ಬಿ.ಎಸ್. ಶಾಸ್ತ್ರಿಯವರು ಕೆನರಾ ಗೋವಾ ಪೋರ್ಚುಗೀಸ್ ರಿಲೇಶನ್ಸ್ ೧೪೯೮–೧೭೬೩ ಈ ಕೃತಿಯಲ್ಲಿ ಆ ಹೆಸರುಗಳಿಗೆ ಪ್ರಸ್ತುತ ಚಾಲ್ತಿಯಲ್ಲಿರುವ ಹೆಸರುಗಳನ್ನು ನೀಡಿರುತ್ತಾರೆ. ಆದರೆ 'ಏಗೋರಾಟ' ಎಂಬುದು ಯಾವ ಪ್ರದೇಶವನ್ನು ಹೆಸರಿಸಲಾಗಿದೆ ಎಂಬುದನ್ನು ಕಂಡುಹಿಡಿಯಲು ಸಾಧ್ಯವಾಗದೇ ಅದನ್ನು ಪ್ರಶ್ನಾರ್ಥಕ ರೂಪದಲ್ಲೇ ಕಾಣಿಸಲಾಗಿದೆ.

೧೦. ಸದಾಶಿವಘಡ ಬೆಟ್ಟಗಳ ಸಾಲು ಸಮುದ್ರದಿಂದಲೇ ಪ್ರಾರಂಭವಾಗುತ್ತದೆ. ಈಗ ಹೆದ್ದಾರಿ ನಿರ್ಮಾಣಕ್ಕಾಗಿ ವಿಶಾಲ ಭಾಗವನ್ನು ಕಡಿದು ಪ್ರತ್ಯೇಕೀಕರಿಸಲಾಗಿದೆ. ಚಾರಿತ್ರಿಕವಾಗಿ ಕಾಣಬರುವ ಸದಾಶಿವ ಘಡದ ಮೂಲ ಸ್ವರೂಪ ಬದಲಾಗಿದೆ.

ಅಧ್ಯಾಯ ೨

# ಕರಾವಳಿ ಕರ್ನಾಟಕ ಮತ್ತು ಮೆಡಿಟರೇನಿಯನ್ ದೇಶಗಳ ನಡುವಿನ ಆರಂಭಿಕ ವಾಣಿಜ್ಯ ವ್ಯವಹಾರ ಸಂಬಂಧಗಳು ಮತ್ತು ಸಂಘರ್ಷಗಳು

ಭಾರತದ ವಾಣಿಜ್ಯ ವ್ಯವಹಾರವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಕರಾವಳಿ ತೀರದ ಭಾರತದ ವಾಣಿಜ್ಯ ವ್ಯವಹಾರಗಳ ಪ್ರಾರಂಭದ ಬೆಳವಣಿಗೆಗಳನ್ನು ಸೂಕ್ತವಾಗಿ ಅಭ್ಯಸಿಸುವುದು ಬಹಳ ಮುಖ್ಯವಾಗುತ್ತದೆ. ಕರ್ನಾಟಕದ ಸಂದರ್ಭದಲ್ಲಿ ಕರಾವಳಿ ಕರ್ನಾಟಕವು ಮೊಟ್ಟ ಮೊದಲಿಗೆ ವಿದೇಶಗಳೊಂದಿಗೆ ನೇರ ಸಂಪರ್ಕಕ್ಕೆ ಬಂದ ಭೂ ಭಾಗವಾಗಿದೆ. ಪೋರ್ಚುಗೀಸರು ಪ್ರಾರಂಭದ ಹದಿನೈದು ವರ್ಷಗಳಲ್ಲಿ ಕರಾವಳಿ ಕರ್ನಾಟಕದಲ್ಲಿ ತಮ್ಮ ವಾಣಿಜ್ಯ ಹಿತಾಸಕ್ತಿಗಾಗಿ ನಡೆಸಿದ ಸಂಘರ್ಷಗಳನ್ನು ಅಭ್ಯಸಿಸುವುದರ ಮೂಲಕ ಜಗತ್ತಿನ ಉಳಿದ ಭಾಗಗಳೊಂದಿಗೆ ಹೊಂದಿದ್ದ ಸಂಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪ್ರಸ್ತುತ ಅಧ್ಯಾಯವು ಒಟ್ಟು ಎಂಟು ಪ್ರಮುಖ ಭಾಗಗಳನ್ನು ಒಳಗೊಂಡಿದೆ. ಇದರಲ್ಲಿ ೧೪೯೮ರಿಂದ ೧೫೧೪ರವರೆಗಿನ ಅವಧಿಯಲ್ಲಿ ಜರುಗಿದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳ ವಿವರಗಳನ್ನು ನಿರೂಪಿಸಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಮೊದಲನೆ ಭಾಗದಲ್ಲಿ ಕ್ರಿಸ್ತ ಪೂರ್ವದಿಂದಲೂ ಭಾರತದ ಕರಾವಳಿ ಕರ್ನಾಟಕ ಮತ್ತು ಮೆಡಿಟರೇನಿಯನ್ ದೇಶಗಳ ಮಧ್ಯೆ ಚಾಲ್ತಿಯಲ್ಲಿದ್ದ ಅಂತರಾಷ್ಟ್ರೀಯ ವ್ಯಾಪಾರ-ವ್ಯವಹಾರಗಳು ರೋಮ್, ಗ್ರೀಸ್, ಈಜಿಪ್ಟ್ ದೇಶಗಳೊಂದಿಗೆ ಸಂಬಂಧಿಸಿ ಮಧ್ಯ ಬಿಂದುವಾಗಿ ನಿರ್ವಹಿಸಿದ ಪಾತ್ರದ ಚಾರಿತ್ರಿಕ ಹಿನ್ನೆಲೆಯಲ್ಲಿ ಚಾಲ್ತಿಯಲ್ಲಿದ್ದ ಮೂರು ಪ್ರಮುಖ ವ್ಯಾಪಾರಿ ಮಾರ್ಗಗಳನ್ನು ಚರ್ಚಿಸಲಾಗಿದೆ. ಅವುಗಳನ್ನು ತಮ್ಮ ಹತೋಟಿಗೆ ಪಡೆದುಕೊಳ್ಳಲು ಯುರೋಪಿಯನ್ ರಾಜಮನೆತನಗಳು ನಡೆಸುತ್ತಿದ್ದ ಸ್ಪರ್ಧೆಯ ಬಗ್ಗೆ ವಿವರಿಸಲಾಗಿದೆ. ಈ ಪ್ರಕ್ರಿಯೆ ಮೂರು ಹಂತಗಳನ್ನು ಹೊಂದಿದೆ. ಮೊದಲನೆಯದಾಗಿ ಕ್ರಿಸ್ತ ಪೂರ್ವ ಕಾಲದಿಂದ ಕ್ರಿ.ಶ. ೮ನೇ ಶತಮಾನದವರೆಗೆ ಅಥವಾ ಇಸ್ಲಾಂ ಧರ್ಮದ ಉಗಮದವರೆಗೆ ಇದ್ದ ಬಿರುಸಿನ ವ್ಯಾಪಾರದ ಸ್ವರೂಪ. ಎರಡನೆಯದಾಗಿ ಶೀಘ್ರವಾಗಿ ಪ್ರವರ್ಧಮಾನಕ್ಕೆ ಬಂದ ಇಸ್ಲಾಂ ಧರ್ಮದ ರಾಜಮನೆತನಗಳು ಅಂತರಾಷ್ಟ್ರೀಯ ವ್ಯಾಪಾರವನ್ನು ಹತೋಟಿ ಪಡೆದುಕೊಂಡಿದ್ದ ಸರಿಸುಮಾರು ಕ್ರಿ.ಶ

ಎಂಟರಿಂದ ಹದಿನೈದನೇ ಶತಮಾನಗಳವರೆಗಿನ ಅವಧಿಯಾಗಿದೆ. ಅರಬ್ಬರು ಮತ್ತು ಇತರೆ ಮುಸ್ಲಿಂ ಸಮುದಾಯಗಳು ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಮೇಲುಗೈ ಸಾಧಿಸಿದ ಬಗ್ಗೆ ವಿವರಿಸಲಾಗಿದೆ. ಮೂರನೆಯ ಹಂತ ಯುರೋಪಿಯನ್ ದೇಶಗಳು ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಕಂಡು ಹಿಡಿಯುವಲ್ಲಿ ನಡೆಸಿದ ನಿರಂತರ ಹೊಸ ಹೊಸ ಆವಿಷ್ಕಾರಗಳು ಮತ್ತು ನೌಕಾಯಾನದ ವಿವರಣೆ ಒಳಗೊಂಡಿದೆ. ಕ್ರೈಸ್ತ ಮತೀಯ ಉದ್ದೇಶ ಈಡೇರಿಕೆಗಾಗಿ ಕ್ರೈಸ್ತ ಧರ್ಮ ಸಂಸ್ಥೆಗಳಿಂದ ದೊರೆತ ಆರ್ಥಿಕ ಸಹಕಾರ, ವಿವರಣೆಯನ್ನು ಒಳಗೊಂಡಿದೆ. ಭಾರತಕ್ಕೆ ಹೊಸ ಸಮುದ್ರ ಮಾರ್ಗ ಅನ್ವೇಷಿಸುವ ಪ್ರಕ್ರಿಯೆಯು ಕೇವಲ ವ್ಯಾಪಾರ–ವ್ಯವಹಾರದ ಉದ್ದೇಶ ಮಾತ್ರವಾಗಿರದೆ ಧಾರ್ಮಿಕ ಉದ್ದೇಶವನ್ನೂ ಒಳಗೊಂಡಿದೆ ಎಂಬುದನ್ನು ಚರ್ಚಿಸಲಾಗಿದೆ.

ಪೋರ್ಚುಗೀಸರ ಆಗಮನ ಪೂರ್ವದಲ್ಲಿ, ಭಾರತದ ಪಶ್ಚಿಮ ಕರಾವಳಿಯಲ್ಲಿ ಅರಬ್ಬರು ಮತ್ತು ಇತರ ಮುಸ್ಲಿಂ ವ್ಯಾಪಾರಿಗಳು ಹಿಡಿತ ಹೊಂದಿದ್ದರು. 'ಕಲ್ಲಿಕೋಟೆ ಬಂದರು' ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಪ್ರವರ್ಧಮಾನಕ್ಕೆ ಬಂದಿತ್ತು. ಇದರ ಬಗ್ಗೆ ಅಬ್ದುಲ್ ರಜಾಕ್ ಎಂಬ ಪ್ರವಾಸಿಗ ನೀಡಿರುವ ವಿವರಣೆಯನ್ನು ಚರ್ಚಿಸಲಾಗಿದೆ. ಭಾರತದ ಸಾಂಬಾರು ಪದಾರ್ಥಗಳಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಿಪರೀತ ಬೆಲೆ ಮತ್ತು ಸುಂಕ ವಿಧಿಸಲಾಗುತ್ತಿತ್ತು. ಮತ್ತೊಂದೆಡೆಯಲ್ಲಿ 'ಸಫಾವಿದ್' ಮತ್ತು 'ಮೊಗಲ'ರ ನಡುವಿನ ಯುದ್ಧವು ನೆಲಮಾರ್ಗಗಳ ಮೂಲಕ ನಡೆಯುತ್ತಿದ್ದ ಕುದುರೆಗಳ ವ್ಯಾಪಾರವನ್ನು ಸಮುದ್ರ ಮಾರ್ಗಕ್ಕೆ ಬದಲಾಯಿಸಿತು. ಇದರಿಂದಾಗಿ ಹೆಚ್ಚಿನ ಪ್ರಮಾಣದಲ್ಲಿ ಕರಾವಳಿ ಕರ್ನಾಟಕದ ಬಂದರುಗಳಲ್ಲಿ ನಡೆದ ಕುದುರೆಗಳ ವ್ಯಾಪಾರ–ವ್ಯವಹಾರಗಳ ಬಗ್ಗೆ ಚರ್ಚಿಸಲಾಗಿದೆ. ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಸಂಪೂರ್ಣ ಏಕಸ್ವಾಮ್ಯ ಮೆರೆದ ಅರಬ್ ಮತ್ತಿತರೆ ಮುಸ್ಲಿಂ ವ್ಯಾಪಾರಿ ವಲಯ ಒಂದೆಡೆಯಾದರೆ, ಮತ್ತೊಂದೆಡೆಯಲ್ಲಿ ಇಸ್ಲಾಂ ಮತವು ಹೊಸ ಪ್ರದೇಶಗಳಿಗೆ ವಿಸ್ತರಣೆಯಾಗಿರುವುದನ್ನು ಗಮನಿಸಬಹುದು. ಕ್ಯಾಥೊಲಿಕ್ ಕ್ರೈಸ್ತ ಸಮುದಾಯದ ಅತ್ಯುಚ್ಚ ಧರ್ಮಗುರು 'ಪೋಪ್'ರವರಿಂದ ಹೊಸ ಹೊಸ ಭೂಪ್ರದೇಶಗಳಲ್ಲಿ ಕ್ರೈಸ್ತ ಮತದ ಪ್ರಚಾರ, ವ್ಯಾಪಾರ ಮತ್ತು ನೈಸರ್ಗಿಕ ಸಂಪನ್ಮೂಲಗಳ ಅನುಭೋಗಕ್ಕೆ ಅವಕಾಶ ಕಲ್ಪಿಸುವ ಅಧಿಕಾರ ಮುದ್ರೆ (ಬುಲ್)ಯನ್ನು ಪಡೆದ ಪೋರ್ಚುಗಲ್ ಮತ್ತು ಸ್ಪೈನ್ ದೇಶದ ವಾಣಿಜ್ಯೋದ್ಯಮದ ಕಣ್ಣೋಟಗಳನ್ನು ವಿಶ್ಲೇಷಿಸಲಾಗಿದೆ.

ಭಾರತಕ್ಕೆ ನೇರ ಮಾರ್ಗ ಕಂಡು ಹಿಡಿಯುವ ಪೋರ್ಚುಗೀಸರ ಸುಮಾರು ೧೦೦ ವರ್ಷಗಳ ಪ್ರಯತ್ನವು ಅವರ ನಿರಂತರ ಸಾಧನೆ, ಪ್ರಯತ್ನ ಮತ್ತು ವಿಫಲತೆಗಳ, ವಿಸ್ತೃತ ಅನುಭವ ಮತ್ತು ಸಂಶೋಧನೆಗಳ ಒಟ್ಟು ಫಲಿತಾಂಶವಾಗಿದೆ. ವಾಸ್ಕೋಡಗಾಮನು ೧೪೯೮ರಲ್ಲಿ ಭಾರತಕ್ಕೆ ಸಮುದ್ರ ಮಾರ್ಗ ಕಂಡು ಹಿಡಿಯುವಲ್ಲಿ ಯಶಸ್ವಿಯಾದನು. ಅವನು ತನ್ನ ಹಡಗುಗಳಲ್ಲಿ ಯಥೇಚ್ಛವಾಗಿ ಸಾಂಬಾರು ಪದಾರ್ಥಗಳನ್ನು ತುಂಬಿಸಿಕೊಂಡು ಹಿಂತಿರುಗಿ ಹೋಗುವಾಗ ಮತಾಂತರ ಪ್ರಕ್ರಿಯೆಯನ್ನೂ ಮಾಡಿದನು. ವಾಸ್ಕೋಡಗಾಮನ ನೌಕಾಯಾನದ ಯಶಸ್ವಿ ಕಾರ್ಯಾಚರಣೆಯಿಂದ ಉತ್ತೇಜನ ಪಡೆದ ಪೋರ್ಚುಗಲ್‌ನ ರಾಜಪ್ರಭುತ್ವ, ವ್ಯಾಪಾರ ಮತ್ತು ಧಾರ್ಮಿಕ ಹಿತಾಸಕ್ತಿಯನ್ನು ಕಾಪಾಡಲು ಸೈನಿಕ ಕಾರ್ಯಾಚರಣೆ ಅಗತ್ಯವಿದೆ ಎಂದು ಮನಗಂಡು ಎರಡನೇ ಮತ್ತು ಮೂರನೆಯ ನೌಕಾಯಾನವನ್ನು ಹಮ್ಮಿಕೊಂಡಿತ್ತು.

ಸೈನಿಕ ಕಾರ್ಯಾಚರಣೆಗಾಗಿ ಸಾಕಷ್ಟು ಆಧುನಿಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾದ ಸೈನಿಕ ಪಡೆ, ಧಾರ್ಮಿಕ ಕಾರ್ಯಾಚರಣೆಗಾಗಿ ಕ್ರೈಸ್ತ ಧರ್ಮಗುರುಗಳ – ಮಿಶನರಿಗಳ ತಂಡ, ಮತ್ತೊಂದೆಡೆಯಲ್ಲಿ ವ್ಯಾಪಾರಿಗಳ ಹಾಗೂ ಅಧಿಕಾರಿಗಳ ತಂಡದ ಚಾರಿತ್ರಿಕ ಮಹತ್ವವನ್ನು ಚರ್ಚಿಸಲಾಗಿದೆ.

೧೫ ಮತ್ತು ೧೬ನೇ ಶತಮಾನದಲ್ಲಿ ಕರ್ನಾಟಕದ ಅತ್ಯಂತ ಪ್ರಮುಖ ಬಂದರುಗಳಲ್ಲಿ ಒಂದಾಗಿದ್ದ ಭಟ್ಕಳ ಬಂದರು ಪಶ್ಚಿಮ ಕರಾವಳಿಯಲ್ಲಿ ಕಲ್ಲಿಕೋಟೆಯ ನಂತರ ಎರಡನೇ ಅತೀ ಮುಖ್ಯ ಬಂದರು ಆಗಿತ್ತು. ೧೫೦೧ ಮತ್ತು ೧೫೦೨ರಲ್ಲಿ ಪೋರ್ಚುಗೀಸರ ದಂಡ ನಾಯಕರುಗಳಾದ ಜಾವ್ರೋ ಡಿ'ನೋವಾ ಮತ್ತು ವಾಸ್ಕೋಡಗಾಮನ ಗಮನವನ್ನು ಸೆಳೆದಿತ್ತು. ಪೋರ್ಚುಗೀಸ್ ಅಧಿಕಾರಿಗಳು ಭಟ್ಕಳದಲ್ಲಿ ಸರ್ವ ರೀತಿಯಿಂದಲೂ ಸಜ್ಜಿತರಾಗಿದ್ದ, ಮುಸ್ಲಿಂ ವರ್ತಕರ ಮೇಲೆ, ವಿದೇಶಿ ಹಡಗುಗಳ ಮೇಲೆ ನಿರಂತರ ದಾಳಿ ನಡೆಸಿ ಸರಕು ಸರಂಜಾಮುಗಳನ್ನು ಮುಟ್ಟುಗೋಲು ಹಾಕುತ್ತಿದ್ದು ಪ್ರಾರಂಭದಲ್ಲಿ ತೀವ್ರ ಸಂಘರ್ಷ ನಡೆಯುತ್ತಿದ್ದ ಬಗ್ಗೆ ವಿಶ್ಲೇಷಿಸಲಾಗಿದೆ.

ವಾಣಿಜ್ಯೋದ್ಯಮ ಮತ್ತು ಮತೀಯ ಉದ್ದೇಶಗಳೊಂದಿಗೆ ಯುರೋಪಿಯನ್ ರಾಷ್ಟ್ರಗಳ ಸ್ಪರ್ಧಾತ್ಮಕ ಮನೋಭಾವ ಜಾಗತಿಕ ಹೊಸ ಯುಗಪ್ರವರ್ತಕ ಬೆಳವಣಿಗೆಗೆ ದಾರಿ ಮಾಡಿಕೊಟ್ಟ ಘಟನೆ ವಾಸ್ಕೋಡಗಾಮನು ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಕಂಡು ಹಿಡಿದ ಘಟನೆಯಾಗಿದೆ. ಈ ಚಾರಿತ್ರಿಕ ಪ್ರಕ್ರಿಯೆಯಲ್ಲಿ ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ನಡೆಸಿದ ಪ್ರಾರಂಭದ ಚಟುವಟಿಕೆಗಳು ಕೇವಲ ಸಾಂಕೇತಿಕವಾಗಿರದೆ ಅಚ್ಚಳಿಯದ ಐತಿಹಾಸಿಕ ಹೆಗ್ಗುರುತುಗಳಾಗಿದೆ. ಈ ಅಧ್ಯಾಯದಲ್ಲಿ ಪ್ರಸ್ತುತಪಡಿಸಿರುವ ಸುಮಾರು ೧೫ ವರ್ಷಗಳ ಬೆಳವಣಿಗೆಯ ಗತಿ ವಾಣಿಜ್ಯೋದ್ಯಮದ ಹಿನ್ನೆಲೆಯಲ್ಲಿ ನಡೆದ ಸಂಘರ್ಷವಾಗಿದೆ. ಇದರೊಂದಿಗೆ ಅದು ಮೂಲಭೂತ ಗುರಿಗಳಾದ ವಾಣಿಜ್ಯ, ರಾಜಕೀಯ ಮತ್ತು ಧಾರ್ಮಿಕ ಕರ್ತವ್ಯಗಳನ್ನು ಪೂರೈಸಿ ಈಡೇರಿಸಿ ಯೋಗ್ಯಭೂಮಿಕೆಯನ್ನು ಸಿದ್ಧಪಡಿಸಿದ ಕಾಲಾವಧಿಯಾಗಿದೆ. ಪೋರ್ಚುಗೀಸರು ಕರಾವಳಿ ಕರ್ನಾಟಕವನ್ನು ತನ್ನ ವಸಾಹತುವನ್ನಾಗಿ ಪರಿವರ್ತಿಸುವ ಯಾವುದೇ ಪ್ರಯತ್ನವನ್ನು ಮಾಡದೆ ಕೇವಲ ವಾಣಿಜ್ಯ ಏಕಸ್ವಾಮ್ಯದ ಮೂಲಕ ಲಾಭಗಳಿಸುವ ಉದ್ದೇಶವನ್ನು ಹೊಂದಿದ್ದರು. ಅಲ್ಲಿಯವರೆಗೆ ಅಸಂಘಟಿತವಾಗಿದ್ದ ವಾಣಿಜ್ಯ ಉತ್ಪನ್ನಗಳನ್ನು ಸಂಘಟಿತ ಸ್ವರೂಪಕ್ಕೆ ಪರಿವರ್ತಿಸುವ ರೀತಿಯಲ್ಲಿ ಫ್ಯಾಕ್ಟರಿ ಪದ್ಧತಿ, ಏಜೆಂಟರುಗಳ ನೇಮಕಾತಿ, ಉತ್ಪನ್ನಗಳ ಸಂಸ್ಕರಣೆ ಮೊದಲಾದ ಕ್ರಮಗಳು ಹೊಸತಾಗಿ ಜಾರಿಗೆ ಬಂದಿತು. ಕರಾವಳಿ ಕರ್ನಾಟಕದ ಆರ್ಥಿಕತೆ ಕೃಷಿ ಪ್ರಧಾನ ವ್ಯವಸ್ಥೆಯಿಂದ ವಾಣಿಜ್ಯದತ್ತ ಪಲ್ಲಟಗೊಂಡಿರುವ ಪ್ರಾಥಮಿಕ ಲಕ್ಷಣಗಳನ್ನು ಗುರುತಿಸಬಹುದು. ಕ್ಲಾಸಿಕಲ್ ರಾಜಕೀಯ ಅರ್ಥಶಾಸ್ತ್ರದ ಪ್ರಕಾರ ಈ ಪಲ್ಲಟವು ಬಂಡವಾಳಶಾಹಿ ಆರ್ಥಿಕ ಸಂಚಯದ ಪ್ರಾಥಮಿಕ ಹಂತವಾಗಿದೆ.

ಈ ಅಧ್ಯಯನದಲ್ಲಿ ಕೆ. ಎಂ. ಪಣಿಕ್ಕರ್ ಅವರ ಕೃತಿಯನ್ನು ಹಾಗೂ ಆರ್. ಎಸ್. ವೈಟ್‌ವೇ ಅವರ ಕೃತಿಗಳನ್ನು ಆಧಾರವಾಗಿ ಉಪಯೋಗಿಸಲಾಗಿದೆ. ಇದೇ ತೆರನಾಗಿ ಮೂರ್ಸ್ ಸ್ಟೈನ್ ಮುಕುಂದರಾವ್, ಎಂ. ಎನ್. ಪಿಯರ್ಸ್‌ಸನ್, ಸಂಜಯ್ ಸುಬ್ರಹ್ಮಣ್ಯಂ, ಬಿ. ಎಸ್ ಶಾಸ್ತ್ರಿ, ಕೆ. ಎಸ್. ಮ್ಯಾಥ್ಯೂ, ಎ.ಆರ್. ಡಿಸ್ನಿ, ಎಫ್.ಸಿ. ಧನ್‌ವೀರ್ ಹಾಗೂ ಕಾರ್ಲ್ ಮಾರ್ಕ್ಸ್‌ರವರುಗಳ ಕೃತಿಗಳನ್ನು ವಿಶ್ಲೇಷಿಸಲಾಗಿದೆ. ಅದೇ ರೀತಿ ಪಣಜಿಯಲ್ಲಿರುವ ಪತ್ರಾಗಾರದ ದಾಖಲೆಗಳನ್ನು ವಿಶ್ಲೇಷಿಸಿ ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದ ಪ್ರಥಮ ಭಾಗದಲ್ಲಿ ಭಾರತದೊಂದಿಗಿನ ಸಮುದ್ರ ವ್ಯಾಪಾರ ಮಾರ್ಗಗಳ ರಾಜಕೀಯ, ಧಾರ್ಮಿಕ ಮತ್ತು ವಾಣಿಜ್ಯಾತ್ಮಕ ಬದಲಾವಣೆಗಳ ಚಾರಿತ್ರಿಕ ವಿಶ್ಲೇಷಣೆ ಮಾಡಲಾಗಿದೆ. ಎರಡನೇ ಭಾಗದಲ್ಲಿ ಪೋರ್ಚುಗೀಸರ ಆಗಮನದ ಪೂರ್ವದಲ್ಲಿ ಇದ್ದ ಭಾರತದ ಪಶ್ಚಿಮ ಕರಾವಳಿ ಮತ್ತು ವ್ಯಾಪಾರ ನಿರ್ವಹಣೆಯ ಸ್ವರೂಪವನ್ನು ಚರ್ಚಿಸಲಾಗಿದೆ. ಮೂರನೇ ಭಾಗದಲ್ಲಿ ವ್ಯಾಪಾರ ಮತ್ತು ಮತೀಯ ಸವಾಲುಗಳ ಹಿನ್ನೆಲೆಯಲ್ಲಿ ಪೋಪರಿಂದ ಅಧಿಕಾರ ಮುದ್ರೆ ಪಡೆದ (ಬುಲ್) ಪೋರ್ಚುಗಲ್ ದೇಶದ ಪ್ರಯತ್ನಗಳನ್ನು ವಿವರಿಸಲಾಗಿದೆ. ಮುಂದಿನ ಭಾಗದಲ್ಲಿ ವಾಸ್ಕೋಡಗಾಮನ ಹೊಸ ಸಮುದ್ರ ಮಾರ್ಗದ ಅನ್ವೇಷಣೆ ಹಾಗೂ ಕರಾವಳಿ ಕರ್ನಾಟಕದಲ್ಲಿ ಆತನು ನಡೆಸಿದ ವ್ಯಾಪಾರ ಮತ್ತು ಸಂಘರ್ಷದ ಪ್ರಾರಂಭದ ಹೆಜ್ಜೆ ಗುರುತುಗಳನ್ನು ವಿವರಿಸಲಾಗಿದೆ. ಪೋರ್ಚುಗಲ್‌ನಿಂದ ಭಾರತಕ್ಕೆ ಎರಡನೇ ಮತ್ತು ಮೂರನೆಯ ನೌಕಾಯಾನದ ಶಸ್ತ್ರಸಜ್ಜಿತ ಸೈನಿಕ, ಧಾರ್ಮಿಕ ಮತ್ತು ವ್ಯಾಪಾರಿ ಕಾರ್ಯಚರಣೆಗಳ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ. ಇದೇ ರೀತಿ ಮತ್ತೊಮ್ಮೆ ನಾಲ್ಕನೇ ನೌಕಾಯಾನದಲ್ಲಿ ಕರಾವಳಿ ಕರ್ನಾಟಕದಲ್ಲಿ ವಾಸ್ಕೋಡಗಾಮನು ಮುಂದುವರಿಸಿದ ನೇರ ವಾಣಿಜ್ಯ ಸಂಘರ್ಷಗಳ ಸಂಕಥನವನ್ನು ವಿಮರ್ಶಿಸಲಾಗಿದೆ. ಈ ಅಧ್ಯಯನದ ಕೊನೆಯ ಭಾಗದಲ್ಲಿ ಭಟ್ಕಳ ಬಂದರಿನಲ್ಲಿ ವರ್ತಕ ಸಮುದಾಯ ಪೋರ್ಚುಗೀಸರ ವಿರುದ್ಧ ನಡೆಸಿದ ಸಶಸ್ತ್ರ ಹೋರಾಟಗಳ ಮಹತ್ವವನ್ನು ವಿಮರ್ಶಿಸಲಾಗಿದೆ. ಅಂತಿಮವಾಗಿ ಈ ಅಧ್ಯಾಯದಫಲಿತಗಳನ್ನು ಚರ್ಚಿಸಲಾಗಿದೆ.

* * * *

ಕರಾವಳಿ ಕರ್ನಾಟಕವು ಯುರೋಪಿಯನ್ ದೇಶಗಳೊಂದಿಗೆ ಸಮುದ್ರ ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದಂತೆ ನಿರಂತರ ಸಂಪರ್ಕದಲ್ಲಿತ್ತು. ಕ್ರಿಸ್ತ ಪೂರ್ವದ ನಾಲ್ಕೈದು ಶತಮಾನಗಳಿಂದಿದ್ದ ಈ ಸಂಪರ್ಕಗಳು ಲಿಖಿತ ದಾಖಲೆಗಳಲ್ಲಿ ಅಭಿವ್ಯಕ್ತಗೊಂಡಿದೆ. ರೋಮ್, ಗ್ರೀಸ್ ಮೊದಲಾದ ದೇಶಗಳ ಸಾಹಸಮಯ ಸಮುದ್ರ ವ್ಯಾಪಾರಿಗಳು ಕೆಂಪು ಸಮುದ್ರವನ್ನು ಬಳಸಿಕೊಂಡು ಮಲಬಾರ್ ತೀರದೊಂದಿಗೆ, ಸಾಧಾರಣ ಗಾತ್ರದ ನೌಕೆಗಳೊಂದಿಗೆ ಬಂದು ಸಾಂಬಾರು ಮತ್ತಿತರೆ ವಸ್ತುಗಳ ವ್ಯಾಪಾರ, ವ್ಯವಹಾರ ನಡೆಸುತ್ತಿದ್ದರು. ವೆನಿಷಿಯನ್ ಮತ್ತು ಈಜಿಪ್ತಿಯನ್ ದೇಶಗಳ ವ್ಯಾಪಾರಿ ಸಮುದಾಯ ದೀರ್ಘಕಾಲದವರೆಗೆ ಭಾರತದೊಂದಿಗೆ ವ್ಯಾಪಾರ-ವ್ಯವಹಾರಗಳಲ್ಲಿ ತೊಡಗಿಸಿಕೊಂಡು ಅನಭಿಷಕ್ತ ಏಕಸ್ವಾಮ್ಯತೆಯ ಫಲವನ್ನು- ಸೌಲಭ್ಯಗಳನ್ನು, ಅವಕಾಶಗಳನ್ನು ಅನುಭವಿಸುತ್ತಿದ್ದರು. ಇದಕ್ಕಿಂತಲೂ ಮೊದಲು ಅಲೆಗ್ಸಾಂಡರ್ ಭಾರತಕ್ಕೆ ದಂಡೆತ್ತಿ ಬಂದ ನಂತರ ಯುರೋಪಿಯನ್ ರಾಷ್ಟ್ರಗಳು ಭಾರತದೊಂದಿಗೆ ನೇರ ಸಂಪರ್ಕವನ್ನು ಸಾಧಿಸಿತ್ತು. ಈಜಿಪ್ಟ್ ಭೌಗೋಳಿಕವಾಗಿ ಭಾರತ ಮತ್ತು ಯುರೋಪಿಯನ್ ದೇಶಗಳ ಸಂಪರ್ಕದ ಕೊಂಡಿಯಲ್ಲಿ 'ಮಧ್ಯ ಬಿಂದು'ವಾಗಿದ್ದ ಹಿನ್ನೆಲೆಯಲ್ಲಿ ಅತ್ಯಂತ ಸಹಜವಾಗಿ ಇದು ಐರೋಪ್ಯ ರಾಷ್ಟ್ರಗಳಲ್ಲೇ ಮೇಲ್ಮಟ್ಟದ ಸ್ಥಾನವನ್ನು ಹೊಂದಿತ್ತು(ಪಣಿಕ್ಕರ್ ೧೯೨೯:೩೩). ಈ ಹಿನ್ನೆಲೆಯಲ್ಲಿ ಕ್ರಿಸ್ತ ಪೂರ್ವ ಕಾಲದಿಂದಲೂ ಭಾರತ ಮತ್ತು ಮೆಡಿಟರೇನಿಯನ್ ದೇಶಗಳ ಮಧ್ಯೆ ಚಾಲ್ತಿಯಲ್ಲಿದ್ದ ಮೂರು ಪ್ರಮುಖ ಮಾರ್ಗಗಳ ಬಗ್ಗೆ ಗಮನ ಹರಿಸುವುದು ಮುಖ್ಯವಾಗುತ್ತದೆ.

ಒಂದನೆಯ ಮಾರ್ಗ:- ಅರಲ್ (Aral) ಮತ್ತು ಕಾಸ್ಪಿಯನ್ ಸಮುದ್ರವನ್ನು ಕ್ರಮಿಸಿ ಕಪ್ಪು ಸಮುದ್ರವನ್ನು ತಲುಪುತ್ತಿತ್ತು. ಅಲ್ಲಿಂದ ಕಾನ್‌ಸ್ಟಂಟಿನೋಪಲ್‌ಗೆ ಸುಲಭವಾಗಿ ತಲುಪಬಹುದಿತ್ತು. ಅನಂತರ ವ್ಯಾಪಾರಿಗಳು ಸರಕು ಸರಂಜಾಮುಗಳನ್ನು ಮೆಡಿಟರೇನಿಯನ್ ದೇಶಗಳಿಗೆ ಕೊಂಡೊಯ್ಯುತ್ತಿದ್ದರು.

ಎರಡನೆಯ ಮಾರ್ಗ:- ಮೆಸಪಟೋಮಿಯಾ ಮತ್ತು ಸಿರಿಯಾ ದೇಶದ ಮರುಭೂಮಿಯನ್ನು ಕ್ರಮಿಸಿ ಡಮಾಸ್ಕಸ್‌ನ್ನು ತಲಪುತ್ತಿದ್ದರು. ಅಲ್ಲಿಂದ ಒಂಟೆಗಳ ಸಹಾಯದಿಂದ 'ಲೇವೆಂಟ್' ಎಂಬ ಪ್ರದೇಶವನ್ನು ತಲುಪುತ್ತಿದ್ದರು.

ಮೂರನೆಯ ಮಾರ್ಗ:- ಭಾರತದ ಪಶ್ಚಿಮ ಕರಾವಳಿಯಿಂದ ಪ್ರಾರಂಭಗೊಂಡು ಕೆಂಪು ಸಮುದ್ರ ತೀರದ ಬಂದರುಗಳ ಪ್ರಮುಖ ಸರಹದ್ದನ್ನು ತಲಪುವುದು. ಅಲ್ಲಿಂದ ಅದು ಒಂಟೆಗಳ ಮುಖಾಂತರ ಈಜಿಪ್ಟ್‌ನ್ನು ತಲಪುವುದು (ಶ್ರೀಕಂಠ ೧೯೦೫:೨೬೬).

## ಭಾರತದೊಂದಿಗಿನ ಸಮುದ್ರ ವ್ಯಾಪಾರ ಮಾರ್ಗಗಳ ರಾಜಕೀಯ, ಧಾರ್ಮಿಕ ಮತ್ತು ವಾಣಿಜ್ಯಾತ್ಮಕ ಬದಲಾವಣೆಗಳ ಚಾರಿತ್ರಿಕ ವಿಶ್ಲೇಷಣೆ

ಮೇಲ್ಕಂಡ ಚಾರಿತ್ರಿಕ ವ್ಯಾಪಾರಿ ಮಾರ್ಗಗಳ ಸ್ವರೂಪವನ್ನು ವಿಶ್ಲೇಷಿಸಿದಾಗ ಯುರೋಪಿಯನ್ ದೇಶಗಳೊಂದಿಗಿನ ವ್ಯಾಪಾರ, ಆ ಸಮಯದಲ್ಲಿ ಬಹುಪ್ರತಿಷ್ಠೆಯ ವಿಷಯವಾಗಿತ್ತು. ಸಹಜವಾಗಿಯೇ ಕಾನ್‌ಸ್ಟಂಟಿನೋಪಲ್, ಈಜಿಪ್ಟ್, ವೆನಿಸ್, ಜಿನೆವಾ ಇವುಗಳು ಈ ಅಂತರಾಷ್ಟ್ರೀಯ ವ್ಯಾಪಾರ-ವ್ಯವಹಾರಗಳ ಆಯಕಟ್ಟಿನ ಕೇಂದ್ರಗಳಾಗಿ ರೂಪಿತಗೊಂಡು ಪ್ರತಿಷ್ಠೆಯ ಸ್ಥಾನಮಾನವನ್ನು ಹೊಂದಿತ್ತು. ಅರ್ಥಾತ್ ಅವು ಪ್ರತಿಷ್ಠೆ, ಸಂಪತ್ತುಗಳ ಶೃಂಗಬಿಂದುವಾಗಿತ್ತು. ಈ ಕೇಂದ್ರಗಳ ಹತೋಟಿಗಾಗಿ ಯುರೋಪಿಯನ್ ರಾಜಮನೆತನಗಳು ತಮ್ಮ ತಮ್ಮಲ್ಲೇ ಸ್ಪರ್ಧೆಯನ್ನು ಹೊಂದಿದ್ದವು. ಈ ಸ್ಪರ್ಧೆಯ ಸ್ವರೂಪಗಳನ್ನು ವಾಣಿಜ್ಯದ ದೃಷ್ಟಿಕೋನದಲ್ಲಿ ಎರಡು ಪ್ರಮುಖ ಹಂತಗಳಲ್ಲಿ ಗುರುತಿಸಬಹುದು.

**ಒಂದನೆಯ ಹಂತ** :- ಎಂಟನೇ ಶತಮಾನದಲ್ಲಿ ಈಜಿಪ್ಟ್, ಇಸ್ಲಾಂ ಧರ್ಮದ ರಾಜಮನೆತನದ ಆಳ್ವಿಕೆಗೆ ಒಳಪಡುವ ಮೂಲಕ ಯುರೋಪ್ ಮತ್ತು ಇತರೆ ರಾಷ್ಟ್ರಗಳೊಂದಿಗೆ ಈಜಿಪ್ಟ್ ಆಧರಿಸಿ ನಡೆಯುತ್ತಿದ್ದ ಮುಕ್ತ ವ್ಯಾಪಾರಕ್ಕೆ ತಡೆಯುಂಟಾಯಿತು. ಈ ಕೇಂದ್ರ (ಈಜಿಪ್ಟ್) ಆಧಾರಿತ ಸಮುದ್ರ ವ್ಯಾಪಾರಗಳೆಲ್ಲವೂ ವಿಶೇಷವಾಗಿ ಮಹಮ್ಮದೀಯರ ಪಾಲಾಯಿತು (ಶ್ರೀಕಂಠ ೧೯೦೫:೨೬೬). ಪರಿಣಾಮವಾಗಿ ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಈ ಮೊದಲಿದ್ದ ಬಿರುಸಿನ ವ್ಯಾಪಾರ-ವ್ಯವಹಾರಗಳು ಕಂಡು ಬರಲಿಲ್ಲ. ಮಂದಗತಿಯ ವ್ಯಾಪಾರ ವ್ಯವಹಾರಗಳು ನಡೆಯುತ್ತಿದ್ದವು. ಕಾನ್‌ಸ್ಟಂಟಿನೋಪಲ್ ಅನಿವಾರ್ಯವಾಗಿ ಸಮುದ್ರ ವ್ಯಾಪಾರ ಮಾರ್ಗದ ಹೊಸ ಮಧ್ಯಾಂತರ ಕೇಂದ್ರವಾಗಿ ಪ್ರವರ್ಧಮಾನಕ್ಕೆ ಬಂದಿತು. ಈ ಸಮಕಾಲೀನ ಕಾಲಘಟ್ಟದಲ್ಲಿ ವ್ಯಾಪಾರೀ ಕೇಂದ್ರೀತ ಸ್ಪರ್ಧಾತ್ಮಕ ಪೈಪೋಟಿಯಲ್ಲಿ ಟರ್ಕ ರು ಯಶಸ್ಸನ್ನು ಸಾಧಿಸಿ ಕಾನ್‌ಸ್ಟಂಟಿನೋಪಲ್‌ನ್ನು ತಮ್ಮ ಕೈವಶಪಡಿಸಿಕೊಂಡರು. ಸಹಜವಾಗಿಯೇ ಕ್ರಿಶ್ಚಿಯನ್ ಸಮುದಾಯದ ಯುರೋಪಿಯನ್ ವ್ಯಾಪಾರಿಗಳಿಗೆ ಮೆಡಿಟರೇನಿಯನ್ ಮಾರ್ಗದ ಮೂಲಕ ವ್ಯಾಪಾರ-ವ್ಯವಹಾರ ನಡೆಸುವುದು ಅಸಾಧ್ಯವಾಯಿತು (ವೈಟ್‌ವೇ ೧೯೬೯:೭).

**ಎರಡನೇ ಹಂತ:-** ಯುರೋಪಿನಾದ್ಯಂತ ಏಷ್ಯಾ ಖಂಡದ ಸಾಂಬಾರು ಪದಾರ್ಥಗಳಿಗೆ ಹಾಗೂ ಇನ್ನಿತರ ವಸ್ತುಗಳಿಗೆ ಬಹಳಷ್ಟು ಬೇಡಿಕೆ ಇತ್ತು. ಆದರೆ ಆ ಬೇಡಿಕೆ ಪೂರೈಸಲು ಕ್ರಿಶ್ಚಿಯನ್ ಸಮುದಾಯದ ವ್ಯಾಪಾರಿಗಳಿಗೆ ನೇರಮಾರ್ಗದ ಸೌಲಭ್ಯವಿಲ್ಲದೆ ತಡೆಹಿಡಿಯಲ್ಪಟ್ಟಿತ್ತು. ಇದು ಯುರೋಪಿಯನ್ ರಾಷ್ಟ್ರಗಳ ರಾಜಮನೆತನಗಳಿಗೆ ಮತ್ತು ವ್ಯಾಪಾರಿ ಸಮುದಾಯಗಳಿಗೆ ಒಂದು ಗಂಭೀರ ಸವಾಲಾಗಿ ಕಾಡಿತ್ತು. ಯುರೋಪಿಯನ್ ರಾಜರುಗಳಿಗೆ ವಿವಿಧ ವಲಯಗಳಿಂದ ಈ ಬಗ್ಗೆ ಒತ್ತಡ, ಸಹಾಯ ಸಹಕಾರಗಳು ಮೂರ್ತರೂಪಗೊಂಡು ಹೇಗಾದರೂ ಮಾಡಿ 'ಮೆಡಿಟರೇನಿಯನ್' ಹೊರತುಪಡಿಸಿದ ಹೊಸ ಸಮುದ್ರ ಮಾರ್ಗವನ್ನು ಭಾರತಕ್ಕೆ ಕಂಡು ಹಿಡಿಯಲೇಬೇಕೆಂಬ ಪ್ರಬಲ ಅಭಿಲಾಷೆ ಯುರೋಪಿನಾದ್ಯಂತ ಮಾರ್ದನಿಸಿತು.

ಒಂದೆಡೆಯಲ್ಲಿ ಸರಕು ಸರಂಜಾಮುಗಳಿಗೆ ಹೆಚ್ಚುತ್ತಿರುವ ಬೇಡಿಕೆ ಮತ್ತೊಂದೆಡೆಯಲ್ಲಿ ಅದನ್ನು ಸಮರ್ಪಕವಾಗಿ ಪೂರೈಸುವ ವ್ಯಾಪಾರಿ ಮಾರ್ಗಕ್ಕೆ ಇದ್ದ ಗಂಭೀರ ಅಡಚಣೆ. ಇವುಗಳೆಲ್ಲವೂ ಏಕಾತ್ಮಕವಾಗಿ ಒಂದು ಗಂಭೀರ ರಾಜಕೀಯ ಮತ್ತು ವಾಣಿಜ್ಯಾತ್ಮಕ ಸವಾಲನ್ನು ಯುರೋಪಿಯನ್ ರಾಜಪ್ರಭುತ್ವ ಮತ್ತು ವ್ಯಾಪಾರಿ ಸಮುದಾಯಕ್ಕೆ ಎಸೆದಾಗ ಅದನ್ನು ಧೈರ್ಯವಾಗಿ ಸ್ವೀಕರಿಸಿ, ಕಾರ್ಯ ಪ್ರವೃತ್ತರಾದ ರಾಷ್ಟ್ರಗಳಲ್ಲಿ ಪೋರ್ಚುಗಲ್ ದೇಶವೇ ಪ್ರಮುಖವಾಗಿದೆ. ಪೋರ್ಚುಗಲ್ ದೇಶದ ಚರಿತ್ರೆಯೇ ಈ ರೀತಿಯ ವೈಶಿಷ್ಟ್ಯಮಯ, ಸಾಹಸಮಯ ತಿರುವುಗಳಿಗೆ ಎದೆಯೊಡ್ಡಿದ ದೇಶವಾಗಿದೆ. ಆರ್.ಎಸ್.ವೈಟ್‌ವೇರವರು ಈ ರೀತಿ ಗುರುತಿಸಿರುತ್ತಾರೆ:

> ಪೋರ್ಚುಗಲ್ ರಾಷ್ಟ್ರವೇ ವಿಶೇಷ ಎರಕದ ಅಚ್ಚಿನಲ್ಲಿ ರೂಪಿತವಾಗಿದೆ; ೧೧ನೇ ಶತಮಾನದ ಕೊನೆಯಲ್ಲಿ, ಉಳಿದ ಸ್ಪಾನಿಸ್ ದೀಪಕಲ್ಪದ ರಾಷ್ಟ್ರಗಳಿಂದ ಪ್ರತ್ಯೇಕತೆಯನ್ನು ಹೊಂದಿದೆ. ಈ ದೇಶದ ಚರಿತ್ರೆಯಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಂದಿನ ಸತತ ೧೦೦ ವರ್ಷಗಳ ಚರಿತ್ರೆಯಲ್ಲಿ ಪೋರ್ಚುಗಲ್ ದೇಶ ಪೂರ್ವದ ದೇಶಗಳಿಗೆ ಹೊಸ ಸಮುದ್ರ ಮಾರ್ಗವನ್ನು ಕಂಡುಹಿಡಿಯುವ ಚರಿತ್ರೆಯಾಗಿದೆ(ವೈಟ್‌ವೇ ೧೮೯೯:೧೫).

ಈ ಸಾಧನೆಯ ಉತ್ತುಂಗ ವ್ಯಕ್ತಿ ರಾಜಕುಮಾರ ಹೆನ್ರಿಯನ್ನು 'ಪ್ರಿನ್ಸ್ ಆಫ್ ನ್ಯಾವಿಗೇಟರ್'[೨] ಎಂದು ಕರೆಯಲಾಗುತ್ತಿತ್ತು. ಪೋರ್ಚುಗಲ್ ದೊರೆ ಒಂದನೇ ಜಾನ್‌ನ ಮಗನೂ ಇಂಗ್ಲೆಂಡಿನ ದೊರೆ ಮೂರನೇ ಎಡ್ವರ್ಡ್‌ನ ಮೊಮ್ಮಗನೂ ಆಗಿದ್ದನು(ಪಣಿಕ್ಕರ್ ೧೯೨೯:೨೬). ಪೋರ್ಚುಗಲ್ ರಾಜ ಎರಡನೇ ಜಾನ್(ಪ್ರಿನ್ಸ್ ಆಫ್ ನ್ಯಾವಿಗೇಟರ್, ಹೆನ್ರಿ) ಭಾರತಕ್ಕೆ ನೇರ ಸಮುದ್ರ ಮಾರ್ಗವನ್ನು ಕಂಡು ಹಿಡಿಯ ಬೇಕೆಂಬುದು ಆತನ ಜೀವಮಾನದ ಕನಸಾಗಿತ್ತು. ಡೋಮ್ ಹೆನ್ರಿ, 'ವಿಸ್ಕಾನ್' ಪ್ರಾಂತ್ಯದ ಡ್ಯೂಕ್[೩] ಆಗಿದ್ದನು. ಈತನೇ ಆಫ್ರಿಕಾದ ದಕ್ಷಿಣದ ತುತ್ತತುದಿಯ ಮೂಲಕ ಭಾರತಕ್ಕೆ ತಲುಪಬಹುದೆಂದು ಆಲೋಚನೆಯನ್ನು ಪ್ರಥಮ ಬಾರಿಗೆ ಮಾಡಿದವನಾಗಿದ್ದಾನೆ. ಈತನ ಸಾಹಸಮಯ ಸಮುದ್ರ ಮಾರ್ಗ ಅನ್ವೇಷಣಾ ಪ್ರಯತ್ನಕ್ಕೆ ಆತನ ತಂದೆ ಮತ್ತು ಸಹೋದರರು ಬೆಂಗಾವಲಾಗಿ ನಿಂತರು. ಈತನ ಈ ಬೆಂಬಲಕ್ಕೆ ರಾಜ್ಯಾಶ್ರಯದೊಂದಿಗೆ ಸ್ವತಃ ಆತನೇ ಗ್ರ್ಯಾಂಡ್ ಮಾಸ್ಟರ್ ಆಗಿದ್ದ ಕ್ರೈಸ್ತ ಸಮುದಾಯದಿಂದ ಯಥೇಚ್ಛವಾದ ಆರ್ಥಿಕ ಸಹಕಾರವೂ ದೊರೆಯಿತು(ಮೂರ್ಸ್ ಸ್ಟೈನ್ ೧೮೯೭:೨೨). ಈ ಕನಸು ನನಸಾಗಿಸುವ ನಿಟ್ಟಿನಲ್ಲಿ, ಸಮುದ್ರ ಯಾನ, ಹಡಗು ನಿರ್ಮಾಣ ಹಾಗೂ ಇತರೆ ನಾವಿಕ ಕಲೆಗಳಲ್ಲಿ ಪರಿಣತರಾಗಿರುವ ಜನರನ್ನು ತನ್ನ ಆಸ್ಥಾನದಲ್ಲಿ ಒಗ್ಗೂಡಿಸಿ ವಿಸ್ತೃತವಾದ ವಿವರಗಳನ್ನು ಸಂಗ್ರಹಿಸಿದನು.

ಈತ ಹಡಗು ನಿರ್ಮಾಣದ ತಂತ್ರಜ್ಞಾನವನ್ನು ಸುಧಾರಿಸಿದ್ದು ಮಾತ್ರವಲ್ಲದೆ, ಕಂಪಾಸ್ ತಂತ್ರಜ್ಞಾನವನ್ನು ಅಭಿವೃದ್ಧಿ ಪಡಿಸಿದನು. ೧೦೦ ಟನ್‌ಗೂ ಮಿಕ್ಕಿದ ಸಾಮರ್ಥ್ಯವುಳ್ಳ ಅಲಂಕೃತ ಹಡಗನ್ನು ನಿರ್ಮಿಸುವಲ್ಲಿ ಯಶಸ್ವಿಯಾದನು. ಒಟ್ಟಾರೆಯಾಗಿ ನಾವಿಕ ಕಲೆಯ ಜ್ಞಾನವನ್ನು ಸುಧಾರಿಸುವ ಮೂಲಕ **"ಸಂಶೋಧನೆ ಎಂಬುದು ಆತನ ಅತ್ಯಂತ ಅಚ್ಚುಮೆಚ್ಚಿನ ಹವ್ಯಾಸ"** ಎಂದು ಚರಿತ್ರೆಯಲ್ಲಿ ದಾಖಲಾಗಿದೆ. ಪೋರ್ಚುಗಲ್ ಮತ್ತು ಇತರೆ ಯುರೋಪಿಯನ್ ರಾಷ್ಟ್ರಗಳಿಗೆ ಆಫ್ರಿಕಾವನ್ನು ಬಳಸಿ ಭಾರತಕ್ಕೆ ಬರಬೇಕಾದರೆ ದೀರ್ಘ ಸಮಯ ಬೇಕಾಗುತ್ತಿತ್ತು. ಈ ಪ್ರಕ್ರಿಯೆಗೆ Doubling the Cape ಎನ್ನುತ್ತಾರೆ. ಇದರ ಅರ್ಥ 'ಕೇಪ್ ಆಫ್ ಗುಡ್‌ಹೋಪ್'' ಭೂಶಿರದ ಮುಖಾಂತರ ಸಾಗುವುದು ಎಂಬುದಾಗಿದೆ. ೧೫ನೇ ಶತಮಾನದಲ್ಲಿ ಇದು ಕಷ್ಟಕರವಾಗಿತ್ತು. ಒಂದು ನೂರು ಟನ್ನಿಗಿಂತ ಹೆಚ್ಚು ಭಾರದ ಹಡಗುಗಳಿಗೆ ಇದು ಅಸಾಧ್ಯವೇ ಆಗಿತ್ತು. ಪೋರ್ಚುಗಲ್ ದೇಶದ 'ಸರ್ ಬಾರ್ಥೋಲೋಮ್ಯು ಡಯಾಸ್' ಇದನ್ನು ಸುಲಭ ಸಾಧ್ಯ ಮಾಡಿದನು.

**ಪೋರ್ಚುಗೀಸರ ಆಗಮನದ ಪೂರ್ವದಲ್ಲಿ ಕರಾವಳಿ ಕರ್ನಾಟಕ ಹಾಗೂ ವ್ಯಾಪಾರ ವ್ಯವಹಾರ – ನಿರ್ವಹಣೆಯ ಸ್ವರೂಪ**

ಪೋರ್ಚುಗೀಸರ ಆಗಮನದ ಪೂರ್ವದಲ್ಲಿ ಭಾರತದ ಪಶ್ಚಿಮ ಕರಾವಳಿಯ ವ್ಯಾಪಾರ–ವ್ಯವಹಾರವನ್ನು ಸಂಪೂರ್ಣವಾಗಿ ಅರಬ್ಬರು ನಿಯಂತ್ರಿಸುತ್ತಿದ್ದರು. ಆದುದರಿಂದಲೇ ಭಾರತದ ಪಶ್ಚಿಮ ಭಾಗದ ಈ ಸಮುದ್ರವು ಅರಬ್ಬೀ ಸಮುದ್ರವೆಂದೇ ಕರೆಯಲ್ಪಡುತ್ತಿತ್ತು. ಇದನ್ನು ಚರಿತ್ರ ಪೂರ್ವದಲ್ಲಿ 'ಎರಿತ್ರಿಯನ್ ಸೀ' ಎಂದೂ ಕರೆಯುತ್ತಿದ್ದರು. ಪಶ್ಚಿಮ ಕರಾವಳಿಯ ಪ್ರತಿಯೊಂದು ಬಂದರಿನಲ್ಲೂ ಅರಬ್ಬರ ವಸಾಹತುಗಳು ಇತ್ತು. ಸಾಮಾನ್ಯವಾಗಿ ಈ ತೀರ ಪ್ರದೇಶವನ್ನು ಮಲಬಾರ್ ಎಂದೇ ಕರೆಯುತ್ತಿದ್ದರು. ೧೫ನೇ ಶತಮಾನದ ಪೂರ್ವದಲ್ಲಂತೂ ಕಲ್ಲಿಕೋಟೆ ಬಂದರು ಭಾರತದ ಅತ್ಯಂತ ಪ್ರತಿಷ್ಠೆಯ ವ್ಯಾಪಾರ ವ್ಯವಹಾರದ ಬಂದರುಗಳಲ್ಲೇ ಮೊದಲನೆಯದ್ದಾಗಿತ್ತು. ಆ ಸಮಯದಲ್ಲಿ ಬೇರೆ ಬೇರೆ ದೇಶದ ಮತ್ತು ನಗರಗಳ ವ್ಯಾಪಾರಿಗಳನ್ನು ಇಲ್ಲಿ ಕಾಣಬಹುದಿತ್ತು. ಪರ್ಷಿಯಾ ದೇಶದ 'ಷಾ' ದೊರೆಯ ರಾಯಭಾರಿಯಾಗಿ ಭಾರತಕ್ಕೆ ಬಂದಿದ್ದ 'ಅಬ್ದುಲ್ ರಜಾಕ್'ನು ಕಲ್ಲಿಕೋಟೆಯಲ್ಲಿ ನಡೆಯುತ್ತಿದ್ದ ವ್ಯಾಪಾರ–ವ್ಯವಹಾರದ ಬಗ್ಗೆ ಉಲ್ಲೇಖಿಸಿರುವ ಅಂಶಗಳು ವಿಶೇಷ ಮಹತ್ವದ್ದಾಗಿವೆ.

> ಇಲ್ಲಿ (ಕಲ್ಲಿಕೋಟೆಯಲ್ಲಿ) ಬೇರೆ ಬೇರೆ ಸಮುದ್ರ ವ್ಯಾಪಾರ ನಡೆಸುವ ದೇಶಗಳ ಅದರಲ್ಲೂ ವಿಶೇಷವಾಗಿ ಅಬ್ಬೈಸ್ಸಿನಿಯಾ ಮತ್ತು ಟೈಟಾನ್ ದೇಶಗಳ ಸಾಕಷ್ಟು ತೆರತೆರನಾದ ವಸ್ತುಗಳನ್ನು ಕಾಣಬಹುದು. ಮೆಕ್ಕಾ ಮತ್ತು ಇತರೆ ಪ್ರದೇಶಗಳಿಂದ ಆಗಾಗ ಹಡಗುಗಳು ಬರುತ್ತಿದ್ದವು. ಈ ಪ್ರಾಂತ್ಯದಲ್ಲಿ ಸುರಕ್ಷತೆ ಮತ್ತು ನ್ಯಾಯ ಆಳ್ವಿಕೆ ನಡೆಯುತ್ತಿತ್ತು. ಇಲ್ಲಿಗೆ ವ್ಯಾಪಾರಿಗಳು ಅತ್ಯಂತ ಬೆಲೆಬಾಳುವ ವಸ್ತುಗಳನ್ನು ವ್ಯಾಪಾರಕ್ಕಾಗಿ ತರುತ್ತಿದ್ದರು. ಅವುಗಳನ್ನು ಹಡಗಿನಿಂದ ಇಳಿಸಿದ ಮೇಲೆ ರಸ್ತೆ ಬದಿಯಲ್ಲೇ ಅಥವಾ ಮಾರ್ಕೆಟ್ ಪ್ರದೇಶಗಳಲ್ಲೇ ಶೇಖರಿಸಿ ಇಡುತ್ತಿದ್ದರು; ಮಾತ್ರವಲ್ಲದೆ ಬಹಳಷ್ಟು ದೀರ್ಘ ಸಮಯದವರೆಗೆ ಅಲ್ಲೇ ಬಿಡುತ್ತಿದ್ದರು. ಕಸ್ಟಂಹೌಸ್ ಅಧಿಕಾರಿಗಳನ್ನು ಹೊರತು ಪಡಿಸಿ ರವಾನೆದಾರರು ಇಲ್ಲದೆ ಹಾಗೆಯೇ ಅಲ್ಲಿ ಬಿಡುತ್ತಿದ್ದರು (ಮುಕುಂದ ರಾವ್ ಮತ್ತು ಶೆಣೈ ೧೯೩೭:೧೪೮)

ಎಂದು ಸಚಿತ್ರವಾಗಿ ವಿವರಿಸಿದ್ದಾರೆ. ಭಾರತದಿಂದ ರಫ್ತು ಆಗುತ್ತಿದ್ದ ವಸ್ತುಗಳಲ್ಲಿ ಬಹಳ ಮುಖ್ಯವಾಗಿ ಸಾಂಬಾರ ಪದಾರ್ಥಗಳು ಅದರಲ್ಲೂ ವಿಶೇಷವಾಗಿ ಕರಿಮೆಣಸಿಗೆ ಯುರೋಪಿನಾದ್ಯಂತ ಸಾರ್ವತ್ರಿಕವಾಗಿ ಬೇಡಿಕೆ ಇತ್ತು. ಇದನ್ನು ಭಾರತದಿಂದ ಕಡಿಮೆ ದರದಲ್ಲಿ ವಿಕ್ರಯಿಸಲಾಗುತ್ತಿತ್ತು. ಆದರೆ ಅದರ ಬೆಲೆ ವಿದೇಶಗಳಲ್ಲಿ ಹೆಚ್ಚಾಗಿತ್ತು. ಯಾವುದೇ ಅಡೆತಡೆಯಿಲ್ಲದೆ 'ಕೈರೋ' ಮತ್ತು 'ಪರ್ಷಿಯಾ'ದ ಮುಸ್ಲಿಂ ಪ್ರಭುತ್ವಗಳು ಯುರೋಪಿಗೆ ಸಾಗಾಟವಾಗುತ್ತಿದ್ದ ವಸ್ತುಗಳ ಮೇಲೆ ವಿಪರೀತ ಸುಂಕವನ್ನು ವಿಧಿಸುತ್ತಿದ್ದರು (ವೈಟ್‌ವೇ ೧೯೯೯:೭,೮).

ಇದೇ ಸಮಯದಲ್ಲಿ ಉತ್ತರ ಭಾರತದ ಮಟ್ಟಿಗೆ ಸಫಾವಿದ್ ಮತ್ತು ಮೊಗಲರ ಮಧ್ಯೆ ಕಂದಹಾರದ ಆಯಕಟ್ಟಿನ ಕೋಟೆಗೆ ಸಂಬಂಧಿಸಿ ಸಂಘರ್ಷವೇರ್ಪಟ್ಟಿತ್ತು. ಅದರ ಪರಿಣಾಮವಾಗಿ ಸಂಭವಿಸಿದ ಸೈನಿಕ ಕಾರ್ಯಾಚರಣೆಯಲ್ಲಿ ಪರ್ಷಿಯಾದ ಕೊಲ್ಲಿ ಪ್ರದೇಶದಿಂದ ಉತ್ತರ ಭಾರತಕ್ಕೆ ಸರಬರಾಜು ಆಗುತ್ತಿದ್ದ ಕುದುರೆಗಳ ವ್ಯಾಪಾರಕ್ಕೆ ತೀವ್ರ ಅಡಚಣೆ ಉಂಟಾಯಿತು. ಮಧ್ಯಯುಗದ ಸಂದಿಗ್ಧಮಯ ಯುದ್ಧದ ವಾತಾವರಣದಲ್ಲಿ ಕುದುರೆಗಳ ಉಪಯೋಗ ಅನಿವಾರ್ಯವಾದುದರಿಂದ ಅವುಗಳು ನೆಲಮಾರ್ಗಕ್ಕೆ ಪರ್ಯಾಯವಾಗಿ ಸಮುದ್ರ ಮಾರ್ಗದ ಮೂಲಕ ಬರುವಂತಾಯಿತು (ಪಿಯರ್‌ಸನ್ ೨೦೦೪:XI). ಇದು ಅನಿವಾರ್ಯವಾಗಿ ಭಾರತದ ಪಶ್ಚಿಮ ಸಮುದ್ರದಲ್ಲಿ ಕುದುರೆಗಳ ವ್ಯಾಪಾರಕ್ಕೆ ಹೊಸ ಆಯಾಮ ಒದಗಿಸಿತು.

## ಅಂತರಾಷ್ಟ್ರೀಯ ವ್ಯಾಪಾರ ಮತ್ತು ಮತೀಯ ಸವಾಲುಗಳು; ಪೋಪರಿಂದ ಅಧಿಕಾರ ಮುದ್ರೆ ಪಡೆದ ಪೋರ್ಚುಗಲ್ ದೇಶ

ಸರಿಸುಮಾರು ಇಸ್ಲಾಂನ ಉಗಮ ಮತ್ತು ಅದರ ವ್ಯಾಪಕ ವಿಸ್ತರಣೆಯು ಹಳೆಯ ಮತ ಧರ್ಮಗಳಾದ ಕ್ರೈಸ್ತ ಮತ್ತು ಯಹೂದಿಗಳ ನಂಬಿಕೆಗೆ ಸವಾಲಾಯಿತು. ಈ ಸಮಯದಲ್ಲಿ ಅಂತರಾಷ್ಟ್ರೀಯ ವ್ಯಾಪಾರ ವ್ಯವಹಾರಗಳನ್ನು ಇಸ್ಲಾಂ ಮತೀಯ ಅನುಯಾಯಿಗಳು ತಮ್ಮ ತೆಕ್ಕೆಗೆ ಸೇರಿಸಿಕೊಂಡರು. ಆ ಮೂಲಕ ಅರಬ್ ಸಾಮ್ರಾಜ್ಯದ ವಿಸ್ತರಣೆಯ ಪ್ರಯತ್ನಗಳು ಯುರೋಪಿನ ಇಸ್ಲಾಂ ಹೊರತುಪಡಿಸಿದ ಸಮುದಾಯಕ್ಕೆ ನುಂಗಲಾರದ ಸವಾಲಾಯಿತು. ಇದೇ ಕಾಲದಲ್ಲಿ ರೋಮನ್ ಕ್ಯಾಥೊಲಿಕ್ ಮತ ವಿಭಜನೆಯಾಗಿ ಪ್ರೊಟೆಸ್ಟೆಂಟ್ ಎಂಬ ಹೊಸ ಪಂಥದ ಉಗಮವಾಗಿ ಅದರ ವಿಸ್ತರಣೆಯೂ ವೆಟಿಕನ್‌ಗೆ ಸವಾಲಾಯಿತು. ಇಂತಹ ಸಮಯದಲ್ಲಿ ಪೋಪ್‌ರವರು ಅಧೀನಕ್ಕೆ ಬರುವ ಯುರೋಪಿಯನ್ ಕ್ಯಾಥೊಲಿಕ್ ರಾಜಪ್ರಭುತ್ವ "ಕಾಮರ್ಸ್ ಮತ್ತು ಕ್ರಿಶ್ಚಿಯಾನಿಟಿ(ಸಿ ಮತ್ತು ಸಿ)" ಎಂಬ ಉದ್ದೇಶದಡಿಯಲ್ಲಿ ಭಾರತಕ್ಕೆ ಸಾಹಸಮಯ ಸಮುದ್ರಯಾನದ ಸವಾಲನ್ನು ಸ್ವೀಕರಿಸಿದವು. ಈ ಸವಾಲು ಸ್ವೀಕರಿಸಿದ ಪೋರ್ಚುಗೀಸ್ ಪ್ರಭುತ್ವಕ್ಕೆ ಕಷ್ಟಕರವಾದ ಗುರಿ ಇತ್ತು. ಒಂದೆಡೆಯಲ್ಲಿ ವ್ಯಾಪಾರ ವ್ಯವಹಾರದಲ್ಲಿ ಮುಸ್ಲಿಂ ಪ್ರಾಬಲ್ಯವನ್ನು ಬಗ್ಗು ಬಡಿಯಬೇಕಾಗಿತ್ತು. ರಷ್ಯಾ ದೇಶದ ಸಾಂಬಾರು ದ್ವೀಪಗಳು ಮತ್ತು ಭಾರತದೊಂದಿಗಿನ ಸಂಪರ್ಕವನ್ನು ಇಲ್ಲದಾಗಿಸಬೇಕಾಗಿತ್ತು(ಪಣಿಕ್ಕರ್ ೧೯೨೯:೧೪೮). ಈ ಚರ್ಚೆಯನ್ನು ವಿಸ್ತರಿಸುವ ನಿಟ್ಟಿನಲ್ಲಿ ಪೋರ್ಚುಗೀಸರ ಮೂಲ ದಾಖಲೆಗಳನ್ನು ವ್ಯಾಪಕವಾಗಿ ಅಧ್ಯಯನ ನಡೆಸಿರುವ ಬಿ.ಎಸ್. ಶಾಸ್ತ್ರಿಯವರ ಪ್ರಕಾರ, ಪೋರ್ಚುಗೀಸರು ಭಾರತಕ್ಕೆ ಬರಬೇಕೆಂಬ ಉದ್ದೇಶದ ಹಿಂದೆ ಧಾರ್ಮಿಕ ಮತ್ತು ವಾಣಿಜ್ಯದ ಒತ್ತಾಸೆಗಳು ಸ್ಪೂರ್ತಿಯ ಸೆಲೆಯಾಗಿದ್ದವು ಎಂದು ವಿವರಿಸಿರುತ್ತಾರೆ.

ಅಷ್ಟೊತ್ತಿಗಾಗಲೇ ವ್ಯಾಪಾರದ ದಂಡಯಾತ್ರೆಗೆ ಸಜ್ಜಾಗಿದ್ದ ಪೋರ್ಚುಗಲ್ ಮತ್ತು ಸ್ಪೈನ್ ದೇಶಗಳ ಸಮ್ಮುಖದಲ್ಲಿ ಕ್ರೈಸ್ತ ಮತ ಧರ್ಮದ ಪ್ರಚಾರವೂ ಆದ್ಯತೆಯ ಕಾರ್ಯಕ್ರಮವಾಗಿತ್ತು. ಪೋರ್ಚುಗೀಸರು ಆಫ್ರಿಕಾ ದೇಶದ ಪೂರ್ವ ತೀರದಲ್ಲಿ ಸಂಪೂರ್ಣವಾಗಿ ಅಧಿಪತ್ಯವನ್ನು ಪ್ರತಿಷ್ಠಾಪಿಸಿದ ಮೇಲೆ ಪೋಪ್‌ರವರಿಗೆ ಅರ್ಜಿ ಸಲ್ಲಿಸಿದರು. ಆ ಪ್ರಕಾರ ಅವರು ಸ್ವಾಧೀನಪಡಿಸಿದ ದೇಶಗಳ ಕ್ರೈಸ್ತೇತರ ಜನರನ್ನು ಕ್ರೈಸ್ತರನ್ನಾಗಿ ಮತಾಂತರಿಸುವ ಅಧಿಕಾರ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ಪೋರ್ಚುಗಲ್ ರಾಜ ಅನುಭೋಗಿಸುವ ಅವಕಾಶ ನೀಡುವ ಅಧಿಕಾರ ಮುದ್ರೆ–ಪ್ರಪತ್ರಕ್ಕಾಗಿ (ಬುಲ್) ಫ್ರಿನ್ಸ್ ಹೆನ್ರಿ ದಿ. ನ್ಯಾವಿಗೇಟರ್ ೧೪೪೧ರಲ್ಲಿ ಪೋಪ್ ಅಲೆಗ್ಸಾಂಡರ್ ಬೋರ್ಗೀಯವರಿಗೆ ಅರ್ಜಿ ಸಲ್ಲಿಸಿದರು (ಸಾಮ್ಯುವೆಲ್ ೧೯೯೪:೫೨). ಸಹಜವಾಗಿಯೇ ಪೋಪ್‌ರವರು ಕ್ರೈಸ್ತೇತರ ಜಗತ್ತನ್ನು ಸ್ಪೈನ್ ಮತ್ತು ಪೋರ್ಚುಗಲ್ ಮಧ್ಯೆ ವಿಭಾಗಿಸಿದರು. ಆ ಪ್ರಕಾರ ಭಾರತವನ್ನು ಪೋರ್ಚುಗೀಸರಿಗೆ ನೀಡಿದರು. ಆರ್.ಎಸ್. ವೈಟ್‌ವೇ ಪ್ರಕಾರ ಕ್ರೈಸ್ತ ಧಾರ್ಮಿಕತೆಯ ಮುಖ್ಯರಾದ ಪೋಪ್‌ರವರು ಇಡೀ ಜಗತ್ತನ್ನೇ ಸ್ಪೈನ್ ಮತ್ತು ಪೋರ್ಚುಗಲ್ ಮಧ್ಯೆ ವಿತರಿಸಿದರು. ಆದುದರಿಂದ ಜಗತ್ತಿನ ನಾಲ್ಕನೇ ಮೂರು ಭಾಗ ಅರೆ ನಾಗರಿಕ ಸ್ಪೈನ್ ಮತ್ತು ಅರೆ ನಾಗರಿಕ ಪೋರ್ಚುಗೀಸರ ಮಧ್ಯೆ ವಿತರಿಸಲಾಯಿತು ಎಂದು ವಿಶ್ಲೇಷಿಸಿದ್ದಾರೆ (ವೈಟ್‌ವೇ ೧೯೯೫:೬).

ಸರಿಸುಮಾರು ನೂರು ವರ್ಷಗಳ ನಿರಂತರ ಪ್ರಯತ್ನದ ಅಂಗವಾಗಿ ನಡೆದ ಸಾಹಸಮಯ ಸಮುದ್ರ ಮಾರ್ಗ ಅನ್ವೇಷಣಾ ಪ್ರಕ್ರಿಯೆಯ ಮುಂದಿನ ಹಂತವು ವಾಸ್ಕೋಡಗಾಮನು ಸರ್ವಸಜ್ಜಿತವಾಗಿ ಪ್ರಯಾಣ ಆರಂಭಿಸಿದ ಹಂತವಾಗಿದೆ. ೬೦ರಿಂದ ೧೫೦ ಟನ್ ಭಾರದ ಮೂರು ಹಡಗುಗಳಲ್ಲಿ ೧೭೦ ಮಂದಿ ಸಿಬ್ಬಂದಿಗಳು ೨೦ ಗನ್‌ಗಳೊಂದಿಗೆ ಜುಲೈ ೮, ೧೪೯೭ ರಲ್ಲಿ ಪ್ರಯಾಣ ಆರಂಭಿಸಿದರು. ೧೪೯೮ ರ ಎಪ್ರಿಲ್ ೧೪ ರಂದು ವಾಸ್ಕೋಡಗಾಮನ ಹಡಗು, ಪೂರ್ವ ಆಫ್ರಿಕಾ ತೀರದ ಮೆಲಿಂಡಾವನ್ನು ತಲುಪಿತ್ತು. ಅಲ್ಲಿಯ ರಾಜನೊಂದಿಗೆ ಉತ್ತಮ ಸೌಹಾರ್ದವನ್ನು ಬೆಳೆಸಿ ಅಲ್ಲಿ ಎರಡು ತಿಂಗಳುಗಳ ಕಾಲ ಅವರು ಇದ್ದರು. ಈ ಸಂದರ್ಭದಲ್ಲಿ ಮೆಲಿಂಡಾ ಬಂದರಿನಲ್ಲಿ ಇದ್ದ ಗುಜರಾತ್ ಮೂಲದ ನುರಿತ ಸಮುದ್ರಯಾನಿ–ನಾವಿಕ 'ಇಬ್ನ ಮಸ್ಜೂದ್' ಎಂಬಾತನನ್ನು ತನ್ನ ಮುಂದಿನ ಹಡಗು ಪ್ರಯಾಣಕ್ಕೆ ಬಳಸಿಕೊಂಡರು[೬]. ಈತನು ಭಾರತದ ಪಶ್ಚಿಮ ಕರಾವಳಿಯ ಸಮುದ್ರ ತೀರಗಳ ಬಗ್ಗೆ ಸಾಕಷ್ಟು ನುರಿತ ಅನುಭವ ಹೊಂದಿದ್ದ ನಾವಿಕನಾಗಿದ್ದನು. ಆತನ ಸಹಾಯದಿಂದ ಯಾವುದೇ ಅಡೆತಡೆಗಳು ಇಲ್ಲದೆ ವಾಸ್ಕೋಡಗಾಮನ ತಂಡ ೧೪೯೮ರಲ್ಲಿ ಮಲಬಾರ್ ತಲುಪಿತು(ವೈಟ್‌ವೇ ೧೯೯೫:೨೧).

**ವಾಸ್ಕೋಡಗಾಮನ ಆಗಮನದೊಂದಿಗೆ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಪ್ರಾರಂಭದ ಹಂತ**

ವಾಸ್ಕೋಡಗಾಮನು ಹಡಗಿನಿಂದ ಇಳಿದು ನಂತರ ಜನರೊಂದಿಗೆ ಆತ್ಮೀಯತೆಯಿಂದ ವರ್ತಿಸಿ ವ್ಯಾಪಾರದ ಚೌಕಾಸಿ ಪ್ರಾರಂಭಿಸಿದನು. ಕಲ್ಲಿಕೋಟೆಯ ಜಾಮೋರಿನ್ ರಾಜನಲ್ಲಿ ತನ್ನ ದೇಶದ ವ್ಯಾಪಾರಿ ಪ್ರತಿನಿಧಿಯನ್ನು(Factor)[೭] ಇರಿಸಿಕೊಂಡು ವ್ಯಾಪಾರ ಚಟುವಟಿಕೆ ನಡೆಸಲು ಅನುಮತಿಯನ್ನು ಕೇಳಿ ಕೊಂಡನು. ವಾಸ್ಕೋಡಗಾಮನ ಸಮುದ್ರ ಯಾನ ಮತ್ತು ವ್ಯಾಪಾರದ ಅಪಾಯವನ್ನು ನಾಯರ್ ಸಮುದಾಯ ಮತ್ತು ಮೂರ್ಸ್ ಎಂದು ಕರೆಯಲ್ಪಡುತ್ತಿದ್ದ ಮುಸ್ಲಿಂ ಸಮುದಾಯಗಳು ಮಾತ್ರ ಅರಿತು

ಕೊಂಡಿದ್ದರು ಎಂದು ಕೆ.ಎಂ. ಪಣಿಕ್ಕರ್‌ರವರು ಗುರುತಿಸಿರುತ್ತಾರೆ. ವ್ಯಾಪಾರದ ಪ್ರತಿನಿಧಿಯನ್ನು ಇರಿಸಿಕೊಳ್ಳುವ ವಾಸ್ಕೋಡಗಾಮನ ಬೇಡಿಕೆಗೆ ಸ್ಪಂದಿಸಿದ ಕಲ್ಲಿಕೋಟೆಯ ರಾಜನು ಈ ಬಗ್ಗೆ ಕಸ್ಟಂ(ವ್ಯಾಪಾರಿ) ಸುಂಕವನ್ನು ತಕ್ಷಣವೇ ಪಾವತಿಸಬೇಕೆಂದು ಆಗ್ರಹಿಸಿದನು. ಇದನ್ನು ಪಾವತಿಸಲು ವಾಸ್ಕೋಡಗಾಮ ಮತ್ತು ಆತನ ಸಿಬ್ಬಂದಿಗಳು ವಿಫಲರಾದಾಗ ಸಮುದ್ರ ತಟದಲ್ಲಿದ್ದ ಪೋರ್ಚುಗೀಸರ ಎಲ್ಲಾ ಸರಕು ಸರಂಜಾಮುಗಳನ್ನು ರಾಜನು ಮುಟ್ಟುಗೋಲು ಹಾಕಿದನು. ಇದಕ್ಕೆ ಪ್ರತಿಕಾರವಾಗಿ ವಾಸ್ಕೋಡಗಾಮನು ತಮ್ಮ ಹಡಗನ್ನು ಪ್ರವೇಶಿಸಿ ಅದನ್ನು ವೀಕ್ಷಿಸುತ್ತಿದ್ದ ಹನ್ನೆರಡು ಮಂದಿ ಸ್ಥಳೀಯರನ್ನು ಬಂಧಿಸಿದನು. ಕೆಲ ದಿನಗಳ ನಂತರ ಮುಟ್ಟು ಗೋಲು ಹಾರಲ್ಪಟ್ಟ ಪೋರ್ಚುಗೀಸರಿಂದ ಮುಟ್ಟುಗೋಲು ಹಾಕಿದ ಸರಕು ಸರಂಜಾಮುಗಳನ್ನು ಕಲ್ಲಿಕೋಟೆಯ ರಾಜನು ಹಿಂತಿರುಗಿಸಿದನು. ಇದಕ್ಕೆ ಪ್ರತಿಕ್ರಿಯೆಯಾಗಿ ವಾಸ್ಕೋಡಗಾಮನು ಬಂಧಿಸಲ್ಪಟ್ಟ ಹನ್ನೆರಡು ಮಂದಿಯಲ್ಲಿ ಏಳು ಮಂದಿಯನ್ನು ಬಿಡುಗಡೆಗೊಳಿಸಿದನು. ಉಳಿದವರನ್ನು ಬಿಡುಗಡೆ ಮಾಡದೆ ಹಡಗಿನಲ್ಲೇ ಇರಿಸಿಕೊಂಡು ಅವರನ್ನು ತನ್ನ ಮುಂದಿನ ಕಾರ್ಯಸಾಧನೆಗಾಗಿ ಉಪಯೋಗಿಸಿಕೊಂಡನು. ಈ ರೀತಿ ಪೋರ್ಚುಗೀಸರು ವ್ಯಾಪಾರದ ಪ್ರಪ್ರಥಮ ಸಂಘರ್ಷದ ನಡೆಯಲ್ಲಿ ಮೇಲುಗೈ ಸಾಧಿಸಿದರು.

ಐತಿಹಾಸಿಕ ಪ್ರಥಮ ನೌಕಾಯಾನದ ಯಶಸ್ವಿ ರೂವಾರಿ ವಾಸ್ಕೋಡಗಾಮನು ಈ ಘಟನೆಯ ತರುವಾಯ ಲಿಸ್ಬನ್‌ಗೆ ೧೪೯೮ರಲ್ಲಿ ಮರು ಪ್ರಯಾಣ ಪ್ರಾರಂಭಿಸಿದನು(ವೈಟ್‌ವೇ ೧೮೯೯:೮೧). ಆದುದರಿಂದ ಪ್ರಾರಂಭದ ಈ ಘಟನೆಯಲ್ಲೇ ಪೋರ್ಚುಗೀಸರ ಆಕ್ರಮಣಕಾರಿ ಧೋರಣೆಯನ್ನು ಗಮನಿಸಬಹುದು.

ಇಷ್ಟೆಲ್ಲ ಬೆಳವಣಿಗೆಗಳ ಮಧ್ಯೆ ಸಾಕಷ್ಟು ಪ್ರಮಾಣದಲ್ಲಿ ಸಾಂಬಾರು ಪದಾರ್ಥ ಹಾಗೂ ಇನ್ನಿತರೆ ವಸ್ತುಗಳನ್ನು ತುಂಬಿಸಿಕೊಂಡು ವಾಸ್ಕೋಡಗಾಮನ ಹಡಗುಗಳು ಉತ್ತರ ದಿಕ್ಕಿನ ಕಡೆಗೆ ಪ್ರಯಾಣ ಬೆಳೆಸಿ ಕರಾವಳಿ ಕರ್ನಾಟಕದ ಸರಹದ್ದನ್ನು ಪ್ರವೇಶಿಸಿತು. ಸರಿಸುಮಾರು ಸೆಪ್ಟೆಂಬರ್ ಮಧ್ಯ ಭಾಗದಲ್ಲಿ ವಾಸ್ಕೋಡಗಾಮನ ತಂಡ ಕುಂದಾಪುರ ಮತ್ತು ಭಟ್ಕಳದ ಮಧ್ಯೆ ೨೦ ಮೈಲು ದೂರದಲ್ಲಿ ಹಾಗೂ ದಡದಿಂದ ಸಮುದ್ರದಲ್ಲಿ ಎರಡು ಲೀಗ್[೮] ದೂರದಲ್ಲಿರುವ ದ್ವೀಪದಲ್ಲಿ ತಂಗಿದರು. ತಮ್ಮೊಂದಿಗೆ ಸೌಹಾರ್ದಯುತ ಸಂಬಂಧ ಬೆಳೆಸಿದ ವಾಸ್ಕೋಡಗಾಮನ ತಂಡಕ್ಕೆ ಒಣಮೀನು ಮತ್ತು ಇತರೆ ದಿನ ಬಳಕೆಯ ವಸ್ತುಗಳನ್ನು ನೀಡಿದರು. ಇದಕ್ಕೆ ಪ್ರತಿಯಾಗಿ ಅವರಿಗೆ ವಾಸ್ಕೋಡಗಾಮನು ಷರ್ಟ್ ಮತ್ತು ಇತರೆ ಕೆಲವು ವಸ್ತುಗಳನ್ನು ನೀಡಿದನು. ಆತನು ಅಲ್ಲಿಂದ ಹಿಂತಿರುಗುವ ಮುನ್ನ ಅವರ ಅನುಮತಿ ಪಡೆದು ಆ ದ್ವೀಪದಲ್ಲಿ ಪೋರ್ಚುಗೀಸ್ ರಾಜನ ಕೋಟ್, ಖಡ್ಗ ಮತ್ತು ಶಿಲುಬೆಗಳನ್ನು ಹೊಂದಿರುವ ಧ್ವಜವನ್ನು ನೆಟ್ಟರು. ಈ ಸಂಕೇತಗಳು ಆಕ್ರಮಣ ಮತ್ತು ಸ್ವಾಧೀನತೆಯ (Conquest and Possession) ಸಂಕೇತಗಳಾಗಿದ್ದವು (ವೈಟ್‌ವೇ ೧೮೯೯:೨೧). ಶಿಲುಬೆಯು ಕ್ರೈಸ್ತ ಧರ್ಮದ ಸಂಕೇತ ಆಗಿತ್ತು. ಈಗ ಆ ದ್ವೀಪ ಸಮೂಹಕ್ಕೆ 'ಪಿಜನ್ ಐಲ್ಯಾಂಡ್' ಎಂದು ಕರೆಯುತ್ತಾರೆ.

ಪಿಜನ್ ದ್ವೀಪದಿಂದ ಹೊರಟ ಪೋರ್ಚುಗೀಸ್ ಹಡಗುಗಳು ಕಾರವಾರಕ್ಕೆ ಎರಡು ಮೈಲು ನೈರುತ್ಯಕ್ಕೆ ಇರುವ ಐದು ದ್ವೀಪಗಳ ಸಮುದಾಯವಾದ ಅಂಜುದೀವ್‌ಗೆ ತೆರಳಿತು. ಅಲ್ಲಿ ಲಂಗರು ಹಾಕಿದ ಹಡಗು ಸಪ್ಟೆಂಬರ್ ೨೪ ರಿಂದ ಅಕ್ಟೋಬರ್ ೫ ರವರೆಗೆ ತಂಗಿ ರಿಪೇರಿ ಹಾಗೂ ಸಿಹಿನೀರು

ತುಂಬಿಸಿಕೊಂಡಿತ್ತು. ಭಾರತದ ಪಶ್ಚಿಮ ಕರಾವಳಿಯಿಂದ ಪೂರ್ವ ಆಫ್ರಿಕಾ, ಕೊಲ್ಲಿ ರಾಷ್ಟ್ರಗಳಿಗೆ ಪ್ರಯಾಣಿಸುವ ಹಿಂದೂ ಮತ್ತು ಮುಸ್ಲಿಂ ಸಮುದ್ರ ಯಾನದ ನಾವಿಕರುಗಳು ಅಂಜುದೀವ್ ದ್ವೀಪ ಸಮೂಹದಲ್ಲಿ ವಿಶ್ರಾಂತಿಗಾಗಿ ತಂಗುತ್ತಿದ್ದರು. ಇಲ್ಲಿ ಸಾಕಷ್ಟು ಸಮಯ ತಂಗಿ ಹಡಗಿನ ರಿಪೇರಿ, ಕುಡಿಯುವ ಶುದ್ಧ ನೀರಿನ ಶೇಖರಣೆ ಹಾಗೂ ದಿನಬಳಕೆಯ ವಸ್ತುಗಳನ್ನು ವಿಕ್ರಯಿಸುವ ತಾಣವಾಗಿತ್ತು. ವಾಸ್ಕೋಡಗಾಮನ ಹಡಗಿನಲ್ಲಿದ್ದ ಗುಜರಾತ್ ಮೂಲದ, ಮುಸ್ಲಿಂ ನಾವಿಕ ಇಬ್ನೂ ಮಸ್ಜೂದ್‌ನ ಅನುಭವದ ಹಿನ್ನೆಲೆಯಿಂದ ಪೋರ್ಚುಗೀಸರ ತಂಡ ಕೂಡ ಇಲ್ಲೇ ತಂಗಿ ರಿಪೇರಿ ಮಾಡಿದರು. ಪೋರ್ಚುಗೀಸರು ಸ್ಥಳೀಯರಿಂದ ದಿನ ಬಳಕೆಯ ವಸ್ತುಗಳನ್ನು ವಿಕ್ರಯಿಸಿ ಹಡಗಿಗೆ ತುಂಬಿಸಿದರು. ಪೋರ್ಚುಗೀಸರನ್ನು ಕಂಡ ಕೆಲವರು ಕುಂಬಳಕಾಯಿ ಮತ್ತು ಸೌತೆಕಾಯಿಗಳನ್ನು ನೀಡಿದರು. ವಾಸ್ಕೋಡಗಾಮನು ಆ ಪ್ರದೇಶದಲ್ಲಿ ದಾಲ್ಚಿನಿ ಹೊರತುಪಡಿಸಿ ಇತರ ಯಾವುದೇ ಸಾಂಬಾರು ಪದಾರ್ಥಗಳು ಬೆಳೆಸಲ್ಪಡುವುದಿಲ್ಲವೆಂಬುದನ್ನು ಸ್ಥಳೀಯರಿಂದ ವಿಚಾರಿಸಿ ತಿಳಿದುಕೊಂಡನು. ವಾಸ್ಕೋಡಗಾಮನು[೧೦] ಸಾಕಷ್ಟು ಎಲೆಗಳಿಂದ ಆವೃತವಾಗಿರುವ ಎರಡು ದಾಲ್ಚೀನಿ ಮರಗಳನ್ನು ಹಡಗಿನಲ್ಲಿ ತುಂಬಿಸಿದನು (ಶಾಸ್ತ್ರಿ ೨೦೦೦:೭).

ಪೋರ್ಚುಗೀಸರನ್ನು ಕಂಡು ಸ್ಥಳೀಯರು ಬಹಳಷ್ಟು ಉಪಚಾರ ಮಾಡಿ ಆತ್ಮೀಯತೆಯಿಂದ ವರ್ತಿಸಿದರು. ಈ ರೀತಿಯ ಸ್ಥಳೀಯ ಹನ್ನೆರಡು ಮಂದಿಯ ತಂಡ ವಾಸ್ಕೋಡಗಾಮನ ತಂಡಕ್ಕೆ ಭಾರೀ ದೊಡ್ಡ ಕಬ್ಬಿನ ಕಟ್ಟೊಂದನ್ನು ನೀಡಿದರು. ಅವರು ತಮಗೆ ಹಡಗನ್ನು ವೀಕ್ಷಿಸಲು ಅವಕಾಶ ನೀಡಬೇಕೆಂದು ಕೇಳಿಕೊಂಡರು. ಆದರೆ ವಾಸ್ಕೋಡಗಾಮನಿಗೆ ಸಂದೇಹ ಉಂಟಾಗಿ ಆತ ಅವರಿಗೆ ಅವಕಾಶವನ್ನು ನೀಡಲಿಲ್ಲ. ಅನಂತರ ಮತ್ತೆರಡು ತಂಡ ಎರಡು ದೋಣಿಗಳಲ್ಲಿ ಆಗಮಿಸಿತು. ಆಗ ಪುನಃ ಪೋರ್ಚುಗೀಸರ ಆಕ್ರೋಶ ಹೆಚ್ಚಾಯಿತು. ಅದಾಗಲೇ ಅಲ್ಲಿದ್ದ ಹನ್ನೆರಡು ಮಂದಿಯ ತಂಡ ದೋಣಿಯಲ್ಲಿ ಬಂದವರಿಗೆ ಹಿಂತಿರುಗಿ ಹೋಗುವಂತೆ ಸಂಜ್ಞೆ ನೀಡಿದರು. ಅಂಜುದೀವ್ ಪ್ರದೇಶ ಫಲವಂತಿಕೆಯಿಂದ ಕೂಡಿರಲಿಲ್ಲ. ಜನರಿಗೆ ಇಲ್ಲಿ ಶಾಶ್ವತವಾಗಿ ವಾಸಿಸಲು ಸಾಧ್ಯವಿರಲಿಲ್ಲ. ಏಕೆಂದರೆ ಹವಾಮಾನ ಕೂಡಾ ಕಠಿಣವಾಗಿತ್ತು. ಗೇರುಸೊಪ್ಪೆಯ ರಾಜನ ಅಧೀನಕ್ಕೆ ಒಳಪಟ್ಟಿದ್ದ ಈ ದ್ವೀಪ ಸಮುದಾಯ ಪೋರ್ಚುಗೀಸರು ೧೫೦೫ ರಲ್ಲಿ ಕೋಠಿ-ಮಳಿಗೆ ನಿರ್ಮಿಸುವವರೆಗೆ 'ನೋ ಮ್ಯಾನ್ ಲ್ಯಾಂಡ್' ಎಂದು ಕರೆಯಲಾಗುತ್ತಿತ್ತು.

ವಾಸ್ಕೋಡಗಾಮನ ಪ್ರಥಮ ಪ್ರಯಾಣದ ನೌಕೆ ಹಿಂತಿರುಗುವ ಕೊನೆಯ ಹಂತದಲ್ಲಿ ಆತ ಮತಾಂತರದ ಮೂಲ ಉದ್ದೇಶವನ್ನೂ ಪೂರ್ತಿಗೊಳಿಸಿದ ಘಟನೆ ನಡೆಯಿತು. ಗ್ರೆನೆಡಾ ದೇಶದ ಯುವಕನೊಬ್ಬ ಭಾರತಕ್ಕೆ ಬಂದು ಬಿಜಾಪುರದ ಅದಿಲ್ ಷಾಹಿಯಡಿಯಲ್ಲಿ ಗುಲಾಮನಾಗಿದ್ದನು. ಆತನನ್ನು ಆದಿಲ್‌ಷಾಹಿಯು ವಾಸ್ಕೋಡಗಾಮನ ಬೇಹುಗಾರಿಕೆಗೆ ನಿಯೋಜಿಸಿದ್ದನು. ಯಹೂದಿಯಾಗಿದ್ದ ಈತ ಭಾರತಕ್ಕೆ ಬಂದು ಮುಸಲ್ಮಾನನಾಗಿ ಮತಾಂತರಗೊಂಡಿದ್ದನು (ವೈಟ್‌ವೇ ೧೯೯೯:೮೨). ಈತನನ್ನು ಅಂಜುದೀವ್‌ನಲ್ಲಿ ಸಂಧಿಸಿದ ವಾಸ್ಕೋಡಗಾಮನು ಆತನನ್ನು ಕ್ರೈಸ್ತ ಮತಕ್ಕೆ ಮತಾಂತರ ಮಾಡಿ 'ಗ್ಯಾಸ್ಪರ್ ದಿ ಇಂಡಿಯಾ' ಎಂದು ನಾಮಕರಣ ಮಾಡಿ ತನ್ನೊಂದಿಗೆ ಲಿಸ್ಬನ್‌ಗೆ ಹಡಗಿನಲ್ಲಿ ಕೊಂಡೊಯ್ಯುತ್ತಾನೆ. ಇದರೊಂದಿಗೆ ಸಾಂಕೇತಿಕವಾಗಿ ಮತಾಂತರದ ಪ್ರಕ್ರಿಯೆಯಲ್ಲೂ ವಾಸ್ಕೋಡಗಾಮನು ಯಶಸ್ವಿಯಾದನು.

ವಾಸ್ಕೋಡಗಾಮನ ಚೊಚ್ಚಲ ಪ್ರಯತ್ನದ ನೌಕಾಯಾನದ ಸಾಹಸಗಾಥೆ 'ಯುಗ ಪ್ರವರ್ತಕ ಆವಿಷ್ಕಾರ' ಎಂದು ಕೆ.ಎಂ. ಪಣಿಕ್ಕರ್‌ರವರು ವಿಶ್ಲೇಷಿಸಿದ್ದಾರೆ. ಈ ಘಟನೆಯ ಚಾರಿತ್ರಿಕ ಹಡಗು ಎರಡು ವರ್ಷಗಳ ನಂತರ ಮತ್ತೆ ಲಿಸ್ಬನ್ ನಗರದ ಬಂದರನ್ನು ತಲುಪಿದಾಗ ಪ್ರಾರಂಭದಲ್ಲಿ ಹೊರಟ ಮೂರು ಹಡಗಿನಲ್ಲಿ ಕೇವಲ ಎರಡು ಹಡಗುಗಳು ಮಾತ್ರ ಹಿಂತಿರುಗಿದವು. ಪ್ರಾರಂಭದಲ್ಲಿ ಹೊರಟ ಒಟ್ಟು ೧೭೦ ನಾವಿಕರು ಅನಂತರ ಸೇರ್ಪಡೆಗೊಂಡ ಓರ್ವ ಗುಜರಾತ್ ನಾವಿಕ ಮತ್ತು ೫ ಮಂದಿ ಕಲ್ಲಿಕೋಟೆಯ ಒತ್ತೆ ಸೆರೆಯಾಳುಗಳು ಹಾಗೂ ಕಾರವಾರದಲ್ಲಿ ಮತಾಂತರಗೊಂಡ ಗ್ರೆನೇಡಿಯನ್ ಪ್ರಜೆ ಹೀಗೆ ಒಟ್ಟು ೧೭೭ ಮಂದಿಯಲ್ಲಿ ಹಿಂತಿರುಗಿ ನಗರವನ್ನು ಸೇರಿದ್ದು ಕೇವಲ ೫೫ ಮಂದಿ ಮಾತ್ರ. ಅಂದರೆ ಮೂರನೇ ಎರಡು ಭಾಗ ಸಾಹಸಿಗಳನ್ನು ಬಲಿ ತೆಗೆದುಕೊಂಡ ಈ ಹೊಸ ಆವಿಷ್ಕಾರ ಭವಿಷ್ಯದಲ್ಲಿ ಕರಾವಳಿ ಕರ್ನಾಟಕ ಮಾತ್ರವಲ್ಲ, ಇಡೀ ಭಾರತದ ಚರಿತ್ರೆಯನ್ನೇ ಬದಲಿಸಿದ ವಿದ್ಯಮಾನವಾಗಿದೆ.

**ಪೋರ್ಚುಗೀಸರ ಎರಡನೆಯ ಮತ್ತು ಮೂರನೆಯ ನೌಕಾಯಾನ; ಸೈನಿಕ, ಧಾರ್ಮಿಕ ಮತ್ತು ವ್ಯಾಪಾರ ಮತ್ತು ವಾಣಿಜ್ಯೋದ್ಯಮಗಳ ವಿಶ್ಲೇಷಣೆ.**

ಸರಿಸುಮಾರು ನೂರು ವರ್ಷಗಳ ನಿರಂತರ ಪ್ರಯತ್ನದ ಭಾಗವಾಗಿ ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಪೋರ್ಚಗೀಸರು ಕಂಡು ಹಿಡಿದರು ಈಜಿಪ್ಟ್, ವೆನಿಷಿಯನ್ ಮತ್ತು ಅರಬ್ ವ್ಯಾಪಾರಿಗಳಿಂದ ಭಾರತದ ವಾಣಿಜ್ಯ ವ್ಯಾಪಾರಗಳನ್ನು ತನ್ನ ಕೈವಶ ಮಾಡಿಕೊಳ್ಳಬೇಕೆಂಬ ಪೋರ್ಚುಗೀಸರ ಮಹತ್ವಾಕಾಂಕ್ಷೆಯ ಯೋಜನೆಯು ೧೪೯೮ರಲ್ಲಿ ವಾಸ್ಕೋಡಗಾಮನ ಹಡಗುಗಳು ಕಲ್ಲಿಕೋಟೆಯಲ್ಲಿ ಇಳಿದಾಗ ಈಡೇರಿಸಲ್ಪಟ್ಟಿತ್ತು. ಕಲ್ಲಿಕೋಟೆಯಲ್ಲಿ ಅವನ ತಂಡ ನಡೆಸಿದ ಅಕ್ರಮಣಕಾರಿ ಧೋರಣೆಗಳು ಹಾಗೂ ಮರು ಪ್ರಯಾಣದ ಸಂದರ್ಭದಲ್ಲಿ ಕರಾವಳಿ ಕರ್ನಾಟಕದಲ್ಲಿ ತೋರಿದ ವ್ಯಾಪಾರಿ ಮನೋಭಾವದ ಆಕ್ರಮಣಕಾರಿ ಘಟನೆಗಳನ್ನು ವಿವರಿಸಲಾಗಿದೆ. ಈ ನಿರ್ಣಾಯಕ ಯಶಸ್ಸನ್ನು ಸಂಪೂರ್ಣವಾಗಿ ಅನುಭವಿಸುವ ಉದ್ದೇಶದಿಂದ 'ಪೋರ್ಚುಗಲ್ ರಾಜಪ್ರಭುತ್ವ' ಪೂರ್ವದ ದೇಶಗಳ ಬಗ್ಗೆ ನಿರ್ದಿಷ್ಟ ಧೋರಣೆಯನ್ನು ರೂಪಿಸಿತು. ಈ ಧೋರಣೆಯ ಒಟ್ಟಾರೆ ದೃಷ್ಟಿಕೋನ ಪೂರ್ವರಾಷ್ಟ್ರಗಳ ವ್ಯಾಪಾರ–ವ್ಯವಹಾರ ಸರಿಯಾದ ರೀತಿಯಲ್ಲಿ ಸಂರಕ್ಷಿಸಲು ಶಾಂತಿಯ ಸೂತ್ರದ ಬದಲು ಸೈನ್ಯದ ಅಗತ್ಯವಿದೆ ಎಂದು ಪ್ರತಿಪಾದಿಸಿತು. ಇದೇ ರೀತಿ ಹೊಸ ಪ್ರದೇಶದ ಜನರನ್ನು ಕ್ರೈಸ್ತ ಮತಾವಲಂಬಿಗಳನ್ನಾಗಿಸಲು ಪೋರ್ಚುಗಲ್ ಪ್ರಭುತ್ವ ಕ್ರೈಸ್ತ ಧರ್ಮಗುರುಗಳನ್ನು ಹಡಗಿನಲ್ಲಿ ಕಳುಹಿಸಬೇಕೆಂದು ನಿರ್ಧರಿಸಿತು. ಆ ಪ್ರಕಾರ ಮಾರ್ಚ್ ೯, ೧೫೦೦ರಲ್ಲಿ 'ಪೆಡ್ರೋ ಅಲ್ವರೀಸ್ ಕ್ಯಾಬ್ರೆಲ್' ಕಮಾಂಡರ್ ಆಗಿರುವ ಎರಡನೆಯ ನೌಕಾಯಾನದಲ್ಲಿ ೧೩ ದೊಡ್ಡ ಗಾತ್ರದ ಹಡಗುಗಳಿದ್ದವು. ೧೨೦೦ ಯುದ್ಧ ಸೈನಿಕರೊಂದಿಗೆ ೮ ಮಂದಿ ಫ್ರಾನ್ಸಿಸ್‌ಯನ್‌ಗಳೂ[೧೧.] ೮ ಮಂದಿ ಧರ್ಮಗುರುಗಳೂ ಮತ್ತು ಓರ್ವ 'ವಿಕಾರ್'[೧೨] ಕೂಡಾ ಇದ್ದರು. ಈ ನೌಕಾಯಾನ ಖಡ್ಗದ ಅಲಗು, ತಕ್ಕಡಿ ಮತ್ತು ಕ್ರೈಸ್ತ ಧರ್ಮದ ಸಂಕೇತವಾದ ಶಿಲುಬೆಯ ಸಮ್ಮಿಶ್ರಣದೊಂದಿಗೆ ಭಾರತಕ್ಕೆ ಪ್ರಯಾಣ ಬೆಳೆಸಿತು. ಆದುದರಿಂದ ಈ ಎರಡನೇ ನೌಕಾಯಾನದ ಪೂರ್ಣ ಪ್ರಮಾಣದ ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಸಂಘರ್ಷಗಳ ಪ್ರಕ್ರಿಯೆಗೆ ನಾಂದಿ ಹಾಡಿತು. ಈ ನೌಕಾಯಾನ ಭಾರತದ ಪಶ್ಚಿಮ ಕರಾವಳಿಗೆ ಬಂದಿಳಿದು ವ್ಯಾಪಾರ ಮತ್ತು ಧಾರ್ಮಿಕತೆಗಾಗಿ ನೇರ ಸೈನಿಕ ಕಾರ್ಯಾಚರಣೆಗೆ

ಇಳಿಯದೆ ಕರಾವಳಿ ಕರ್ನಾಟಕ ಮತ್ತು ಕಲ್ಲಿಕೋಟೆಯ ಜಾಮೋರಿನ್‌ಗಳಿಗೆ ಪರೋಕ್ಷವಾಗಿ ಪೋರ್ಚುಗಲ್ಲಿನೊಂದಿಗೆ ಸಹಕರಿಸಬೇಕೆಂಬ ಸಂದೇಶವನ್ನು ರವಾನಿಸಿತು.

ಇದೇ ಸ್ವರೂಪದಲ್ಲಿ ಪೋರ್ಚುಗೀಸರ ಮೂರನೆಯ ನೌಕಾಯಾನ ಮಾರ್ಚ್ ತಿಂಗಳ ೧೫೦೧ ರಲ್ಲಿ ಪ್ರಾರಂಭವಾಯಿತು. ಇದರಲ್ಲಿ ಒಂದು ದೊಡ್ಡ ಹಡಗು, ನಾಲ್ಕು ಸಾಧಾರಣ ಗಾತ್ರದ ಹಡಗುಗಳು ಇದ್ದವು. ಇದರ ಕಮಾಂಡರ್ ಆಗಿ ಜಾವ್ರೋ ಡಿ'ನೋವಾ ಇದ್ದನು. ಭಾರತಕ್ಕೆ ನಡೆಸುವ ಈ ನೌಕಾಯಾನದಿಂದ ಲಭಿಸುವ ಅಪಾರ ಆದಾಯವನ್ನು ಪರಿಗಣಿಸಿದ ಪೋರ್ಚುಗಲ್ ದೊರೆ ನಿಯಮಿತವಾಗಿ ಪ್ರತೀ ವರ್ಷ ನೌಕಾಯಾನ ತಂಡವನ್ನು ರೂಪಿಸಿ ಭಾರತಕ್ಕೆ ಕಳುಹಿಸಬೇಕೆಂದು ನಿರ್ಧರಿಸಿದನು (ಶಾಸ್ತ್ರಿ ೨೦೦೦:೩).

**ನಾಲ್ಕನೆಯ ನೌಕಾಯಾನದಲ್ಲಿ ವಾಸ್ಕೋಡಗಾಮ ಮತ್ತು ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ-ನೇರ ಸಂಘರ್ಷದ ಹೊಸ ಮಜಲು.**

ಫೆಬ್ರವರಿ ತಿಂಗಳ ೧೫೦೨ ರಲ್ಲಿ ಮತ್ತೆ ಎರಡನೇ ಬಾರಿಗೆ ವಾಸ್ಕೋಡಗಾಮ ತನ್ನದೇ ಕಮಾಂಡರ್ ಗಿರಿಯಲ್ಲಿ ಇಪ್ಪತ್ತು ಹಡಗುಗಳ ಬೃಹತ್ ತಂಡದೊಂದಿಗೆ ಭಾರತಕ್ಕೆ ಪ್ರಯಾಣ ಬೆಳೆಸಿದನು. ಇದು ಪೋರ್ಚುಗಲ್‌ನ ನಾಲ್ಕನೆಯ ನೌಕಾ ತಂಡವಾಗಿತ್ತು. ಮತ್ತೊಂದೆಡೆಯಲ್ಲಿ ಆತನ ಸಹೋದರ ಈಸ್ಟ್ ಪಾವೋ ಡಿ'ಗಾಮನು ಕೂಡ ಐದು ಹಡಗುಗಳೊಂದಿಗೆ ಎಪ್ರಿಲ್ ತಿಂಗಳಲ್ಲಿ ಭಾರತಕ್ಕೆ ಪ್ರಯಾಣ ಬೆಳೆಸಿದನು. ಇಬ್ಬರು ಸಹೋದರರು ಉತ್ತರ ಕನ್ನಡದ ಅಂಜುದೀವ್ ದ್ವೀಪದಲ್ಲಿ ಪರಸ್ಪರ ಸಂಧಿಸಿದರು. ಪೋರ್ಚುಗಲ್ ರಾಜನು ವಾಸ್ಕೋಡಗಾಮನಿಗೆ ಈ ಪ್ರಯಾಣದಲ್ಲಿ ಎರಡು ಪ್ರಮುಖ ನಿರ್ದೇಶನಗಳನ್ನು ನೀಡಿದ್ದನು. ಅವುಗಳೆಂದರೆ:-

ಅ. ಭಾರತ-ಪರ್ಷಿಯನ್ ಕೊಲ್ಲಿ ಮತ್ತು ಕೆಂಪು ಸಮುದ್ರಗಳನ್ನು ಕೇಂದ್ರೀಕರಿಸಿ ನಡೆಯುತ್ತಿದ್ದ ಮುಸ್ಲಿಂ ಸಮುದಾಯದ ವ್ಯಾಪಾರ, ವ್ಯವಹಾರಗಳನ್ನು ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ಸದೆ ಬಡಿಯುವುದು.

ಬ. ಪಾಶ್ಚಾತ್ಯ ದೇಶಗಳೊಂದಿಗೆ ಭಾರತದ ಮೂಲಕ ನಡೆಯುತ್ತಿದ್ದ ವ್ಯಾಪಾರ-ವ್ಯವಹಾರಗಳನ್ನು ಪೋರ್ಚುಗಲ್ ಕೇಂದ್ರೀಕರಿಸಿ ನಡೆಯುವಂತೆ ತಿರುಗಿಸಲು ಪ್ರಯತ್ನ ಮಾಡುವುದು(ಶಾಸ್ತ್ರಿ ೨೦೦೦:೩).

ಈ ಎರಡು ನಿರ್ದೇಶನಗಳ ಅನುಷ್ಠಾನದ ಭಾಗವಾಗಿ ಮುಸ್ಲಿಂ ವರ್ತಕರು, ಅರಬ್ಬೀ ಸಮುದ್ರದಲ್ಲಿ ಚಲಾಯಿಸುತ್ತಿದ್ದ ವ್ಯಾಪಾರದ ಹಡಗುಗಳ ಮೇಲೆ ದಾಳಿ ನಡೆಸಿ ಅದರಲ್ಲಿರುವ ಸರಕು ಸರಂಜಾಮುಗಳನ್ನು ಕೊಳ್ಳೆ ಹೊಡೆಯುವುದು, ಮುಟ್ಟುಗೋಲು ಹಾಕುವುದು, ಅನಿವಾರ್ಯವಾದರೆ ಸೈನಿಕ ಕಾರ್ಯಾಚರಣೆ ನಡೆಸಿ ಹಡಗಿನ ಸಿಬ್ಬಂದಿಗಳನ್ನು ಹತ್ಯೆ ಮಾಡಿ ಹಡಗುಗಳನ್ನು ಸುಡುವುದು ಇಂತಹ ಹಿಂಸಾತ್ಮಕ ಆಕ್ರಮಣಕಾರಿ ಪ್ರಕ್ರಿಯೆಗೆ ನಾಂದಿ ಹಾಡಲಾಯಿತು. ಪೋರ್ಚುಗೀಸರಿಂದ ಅನುಮತಿ ಪಡೆದು ಸುಂಕ ಪಾವತಿಸಿ ಹಡಗು ಸಂಚಾರ ನಡೆಸುವ ಕ್ರಮ ಚಾಲ್ತಿಗೆ ಬಂತು[೧೩]. ಈ ಯೋಜನೆಯ ಭಾಗವಾಗಿ ವಿನ್ಸೆಂಟ್ ಸೋದ್ರೆಯ ನೇತೃತ್ವದಲ್ಲಿ ಆರು ದೊಡ್ಡ ಹಡಗುಗಳು ಮತ್ತು ಒಂದು ದೋಣಿ ಕರಾವಳಿ ತೀರದಲ್ಲಿ ಗಸ್ತು ನಡೆಸುವ ಜವಾಬ್ದಾರಿಗೆ ನಿಯುಕ್ತಿಗೊಳಿಸಲಾಯಿತು(ಶಾಸ್ತ್ರಿ ೨೦೦೦:೪).

ಪೋರ್ಚುಗಲ್ ರಾಜಪ್ರಭುತ್ವ ೧೫೦೩ ಮತ್ತು ೧೫೦೪ರಲ್ಲಿಯೂ ಹೊಸ ನೌಕಾದಂಡನ್ನು ಭಾರತಕ್ಕೆ ಕಳುಹಿಸಿಕೊಟ್ಟಿತ್ತು. ಪ್ರತೀ ವರ್ಷ ನೌಕಾದಂಡನ್ನು ಕಳುಹಿಸಿಕೊಡುವ ಬದಲು ೧೫೦೫ರಿಂದ ಮೂರು ವರ್ಷದ ಅವಧಿಗೆ ವೈಸ್‌ರಾಯ್‌ರನ್ನು ನೇಮಿಸಿ ಭಾರತ, ಮಲಯಾ, ಜಾವಾ ಮತ್ತು ಶ್ರೀಲಂಕಾದ ವ್ಯಾಪಾರ-ವ್ಯವಹಾರಗಳನ್ನು ನಿಯಂತ್ರಿಸುವ ಸಾರ್ವಭೌಮ ಅಧಿಕಾರದ ಹುದ್ದೆಯನ್ನು ನಿರ್ಮಿಸಲಾಯಿತು. ಈ ಹಿನ್ನೆಲೆಯಲ್ಲಿ 'ಡೋಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡಿಯಾ' ಪ್ರಪ್ರಥಮ ವೈಸ್‌ರಾಯ್‌ರಾಗಿ ನಿಯುಕ್ತಿಗೊಂಡನು.

ಆಫ್ರಿಕನ್ ತೀರದಲ್ಲಿ ಪೋರ್ಚುಗೀಸರ ಅಧಿಕಾರ-ಪ್ರಾಬಲ್ಯವನ್ನು ಭದ್ರವಾಗಿ ನೆಲೆ ನಿಲ್ಲಿಸಿದ ವೈಸ್‌ರಾಯ್ ಡೋಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡಿಯಾ ಮುಂದೆ ತನ್ನ ನಿರ್ದಿಷ್ಟ ಗುರಿಯಾದ ಭಾರತದತ್ತ ಪ್ರಯಾಣ ಬೆಳೆಸಿದನು. ಈತನ ಅಧಿನಾಯಕತ್ವದಡಿಯಲ್ಲಿ ೫ ದೊಡ್ಡ ಹಡಗುಗಳಲ್ಲಿ ೧೫೦೦ ಸೈನಿಕರು ಇದ್ದರು. ಮಲಬಾರ್ ತೀರದಲ್ಲಿ ಇಳಿಯುವ ಮೊದಲು ಹೊನ್ನಾವರದ ರಾಜ ಮತ್ತು ಕಣ್ಣಾನೂರಿನ ರಾಜನನ್ನು ಶಿಕ್ಷಿಸಿ ಮುಂದೆ ಆತನ ಸಾಮಂತಶಾಹಿ ಆಳ್ವಿಕೆಯ ರಾಜಸಿಂಹಾಸನವಾದ ಕೊಚ್ಚಿನ್‌ಗೆ ಪ್ರಯಾಣ ಬೆಳೆಸಿದನು (ಮೂರ್ಸ್ ಸ್ಟೈನ್ ೧೮೯೭:೩೫).

ಡೋಮ್ ಫ್ರಾನ್ಸಿಸ್ಕೋ ಡಿ ಅಲ್ಮೇಡಿಯಾ ೪೫ ವರ್ಷ ಪ್ರಾಯ ಆಗಿದ್ದು ಆತನೊಂದಿಗೆ ಆತನ ಮಗ 'ಡಿ ಲಾರೆನ್ಸ್' ಕೂಡಾ ಭಾರತಕ್ಕೆ ಪ್ರಯಾಣಿಸಿದ್ದು ಇವರು ಕಿಲ್ವ, ಅಂಜುದೀವ್, ಕಣ್ಣಾನೂರು ಮತ್ತು ಕೊಚ್ಚಿನ್‌ಗಳಲ್ಲಿ ವ್ಯಾಪಾರದ ಕೋಠಿ-ಮಳಿಗೆಗಳನ್ನು ನಿರ್ಮಿಸಬೇಕೆಂಬ ರಾಜಾಜ್ಞೆಯನ್ನು ಹೊಂದಿದ್ದನು. ಆ ಪ್ರಕಾರ ೧೫೦೫ ರ ಸಪ್ಟೆಂಬರ್ ೧೪ ರಂದು ಅಂಜುದೀವ್ ದ್ವೀಪದಲ್ಲಿ ಅಲ್ಮೇಡಿಯಾ ನೇತೃತ್ವದ ವ್ಯಾಪಾರಿ, ಸೈನಿಕ ಮತ್ತು ಧಾರ್ಮಿಕ ಉದ್ದೇಶಗಳ ಹಡಗು ಬಂದಿಳಿಯಿತು (ವೈಟ್‌ವೇ ೧೮೯೯:೧೦೪).

ಗೇರುಸೊಪ್ಪೆ, ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟ ಒಂದು ಪ್ರಾಂತ್ಯವಾಗಿದ್ದು, ಕಾರವಾರ, ಹೊನ್ನಾವರ ಮತ್ತು ಮಿರ್ಜಾನ ಬಂದರುಗಳು ಈ ರಾಜರ ಆಡಳಿತಕ್ಕೆ ಒಳಪಟ್ಟಿತ್ತು. ೧೫೦೨ರಲ್ಲಿ ಎರಡನೇ ಬಾರಿಗೆ ಪೋರ್ಚ್‌ಗೀಸ್ ನೌಕಾಯಾನದ ಹಡಗುಗಳ ಕ್ಯಾಪ್ಟನ್ ಆಗಿ ಭಾರತಕ್ಕೆ ಬಂದಿದ್ದ ವಾಸ್ಕೋಡಗಾಮನು ಹೊನ್ನಾವರ ಬಂದರಿನಲ್ಲಿ ಬಂದಿಳಿದನು. ಆ ಸಮಯದಲ್ಲಿ ಹೊನ್ನಾವರ ಬಂದರಿನಲ್ಲಿ ಕಡಲ್ಗಳ್ಳತನ ವೃತ್ತಿಯಲ್ಲಿ ನಿರತನಾಗಿದ್ದ ತಿಮ್ಮಯ್ಯ[೧೪](ತಿಮೋಜ)ನ ಹಡಗುಗಳನ್ನು ಮುಸ್ಲಿಂ ವ್ಯಾಪಾರಿಯ ಹಡಗುಗಳೆಂದು ಭಾವಿಸಿ ವಾಸ್ಕೋಡಗಾಮನು ಆತನನ್ನು ಬೆನ್ನಟ್ಟಿದನು. ವಾಸ್ಕೋಡಗಾಮನ ಸಹೋದರ ಈಸ್ಟಾವೋ ಡಿ'ಗಾಮನು ತಿಮ್ಮಯ್ಯನನ್ನು ಬಹಳ ದೂರದವರೆಗೆ ನದಿಯಲ್ಲಿ ಅಟ್ಟಾಡಿಸಿದಾಗ, ಇದನ್ನು ಗಮನಿಸಿದ ಸ್ಥಳೀಯರು ಪಕ್ಕದ ಗುಡ್ಡಗಳ ಮೇಲೆ ಅವಿತುಕೊಂಡು ಬಿಲ್ಲು ಬಾಣಗಳಿಂದ ಮತ್ತು ಕಲ್ಲುಗಳಿಂದ ಹೊಡೆದರು. ಆಗ ಅನಿವಾರ್ಯವಾಗಿ ಈಸ್ಟಾವೋ ಡಿ'ಗಾಮನು ತನ್ನ ತಂಡದೊಂದಿಗೆ ಹಿಂತಿರುಗಿ ಬಂದು ಹೊನ್ನಾವರ ನಗರಕ್ಕೆ ಬೆಂಕಿಕೊಟ್ಟು, ಅಲ್ಲಿ ಲಂಗರು ಹಾಕಿದ ದೋಣಿಗಳಿಗೆ ಕೂಡಾ ಬೆಂಕಿಕೊಟ್ಟು ನಾಶ ಮಾಡಿ ಭಟ್ಕಳದತ್ತ ಮುನ್ನಡೆದನು. ಈ ಘಟನೆ ಮುಂದೆ ಭಾರತದಲ್ಲಿ ಪೋರ್ಚುಗೀಸ್ ಸಾಮ್ರಾಜ್ಯದ ನಿರ್ಮಾಣ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸಿದ ಗೇರುಸೊಪ್ಪೆಯ ರಾಯಭಾರಿಯಾಗಿಯೂ ಕಾರ್ಯಾಚರಿಸಿದ ಕಡಲ್ಗಳ್ಳ ವೃತ್ತಿಯಲ್ಲಿ ನಿರತನಾಗಿದ್ದ ತಿಮ್ಮಯ್ಯ ಮತ್ತು ವಾಸ್ಕೋಡಗಾಮನ ಪ್ರಥಮ ಮುಖಾಮುಖಿಯಾಗಿದೆ. ತಿಮ್ಮಯ್ಯ ದೋಚಿದ ಸರಕು ಸರಂಜಾಮುಗಳಲ್ಲಿ ಅರ್ಧಭಾಗ ಗೇರು ಸೊಪ್ಪೆಯ

ರಾಜನಿಗೆ ಸಲ್ಲುತ್ತಿತ್ತೆಂದು ಬಿ.ಎಸ್.ಶಾಸ್ತ್ರಿ ಉಲ್ಲೇಖಿಸಿರುತ್ತಾರೆ. ರಾಯಭಾರಿ ತಿಮ್ಮಯ್ಯನ ಪಾತ್ರ ಮತ್ತು ಸಲಹೆಯಂತೆ ಪೋರ್ಚ್‌ಗೀಸ್ ಭಾರತದ ಸಾಮ್ರಾಜ್ಯವು ಗೋವಾದಲ್ಲಿ ಅಸ್ತಿತ್ವಕ್ಕೆ ತರುವುದರ ಹಿಂದೆ ಗೇರುಸೊಪ್ಪೆಯ ಪ್ರಾಂತ್ಯದ ಸಹಾಯ ಸಹಕಾರ ನಿರ್ಣಾಯಕವಾಗಿದೆ.

ಸಮಕಾಲೀನ ಚರಿತ್ರಕಾರರಾದ ಕೊರಿಯಾ, ಬಾರೋಸ್, ಕಾಸ್ಟಂಕಾರಕರ ದಾಖಲೆಗಳ ಪ್ರಕಾರ ಗೇರುಸೊಪ್ಪೆ ಮತ್ತು ಡೋಮ್ ಫ್ರಾನ್ಸಿಸ್ಕೋ ಡಿ' ಅಲ್ಮೇಡಿಯಾ (ವೈಸ್‌ರಾಯ್) ಇವರ ಮಧ್ಯೆ ಅತ್ಯುತ್ತಮ ಶಾಂತಿ ಒಪ್ಪಂದದ ಶಕೆ ಪ್ರಾರಂಭವಾಯಿತು. ಗೇರುಸೊಪ್ಪೆಯ ರಾಜ ಪೋರ್ಚುಗೀಸರಿಗೆ ಮಿರ್ಜಾನ ಕೋಟೆಯನ್ನು ನೀಡಿದನು. ಈ ಎಲ್ಲಾ ಮಾತುಕತೆಗಳಲ್ಲಿ ತಿಮ್ಮಯ್ಯನೇ ಪ್ರಮುಖ ರಾಯಭಾರಿಯಾಗಿ ನೇಮಿಸಲ್ಪಟ್ಟು ಒಪ್ಪಂದವನ್ನು ಮಾಡಿ ಮಹತ್ತ್ವದ ಪಾತ್ರ ನಿರ್ವಹಿಸಿದನು. ರಾಯಭಾರಿಯಾಗಿ ನೇಮಕಗೊಂಡ ಮೇಲೆ ತಿಮ್ಮಯ್ಯ ಮತ್ತು ಪೋರ್ಚುಗೀಸರ ಮಧ್ಯೆ ಬಾಂಧವ್ಯ ಮತ್ತಷ್ಟೂ ಬೆಳೆಯಿತು. ಪೋರ್ಚುಗೀಸರು 'ಮುಸ್ಲಿಂ ವರ್ತಕರ ದಮನ'ದ ಮೂಲಭೂತ ಕಾರ್ಯ ಯೋಜನೆಗೆ ತಿಮ್ಮಯ್ಯನ ಸಹಾಯವನ್ನು ಸಮರ್ಥವಾಗಿ ಉಪಯೋಗಿಸಿಕೊಂಡರು. ೧೫೧೦ ರಲ್ಲಿ ಅಲ್ಬ್‌ಕರ್ಕ್ ಕೆಂಪು ಸಮುದ್ರದ ತೀರ ದೇಶಗಳ ಮೇಲೆ ದಾಳಿ ಮಾಡುವ ಉದ್ದೇಶದಿಂದ ತರಾತುರಿಯಲ್ಲಿ ಕಾರವಾರವನ್ನು ಹಾದು ಹೋಗುವ ಸಂದರ್ಭದಲ್ಲಿ ತಿಮ್ಮಯ್ಯನು ಅಲ್ಬುಕರ್ಕ್‌ನನ್ನು ಭೇಟಿ ಮಾಡಿದನು. ಆತ ಅಲ್ಬುಕರ್ಕ್‌ನಲ್ಲಿ ಗೋವಾದ ಮೇಲೆ ದಾಳಿ ಮಾಡಬೇಕೆಂಬ ಸಲಹೆ ನೀಡಿದನು. ಬಿಜಾಪುರದ ಆದಿಲ್ ಷಾಹಿ ರಾಜನ ಸೈನಿಕ ವ್ಯವಸ್ಥೆಯ[೧೫] ಬಗ್ಗೆ ಮಾಹಿತಿಗಳನ್ನು ನೀಡುವ ಮೂಲಕ ದಾಳಿಗೆ ಸರ್ವರೀತಿಯಲ್ಲಿ ಗೇರುಸೊಪ್ಪೆ ಸಹಕರಿಸುವ ಮಹತ್ವದ ಯೋಜನೆಯನ್ನು ಅಲ್ಬುಕರ್ಕ್‌ನ ಮುಂದಿಟ್ಟನು. ತಿಮ್ಮಯ್ಯನ ಮುಕ್ತ ಸಲಹೆ ಸೂಚನೆಗಳಿಗೆ ಅಲ್ಬುಕರ್ಕ್ ಅಭಿನಂದನೆ ಸಲ್ಲಿಸಿ ಸೂಕ್ತ ಸಮಯದಲ್ಲಿ ತೀರ್ಮಾನ ಕೈಗೊಳ್ಳುವುದಾಗಿ ಹೇಳಿದನು. ಆ ಪ್ರಕಾರ ೧೫೧೦ ರ ಮಾರ್ಚ್ ಒಂದರಂದು ದಾಳಿಗೆ ಸಿದ್ದತೆ ನಡೆಸಿ ಮಾರ್ಚ್ ಮೂರಕ್ಕೆ ಗೋವಾವನ್ನು ವಶಪಡಿಸುವ ಮೂಲಕ ಭಾರತದಲ್ಲಿ ಪೋರ್ಚುಗೀಸ್ ರಾಜನ ಆಡಳಿತದ ಭದ್ರ ಸಿಂಹಾಸನ ನೆಲೆಯೂರಲು ಕರಾವಳಿ ಕರ್ನಾಟಕದ ಗೇರುಸೊಪ್ಪೆ ಕಾರಣವಾಯಿತು. ಅಲ್ಬುಕರ್ಕ್‌ನು ಗೋವಾ ವಶಪಡಿಸಿಕೊಂಡ ಮೇಲೆ ಜನರಲ್ ತಿಮ್ಮಯ್ಯನನ್ನು ಪ್ರಪ್ರಥಮ 'ಗೋವಾದ ಗವರ್ನರ್' ಆಗಿ ನೇಮಿಸಿದನು.

ಗೇರುಸೊಪ್ಪೆ ಮತ್ತು ಪೋರ್ಚುಗೀಸರ ಸಂಬಂಧ ಅನಂತರದ ದಿನಗಳಲ್ಲಿ ಸೌಹಾರ್ದಯುತವಾಗಿ ಬೆಳೆದು ಬಂತು. ಪೋರ್ಚುಗೀಸರು ಪ್ರಾರಂಭದಲ್ಲಿ ಉಗ್ರವಾಗಿ ದಂಡಿಸಿದರೂ ಗೇರುಸೊಪ್ಪೆಯ ಆಡಳಿತ ಕಪ್ಪ ಕಾಣಿಕೆಗಳೊಂದಿಗೆ ಸೌಹಾರ್ದಯುತವಾಗಿ ಇರಲು ಅಪೇಕ್ಷಿಸಿದರು. ಪೋರ್ಚುಗಲ್ ದೊರೆಯಿಂದ ಕಿಲ್ವ, ಅಂಜುದೀವ್, ಕಣ್ಣಾನೂರು ಮತ್ತು ಕೊಚ್ಚಿನ್‌ಗಳಲ್ಲಿ ವ್ಯಾಪಾರದ ಕೋಠಿಗಳನ್ನು ಕಟ್ಟಬೇಕೆಂಬ ರಾಜಾಜ್ಞೆಯನುಸಾರ ೧೫೦೫ ರ ಸಪ್ಟೆಂಬರ್ ೧೪ ರಂದು ಅಂಜುದೀವ್ ದ್ವೀಪದಲ್ಲಿ ಬಂದಿಳಿದ ಡೋಮ್ ಫ್ರಾನ್ಸಿಸ್ಕೋ ಡಿ' ಅಲ್ಮೇಡಿಯಾ (ವೈಸ್‌ರಾಯ್) ಅಲ್ಲಿ ಕೋಠಿ ಮಳಿಗೆ ಕಟ್ಟುವ ಕಾಮಗಾರಿ ಪ್ರಾರಂಭಿಸಿದನು. ಆತನು ಹೊನ್ನಾವರದಲ್ಲಿದ್ದ ಗೇರುಸೊಪ್ಪೆಯ ಅಧಿಕಾರಿಗಳ ಅನುಮತಿಗಾಗಿ ಮಾತುಕತೆ ಪ್ರಾರಂಭಿಸಿದನು. ಈ ಬಗ್ಗೆ ಸ್ಪಷ್ಟ ತೀರ್ಮಾನಕ್ಕೆ ಅಲ್ಲಿ ಬರಲಾಗಲಿಲ್ಲ. ಏತನ್ಮಧ್ಯೆ ಪರ್ಷಿಯಾದಿಂದ ತರಲಾದ ೧೯ ಕುದುರೆಗಳನ್ನು ಹೊಂದಿದ್ದ ವ್ಯಾಪಾರಿ ಹಡಗೊಂದು ಅಂಜುದೀವ್‌ನ ದಕ್ಷಿಣದ ಮುಖ್ಯ

ಸ್ಥಳದಲ್ಲಿ ಇಳಿಸುತ್ತಿರುವ ಸಂದರ್ಭದಲ್ಲಿ ಪೋರ್ಚುಗೀಸರು ದಾಳಿ ನಡೆಸಲು ಮುನ್ನಡೆಯುತ್ತಿರುವುದನ್ನು ಗಮನಿಸಿದ ಆ ಹಡಗಿನ ಸಿಬ್ಬಂದಿಗಳು ಕುದುರೆಯನ್ನು ಅಲ್ಲೇ ಬಿಟ್ಟು ಪಲಾಯನ ಗೈದರು. ಆ ಸ್ಥಳಕ್ಕೆ ಬಂದಂತಹ ಪೋರ್ಚುಗೀಸರು ಕುದುರೆಗಳನ್ನು ಹಡಗಿನಿಂದ ಬಿಡಿಸಿ ಅಲ್ಲೇ ಕಟ್ಟಿ ಹಾಕಿದರು. ಆ ಸಮಯದಲ್ಲಿ ಸಮುದ್ರದಲ್ಲಿ ಉದ್ಭವಿಸಿದ ಭೀಕರ ಬಿರುಗಾಳಿಯಿಂದ ಚೆಲ್ಲಾಪಿಲ್ಲಿಯಾದ ಪೋರ್ಚುಗೀಸರು ಅನಂತರ ಹರಸಾಹಸ ಮಾಡಿ ತಮ್ಮ ಲಂಗರು ಹಾಕಿದ ಮೂಲ ಹಡಗುಗಳಿಗೆ ಸೇರಿಕೊಂಡರು. ಇದನ್ನು ಗಮನಿಸಿದ ಕುದುರೆಗಳ ಮಾಲಕರು ಪುನಃ ಅಲ್ಲಿಗೆ ಬಂದು ತಮ್ಮ ಕುದುರೆಗಳನ್ನು ಬಿಡಿಸಿಕೊಂಡು ಹೋದರು. ಸಮುದ್ರ ಶಾಂತವಾದ ಮೇಲೆ ಹಿಂತಿರುಗಿ ಬಂದಂತಹ ಪೋರ್ಚುಗೀಸರು ತಾವು ಮುಟ್ಟುಗೋಲು ಹಾಕಿರುವ ಕುದುರೆಗಳು ಇಲ್ಲದಿರುವುದನ್ನು ಕಂಡು ಕೆಂಡಾಮಂಡಲವಾಗಿ ಗೇರುಸೊಪ್ಪೆಯ ರಾಜನ ಅಧೀನದಲ್ಲಿ ಈ ಘಟನೆ ನಡೆದುದನ್ನು ಪ್ರತಿಭಟಿಸಿದರು. ಆಗ ಗೇರುಸೊಪ್ಪೆಯ ರಾಜ ಕುದುರೆಗಳ ಮೌಲ್ಯವನ್ನು ಪಾವತಿಸುವ ಶಾಂತಿ ಸೂತ್ರವನ್ನು ಮುಂದಿಟ್ಟಾಗ ಅದನ್ನು ಸಾರಾಸಗಟಾಗಿ ಪೋರ್ಚುಗೀಸರು ತಿರಸ್ಕರಿಸಿದರು. ಪ್ರತಿಯಾಗಿ ಹೊನ್ನಾವರದ ನದಿಯ ಇಕ್ಕೆಲಗಳಲ್ಲಿ ಲಂಗರು ಹಾಕಿದ ನೂರಾರು ಹಡಗುಗಳಿಗೆ ಬೆಂಕಿಕೊಟ್ಟು ನಾಶ ಮಾಡಿದರು. ಇದಾದ ನಂತರ ಮಾತ್ರವೇ ಅಂದರೆ ಅಕ್ಟೋಬರ್ ೧೬ ರಂದು ಗೇರುಸೊಪ್ಪೆಯ ರಾಜ ಪಾವತಿ ಮಾಡಲು ಉದ್ದೇಶಿಸಿದ ಕುದುರೆಗಳ ಮೌಲ್ಯವನ್ನು ಸ್ವೀಕರಿಸಿದರು. ಪೋರ್ಚುಗೀಸರು ಮತ್ತು ಗೇರುಸೊಪ್ಪೆಯ ನಡುವೆ ಶಾಂತಿ ಒಪ್ಪಂದ ಏರ್ಪಟ್ಟಿತು. ಇದರಲ್ಲಿ ಗೇರು ಸೊಪ್ಪೆಯ ರಾಯಭಾರಿಯಾಗಿ ತಿಮ್ಮಯ್ಯ ಭಾಗವಹಿಸಿದ್ದನು. ವಿಜಯನಗರಕ್ಕೆ ಸಾಗಿಸಲ್ಪಡುತ್ತಿದ್ದ ಕುದುರೆಗಳ ಮುಖ್ಯ ಮೇಲ್ವಿಚಾರಕನಾಗಿ ತಿಮ್ಮಯ್ಯನು ಕಾರ್ಯ ನಿರ್ವಹಿಸುತ್ತಿದ್ದನು. ಈ ಒಪ್ಪಂದದ ತರುವಾಯ ತಿಮ್ಮಯ್ಯನು ಭಾರತದಲ್ಲಿ ಪೋರ್ಚುಗೀಸರ ಅತ್ಯಂತ ನಂಬಿಕೆಯ ವ್ಯಕ್ತಿಯಾಗಿ ಬೆಳಕಿಗೆ ಬಂದನು (ಶಾಸ್ತ್ರಿ ೨೦೦೦:೩೫).

**ವಾಣಿಜ್ಯೋದ್ಯಮಕ್ಕಾಗಿ ಭಟ್ಕಳ ಬಂದರಿನಲ್ಲಿ ಮುಂದುವರಿದ ಸಂಘರ್ಷ: ಸ್ಥಳೀಯ ವರ್ತಕರಿಂದ ಸಶಸ್ತ್ರ ಹೋರಾಟ.**

ಪೋರ್ಚುಗೀಸರ ಆಗಮನದ ಸಂದರ್ಭದಲ್ಲಿ ಭಟ್ಕಳ ಅತ್ಯಂತ ಪ್ರಮುಖ ವಾಣಿಜ್ಯೋದ್ಯಮ–ವ್ಯವಹಾರಗಳ ಬಂದರುಗಳಲ್ಲಿ ಒಂದಾಗಿತ್ತು. ಕಲ್ಲಿಕೋಟೆಯನ್ನು ಹೊರತುಪಡಿಸಿದರೆ ಪಶ್ಚಿಮ ಕರಾವಳಿಯಲ್ಲಿ ಇದು ಎರಡನೆಯ ಅತೀ ಮುಖ್ಯ ಬಂದರಾಗಿತ್ತು. ಭಟ್ಕಳ ಬಂದರು ಪೋರ್ಚುಗೀಸ್ ಮತ್ತು ವಿಜಯನಗರ ಸಾಮ್ರಾಜ್ಯದ ಮಧ್ಯೆ ರಾಜಕೀಯ ಮತ್ತು ವ್ಯಾಪಾರ ವ್ಯವಹಾರಗಳನ್ನು ನಿರ್ಧರಿಸುವಲ್ಲಿ 'ನಿರ್ಣಾಯಕ ಪಾತ್ರ ವಹಿಸಿದ್ದ ಬಂದರು' ಆಗಿ ಚರಿತ್ರೆಯಲ್ಲಿ ದಾಖಲೆಗೆ ಸೇರಿದೆ.

೧೫೦೫ ರಲ್ಲಿ ಭಾರತದ ಪೋರ್ಚುಗೀಸ್ ರಾಯಭಾರಿ ಕಣ್ಣಾನೂರಿನಲ್ಲಿ ಇದ್ದಂತಹ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯದ ಮೂರನೇ ವಂಶದ ರಾಜನಾದ ವೀರ ನರಸಿಂಹರಾಯನು ರಾಯಭಾರಿ ನಿಯೋಗವನ್ನು ಅಲ್ಲಿಗೆ ಕಳುಹಿಸಿಕೊಟ್ಟು ಪೋರ್ಚುಗೀಸರೊಂದಿಗೆ ಶಾಂತಿ–ಸೌಹಾರ್ದತೆಯ ಸಂಬಂಧವನ್ನು ಕುದುರಿಸುವ ಆಸಕ್ತಿ ಹೊಂದಿದ್ದನು. ಈ ರಾಯಭಾರಿ ನಿಯೋಗದ ಪ್ರಸ್ತಾಪಗಳು ಕೆಳಕಂಡಂತಿದೆ.

ಅ. ಪೋರ್ಚುಗೀಸ್‌ರೊಂದಿಗೆ ಪರಸ್ಪರ ಶಾಂತಿ–ಸೌಹಾರ್ದದ ಸಂಬಂಧ ಬೆಳೆಸುವುದು.

ಬ. ಪೋರ್ಚುಗಲ್ ದೊರೆಗೆ ವೀರ ನರಸಿಂಹರಾಯನು ತನ್ನ ತಂಗಿಯನ್ನು ಕೊಟ್ಟು ಮದುವೆ ಮಾಡುವ ಮೂಲಕ ವೈವಾಹಿಕ ಸಂಬಂಧವನ್ನು ಏರ್ಪಡಿಸುವುದು.

ಕ. ಕೆನರಾದ ಎಲ್ಲಾ ಬಂದರು ನಗರಗಳಲ್ಲಿ (ಭಟ್ಕಳ ಹೊರತುಪಡಿಸಿ) ಪೋರ್ಚುಗೀಸರಿಗೆ ವ್ಯಾಪಾರದ ಮಳಿಗೆ–ಕೋಠಿಗಳನ್ನು ಕಟ್ಟಲು ಅನುಮತಿ ನೀಡುವುದು ಹಾಗೂ ಇವುಗಳಿಗೆ ಬೇಕಾದ ವಸ್ತು ರೂಪದ ಪರಿಕರಗಳನ್ನು ವಿಜಯನಗರ ಸಾಮ್ರಾಜ್ಯ ಒದಗಿಸುವುದು.

ಮೇಲಿನ ಪ್ರಸ್ತಾಪಗಳನ್ನು ಹೊಂದಿರುವ ಪತ್ರದೊಂದಿಗೆ ಬೆಲೆಬಾಳುವ ಉಡುಗೊರೆಗಳನ್ನು ಒಳಗೊಂಡಿದ್ದ ರಾಯಭಾರಿ ನಿಯೋಗವನ್ನು ವೈಸ್‌ರಾಯ್ ಅಲ್ಮೇಡಾನು ಗೌರವಯುತವಾಗಿ ಸ್ವೀಕರಿಸಿದನು. ೧೫೦೫ ರಿಂದ ೧೫೦೮ರ ವರೆಗಿನ ಅವಧಿಯಲ್ಲಿ ಪೋರ್ಚುಗೀಸ್ ರಾಜನಿಂದ ಬೇರೆ ಬೇರೆ ಸಂದರ್ಭಗಳಲ್ಲಿ ವಿಜಯನಗರಕ್ಕೆ ರಾಯಭಾರಿಗಳನ್ನು ಕಳುಹಿಸಬೇಕೆಂಬ ಆದೇಶಗಳಿದ್ದರೂ ವೈಸ್‌ರಾಯ್ ಅಲ್ಮೇಡಾ ಯಾವುದೇ ರಾಯಭಾರಿ ತಂಡವನ್ನು ವಿಜಯನಗರಕ್ಕೆ ಕಳುಹಿಸಲಿಲ್ಲ. ಈ ಬಗ್ಗೆ ಯಾವುದೇ ದಾಖಲೆಗಳಲ್ಲಾಗಲೀ, ಕ್ರೋನಿಕ್ಕಲ್‌ನಲ್ಲಾಗಲೀ ಉಲ್ಲೇಖಗಳಿಲ್ಲವೆಂದು ಬಿ.ಎಸ್. ಶಾಸ್ತ್ರಿಯವರು ವಿವರಿಸಿರುತ್ತಾರೆ. ಪೋರ್ಚುಗೀಸ್ ರಾಜನ ಒತ್ತಡ, ಧರ್ಮಗುರು ಫ್ರಾನ್ಸಿಯನ್ ಫ್ರಾಯರ್ 'ಲೂಯಿಸ್ ಸಾಲ್ವದೋರ್'ರವರ ಪ್ರಭಾವಗಳಿದ್ದರೂ ವೈಸ್‌ರಾಯ್ ಅಲ್ಮೇಡಾನ ನಿಷ್ಕ್ರೀಯಾತ್ಮಕ ಮನೋಭಾವ ಹೊಂದಿದ್ದನು. ಇದಕ್ಕೆ ಮುಖ್ಯ ಕಾರಣ, ವೀರ ನರಸಿಂಹರಾಯನು ಭಟ್ಕಳ ಬಂದರನ್ನು ಪೋರ್ಚ್‌ಗೀಸರಿಗೆ ಬಿಟ್ಟು ಕೊಡಲು ಸಿದ್ಧರಿಲ್ಲದಿರುವುದೇ ಆಗಿತ್ತು. ವೈಸ್‌ರಾಯ್ ಅಲ್ಮೇಡಾನಿಗಂತೂ ಭಟ್ಕಳದ ಉಚ್ಛ್ರಾಯ ಸ್ಥಿತಿಯ ಮೇಲೆ ಕಣ್ಣಿತ್ತು. ಅವನಿಗೆ ಭಟ್ಕಳ ಬಂದರಿನ ವಾಣಿಜ್ಯಾತ್ಮಕ ಮಹತ್ತ್ವದ ಬಗ್ಗೆ ಗಂಭೀರ ಅರಿವು ಇತ್ತು.

೧೫೦೧ ಮತ್ತು ೧೫೦೨ ರಲ್ಲಿ ಜಾವೋ ಡಿ'ನೋವಾ ಮತ್ತು ವಾಸ್ಕೋಡಗಾಮರು ತಮ್ಮ ವಾರ್ಷಿಕ ನೌಕಾದಳದ ಕಮಾಂಡರುಗಳಾಗಿ ಭಾರತದಲ್ಲಿ ಕಾರ್ಯಾಚರಿಸುವಾಗ ಭಟ್ಕಳ ಬಂದರಿನೊಂದಿಗೆ ಹತ್ತಿರದ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಅವರು ಭಟ್ಕಳದಲ್ಲಿ ದೊಡ್ಡ ಗಾತ್ರದ ಹಡಗುಗಳು ಬಂದು ಹೋಗುತ್ತಿರುವುದನ್ನು ಗಮನಿಸಿದ್ದರು. ಅಲ್ಲಿ ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಅಕ್ಕಿ, ಕಬ್ಬಿಣ ಮತ್ತು ಸಕ್ಕರೆ ಇವುಗಳು ಹಡಗುಗಳಿಗೆ ತುಂಬಿಸಿಕೊಳ್ಳುತ್ತಿದ್ದರು.[೧೬] ಇಲ್ಲಿಯ ವ್ಯಾಪಾರ–ವ್ಯವಹಾರದ ಪ್ರಮಾಣಗಳಿಂದ ಸಾಕಷ್ಟು ಪ್ರಭಾವಿತರಾಗಿದ್ದ ಪೋರ್ಚುಗೀಸರು ಇದರ ವ್ಯಾವಹಾರಿಕ ಮಹತ್ವವನ್ನು ಅಂದಾಜಿಸಿದ್ದರು. ಭೌಗೋಳಿಕವಾಗಿಯೂ ಇದೊಂದು ಉತ್ತಮ ಬಂದರು ಆಗಿತ್ತು. ಹಡಗುಗಳಿಗೆ ಲಂಗರು ಹಾಕಲು ಉತ್ತಮ ಅವಕಾಶವಿತ್ತು. ಶತ್ರುಗಳಿಂದ ರಕ್ಷಿಸಲೂ, ಒಳನಾಡಿಗೆ ಪ್ರವೇಶಿಸಲೂ ನೇರ ಅವಕಾಶ ಇತ್ತು. (ಶಾಸ್ತ್ರಿ ೨೦೦೦:೫೯).

ಆದರೆ ೧೫೦೫ ರಲ್ಲಿ ವೈಸ್‌ರಾಯ್‌ಗೆ ಪೋರ್ಚುಗಲ್ ದೊರೆ ನೀಡಿದ ಮಳಿಗೆ– ಕೋಠಿ ಕಟ್ಟುವ ಆದೇಶದಲ್ಲಿ ಭಟ್ಕಳದ ಹೆಸರು ಇರಲಿಲ್ಲ. ೧೫೦೫ರ ಪ್ರಾರಂಭದಲ್ಲಿಯೇ ವೈಸ್‌ರಾಯ್ ಅಲ್ಮೇಡಾ ವಿಜಯನಗರಕ್ಕೆ ಒಂದು ರಾಯಭಾರಿ ನಿಯೋಗವನ್ನು ಕಳುಹಿಸಿ, ಭಟ್ಕಳದಲ್ಲಿ ಮಳಿಗೆ– ಕೋಠಿ ನಿರ್ಮಿಸಿ

ವ್ಯವಹಾರ ನಡೆಸುವ ಬಗ್ಗೆ ಅನುಮತಿಯನ್ನು ಯಾಚಿಸಿದ್ದನು. ಈ ನಿಯೋಗದಲ್ಲಿ ಫೆರೋ-ಫೆರ್ನಾಂಡೀಸ್, ಬೆನ್‌ಕೋರವರೊಂದಿಗೆ ಧರ್ಮಗುರು ಸಾಲ್ವದೋರ್‌ರವರೂ ಇದ್ದರು. ಸಾಲ್ವದೋರ್‌ರವರು ಈ ಮೊದಲೂ ವಿಜಯ ನಗರದಲ್ಲಿ ಧರ್ಮ ಪ್ರಚಾರಕರಾಗಿದ್ದರು. ಆದರೆ ಈ ನಿಯೋಗವು ಸಫಲತೆಯನ್ನು ಪಡೆಯಲಿಲ್ಲ. ವೀರ ನರಸಿಂಹರಾಯನಿಗೆ ೧೫೦೫ ರಲ್ಲಿ ಪೋರ್ಚುಗೀಸರ ಸಹಾಯಬೇಕಾಗಿತ್ತು. ಆದರೆ ೧೫೦೮ ರ ಹೊತ್ತಿಗೆ ಇದರ ಅಗತ್ಯವಿರಲಿಲ್ಲ. ಏಕೆಂದರೆ ವೀರ ನರಸಿಂಹ ತನ್ನ ಎಲ್ಲಾ ಎದುರಾಳಿಗಳನ್ನು ಮಟ್ಟಹಾಕಿ ಸೋಲಿಸಿ ಅಜೇಯ ಶಕ್ತಿಯಾಗಿ ಬೆಳೆದಿದ್ದನು. ಇಂತಹ ಸಂದರ್ಭದಲ್ಲಿ ವಾಣಿಜ್ಯ ಮತ್ತು ರಾಜಕೀಯ ಕಾರಣಗಳಿಗಾಗಿ ಅತೀ ಉಪಯುಕ್ತವಾದ ಬಂದರು ಭಟ್ಕಳವನ್ನು ಬಿಟ್ಟು ಕೊಡುವ ಪ್ರಸ್ತಾಪಗಳಿರುವ ರಾಯಭಾರಿ ನಿಯೋಗವನ್ನು ವೀರ ನರಸಿಂಹ ಅಷ್ಟಾಗಿ ಪುರಸ್ಕರಿಸಲಿಲ್ಲ. ಆದರೂ ಅಲ್ಮೇಡಾ ಭಟ್ಕಳಕ್ಕಾಗಿನ ತನ್ನ ಪ್ರಯತ್ನವನ್ನು ಕೈಬಿಡಲಿಲ್ಲ.

೧೫೦೯ ರಲ್ಲಿ ಕಲ್ಲಿಕೋಟೆಯಲ್ಲಿ ಜಾಮೋರಿನ್ ರಾಜನಿಂದ ಸೋಲನ್ನು ಅನುಭವಿಸಿದ ಅಲ್ಮೇಡಾ, ಇದಕ್ಕೆ ಪ್ರತೀಕಾರ ಸಲ್ಲಿಸುವ ಹಿನ್ನೆಲೆಯಲ್ಲಿ ಧರ್ಮಗರು ಸಾಲ್ವದೋರ್‌ರವರನ್ನು ವಿಜಯನಗರದ ರಾಜ ಕೃಷ್ಣದೇವರಾಯನಲ್ಲಿಗೆ ಕಳುಹಿಸಿ, ಕಲ್ಲಿಕೋಟೆಯ ವಿರುದ್ಧ ಭೂಮಾರ್ಗದ ಮೂಲಕ ಸೈನಿಕ ಕಾರ್ಯಾಚರಣೆ ನಡೆಸಬೇಕೆಂದೂ ತಾನು (ಪೋರ್ಚುಗೀಸ್) ಸಮುದ್ರದ ಮೂಲಕ ನೌಕಾದಾಳಿ ನಡೆಸಿ ಸೋಲಿಸುವ ಪ್ರಸ್ತಾಪವನ್ನು ಇಟ್ಟನು. ಇದಲ್ಲದೆ ಪೋರ್ಚುಗೀಸರ ಮತ್ತು ವಿಜಯನಗರ ಸಾಮ್ರಾಜ್ಯದ ಸಾಮಾನ್ಯ ವೈರಿ ಬಿಜಾಪುರದ ರಾಜ ಆದಿಲ್‌ಶಾಹಿಯ ವಿರುದ್ಧ ಪರಸ್ಪರ ಸಹಕರಿಸುವ ಪ್ರಸ್ತಾಪ ಕೂಡಾ ಇತ್ತು. ಇದರೊಂದಿಗೆ 'ದಖ್ಖನಿ' ರಾಜರುಗಳಿಗೆ ಪರ್ಷಿಯನ್ ಕುದುರೆ ಸರಬರಾಜು ಆಗುತ್ತಿದ್ದ ಗೋವಾ ಬಂದರನ್ನು ಬಂದ್ ಮಾಡುವ ಪ್ರಸ್ತಾಪ ಕೂಡಾ ಇತ್ತು. ಗೋವಾ ಬಂದರಿನ ಎಲ್ಲಾ ವ್ಯವಹಾರಗಳನ್ನೂ ವಿಜಯನಗರದ ಆಳ್ವಿಕೆಗೆ ಒಳಪಟ್ಟ ಭಟ್ಕಳ ಬಂದರಿಗೆ ವರ್ಗಾಯಿಸುವ ಪ್ರಸ್ತಾಪವೂ ಇತ್ತು. ಅಂತಿಮವಾಗಿ ವಿಜಯನಗರದ ಅರಸರು ಭಟ್ಕಳದಿಂದ ಮಂಗಳೂರಿನವರೆಗಿನ ಯಾವುದಾದರೂ ಒಂದು ಬಂದರುಗಳಲ್ಲಿ ಫ್ಯಾಕ್ಟರಿ ಕಟ್ಟಲು ಅನುಮತಿ ನೀಡಿದರೆ ಕುದುರೆ ಮತ್ತು ಇತರೆ ಎಲ್ಲಾ ವಾಣಿಜ್ಯ ವ್ಯವಹಾರಗಳು ವಿಜಯನಗರಕ್ಕೆ ನೀಡುವ ಪ್ರಸ್ತಾಪವಿತ್ತು. ಇಂತಹ ಪ್ರಮುಖ ಪ್ರಸ್ತಾಪಗಳನ್ನು ಒಳಗೊಂಡು ರಾಯಭಾರಿ ನಿಯೋಗ ೧೫೧೦ ಫೆಬ್ರವರಿ ಏಳರಂದು ಕಣ್ಣಾನೂರಿನಿಂದ ಪ್ರಯಾಣ ಬೆಳೆಸಿತು. ಆದರೆ ವಿಜಯನಗರದ ಸಾಮ್ರಾಟರು ಈ ಪ್ರಸ್ತಾಪಗಳನ್ನು ಪುರಸ್ಕರಿಸಲಿಲ್ಲ. ಪೋರ್ಚುಗೀಸ್ ರಾಯಭಾರಿಯಾಗಿ ಕಾರ್ಯಾಚರಿಸಿದ ಧರ್ಮಗುರು ಸಾಲ್ವದೋರ್ ಲೂವಿಸ್‌ರವರು ಸಂಶಯಾಸ್ಪದ ರೀತಿಯಲ್ಲಿ ವಿಜಯನಗರದ ಹಂಪೆಯಲ್ಲಿ ಕೊಲ್ಲಲ್ಪಟ್ಟರು. ಈ ಕೊಲೆಯನ್ನು ವಿಜಯನಗರದ ಸಾಮ್ರಾಟನೇ ಮಾಡಿದ್ದಾನೆಂದೂ ಹೇಳಲಾಗಿದೆ (ಶಾಸ್ತ್ರಿ ೨೦೦೦:೬೧). ಗೋವಾವನ್ನು ಅಲ್ಬುಕರ್ಕ್ ವಶಪಡಿಸಿದ್ದನ್ನು ಕಂಡುಕೊಂಡ ಕೃಷ್ಣದೇವರಾಯನು ಗೋವಾಕ್ಕೆ ಓರ್ವ ರಾಯಭಾರಿಯನ್ನು ಕಳುಹಿಸಿಕೊಟ್ಟನು. ಈ ರಾಯಭಾರಿಗಳನ್ನು ಅಲ್ಬುಕರ್ಕ್ ತಿರಸ್ಕರಿಸಿದನು. ಪೋರ್ಚುಗೀಸರು ಆದಿಲ್‌ಷಾಹಿಯೊಂದಿಗೆ ಸೌಹಾರ್ದ ಸಂಬಂಧ ಮತ್ತು ಒಪ್ಪಂದ ಏರ್ಪಡಿಸುವ ಸಾಧ್ಯತೆಯ ಬಗ್ಗೆ ತಿಳಿದುಕೊಂಡ ಕೃಷ್ಣದೇವರಾಯ ಮತ್ತೊಮ್ಮೆ ಓರ್ವ ರಾಯಭಾರಿಯನ್ನು ಕಳುಹಿಸಿಕೊಟ್ಟು ವಿಜಯನಗರದ ಎದುರಾಳಿಗಳಿಗೆ ವಿದೇಶದಿಂದ ಆಮದು ಆದ ಕುದುರೆಗಳು ಸಿಗದಂತೆ ಕ್ರಮವಹಿಸಬೇಕೆಂದು

ಪ್ರಸ್ತಾಪವಿತ್ತು. ಅಲ್ಬುಕರ್ಕ್ ಆ ಸಮಯದಲ್ಲಿ 'ಮಲಕಾ'ಕ್ಕೆ ತೆರಳಿದ್ದು ಆ ರಾಯಭಾರಿ ನಿಯೋಗದ ಮೇಲೆ ಕ್ರಮವಹಿಸಲಿಲ್ಲ. ನೆನೆಗುದಿಗೆ ಬಿದ್ದ ರಾಯಭಾರ ಪ್ರಕ್ರಿಯೆ ಮತ್ತೆ ೧೫೧೨ ರಲ್ಲಿ ಪ್ರಾರಂಭವಾಯಿತು.

ಅಲ್ಬುಕರ್ಕ್ ತನ್ನ ಪ್ರತಿನಿಧಿಯಾಗಿ 'ಗ್ಯಾಸ್ಪರ್ ಚನ್‌ಕೋವಾ'ನನ್ನು ವಿಜಯನಗರಕ್ಕೆ ಕಳುಹಿಸಿ ಭಾರತದ ಎಲ್ಲಾ ರಾಜರುಗಳು ಹಾಗೂ ಅವರುಗಳ ಪಾಂತ್ಯದ ಬಂದರಿನಲ್ಲಿ ಪೋರ್ಚುಗೀಸರಿಗೆ ಮಳಿಗೆ – ಕೋಠಿಗಳನ್ನು ಕಟ್ಟಲು ಅವಕಾಶ ನೀಡಿದ್ದು, ಪೋರ್ಚುಗೀಸರ ವಾಣಿಜ್ಯದ ಸಂರಕ್ಷಣೆಗಾಗಿ ವಿಜಯನಗರದೊಂದಿಗೆ ಸೌಹಾರ್ದ ಬಯಸುತ್ತಿದ್ದಾರೆ ಎಂಬ ಪ್ರಸ್ತಾಪವಿತ್ತು. ಆ ಪ್ರಕಾರ ಭಟ್ಕಳದಲ್ಲಿ ಮಳಿಗೆ ಹೊಂದಲು ಅವಕಾಶ ನೀಡಿದರೆ ಗೋವಾ ಬಂದರಿಗೆ ಆಮದಾಗುತ್ತಿದ್ದ ಎಲ್ಲಾ ಕುದುರೆಗಳನ್ನು ವಿಜಯನಗರಕ್ಕೆ ನೀಡುವ ಪ್ರಸ್ತಾಪವಿತ್ತು (ಶಾಸ್ತ್ರಿ ೨೦೦೦:೬೨). ಇದಕ್ಕೆ ಪ್ರತಿಕ್ರಿಯೆಯಾಗಿ ವಿಜಯನಗರದ ಸಾಮ್ರಾಜ್ಯವು ೧೫೧೪ರಲ್ಲಿ 'ರತ್ನಾ ಶೆಟ್ಟಿ' ಎಂಬ ವ್ಯಕ್ತಿಯನ್ನು ತನ್ನ ರಾಯಭಾರಿಯನ್ನಾಗಿ ಗೋವಾಕ್ಕೆ ಕಳುಹಿಸಿಕೊಟ್ಟಿತು. ಈ ರಾಯಭಾರಿ ನಿಯೋಗದ ಪ್ರಸ್ತಾಪದಲ್ಲಿ ವಿಜಯನಗರವು ಆದಿಲ್‌ಶಾಹಿಯ ವಿರುದ್ಧ ಯುದ್ಧ ಸಾರಲಿದ್ದು, ಪೋರ್ಚುಗೀಸರ ಸೈನ್ಯ ಮತ್ತು ವಿಜಯನಗರದ ಸೈನ್ಯ ಒಗ್ಗಟ್ಟಾಗಿ ಹೋರಾಡುವ ಪ್ರಸ್ತಾಪವಿತ್ತು. ಈ ನಿಯೋಗದ ಮಾತುಕತೆಯ ಸಂದರ್ಭದಲ್ಲಿ ವಿಜಯನಗರದ ಕಡೆಯಿಂದಾಗಲೀ, ಅಲ್ಬುಕರ್ಕ್‌ರ ಕಡೆಯಿಂದಾಗಲೀ ಭಟ್ಕಳದ ಬಗ್ಗೆ ಪ್ರಸ್ತಾಪವಿರಲಿಲ್ಲ. ಒಟ್ಟಾರೆಯಾಗಿ ಇದರ ಅಗತ್ಯವೂ ಪರಸ್ಪರರಿಗೆ ಇರಲಿಲ್ಲ. ಅಲ್ಬುಕರ್ಕ್‌ನು ಅಧಿಕಾರದ ಅವಧಿಯಲ್ಲಿ ಕುದುರೆಗಳ ವ್ಯಾಪಾರದ ಬಗ್ಗೆಯಾಗಲೀ, ಭಟ್ಕಳದಲ್ಲಿ ಮಳಿಗೆ – ಕೋಠಿಯನ್ನು ನಿರ್ಮಿಸುವ ಪ್ರಶ್ನೆಯ ಮೇಲಾಗಲೀ ಯಾವುದೇ ನಿರ್ಣಾಯಕ ಒಪ್ಪಂದಕ್ಕೆ ಬರಲು ಸಾಧ್ಯವಾಗಲಿಲ್ಲ.

ಭಟ್ಕಳದ ಬಗ್ಗೆಯೇ ಕೇಂದ್ರೀಕರಿಸಿ ಇಷ್ಟೆಲ್ಲಾ ಮಾತುಕತೆಗಳು, ಚರ್ಚೆಗಳು – ಒಪ್ಪಂದಗಳು ನಡೆಯುತ್ತಿದ್ದರೂ ಪೋರ್ಚುಗೀಸರು ಇಲ್ಲಿಯ ಸಂಬಂಧ ಸಂಪರ್ಕವನ್ನು ಕೈಬಿಡಲಿಲ್ಲ. ೧೫೦೧ ರಿಂದಲೇ ಜೋವಾನೋವಾ ಎಂಬ ಪೋರ್ಚುಗೀಸ್ ಅಧಿಕಾರಿ ಇಲ್ಲಿಗೆ ಬಂದಿದ್ದನು. ಆದುದರಿಂದ ಇಲ್ಲಿಯ ವರ್ತಕರಿಗೆ ಪೋರ್ಚುಗೀಸರು ಅಪರಿಚಿತರಾಗಿರಲಿಲ್ಲ. ಪೋರ್ಚುಗೀಸರು ಆಕ್ರಮಣಕಾರಿ ದಾಳಿ ನಡೆಸಿ ಹಡಗುಗಳ ನಾಶ ಮಾಡಬಹುದೆಂಬ ಭಯ ಭಟ್ಕಳದ ವರ್ತಕರಿಗೆ ಸದಾ ಕಾಡುತ್ತಿತ್ತು. ೧೫೧೦ ರಲ್ಲಿ 'ಹೊರ್ಮುಜ್'ದಿಂದ ಮೂರು ಹಡಗುಗಳಲ್ಲಿ ಸರಕು ಸರಂಜಾಮ್‌ಗಳೊಂದಿಗೆ ಅಧಿಕೃತವಾಗಿ ಪೋರ್ಚುಗೀಸರಿಂದ ಪರವಾನಗಿ ಹೊಂದಿದ್ದ ಹಡಗಿನ ಮೇಲೆ ಭಟ್ಕಳ ಬಂದರಿನಲ್ಲಿ ದಾಳಿ ನಡೆಸಿ ಮುಟ್ಟುಗೋಲು ಹಾಕಿದ್ದರು (ಮ್ಯಾಥ್ಯು ೧೯೮೩:೨೦೮). ಹಲವಾರು ವರ್ತಕರುಗಳು ಹಡಗಿನಲ್ಲಿ ಅಕ್ಕಿ, ಸಕ್ಕರೆ, ಕೋಳಿ, ಹಂದಿ, ಕಿತ್ತಳೆಗಳನ್ನು ತುಂಬಿಸಿ ತಾವೂ ಕೂಡಾ ಗೋವಾದಲ್ಲಿ ಮಾತುಕತೆಗೆ ತೆರಳುತ್ತಿದ್ದರು. ಕೆಲವರು ರಾಜನಿಗೆ ಮನವಿ ಸಲ್ಲಿಸಿ ಪೋರ್ಚುಗೀಸರ ಉದ್ದೇಶವನ್ನು ತಿಳಿಯಬೇಕೆಂದು ಒತ್ತಾಯಿಸುತ್ತಿದ್ದರು. ನೋವಾನ ಭಟ್ಕಳದ ಕಾಲಾವಧಿಯಲ್ಲಿ ಪೋರ್ಚುಗೀಸರ ಹಣವು ಕಳ್ಳತನವಾಯಿತು. ಇದಕ್ಕೆ ಪ್ರತಿಕಾರವಾಗಿ ಕಳ್ಳರನ್ನು ಹಿಡಿದು ಶಿಕ್ಷಿಸದಿದ್ದಲ್ಲಿ ಯಾವುದೇ ಹಡಗುಗಳನ್ನು ಭಟ್ಕಳದಿಂದ ಹೊರಡಲು ಅವಕಾಶ ನೀಡುವುದಿಲ್ಲ ಹಾಗೂ ಎಲ್ಲಾ ಹಡಗುಗಳನ್ನು ಬೆಂಕಿಕೊಟ್ಟು ನಾಶ ಮಾಡುವುದಾಗಿ ಬೆದರಿಕೆ ಹಾಕಿದನು. ಗೇರುಸೊಪ್ಪೆಯ ರಾಜನಲ್ಲಿಗೆ ತನ್ನ ಕ್ಯಾಪ್ಟನ್ ಮೇಜರ್‌ನನ್ನು ಕಳುಹಿಸಿದ ದಂಡನಾಯಕ ಜಾವೋನೋವನು ಕಳ್ಳರನ್ನು

ಕೂಡಲೇ ಹಿಡಿದು ಒಪ್ಪಿಸಬೇಕಾಗಿ ಒತ್ತಡ ಹೇರಿದನು. ದಾಳಿಗೆ ಮುಂದಾದಾಗ ಸ್ಥಳಿಯ ಭಟ್ಕಳದ ಗೇರುಸೊಪ್ಪೆಯ ಅಧಿಕಾರಿಗಳು ಕಳ್ಳರನ್ನು ಹಿಡಿದು ನೋವಾರಿಗೆ ಹಸ್ತಾಂತರಿಸಿದರು. ಆಗ ನೋವಾನು ತನ್ನ ಸಿಬ್ಬಂದಿಗಳಿಗೆ ಆ ಕಳ್ಳರ ಕೈಗಳನ್ನು ಕತ್ತರಿಸಿ ಅನಂತರ ಗಲ್ಲಿಗೇರಿಸಬೇಕೆಂಬ ಆದೇಶವನ್ನು ನೀಡಿದನು. ಈ ಸಂದರ್ಭದಲ್ಲಿ ಜಾವೋ ಡಿ'ನೋವನು ಭಟ್ಕಳದ ರಾಜನಿಗೆ ಉಡುಗೊರೆ ನೀಡಿದ್ದು ಅದಕ್ಕೆ ಪ್ರತಿಕ್ರಿಯಿಸಿ ಭಟ್ಕಳದ ರಾಜನು ವ್ಯಾಪಾರಕ್ಕಾಗಿ ಭಟ್ಕಳದ ಬಂದರಿಗೆ ಪೋರ್ಚುಗೀಸರಿಗೆ ಯಾವತ್ತೂ ಸ್ವಾಗತವಿದೆ ಎಂದು ಘೋಷಿಸಿದನು.

ವಾಸ್ಕೋಡಗಾಮನು ಹೊನ್ನಾವರದಲ್ಲಿ ನಡೆಸಿರುವ ದಾಳಿಯ ಬಗ್ಗೆ ಮತ್ತು ಹಡಗುಗಳನ್ನು ಸುಟ್ಟು ಧ್ವಂಸಗೊಳಿಸಿರುವುದನ್ನು ತಿಳಿದುಕೊಂಡ ಭಟ್ಕಳದ ವ್ಯಾಪಾರಿಗಳು ತಮ್ಮನ್ನು ಪೋರ್ಚುಗೀಸರಿಂದ ಸಂರಕ್ಷಿಸಿಕೊಳ್ಳಲು ಮತ್ತು ಮರು ಆಕ್ರಮಣ ನಡೆಸಲು ಅನುಕೂಲವಾಗಲೆಂದು ಸಣ್ಣ ಗಾತ್ರದ ಕೋವಿಗಳನ್ನು ಸಂಗ್ರಹಿಸಿ ನದಿ ಪ್ರದೇಶದ ಪಕ್ಕದಲ್ಲಿರುವ ಗುಡ್ಡಗಳ ಮೇಲೆ ಅವಿತುಕೊಂಡರು. ವಾಸ್ಕೋಡಗಾಮನ ಸಹೋದರನಾದ ಈಸ್ತಾವೋ ಡಿ'ಗಾಮನ ಹಡಗು ನದಿಯನ್ನು ಪ್ರವೇಶಗೈದು ಲಂಗರು ಹಾಕಲು ತಯಾರಿ ನಡೆಸುತ್ತಿರಬೇಕಾದರೆ ಭಟ್ಕಳದ ವ್ಯಾಪಾರಿಗಳು ಗುಡ್ಡದ ಮೇಲಿನಿಂದ ಕಲ್ಲುಗಳನ್ನು ಹಡಗುಗಳ ಮೇಲೆ ಎಸೆದರು. ಆದರೂ ಅವರು ಹಡಗಿನಿಂದ ಇಳಿಯುವಲ್ಲಿ ಯಶಸ್ವಿಯಾಗಿ ದಾಂಧಲೆಗೆ ಮುಂದಾದಾಗ ಕೆಲವು ಮುಸ್ಲಿಂ ರಾಯಭಾರಿಗಳು ಈಸ್ತಾವೋ ಡಿ'ಗಾಮನನ್ನು ಭೇಟಿಯಾದರು. ಅವರು ಭಟ್ಕಳದ ದೊರೆಯು ಪೋರ್ಚುಗಲ್ ದೊರೆಗೆ ವಿಧೇಯರಾಗಿದ್ದೇವೆ ಎಂದು ಭಿನ್ನವಿಸಿಕೊಂಡರು. ಆಗ ಡಿ'ಗಾಮನು ಅವರೊಂದಿಗೆ, ನಾವು ಭಟ್ಕಳದ ಜನತೆಗೆ ಕಷ್ಟ, ತೊಂದರೆ ನೀಡಬೇಕೆಂದು ಬಂದಿರುವುದಲ್ಲ. ಸ್ಥಳೀಯ ಜನರಿಂದ ಪ್ರತಿಕಾರದ ಕ್ರಮಗಳು ಎದುರಾದಾಗ ಅದನ್ನು ಎದುರಿಸುವುದಕ್ಕಾಗಿ ಆಕ್ರಮಣ ಮಾಡುತ್ತೇವೆ ಎಂಬುದನ್ನು ಸ್ಪಷ್ಟಪಡಿಸಿದರು. ಮುಂದುವರಿದು ಡಿ'ಗಾಮನು ಪೋರ್ಚುಗೀಸರ ಸಾರ್ವಭೌಮ ದೊರೆಯು ಎಲ್ಲಾ ಸಾಗರ ಮತ್ತು ಸಮುದ್ರಗಳ ಸಾರ್ವಭೌಮರಾಗಿರುತ್ತಾರೆ. ಆದುದರಿಂದ ಎಲ್ಲಾ ಬಂದರುಗಳೂ, ಅಲ್ಲಿಂದ ಪ್ರಯಾಣಿಸಲ್ಪಡುವ ನೌಕೆಗಳೆಲ್ಲವೂ ಪೋರ್ಚುಗಲ್ ರಾಜನ ಆದೇಶಕ್ಕೆ ತಲೆಬಾಗಬೇಕು ಮತ್ತು ಕಪ್ಪಕಾಣಿಕೆಯನ್ನು ಹಡಗು ಪ್ರಯಾಣಿಸುವ ಮೊದಲೇ ನೀಡಬೇಕು. ಇದನ್ನು ಪಾಲಿಸಿದರೆ ಮಾತ್ರ ಬಂದರಿನಿಂದ ಹೊರಡುವ ಎಲ್ಲಾ ಹಡಗುಗಳೂ ಸ್ವತಂತ್ರ ಮತ್ತು ಸುರಕ್ಷತೆಯಲ್ಲಿರುತ್ತದೆ. ಯಾವುದೇ ಬಂದರಿನಲ್ಲಿ ಪೋರ್ಚುಗೀಸರ ಹೊರತುಪಡಿಸಿ ಕರಿಮೆಣಸಿನ ವ್ಯಾಪಾರ–ವ್ಯವಹಾರ ಮಾಡಬಾರದು,[೧೭] ಟರ್ಕರನ್ನು ಯಾವುದೇ ವ್ಯಾಪಾರದಲ್ಲಿ ಸೇರಿಸಿಕೊಳ್ಳಬಾರದು. ಕಲ್ಲಿಕೋಟೆಯ ಹಡಗುಗಳಿಗೆ ಭಟ್ಕಳದ ಬಂದರಿನಲ್ಲಿ ಅವಕಾಶ ನೀಡಬಾರದು. ಈ ಎಲ್ಲಾ ಷರತ್ತುಗಳನ್ನು ಒಪ್ಪಿ ಕಪ್ಪಕಾಣಿಕೆ ನೀಡುವುದು ಮತ್ತು ವ್ಯಾಪಾರದ ನಿರ್ದೇಶನಗಳನ್ನು ಪಾಲಿಸುವುದಾದರೆ ಗೇರುಸೊಪ್ಪೆಯ ರಾಜನು ತನ್ನ ಅಭಿಪ್ರಾಯ ಮತ್ತು ಒಪ್ಪಿಗೆಯನ್ನು ನೀಡಬೇಕು. ಇಲ್ಲದೇ ಹೋದರೆ ಭಟ್ಕಳ ಬಂದರಿನ ಎಲ್ಲಾ ಹಡಗುಗಳನ್ನು ಮತ್ತು ಬಂದರನ್ನು ನಾಶ ಮಾಡುತ್ತೇನೆ. ಇದನ್ನು ಪ್ರತೀ ವರ್ಷವೂ ಮಾಡುತ್ತೇನೆ. ಭಟ್ಕಳದಲ್ಲಿ ಯಾರೂ ವ್ಯಾಪಾರ ನಡೆಸದಂತಹ ಪರಿಸ್ಥಿತಿಯನ್ನು ನಿರ್ಮಿಸುತ್ತೇನೆ ಎಂದು ಆ ನಿಯೋಗಕ್ಕೆ ಪ್ರತ್ಯುತ್ತರ ನೀಡಿದನು (ಶಾಸ್ತ್ರಿ ೨೦೦೦:೬೪).

ಅಲ್ಮೇಡಿಯಾ ಭಾರತದಲ್ಲಿ ವೈಸ್‌ರಾಯ್ ಆಗಿರುವವರೆಗೆ ಮಾತ್ರ ಭಟ್ಕಳವು ಈ ಮೊದಲಿನ ಒಪ್ಪಂದಕ್ಕೆ ಬದ್ಧವಾಗಿತ್ತು. ಮರುವರ್ಷ ಅಲ್ಬುಕರ್ಕ್‌ರವರಲ್ಲಿಗೆ ಭಟ್ಕಳದ ಆಡಳಿತಾಧಿಕಾರಿಗಳಾದ ಗುಂಡಣ್ಣ ಶೆಟ್ಟಿ ಮತ್ತು ನಂದಕಿಶೋರ್‌ರವರುಗಳು ಭಟ್ಕಳದ ರಾಯಭಾರಿಗಳಾಗಿ ಗೋವಾಕ್ಕೆ ಹೋದರು. ಆ ಸಮಯದಲ್ಲಿ ಭಟ್ಕಳದಲ್ಲಿ ಪೋರ್ಚುಗೀಸರ ಯಾವುದೇ ಹಡಗುಗಳು ಸರಕು ತುಂಬುವುದಾಗಲೀ, ಇಳಿಸುವುದಾಗಲೀ ಇಲ್ಲದೇ ಇದ್ದ ಕಾರಣ ಈ ನಿಯೋಗದ ಅಭಿಪ್ರಾಯಕ್ಕೆ ಅಲ್ಬುಕರ್ಕ್ ಪ್ರತಿಕ್ರಿಯಿಸಲಿಲ್ಲ. ಆದರೆ ೧೫೧೦ ರ ಸಪ್ಟೆಂಬರ್ ತಿಂಗಳಲ್ಲಿ ಅಲ್ಬುಕರ್ಕ್ ತನ್ನ ಪ್ರತಿನಿಧಿಯಾಗಿ ಲೋರೆನ್ಸ್ ಮೊಂತೆರೋರವರನ್ನು ಭಟ್ಕಳಕ್ಕೆ ಕಳುಹಿಸಿ ಒಂದು ಒಪ್ಪಂದಕ್ಕೆ ಬಂದು ಈ ಕೆಳಗಿನ ಷರತ್ತುಗಳಿಗೆ ಬದ್ಧರಾಗಿರುವಂತೆ ಆಗ್ರಹಿಸಿದನು. ವಿವರಗಳು ಹೀಗಿವೆ:

ಅ ಭಟ್ಕಳದಲ್ಲಿ ಪೋರ್ಚುಗೀಸರಿಗೆ ಒಂದು ಮನೆಯನ್ನು ಒದಗಿಸಬೇಕು; ಇದರಲ್ಲಿ ಫ್ಯಾಕ್ಟರ್‌ರವರಿಗೆ ಸರಕುಗಳನ್ನು ಸುರಕ್ಷಿತವಾಗಿ ಇಡಲು ಅವಕಾಶವಿರಬೇಕು.

ಬ. ಆ ಮನೆ ನಿರ್ಮಾಣವು ಕಲ್ಲು, ಸುಣ್ಣ, ಹ್ಯೊಗೆ, ನೀರು ಹಾಗೂ ಬೆಲ್ಲದ ಮಿಶ್ರಣದಿಂದ ಗಟ್ಟಿಯಾಗಿ ಕಟ್ಟಲ್ಪಡಬೇಕು; ಇದರ ಖರ್ಚು ವೆಚ್ಚವನ್ನು ಭಟ್ಕಳವೇ ಭರಿಸಬೇಕು.

ಕ. ಪೋರ್ಚುಗೀಸ್ ರಾಜನಿಗೆ ವಾರ್ಷಿಕ ೨೦೦೦ ಚೀಲ ಅಕ್ಕಿಯನ್ನು ಕಪ್ಪಕಾಣಿಕೆಯಾಗಿ ನೀಡಬೇಕು. (ಶಾಸ್ತ್ರಿ ೨೦೦೦:೬೫).



ಆದರೆ ಭಟ್ಕಳದ ಆಡಳಿತಾಧಿಕಾರಿಗಳು ಒಪ್ಪಂದಕ್ಕೆ ಬರಲು ವಿಜಯನಗರದ ಸಾಮ್ರಾಟರ ಅನುಮತಿ ಬೇಕೆಂದು ಪೋರ್ಚುಗೀಸರಿಗೆ ತಿಳಿಸಿದರು. ವಿಜಯನಗರದಿಂದಲೂ ಯಾವುದೇ ನಿರ್ದಿಷ್ಟ ಒಪ್ಪಂದಕ್ಕೆ ಬರಬಾರದೆಂದು ಸೂಚನೆ ಬಂತು. ೧೫೧೦ ರ ಕೊನೆಯಲ್ಲಿ ಭಟ್ಕಳದ ಪ್ರತಿನಿಧಿಗಳು ಪೋರ್ಚುಗೀಸರಿಗೆ ೧೫೦೯ ರಿಂದ ಬಾಕಿಯಾದ ಕಪ್ಪ ಕಾಣಿಕೆಯಾದ ಅಕ್ಕಿ ಹಾಗೂ ಭಟ್ಕಳದ ವ್ಯಾಪಾರದ ಮಳಿಗೆಗೆ ಸ್ಥಳಾವಕಾಶ ನೀಡುವ ಪ್ರಸ್ತಾಪವನ್ನು ತಿಳಿಸಿದರು. ಆದರೆ ಅಲ್ಬುಕರ್ಕ್ ಇದನ್ನು ನಗಣ್ಯ ಮಾಡಿದನು. ಬದಲಾಗಿ ೧೫೧೨ ರಲ್ಲಿ ವಿಜಯನಗರಕ್ಕೆ ಕಳುಹಿಸಿರುವ ರಾಯಭಾರಿ ನಿಯೋಗದಲ್ಲಿ ಭಟ್ಕಳ ಬಂದರಿನಲ್ಲಿ ಸ್ಥಳಾವಕಾಶ ಒದಗಿಸಬೇಕೆಂಬ ಪ್ರಸ್ತಾಪವೂ ಇತ್ತು. ಇಲ್ಲಿ ಪರಸ್ಪರ ವಿರೋಧಾಭಾಸಗಳು ಪೋರ್ಚುಗೀಸರಿಂದ ಮತ್ತು ಭಟ್ಕಳದ ಅರಸರಿಂದ ಪ್ರತಿಫಲನವಾಗಿರುವುದು ಕಂಡುಬರುತ್ತದೆ.

ಗೋವಾವನ್ನು ಮುಂದೆ ಕೆಲವೇ ಕೆಲವು ತಿಂಗಳುಗಳಲ್ಲಿ ಮತ್ತೊಮ್ಮೆ ಆದಿಲ್‌ಶಾಹಿಗಳು ಜಯಿಸಿದರು. ಕೈ ತಪ್ಪಿ ಹೋದ ಮೇಲೆ ಎರಡನೇ ಬಾರಿಗೆ ಜಯಿಸಿದ ಅಲ್ಬುಕರ್ಕ್ ಕರಾವಳಿಯ ತನ್ನ ಎಲ್ಲಾ ಕ್ಯಾಪ್ಟನ್‌ಗಳಿಗೆ ಸಂದೇಶ ಕಳುಹಿಸಿ ಎಲ್ಲಾ ಸರಕು ಸರಂಜಾಮುಗಳ ಹಡಗುಗಳು ಗೋವಾಕ್ಕೆ ಬಂದು ಹೊರರಾಷ್ಟ್ರಗಳಿಗೆ ಹೋಗಬೇಕೆಂಬ ಆದೇಶವನ್ನು ನೀಡಿದನು.

೧೫೧೩ ರಲ್ಲಿ ಭಟ್ಕಳದಲ್ಲಿ 'ಅಡೆನ್' ದೇಶದ ಹಡಗು ಸರಕು ಇಳಿಸಲು ತಯಾರಿ ನಡೆಸುತ್ತಿರುವ ವಿಷಯ ತಿಳಿದ ಕೂಡಲೇ ಅಲ್ಬುಕರ್ಕ್ ಕ್ಯಾಪ್ಟನ್ ಆಂಥೋನಿಯಾ ರಾವೋಸ್ಕ್ ಎಂಬಾತನನ್ನು ಭಟ್ಕಳಕ್ಕೆ ಕಳುಹಿಸಿ ಆ ಹಡಗನ್ನು ಸೆರೆ ಹಿಡಿಯಲು ಆದೇಶಿಸಿದನು. ಆಗ ಭಟ್ಕಳದ ಆಡಳಿತಾಧಿಕಾರಿ ದೂಮ ಶೆಟ್ಟಿ

ಸುಂಕವನ್ನು ತೆತ್ತು ಹಡಗನ್ನು ಬಿಡುಗಡೆಗೊಳಿಸಿದನು. ಇಲ್ಲಿ ಅಭಿವ್ಯಕ್ತವಾಗುವ ಅಂಶವೆಂದರೆ ಭಟ್ಕಳದ ವಾಣಿಜ್ಯ ವ್ಯವಹಾರ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪೋರ್ಚುಗೀಸರೇ ನಿಯಂತ್ರಿಸಿ ಕುದುರೆಗಳ ಆಮದು ಹಾಗೂ ಇತರ ವಸ್ತುಗಳಿಗೆ ಸುಂಕವನ್ನು ತೆರಬೇಕಾದ ಪರಿಸ್ಥಿತಿ ನಿರ್ಮಾಣವಾಗಿತ್ತು. ಅಲ್ಬುಕರ್ಕ್‌ನಿಗೆ ಭಟ್ಕಳದಲ್ಲಿ ಶಾಶ್ವತವಾಗಿ ಕೋಠಿ – ಮಳಿಗೆ ನಿರ್ಮಿಸಲು ಅವಕಾಶ ಕಲ್ಪಿಸಲಾಗಲಿಲ್ಲ. ಆದರೆ ಆತ ಕುದುರೆ ಮತ್ತಿತರೆ ಆಯಕಟ್ಟಿನ ವ್ಯಾಪಾರಕ್ಕೆ ಗುರುತರ ತಡೆಯನ್ನು ಒಡ್ಡುವಲ್ಲಿ ಯಶಸ್ವಿಯಾದನು.

ಅಲ್ಬುಕರ್ಕ್‌ನ ಮರಣಾನಂತರ ಲೋವೊ ಸೋರ್ಸ್ ಡಿ. ಅಲ್ಬೇರಿಯಾ ೧೫೧೬ರ ಪ್ರಾರಂಭದಲ್ಲಿ ಗವರ್ನರ್ ಆಗಿ ಅಧಿಕಾರ ವಹಿಸಿಕೊಂಡನು. ಭಟ್ಕಳದಲ್ಲಿ ವಾಣಿಜ್ಯದ ಕಾರಣಕ್ಕಾಗಿ ಸ್ಥಳೀಯ ವರ್ತಕರಿಗೂ ಪೋರ್ಚುಗೀಸರ ಭಟ್ಕಳದ ವ್ಯಾಪಾರಿ ಪ್ರತಿನಿಧಿಗಳ ಮಧ್ಯೆ ವ್ಯಾಪಕವಾದ ಸಂಘರ್ಷ ಬೆಳೆದು ಬಂತು. ಪೋರ್ಚುಗೀಸ್ ಕ್ಯಾಪ್ಟನ್ ಸೀಮಾವೋ ಅಂದ್ರಾದೆ ಮತ್ತು ಅವರ ಸಹಾಯಕ ಫ್ಯಾಕ್ಟರ್ ಅಲೆಕ್ಸಿಯೋರವರುಗಳ ನೇತೃತ್ವದಲ್ಲಿ ಪೋರ್ಚುಗೀಸರ ಹಡಗಿನಲ್ಲಿ ಹೊರ್ಮುಜ್‌ಗೆ ಸಾಗಿಸುವರೇ ಅಕ್ಕಿ, ಸಕ್ಕರೆ, ಕಬ್ಬಿಣಗಳನ್ನು ತುಂಬಿಸುತ್ತಿದ್ದರು. ಈ ಕೆಲಸ ಪ್ರಗತಿಯಲ್ಲಿರುವಾಗಲೇ ಸ್ಥಳೀಯ ವರ್ತಕರಿಗೂ ಪೋರ್ಚುಗೀಸ್ ಸಿಬ್ಬಂದಿಗಳಿಗೂ ಭಿನ್ನಾಭಿಪ್ರಾಯ ಬೆಳೆದು ಬಂದು ಸಂಘರ್ಷದ ಸ್ವರೂಪ ತಾಳಿ ೨೪ ಮಂದಿ ಪೋರ್ಚುಗೀಸರನ್ನು ಕೊಂದರು. ಸುಮಾರು ೧೦,೦೦೦ ಪದ್ರೋಸ್ ಬೆಲೆಬಾಳುವ ಸರಕು ಸರಂಜಾಮುಗಳನ್ನು ದೋಚಿದರು (ಶಾಸ್ತ್ರಿ ೨೦೦೦:೬೬). ಇದಕ್ಕೆ ಪ್ರತೀಕಾರ ಸಲ್ಲಿಸಲು ನೂತನ ಗವರ್ನರ್ ಭಟ್ಕಳದಲ್ಲಿ ಪ್ರತ್ಯಕ್ಷವಾಗುವ ಮೊದಲೇ ಭಟ್ಕಳದ ಪ್ರಮುಖ ಆಡಳಿತಾಧಿಕಾರಿಗಳು ಒಂದು ದೊಡ್ಡ ದೋಣಿ ತುಂಬಾ ಅಕ್ಕಿ ಮತ್ತು ಸಕ್ಕರೆ ಕಳುಹಿಸಿ ನಡೆದಂತಹ ಅಹಿತಕರ ಘಟನೆಗೆ ಕ್ಷಮಾರ್ಪಣೆ ಬಯಸಿದರು. ಈ ಘಟನೆಗೆ ಕಾರಣರಾದ ೩ ಮಂದಿ ವೃದ್ಧ ಮುಸ್ಲಿಂ ವ್ಯಾಪಾರಿಗಳನ್ನು ಪೋರ್ಚುಗೀಸರಿಗೆ ಒಪ್ಪಿಸುವುದಾಗಿಯೂ ಅವರನ್ನು ಮತ್ತು ಅವರ ಹೆಂಡತಿ ಮಕ್ಕಳನ್ನು ಗಲ್ಲಿಗೇರಿಸಬೇಕೆಂದೂ ವಿನಂತಿಸಿದರು.

ಆದರೆ ಭಟ್ಕಳ ಪ್ರಾಂತ್ಯದ ಸಾಮಂತರ ಈ ಬೇಡಿಕೆಗೆ ಸ್ಪಂದಿಸದೆ ಗವರ್ನರ್‌ರವರು ಇವರಿಗೆ ಕ್ಷಮಾರ್ಪಣೆ ನೀಡಿದನು. ಇನ್ನು ಮುಂದೆ ಭಟ್ಕಳದಲ್ಲಿ ಪೋರ್ಚುಗೀಸರಿಗೆ ಯಾವುದೇ ತೊಂದರೆಗಳು ಉದ್ಭವಿಸಿದರೆ ಅದಕ್ಕೆ ಇಡೀ ಭಟ್ಕಳವನ್ನೇ ಹೊಣೆಯನ್ನಾಗಿ ಮಾಡಿ ನಗರವನ್ನೇ ಸುಟ್ಟು ಬೂದಿ ಮಾಡುವುದಾಗಿ ಎಚ್ಚರಿಕೆ ನೀಡಿದನು.

ಕ್ಷುಲ್ಲಕ ಕಾರಣಕ್ಕಾಗಿ ಉಗ್ರ ಸ್ವರೂಪದ ಹಿಂಸೆಯನ್ನು ನಡೆಸಿ ಪೋರ್ಚುಗೀಸರ ೨೪ ಮಂದಿ ಸಿಬ್ಬಂದಿಗಳು ಹತರಾದರೂ ಇದನ್ನು ಗಂಭೀರವಾಗಿ ಪರಿಗಣಿಸದೆ ಕ್ಷಮಾರ್ಪಣೆ ನೀಡಿರುವ ಇಲ್ಲಿನ ಉದ್ದೇಶ ಪ್ರಶ್ನಾರ್ಹವಾಗಿದೆ. ೧೫೧೨ರಲ್ಲಿ ಕಳ್ಳತನ ಮಾಡಿದ ಎರಡು ವ್ಯಕ್ತಿಗಳಿಗೆ ಇದೇ ಭಟ್ಕಳದಲ್ಲಿ ಕೈ ಕತ್ತರಿಸಿ ಮರಣ ದಂಡನೆ ವಿಧಿಸಿದ ಕ್ರೂರ ಪೋರ್ಚುಗೀಸ್ ಅಧಿಕಾರಿಗಳು ಈಗ ದಯಾಪರವಾದ ನಿಲುವನ್ನು ಹೊಂದಿರುವ ಬಗ್ಗೆ ಸಂದೇಹ ವ್ಯಕ್ತವಾಗುತ್ತದೆ. ಆದರೆ ಬಿ.ಎಸ್. ಶಾಸ್ತ್ರಿಯವರ ಪ್ರಕಾರ ಹೊಸ ಗವರ್ನರ್‌ರವರ ಮನೋಭಾವವನ್ನು ನಿರ್ಧರಿಸಲು ಮುಸ್ಲಿಂ ವರ್ತಕರು ಈ ಪ್ರಯೋಗವನ್ನು ಮಾಡಿದ್ದಾರೆಂಬ ವಾದ ಅಸಮರ್ಥನೀಯವಾಗಿದೆ.

ಪೋರ್ಚುಗೀಸರ ಮಾರಣಹೋಮ ನಡೆದರೂ ಹಿಂಸೆಗೆ ಇಳಿಯದ ಮೂಲ ಉದ್ದೇಶ ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದ ಭಟ್ಕಳದೊಂದಿಗೆ ಸಂಘರ್ಷ ಮುಂದುವರಿಸಿದ್ದೇ ಆದಲ್ಲಿ ವಿಜಯನಗರದೊಂದಿಗೆ ಇದ್ದ ವ್ಯಾಪಾರ ವಾಣಿಜ್ಯದ ಹಿತಾಸಕ್ತಿಗೆ ಧಕ್ಕೆ ಒದಗಿಬರುವುದೆಂಬ ಭಯದಿಂದಲೇ ಈ ರೀತಿ ವರ್ತಿಸಿರಬಹುದು.

ವಾಸ್ಕೋಡಗಾಮನು ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಸಂಶೋಧಿಸಿರುವುದು ಪೋರ್ಚುಗೀಸರು ಹೊಂದಿದ್ದ ವಾಣಿಜ್ಯೋದ್ಯಮ ಮತ್ತು ಮತೀಯ ಉದ್ದೇಶಗಳಿಗೆ ಹೊಸ ಪ್ರೋತ್ಸಾಹ ದೊರೆಯಿತು. ಇದೇ ರೀತಿ ಯುರೋಪಿಯನ್ ರಾಷ್ಟ್ರಗಳು ಹೊಂದಿದ್ದ ಸ್ಪರ್ಧಾತ್ಮಕ ಮನೋಭಾವ ಜಾಗತಿಕವಾಗಿ ಹೊಸ ಯುಗಪ್ರವರ್ತಕ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿತ್ತು. ವಾಸ್ಕೋಡಗಾಮನ ಈ ಸಾಹಸಮಯ ಅನ್ವೇಷಣೆಯಿಂದ ಸುಮಾರು ಎಂಟು ಶತಮಾನಗಳ ಕಾಲ ವೆನಿಷಿಯಾ ಮತ್ತು ಈಜಿಪ್ಟ್ ದೇಶಗಳು ಜಾಗತಿಕ ವ್ಯಾಪಾರ ವಹಿವಾಟುಗಳಿಗೆ ಸಂಬಂಧಿಸಿ ಹೊಂದಿದ್ದ ಏಕಸ್ವಾಮ್ಯದ ಪರಮಾಧಿಕಾರವನ್ನು ಕೊನೆಗಾಣಿಸಲಾಯಿತು. ಕ್ರಿಶ್ಚಿಯನ್ ಮತದ ಪ್ರಚಾರಕ್ಕೆ ಹೊಸ ಭೂಮಿಕೆಯನ್ನು ಸಿದ್ಧಪಡಿಸಲಾಯಿತು. ಪಣಿಕ್ಕರ್‌ರವರು ಗುರುತಿಸಿರುವಂತೆ, "ರಾಜಕೀಯವಾಗಿ ಭಾರತವು ಯುರೋಪ್ ದೇಶದೊಂದಿಗೆ ಇದ್ದ ಪ್ರತ್ಯೇಕತೆಯನ್ನು ಕೊನೆಗಾಣಿಸಲಾಯಿತು". ವಾಸ್ತವಿಕವಾಗಿ ಇದು ಕೇವಲ ರಾಜಕೀಯವಾಗಿ ಮಾತ್ರವಲ್ಲ ಧಾರ್ಮಿಕತೆಗೆ ಸಂಬಂಧಿಸಿಯೂ ಇದ್ದ ಪ್ರತ್ಯೇಕತೆ ಕೊನೆಗಾಣಿಸಲ್ಪಟ್ಟು ಕ್ರೈಸ್ತ ಧರ್ಮವು ಭಾರತಕ್ಕೆ ಎರಡನೆಯ ಅಥವಾ ಕೊನೆಯ ಬಾರಿಗೆ ಬಂದ ಧರ್ಮ ಎಂಬುದು ಈ ಸಾಹಸಮಯ ನೌಕಾಯಾನದ ಫಲಶ್ರುತಿಯಾಗಿದೆ.

ಈ ಚಾರಿತ್ರಿಕ ಪ್ರಕ್ರಿಯೆಯಲ್ಲಿ ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ನಡೆಸಿದ ಪ್ರಾರಂಭದ ಚಟುವಟಿಕೆಗಳು ಕೇವಲ ಸಾಂಕೇತಿಕವಾಗಿರದೆ ಅಚ್ಚಳಿಯದ ಐತಿಹಾಸಿಕ ಹೆಗ್ಗುರುತುಗಳಾಗಿದೆ. ಈ ಅಧ್ಯಾಯದಲ್ಲಿ ಪ್ರಸ್ತುತಪಡಿಸಿರುವ ಸುಮಾರು ೧೫ ವರ್ಷಗಳ ಬೆಳವಣಿಗೆಯ ಗತಿ ವಾಣಿಜ್ಯೋದ್ಯಮದ ಹಿನ್ನೆಲೆಯಲ್ಲಿ ನಡೆದ ಸಂಘರ್ಷವಾಗಿದೆ. ಇದರೊಂದಿಗೆ ಅದು ಮೂಲಭೂತ ಗುರಿಗಳಾದ ರಾಜಕೀಯ ಮತ್ತು ಧಾರ್ಮಿಕ ಕರ್ತವ್ಯಗಳನ್ನು ಈಡೇರಿಸಿ ಯೋಗ್ಯಭೂಮಿಕೆಯನ್ನು ಸಿದ್ಧಪಡಿಸಿದ ಕಾಲಾವಧಿಯಾಗಿದೆ.

ವ್ಯಾಪಾರೋದ್ಯಮ ಎಂಬುದು ಸಮುದ್ರದೊಂದಿಗೆ ಅವಿನಾಭಾವ ಸಂಬಂಧ ಹೊಂದಿರುವ ತೀರ ಪ್ರದೇಶದಲ್ಲಿ ವಾಸಿಸುತ್ತಿರುವ ಜನಸಮುದಾಯದ ಅತ್ಯಂತ ಪ್ರಮುಖ ಕಾಯಕ ಆಗಿದ್ದು ಇವರಿಗೆ 'Territory (ಭೂಪ್ರದೇಶ)ಗಿಂತ Trade' (ವ್ಯಾಪಾರ) ಹಾಗೂ 'Conquest (ಆಕ್ರಮಣ)ಗಿಂತ Commerce' (ವಾಣಿಜ್ಯ) ಅತ್ಯಂತ ಪ್ರಮುಖವಾಗಿದೆ. ಆದರೆ ದೂರದ ದೇಶಗಳೊಂದಿಗೆ ವ್ಯಾಪಾರವನ್ನು ನಡೆಸಬೇಕಾದರೆ ನಿರ್ದಿಷ್ಟ ಸ್ಥಳಗಳನ್ನು ಕೈ ವಶಪಡಿಸಲು ಶಸ್ತ್ರಸಜ್ಜಿತ ಹಡಗು ಅನಿವಾರ್ಯವಾಗಿದೆ ಎಂಬುದು ಯುರೋಪಿಯನ್ ರಾಷ್ಟ್ರಗಳ ತಿಳುವಳಿಕೆಯಾಗಿತ್ತು. ನಿರಂತರ ರಾಜತಾಂತ್ರಿಕ ಸಂಬಂಧಗಳನ್ನು ಪ್ರಾಯೋಗಿಕವಾಗಿ ಎಲ್ಲರಿಗೂ ತಿಳಿದಿರುವ ಅಕ್ಷಾಂಶ– ರೇಖಾಂಶದ ಹೊರತಾಗಿ ನಡೆಸಲು ಸಾಧ್ಯವಿಲ್ಲವೆಂಬುದು ಸರ್ವಕಾಲಿಕ ಅಂಶವಾಗಿದೆ (ಪಣಿಕ್ಕರ್,೧೯೨೯:೩೫) ಪಣಿಕ್ಕರ್‌ರವರ ಈ ಅಭಿಪ್ರಾಯ ಮಹತ್ವಪೂರ್ಣವಾಗಿದೆ. ಆದುದರಿಂದಲೇ ವಾಸ್ಕೋಡಗಾಮ ಮತ್ತು ಅನಂತರದ ಎಲ್ಲಾ ಹಡಗುಗಳಲ್ಲಿ ತಕ್ಕಡಿ, ಖಡ್ಗ ಮತ್ತು ಶಿಲುಬೆಗಳಿಂದ ಸುಸಜ್ಜಿತವಾದ ವ್ಯಾಪಾರಿಗಳು, ಸೈನಿಕರು ಮತ್ತು ಪಾದರಿಗಳು ಭಾರತಕ್ಕೆ ಬಂದರು. ಎಲ್ಲೆಲ್ಲಿ ಪೋರ್ಚುಗೀಸ್

ನಾಯಕರು, ದಳವಾಯಿಗಳು ತಮ್ಮ ರಾಷ್ಟ್ರದ ನಿಶಾನೆಯನ್ನು ನೆಟ್ಟರೋ ಅದರ ಹಿಂದೆಯೇ ಪೋರ್ಚುಗೀಸ್ ಪಾದರಿಗಳು ಕ್ರೈಸ್ತ ಮತ ಪ್ರಚಾರದ ಧ್ವಜವನ್ನು ನೆಟ್ಟರು. ಮಳಿಗೆಗಳ ಸಾಲು ಹೆಚ್ಚಿದಂತೆ ಮತ ಪ್ರಚಾರದ ಕಾರ್ಯವು ಕೈಬೀಸಿ ಕರೆಯಲಾರಂಭಿಸಿತು. ಮಳಿಗೆ ಮತ್ತು ಇಗರ್ಜಿ ಇವುಗಳು ಕ್ರೈಸ್ತ ಮತದ ಕೇಂದ್ರ ಸ್ಥಾನಗಳಾದವು (ಸಲ್ಡಾನ ೧೯೨೭:೨೨).

ಸಮುದ್ರಯಾನಕ್ಕಿದ್ದ ಅಗಾಧವಾದ ತಾಕತ್ತಿನ ವಿರಾಟ ಸ್ವರೂಪವನ್ನು ಭಾರತದಲ್ಲಿರುವ ರಾಜರಿಗೆ ಸರಿಯಾದ ಅರಿವು ಆ ತನಕ ಇರಲಿಲ್ಲ. ಇದನ್ನು ಸರಿಯಾಗಿ ಅರ್ಥೈಸಿದ ಘಟನೆ ವಾಸ್ಕೋಡಗಾಮನ ಭಾರತಕ್ಕೆ ನೌಕಾಯಾನದ ಅನ್ವೇಷಣೆಯಾಗಿದೆ. ಇದು ಪ್ರಬಲ ರಾಜಕೀಯ ಶಕ್ತಿಯನ್ನು ತಂದು ಕೊಡಬಹುದೆಂಬುದರ ಜ್ಞಾನವೂ ಅವರಿಗೆ ಇರಲಿಲ್ಲ. ವಾಸ್ಕೋಡಗಾಮನ ಅನ್ವೇಷಣೆ ಭಾರತಕ್ಕೆ ಹೊಸ ಮೇರೆಯನ್ನು ನಿರ್ಧರಿಸಿತು. ಈ ಮೇರೆ ರಾಜಕೀಯ ಮತ್ತು ವಾಣಿಜ್ಯದ ಮೇರೆಯಾಗಿದೆ (ಪಣಿಕ್ಕರ್ ೧೯೨೭:೩೩) ಎಂಬ ವಿಶ್ಲೇಷಣೆ ಸಾರ್ವಕಾಲಿಕ ಸತ್ಯವಾಗಿದೆ.

ವಾಸ್ಕೋಡಗಾಮ ಮತ್ತು ಪೋರ್ಚುಗೀಸರ ಈ ಹೊಸ ಅನ್ವೇಷಣೆಯ ಅಪಾಯಕಾರಿ ದುಷ್ಪರಿಣಾಮಗಳನ್ನು ಸರಿಯಾಗಿ ಗುರುತಿಸಿರುವ ಸಮುದಾಯವೆಂದರೆ ವ್ಯಾಪಾರದಲ್ಲೇ ನಿರತರಾಗಿರುವ ದೇಶೀಯ ಮತ್ತು ವಿದೇಶೀಯ ಮುಸ್ಲಿಂ ಸಮುದಾಯವಾಗಿದೆ. ಇದೇ ರೀತಿ ಮಲಬಾರ್‌ನಲ್ಲಿ ಸೈನಿಕ ವ್ಯವಸ್ಥೆಯಲ್ಲಿ ನಿರತರಾಗಿದ್ದ ನಾಯರ್ ಸಮುದಾಯವಾಗಿದೆ. ಅಂತರಾಷ್ಟ್ರೀಯವಾಗಿ ಟರ್ಕರು ಮತ್ತು ಈಜಿಪ್ತಿಯನ್ನರು ಈ ಅಪಾಯವನ್ನು ಅರಿತು ಪೋರ್ಚುಗೀಸರೊಂದಿಗೆ ನಿರಂತರವಾಗಿ ಸೆಣಸಾಡಿದರೂ ಸುಸಜ್ಜಿತವಾದ ಸೈನಿಕ ವ್ಯವಸ್ಥೆ ಮತ್ತು ಯುದ್ಧೋಪಕರಣಗಳ ಹಿನ್ನೆಲೆಯಲ್ಲಿ ಪೋರ್ಚುಗೀಸರ ಕೈ ಮೇಲಾಯಿತು.

ವಾಸ್ಕೋಡಗಾಮನು ಪ್ರಥಮ ಯಶಸ್ವೀ ನೌಕಾಯಾನವನ್ನು ಮುಗಿಸಿ ಹಿಂತಿರುಗಿ ಬಂದ ಮೇಲೆ ೧೪೯೯ರಲ್ಲಿ ಪೋರ್ಚುಗೀಸ್ ಸರಕಾರ ಕೇಪ್ ವ್ಯಾಪಾರ ಮಾರ್ಗದ ಸಂಪೂರ್ಣ ಪ್ರಯೋಜನ ಪಡೆಯುವ ದೃಷ್ಟಿಯಿಂದ 'ಸಿಂಡಿಕೇಟ್'ನ್ನು ರೂಪೀಕರಿಸಿತು. ಇದರಲ್ಲಿ ರಾಜನು ಮಾತ್ರವಲ್ಲದೆ ಕೆಲವು ಖಾಸಗಿ ಹಿತಾಸಕ್ತಿದಾರರುಗಳನ್ನು ಸೇರಿಸಿಕೊಳ್ಳಲಾಗಿತ್ತು. ಆದರೂ ಸಹ ಈ ಸಿಂಡಿಕೇಟ್ ಸ್ಪಷ್ಟವಾಗಿ ವ್ಯಾಪಾರದ ಏಕಸ್ವಾಮ್ಯಧಿಕಾರವನ್ನು ಸಂಪೂರ್ಣವಾಗಿ ಅನುಭವಿಸುವ ಪ್ರಯತ್ನ ಮಾಡಿಕೊಳ್ಳಲಿಲ್ಲ. ಬದಲಾಗಿ ೧೪೯೯–೧೫೦೪ರ ಐದು ವರ್ಷಗಳ ಕಾಲಾವಧಿಯಲ್ಲಿ ಭಾರತಕ್ಕೆ ನೌಕಾಯಾನದ ಹಡಗುಗಳನ್ನು ಕಳುಹಿಸುವ ಜವಾಬ್ದಾರಿ ನಿರ್ವಹಿಸಿತು. ಅನಂತರ ಅತ್ಯಂತ ತಾರತಮ್ಯದ ಹೆಚ್ಚಿನ ಲಾಭವನ್ನು ರಾಜನಿಗೆ ದೊರಕಿಸಿಕೊಡುವ ಉದ್ದೇಶದಿಂದ ನೀತಿಗಳನ್ನು ಮಾರ್ಪಡಿಸಿಕೊಳ್ಳಲಾಯಿತು. ೧೫೦೬ರ ನಂತರವಂತೂ ಬೆಲೆಬಾಳುವ ಲೋಹಗಳಿಗೆ ಪರ್ಯಾಯವಾಗಿ ಪೋರ್ಚುಗಲ್ ದೇಶವು ಇಂಡಿಯಾದಿಂದ ಕರಿಮೆಣಸು ಮತ್ತಿತರೆ ಸಾಂಬಾರು ಜಿನಸುಗಳನ್ನು ಏಕಸ್ವಾಮ್ಯದ ನೆಲೆಯಲ್ಲಿ ಪೋರ್ಚುಗಲ್ ರಾಜನ ಪರವಾಗಿ ಮಾತ್ರ ವ್ಯಾಪಾರ ಪ್ರಾರಂಭಿಸಿತು(ಡಿಸ್ನಿ ೨೦೧೦:೭೧). ಬಹಳ ಸ್ಪಷ್ಟವಾಗಿ ವ್ಯಾಪಾರ, ರಾಜಾಧಿಕಾರಗಳ ಮುಖವಾಡದಲ್ಲಿ ಧರ್ಮವೂ ಸೇರ್ಪಡೆಯಾಯಿತು. ಇಲ್ಲಿ ಮೇಲ್ನೋಟಕ್ಕೆ ಈ ಸಿಂಡಿಕೇಟ್‌ನ ಸಾರಾಂಶದಲ್ಲಿ 'ಮಿಲಿಟರಿಸಂ'ನ ಪ್ರಸ್ತಾಪವಿಲ್ಲ. ಬದಲಾಗಿ ಟ್ರೇಡ್‌ರೂಟ್‌ನ ಸಂಪೂರ್ಣ ಬಳಕೆಯ ಉದ್ದೇಶ ವ್ಯಕ್ತವಾಗಿದೆ.

ಆದರೆ ರಾಜನ ನೇತೃತ್ವದ ಸಿಂಡಿಕೇಟ್ ಎಂದಾಕ್ಷಣ ಸೈನಿಕ ವ್ಯವಸ್ಥೆಯು ಅವಿಭಾಜ್ಯ ಅಂಗವಾಗಿದೆ. ಇಲ್ಲಿ ಸರ್ ವಿಲಿಯಂ ಹಂಟರ್‌ರವರ ಉಲ್ಲೇಖವನ್ನು ಗಮನಿಸುವುದು ಸೂಕ್ತವಾಗಿದೆ.

> ತನ್ನ ತಡೆಯಿಲ್ಲದ ಮತ್ತು ಶಕ್ತಿಯುತವಾದ ಕಾರ್ಯಾಚರಣೆಯ ಮೂಲಕ ಮಾಡಿದ ವ್ಯಾಪಾರದಿಂದಾಗಿ, ವ್ಯಾಪಾರಿ ಕಂಪನಿಯೊಂದು ಸಾಮ್ರಾಜ್ಯವೊಂದನ್ನು ಆಕ್ರಮಿಸಿಕೊಳ್ಳಬಹುದಾಗಿದೆ. ಇತಿಹಾಸದ ಆರಂಭದ ಹಂತದಲ್ಲಿ ಚಾರ್ಟರ್ಡ್ ಕಂಪನಿಯೊಂದು ಮಿಲಿಟರಿಸಂಗೆ ಒತ್ತು ಕೊಡುವುದು ಅತ್ಯಂತ ಅಪಾಯಕಾರಿಯಾದ ವಿದ್ಯಮಾನವಾಗಿದೆ (ವಿಲಿಯಂ ೧೯೧೨:೫) (ಭಾಷಾಂತರ ಲೇಖಕರದು).

ಆದ್ದರಿಂದ ಪೋರ್ಚುಗೀಸರ ವ್ಯಾಪಾರದ ದಂಡಯಾತ್ರೆಯಲ್ಲಿ ಪ್ರಾರಂಭದಿಂದಲೇ ಸಂಘರ್ಷ ಮತ್ತು ದೌರ್ಜನ್ಯಗಳು ರಕ್ತಸಿಕ್ತ ಅಧ್ಯಾಯವಾಗಿದೆ. ಶಾಂತಿಯ ಮುಖವಾಡ ಕನಿಷ್ಟ ಪಕ್ಷ ಧಾರ್ಮಿಕ ಗುರುಗಳ ಪಾಲಿಗೂ ಇರಲಿಲ್ಲ. ಧರ್ಮಗುರುಗಳು ಯುದ್ಧರಂಗಕ್ಕೆ ಹೋಗುವಾಗ ದಂಡನಾಯಕನಿಗೆ ಶಿಲುಬೆಯೊಂದಿಗೆ ಆಶೀರ್ವಚನ ನೀಡುತ್ತಿದ್ದರು. ಕೆಲವು ಧರ್ಮಗುರುಗಳಂತೂ ಸೈನಿಕರಾಗಿ, ರಾಜತಾಂತ್ರಿಕ, ಸಂಧಾನಕಾರರಾಗಿ, ವ್ಯಾಪಾರಿಗಳಾಗಿ, ಏಜೆಂಟರಾಗಿಯೂ ಕಾರ್ಯಾಚರಿಸಿರುವುದು ಪ್ರಾರಂಭದಿಂದಲೇ ನಡೆದು ಬಂದಿರುತ್ತದೆ.

ಸ್ಥಳೀಯ ಪಾಳೆಯಗಾರರನ್ನು "ರಾಜ"ರೆಂದು ಉತ್ಪ್ರೇಕ್ಷೆಯಿಂದ ಸಂಬೋಧಿಸುವ ಮೂಲಕ ತೀವ್ರ ಮೇಲ್ಮಟ್ಟದ ಗೌರವಾದರ ನೀಡುವ ನಾಟಕವಾಡಿದ ಪೋರ್ಚುಗೀಸ್ ದಂಡನಾಯಕರುಗಳು ಪಾಳೆಯಗಾರರ ಮಧ್ಯದಲ್ಲಿದ್ದ ಸಾಮಾನ್ಯ ದ್ವೇಷವನ್ನು ಸಮರ್ಥವಾಗಿ ಉಪಯೋಗಿಸಿಕೊಂಡರು. ತಮ್ಮ ರಾಜಕೀಯ ಮತ್ತು ವಾಣಿಜ್ಯಾತ್ಮಕ ಬೇಳೆ ಬೇಯಿಸಿದರು. ಮುಸ್ಲಿಂ ಮತೀಯರ ಮೇಲೆ ಮತೀಯ ಮತ್ತು ವ್ಯಾಪಾರದ ದ್ವೇಷವನ್ನು ತನ್ನ ಮೂಲ ಕಾರ್ಯಯೋಜನೆಯಲ್ಲಿ ಅಸ್ತ್ರವನ್ನಾಗಿಸಿದ ಪೋರ್ಚುಗೀಸರು, ವಿಜಯನಗರ ಸಾಮ್ರಾಜ್ಯ ಮತ್ತು ಆದಿಲ್‌ಷಾಹಿಗಳ ಮಧ್ಯೆ ಇದ್ದ ದ್ವೇಷವನ್ನು ಯಶಸ್ವಿಯಾಗಿ ಉಪಯೋಗಿಸಿಕೊಂಡು ತನ್ನ ವ್ಯಾಪಾರಿ ನೀತಿಗೆ ಮತ್ತು ರಾಜಪ್ರಭುತ್ವ ಬಲಗೊಳಿಸುವ ನೀತಿಗೆ ಸೋಪಾನವಾಗಿ ಬಳಸಿಕೊಂಡರು.

ಅಲ್ಫಾನ್ಸೋ ಅಲ್ಬುಕರ್ಕ್ ೧೫೦೯ ರ ನವೆಂಬರ್ ೫ ರಂದು ಅಧಿಕಾರ ವಹಿಸುವ ಮೂಲಕ ಭಾರತ ಮತ್ತು ಪಶ್ಚಿಮ ಏಷ್ಯಾ ದೇಶ ಸಮೂಹಗಳಲ್ಲಿ ಪೋರ್ಚುಗೀಸ್ ರಾಜಕೀಯದ ಶಕೆ ಪ್ರಾರಂಭವಾಯಿತು. ಆತ ಭಾರತವನ್ನು ಭೌಗೋಳಿಕವಾಗಿ ತನ್ನ ವಶಕ್ಕೆ ಸೇರ್ಪಡೆಗೊಳಿಸಿ ರಾಜಕೀಯ ಅಧಿಕಾರ ಚಲಾಯಿಸುವ ಮತ್ತು ಸಾಮ್ರಾಜ್ಯ ಕಟ್ಟುವ ಕನಸು ನನಸು ಮಾಡಿದ ಗವರ್ನರ್ ಆಗಿದ್ದಾನೆ. ಈತನ ಈ ಚಾರಿತ್ರಿಕ ಪಾತ್ರದ ಹಿಂದೆ, ಕರಾವಳಿ ಕರ್ನಾಟಕದ ಗೇರುಸೊಪ್ಪೆಯ ಸಾಮಂತರ ಸಲಹೆ, ಸೈನಿಕ ಸಹಾಯ ಮತ್ತು ಮುಸ್ಲಿಂ ವಿರೋಧಿ ಮನೋಭಾವಗಳ ಸಮ್ಮಿಲನಗಳು ಪಾತ್ರವಹಿಸಿದೆ. ಕಲ್ಲಿಕೋಟೆಯಲ್ಲಿ ಸೋತು, ಮುಖಭಂಗ ಅನುಭವಿಸಿ ಮಲಕಾ ದೇಶಕ್ಕೆ ಸಾಗುತ್ತಿರುವ ಅಲ್ಬುಕರ್ಕ್‌ನ ಸೈನ್ಯವನ್ನು ತಡೆದು ನಿಲ್ಲಿಸಿ ಗೋವಾದ ಮೇಲೆ ಯುದ್ಧ ಸಾರುವಂತೆ ಸಲಹೆ ಮತ್ತು ಒತ್ತಡ ಹೇರಿದ ಗೇರುಸೊಪ್ಪೆಯ ದಂಡನಾಯಕ ತಿಮ್ಮಯ್ಯ (ತಿಮೋಜ)ನ ಪಾತ್ರ ಚಾರಿತ್ರಿಕವಾಗಿದೆ. ಬಿಜಾಪುರದ ಆದಿಲ್ ಷಾಹಿ ಸೈನ್ಯದ ಪ್ರಮುಖ ದೌರ್ಬಲ್ಯಗಳನ್ನು ತಿಳಿಸಿ ಅಲ್ಬುಕರ್ಕ್‌ನ ಮನವೊಲಿಸಿದ ಜನರಲ್ ತಿಮ್ಮಯ್ಯ ೧೫೧೦ರಲ್ಲಿ ಗೋವಾವನ್ನು ವಶಪಡಿಸಿಕೊಂಡ ಮೇಲೆ ಪ್ರಪ್ರಥಮ ಗವರ್ನರ್ ಆಗಿಯೂ ಕಾರ್ಯನಿರ್ವಹಿಸಿದನು. ಈ ಒಟ್ಟಾರೆ ಪ್ರಕ್ರಿಯೆಯಲ್ಲಿ ಅಲ್ಬುಕರ್ಕ್‌ನ ರಣನೀತಿಯು ಮೂರು ಪ್ರಮುಖ ನಿರ್ಣಾಯಕ ಹಂತಗಳನ್ನು ಹೊಂದಿದೆ.

ಅ. ೧೫೧೦ರಲ್ಲಿ ಗೋವಾವನ್ನು ವಶಪಡಿಸಿಕೊಂಡು ಅದನ್ನು ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಭಾರತದ ಪಶ್ಚಿಮ ಸಮುದ್ರ ಮತ್ತು ಕರಾವಳಿಯ ಆಯಕಟ್ಟಿನ ಭೂಪ್ರದೇಶಗಳ ಮೇಲೆ ಹತೋಟಿ ಹೊಂದಲು ಸಾಧ್ಯವಾಯಿತು.

ಬ. ೧೫೧೧ರಲ್ಲಿ ಮಲಕಾವನ್ನು ಜಯಿಸುವ ಮುಖಾಂತರ ಭಾರತ ಮತ್ತು ಚೀನಾ ದೇಶಗಳ ಮಧ್ಯದ ಸಮುದ್ರ ವ್ಯಾಪಾರವನ್ನು ಪೂರ್ಣ ಪ್ರಮಾಣದಲ್ಲಿ ತನ್ನ ಹತೋಟಿಗೆ ತಂದು ನಿಯಂತ್ರಣ ಹೇರಲು ಸಾಧ್ಯವಾಯಿತು.

ಕ. ೧೫೧೫ ರಲ್ಲಿ ಹೊರ್ಮುಜ್ ಮೇಲೆ ಪೋರ್ಚುಗೀಸರು ಸಾರ್ವಭೌಮ ಅಧಿಪತ್ಯವನ್ನು ಹೊಂದುವ ಮೂಲಕ ಪರ್ಷಿಯನ್ ಕೊಲ್ಲಿ ರಾಷ್ಟ್ರಗಳ ಮಧ್ಯೆ ಇರುವ ವ್ಯಾಪಾರದ ಪ್ರಮುಖ ಕೊಂಡಿಯನ್ನು ಪೋರ್ಚುಗೀಸರು ತಮ್ಮ ತೆಕ್ಕೆಗೆ ಸೇರಿಸಿಕೊಂಡರು.

ಆದುದರಿಂದ ಅಲ್ಬುಕರ್ಕ್‌ನ ಅಧಿಕಾರಾವಧಿಯಲ್ಲಿ ಮೇಲಿನ ಮೂರು ಪ್ರಮುಖ ಆಯಕಟ್ಟಿನ ಪ್ರದೇಶಗಳ ಮೇಲೆ ನಿಯಂತ್ರಣ ಮತ್ತು ಸಾರ್ವಭೌಮ ಅಧಿಕಾರ ಹೊಂದಿ ಮುಸ್ಲಿಂ ವ್ಯಾಪಾರಿ ವಲಯದಿಂದ ಹಿಂದಿನ ಎಂಟು ಶತಮಾನಗಳಿಂದ ಹೊಂದಿದ್ದ ನಿಯಂತ್ರಣವನ್ನು ಸಂಪೂರ್ಣವಾಗಿ ತಹಬಂದಿಗೆ ತಂದು ಅವರ ಏಕಸ್ವಾಮ್ಯಕ್ಕೆ ತೆರೆಯನ್ನು ಎಳೆಯಲಾಯಿತು.

ಬಿ.ಎಸ್. ಶಾಸ್ತ್ರಿಯವರು ಉಲ್ಲೇಖಿಸಿರುವಂತೆ ಭಾರತದ ಭೂಪ್ರದೇಶದ ಮೇಲೆ ಸಮಗ್ರ ರಾಜಕೀಯ ಅಧಿಕಾರದ ಸಾಮ್ರಾಜ್ಯವನ್ನು ನಿರ್ಮಿಸಲು ಪೋರ್ಚುಗೀಸರಿಗೆ ಸಾಧ್ಯವಾಗಲಿಲ್ಲ. ಆದರೆ ಅವರು ಹೊಂದಿದ್ದ ಸುಸಜ್ಜಿತವಾದ ಸೈನ್ಯದ ಮುಖಾಂತರ ಭಾರತದ ಪಶ್ಚಿಮ ಕರಾವಳಿಯ ತೀರ ಮತ್ತು ಸಮುದ್ರ ವ್ಯಾಪಾರದ ಮೇಲೆ ಸಂಪೂರ್ಣ ಸಾರ್ವಭೌಮ ಅಧಿಕಾರವನ್ನು ಹೊಂದಿದರು. ಇದು ಸುಮಾರು ೧೬ನೇ ಶತಮಾನದ ಮಧ್ಯಭಾಗದಲ್ಲಿ ಡಚ್ಚರು ಮತ್ತು ಇಂಗ್ಲೀಷರು ಈ ಭಾಗದಲ್ಲಿ ಪ್ರವೇಶಿಸಿ ಸ್ಪರ್ಧೆಗೆ ಇಳಿಯುವ ವರೆಗೆ ಅಜೇಯರಾಗಿಯೇ ಉಳಿದಿತ್ತು(ಶಾಸ್ತ್ರಿ ೨೦೦೦:೫).

ಪೋರ್ಚುಗೀಸರು ಕರಿಮೆಣಸಿನ ವ್ಯಾಪಾರದ ಮೇಲೆ ಹೇರಿದ್ದ ನಿರ್ಬಂಧದ ವಾಣಿಜ್ಯ ನಿಯಮಗಳು ಸಂಪೂರ್ಣವಾಗಿ ಜಾರಿಗೆ ಬರಲಿಲ್ಲ. ಈ ಪ್ರಕ್ರಿಯೆಯಲ್ಲಿ ಪೋರ್ಚುಗೀಸರ ಕಾರ್ಯವೈಖರಿಯಲ್ಲಿ ಬಹಳಷ್ಟು ನಿಯಮಗಳ ಸವೆತ ಮತ್ತು ಕೊರತೆ ಇತ್ತು. ಅದೇ ಸಮಯದಲ್ಲಿ ಕೆಲವೊಂದು ಸಂದರ್ಭಗಳಲ್ಲಿ ಜನತೆಯಿಂದಲೂ ಬಹಿರಂಗವಾದ ಶಸ್ತ್ರಸಜ್ಜಿತ ಪ್ರತಿರೋಧಗಳೂ ನಡೆಯಿತು (ಪಿಯರ್‌ಸನ್ ೨೦೦೪:೨೮).

ಪೋರ್ಚುಗೀಸರು ವ್ಯಾಪಾರ-ವ್ಯವಹಾರದ ಪ್ರಕ್ರಿಯೆಯಲ್ಲಿ ೧೬-೧೭ನೇ ಶತಮಾನದಲ್ಲಿ ಗಮನಾರ್ಹವಾದ ತಾಂತ್ರಿಕತೆಯಂತಹ ಕೊಡುಗೆ ನೀಡಲಿಲ್ಲ. ಅದೇ ರೀತಿ ವ್ಯಾಪಾರ-ವ್ಯವಹಾರದ ನಿರ್ವಹಣೆಯಲ್ಲೂ ಹೊಸತನವನ್ನು ಹಾಗೂ ಹೊಸ ವಿಧಾನವನ್ನು ಪ್ರಾಯೋಗಿಕ ನೆಲೆಯಲ್ಲಿ ಅನುಸರಿಸಿಲ್ಲ. ಬದಲಾಗಿ ಚಾಲ್ತಿಯಲ್ಲಿದ್ದಂತಹ ಸರಕು ಸರಬರಾಜಿನ ಕೊಂಡಿಗೆ ಖಡ್ಗ, ತಕ್ಕಡಿ ಶಿಲುಬೆ ಮತ್ತು ಬೈಬಲ್‌ಗಳನ್ನು ಸಂಯೋಜಿಸಿರುವುದನ್ನು ಹೊರತುಪಡಿಸಿ ಹೊಸ ಆಯಾಮವನ್ನು ನೀಡಲಿಲ್ಲ. ಸರಬರಾಜು ಮತ್ತು ಬೇಡಿಕೆಯ ವಾಣಿಜ್ಯೋದ್ಯಮದ ಪ್ರಕ್ರಿಯೆಯನ್ನು ಎಂ.ಎನ್. ಪಿಯರ್‌ಸನ್‌ರವರ ಅಭಿಪ್ರಾಯ ಪ್ರಕಾರ

"ಪೋರ್ಚುಗೀಸರು ಸರಕುಗಳ ಸರಬರಾಜಿಗಾಗಿ ಉತ್ಪಾದನಾ ಪ್ರದೇಶಗಳ ಸಣ್ಣ ಪುಟ್ಟ ಪಾಳೆಯಗಾರರನ್ನೇ ಆಶ್ರಯಿಸಿದ್ದರು. ಉತ್ಪಾದಕರು ಮತ್ತು ರಫ್ತುದಾರರ ಮಧ್ಯೆ ಇರುವ ಮಧ್ಯವರ್ತಿ ವ್ಯಾಪಾರಸ್ಥರನ್ನು ವಸ್ತುಗಳ ಸರಬರಾಜಿನ ಪ್ರಕ್ರಿಯೆಯಲ್ಲಿ ಅವಲಂಬಿಸಿದ್ದರು" (ಪಿಯರ್‌ಸನ್ ೨೦೦೪:೨೫).

ಈ ಪ್ರಾರಂಭದ ಅವಧಿಯಲ್ಲಿ ಭಾರತಕ್ಕೆ ಆಮದಾಗುತ್ತಿದ್ದ ಪರ್ಷಿಯಾದ ಕುದುರೆಗಳ ವ್ಯಾಪಾರ ನಿರ್ಣಾಯಕ ತಿರುವನ್ನು ಪಡೆದಿದೆ. ಈ ಕುದುರೆಗಳಿಗೆ ವಿಜಯನಗರ ಸಾಮ್ರಾಜ್ಯದಿಂದ ಮತ್ತು ದಖ್ಖನ್‌ನ ಮುಸ್ಲಿಂ ರಾಜರುಗಳಿಂದ ಭಾರೀ ಬೇಡಿಕೆಗಳು ಇತ್ತು. ವಿಜಯನಗರಕ್ಕೆ ಭಟ್ಕಳ ಬಂದರಿನ ಮೂಲಕ ಸರಬರಾಜು ಆಗುತ್ತಿತ್ತು. ಆದುದರಿಂದಲೇ ಪೋರ್ಚುಗೀಸರು ಭಟ್ಕಳ ಬಂದರಿನಲ್ಲಿ ಮಳಿಗೆಯನ್ನು ಪ್ರಾರಂಭಿಸಲು ತೀವ್ರ ಪ್ರಯತ್ನ ನಡೆಸಿದರು. ನಿರಂತರವಾಗಿ ವಿಜಯನಗರ ರಾಜಧಾನಿಗೆ ನಿಯೋಗವನ್ನು ಕಳುಹಿಸಿದರೂ, ಅದಕ್ಕೆ ವಿಜಯನಗರ ಸಾಮ್ರಾಜ್ಯ ಸಕಾರಾತ್ಮಕವಾಗಿ ಸ್ಪಂದಿಸಿರಲಿಲ್ಲ. ಗೋವಾವನ್ನು (೧೫೧೦) ಪೋರ್ಚುಗೀಸರು ವಶಪಡಿಸಿಕೊಂಡ ಮೇಲೆ ಭಟ್ಕಳದಲ್ಲಿ ಯಾವುದೇ ಕುದುರೆಗಳ ವ್ಯಾಪಾರಕ್ಕೆ ಆಸ್ಪದ ನೀಡದೆ ವಿಜಯನಗರ ಸಾಮ್ರಾಜ್ಯದ ಮೇಲೆ ಪರೋಕ್ಷ ಒತ್ತಡ ಹೇರಿದರು. ಅಲ್ಬುಕರ್ಕ್‌ನು ಗೋವಾವನ್ನು ಕೈವಶಪಡಿಸಿಕೊಂಡ ನಂತರ ವಿಜಯನಗರದ ರಾಯಭಾರಿ ನಿಯೋಗ ಕುದುರೆಗಳ ವ್ಯಾಪಾರ–ವ್ಯವಹಾರ ನಡೆಸುವಲ್ಲಿ ಸಂಪೂರ್ಣ ಹಕ್ಕು ನೀಡಬೇಕೆಂಬ ಮರು ಚರ್ಚೆ ನಡೆಸಿತು (ಪಿಯರ್ ಸನ್ ೨೦೦೪:೭೦).

ಪೋರ್ಚುಗೀಸರು ಈ ರೀತಿ ಪ್ರಾರಂಭದ ೧೫ ವರ್ಷಗಳ ಕಾಲಾವಧಿಯಲ್ಲಿ ವಾಣಿಜ್ಯೋದ್ಯಮಕ್ಕಾಗಿ ತೀವ್ರ ಸ್ವರೂಪದ ಸಂಘರ್ಷವನ್ನು ಸಾಮಂತ ರಾಜರುಗಳೊಂದಿಗೆ ಮತ್ತು ವ್ಯಾಪಾರಿಗಳೊಂದಿಗೆ ಕರಾವಳಿ ಕರ್ನಾಟಕದಲ್ಲಿ ನಡೆಸಿದರು. ಪೋರ್ಚುಗೀಸರು ಕರಾವಳಿ ಕರ್ನಾಟಕವನ್ನು ತನ್ನ ವಸಾಹತುವನ್ನಾಗಿ ಪರಿವರ್ತಿಸುವ ಯಾವುದೇ ಪ್ರಯತ್ನವನ್ನು ಮಾಡದೆ ಕೇವಲ ವಾಣಿಜ್ಯ ಏಕಸ್ವಾಮ್ಯದ ಮೂಲಕ ಲಾಭಗಳಿಸುವ ಉದ್ದೇಶವನ್ನು ಹೊಂದಿದ್ದರು. ಅಲ್ಲಿಯವರೆಗೆ ಅಸಂಘಟಿತವಾಗಿದ್ದ ವಾಣಿಜ್ಯ ಉತ್ಪನ್ನಗಳನ್ನು ಸಂಘಟಿತ ಸ್ವರೂಪಕ್ಕೆ ಪರಿವರ್ತನೆಯಾಗುವ ರೀತಿಯಲ್ಲಿ ಫ್ಯಾಕ್ಟರಿ ಪದ್ಧತಿ, ಏಜೆಂಟರುಗಳ ನೇಮಕಾತಿ, ಉತ್ಪನ್ನಗಳ ಸಂಸ್ಕರಣೆ ಮೊದಲಾದ ಕ್ರಮಗಳು ಹೊಸತಾಗಿ ಜಾರಿಗೆ ಬಂತು. ಕರಾವಳಿ ಕರ್ನಾಟಕದ ಆರ್ಥಿಕತೆ ಕೃಷಿ ಪ್ರಧಾನ ವ್ಯವಸ್ಥೆಯಿಂದ ವಾಣಿಜ್ಯದತ್ತ ಪಲ್ಲಟಗೊಂಡಿರುವ ಪ್ರಾಥಮಿಕ ಲಕ್ಷಣಗಳನ್ನು ಈ ಅವಧಿಯಲ್ಲಿ ಗುರುತಿಸಬಹುದು. ಕ್ಲಾಸಿಕಲ್ ರಾಜಕೀಯ ಅರ್ಥಶಾಸ್ತ್ರದ ಪ್ರಕಾರ ಈ ಪಲ್ಲಟವು ಬಂಡವಾಳಶಾಹಿ ಆರ್ಥಿಕ ಸಂಚಯದ ಅಡಿಪಾಯವಾಗಿದೆ.

# ಟಿಪ್ಪಣಿಗಳು

೧. ಕಾನ್‌ಸ್ಟಂಟಿನೋಪಲ್‌ನ್ನು ೧೪೫೩ರಲ್ಲಿ ಟರ್ಕರು ವಶಪಡಿಸಿಕೊಳ್ಳುತ್ತಾರೆ. ಇದು ಬೈಜಾಂಟಿಕ್ ಸಾಮ್ರಾಜ್ಯದ ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು ಇದನ್ನು ಹನ್ನೊಂದನೆಯ ಕಾನ್‌ಸ್ಟಂಟ್ ಪೆಲಿಲಿಯೋಗಸ್‌ನು ಆಳುತ್ತಿದ್ದು ಟರ್ಕಿನ ಯುವ ಸುಲ್ತಾನ ೨೧ ವರ್ಷ ಪ್ರಾಯದ ಮಹಮ್ಮದ್‌ನು ೫೩ ದಿನಗಳ ಕಾಲ ಮುತ್ತಿಗೆ ಹಾಕಿ ವಶಪಡಿಸಿಕೊಳ್ಳುತ್ತಾನೆ. ಈ ಘಟನೆಯು ಮಧ್ಯಯುಗದ ಯುರೋಪಿನ ಚರಿತ್ರೆಯಲ್ಲಿ ಗಮನಾರ್ಹ ಪರಿಣಾಮಗಳನ್ನು ಬೀರಿದೆ.

೨. ಪ್ರಿನ್ಸ್(ರಾಜಕುಮಾರ್) ಹೆನ್ರಿಯು 'ಪ್ರಿನ್ಸ್ ಆಫ್ ನ್ಯಾವಿಗೇಟರ್' ಎಂದು ಚರಿತ್ರೆಯಲ್ಲಿ ಗೌರವಿಸಲ್ಪಟ್ಟಿದ್ದಾನೆ. ೧೫ನೇ ಶತಮಾನದ ಯುರೋಪಿಯನ್ ವಲಯದಲ್ಲಿ ರಾಜಕುಮಾರ್ ಹೆನ್ರಿಯ ಮೂಲ ಹೆಸರು ಇನ್‌ಫೆಂಟ್ ದಿ ಹೆನ್ರಿಕ್ ಎಂದಾಗಿತ್ತು. ಈತನು ಇಸ್ಕಾನ್ ಪ್ರಾಂತ್ಯದ ಡ್ಯೂಕ್ ಆಗಿದ್ದನು. ೧೩೯೪ರ ಮಾರ್ಚ್ ೩ ರಂದು ಹುಟ್ಟಿದ ಈತ ೧೪೬೦ ರ ನವಂಬರ ೧೩ ರಂದು ಮರಣ ಹೊಂದುತ್ತಾನೆ. ಈತನು ಸಂಶೋಧನೆ ಮತ್ತು ಸಾಹಸಯಾನಗಳಿಗೆ ರಾಜಾಶ್ರಯ ನೀಡಿದನು. ಈತನನ್ನು ಪ್ರಿನ್ಸ್ ಆಫ್ ನ್ಯಾವಿಗೇಟರ್ ಎಂದು ಗೌರವಿಸುವ ರೀತಿಯಲ್ಲೇ ಅಟ್ಲಾಂಟಿಕ್ ಗುಲಾಮ ವ್ಯಾಪಾರದ ಸಂಸ್ಥಾಪಕ ಎಂಬ ಕುಖ್ಯಾತಿಯೂ ಇದೆ.

೩. ಡ್ಯೂಕ್ ಎಂದರೆ ಯುರೋಪಿಯನ್ ರಾಜಕೀಯದ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಪ್ರಾಂತೀಯ ಸರಕಾರದ ಮುಖ್ಯಸ್ಥರಾಗಿದ್ದಾರೆ. ಇದು ಆನುವಂಶೀಯ ನೆಲೆಯಲ್ಲಿ ಮನೆತನದ ಹಿರಿಯ ವ್ಯಕ್ತಿಗೆ ದೊರೆಯುವಂತಹ ಗೌರವಾನ್ವಿತ ಸ್ಥಾನ.

೪. ಕೇಪ್ ಆಫ್ ಗುಡ್ ಹೋಪ್ ಇದು ದಕ್ಷಿಣ ಆಫ್ರಿಕಾದಲ್ಲಿ ಅಟ್ಲಾಂಟಿಕ್ ತೀರದಲ್ಲಿರುವ ಭೂಶಿರವಾಗಿದೆ. ಇದನ್ನು ೧೪೮೮ರಲ್ಲಿ ಪೋರ್ಚುಗೀಸ್ ನಾವಿಕ ಬಾರ್ಥಲೋಮಿಯೋ ಡಯಾಸ್‌ನು ಕೇಪ್ ಆಫ್ ಸ್ಟಾರ್ಮ್ಸ್(ಬಿರುಗಾಳಿಗಳ ಭೂಶಿರ) ಎಂದು ಹೆಸರಿಸುತ್ತಾನೆ. ಆದರೆ ಪೋರ್ಚುಗೀಸ್ ದೊರೆ ಎರಡನೇ ಜಾನ್‌ನು ಭಾರತಕ್ಕೆ ಈ ಭೂಶಿರದ ಮುಖಾಂತರ ನೇರ ಸಮುದ್ರ ಮಾರ್ಗವನ್ನು ಕಂಡು ಹಿಡಿದ ಹಿನ್ನೆಲೆಯಲ್ಲಿ ಕೇಪ್ ಆಫ್ ಗುಡ್ ಹೋಪ್(ಉಜ್ವಲ ಆಶೆಗಳ ಭೂಶಿರ) ಎಂದು ಮರುನಾಮಕರಣ ಮಾಡುತ್ತಾನೆ.

೫. ರೋಮನ್ ಕ್ಯಾಥೊಲಿಕ್ ಧಾರ್ಮಿಕ ವ್ಯವಸ್ಥೆಯ ಅತ್ಯುತ್ತಮ ಧರ್ಮ ಗುರು ಪೋಪ್‌ರವರು ಜಾರಿಗೊಳಿಸುವ ಸಾರ್ವಜನಿಕ ಸುಗ್ರೀವಾಜ್ಞೆ, ಆದೇಶಗಳನ್ನು ಪಾಪೆಲ್ ಬುಲ್(ಪೋಪರ ಅಧಿಕಾರದ ಪ್ರಪತ್ರ) ಎಂದು ಕರೆಯುತ್ತಾರೆ. ಇದು ವೃತ್ತಾಕಾರದಲ್ಲಿ ಸಂತ ಪೀಟರ್ ಮತ್ತು ಪೌಲ್‌ರವರ ಗುರುತಿನ ಮುದ್ರೆಯಾಗಿದೆ.

೬. ಗುಜರಾತ್ ಪ್ರದೇಶದ ವ್ಯಾಪಾರಿ ಮುಸ್ಲಿಂ ಸಮುದಾಯವು ಆಫ್ರಿಕನ್ ತೀರ ಮತ್ತು ಕೊಲ್ಲಿ ರಾಷ್ಟ್ರಗಳಿಗೆ ವ್ಯಾಪಕ ಪ್ರಮಾಣದಲ್ಲಿ ಸಮುದ್ರ ಯಾನ ನಡೆಸುತ್ತಿದ್ದರು. ಅಲ್ಲಿ ಅವರು ಆಫ್ರಿಕನ್ ಭಾಗದ ತೀರಗಳಿಗೆ

ಹಾಗೂ ಇತರ ಯುರೋಪಿಯನ್ ಹಡಗುಗಳಲ್ಲಿ ನಾವಿಕರಾಗಿ ಸೇರಿಕೊಂಡು ಅದನ್ನು ಭಾರತದ ಕರಾವಳಿ ಮತ್ತು ಚೀನಾ ದೇಶದ ಕರಾವಳಿಗಳಿಗೆ ಕೊಂಡೊಯ್ಯುತ್ತಿದ್ದರು. ಇದೇ ರೀತಿಯಲ್ಲಿ ವಾಸ್ಕೋಡಗಾಮನ ನೌಕಾಯಾನದ ಹಡಗು ಕೂಡ ಆಫ್ರಿಕಾ ತೀರದ ಮೆಲಿಂಡಾ ದೇಶದಲ್ಲಿ ಲಂಗರು ಹಾಕಿತ್ತು. ಅಲ್ಲಿ ವಾಸ್ಕೋಡಗಾಮನು ಗುಜರಾತ್ ಮೂಲದ ಇಬ್ನಾ ಮಸ್ಜೂದ್‌ನನ್ನು ತನ್ನ ನೌಕೆಗೆ ನಾವಿಕನಾಗಿ ನೇಮಿಸಿಕೊಂಡು ಭಾರತದ ಕರಾವಳಿಯ ಕಲ್ಲಿಕೋಟೆಗೆ ಬಂದಿಳಿದನು.

೭. ಪೋರ್ಚುಗೀಸರ ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದಂತೆ ಪಶ್ಚಿಮ ಕರಾವಳಿ ಮತ್ತು ಪೂರ್ವ ಕರಾವಳಿಗಳಲ್ಲಿ ಸಾಂಬಾರು ಪದಾರ್ಥಗಳನ್ನು ಸಂಗ್ರಹಿಸಿಡುತ್ತಿದ್ದ ಉಗ್ರಾಣಗಳಿಗೆ ಫ್ಯಾಕ್ಟರಿಗಳೆಂದು ಕರೆಯುತ್ತಿದ್ದರು. ಭಾರತದಲ್ಲಿ ಈ ಕಣ್ಣೋಟವನ್ನು ಮೊತ್ತಮೊದಲ ಬಾರಿಗೆ ಪೋರ್ಚುಗೀಸರು ಪರಿಚಯಿಸಿದರು. ಈ ಫ್ಯಾಕ್ಟರಿಗಳ ಮೇಲ್ವಿಚಾರಕನನ್ನು ಫ್ಯಾಕ್ಟರ್ಸ್ ಎಂದು ಕರೆಯುತ್ತಾರೆ. ಆ ವ್ಯಕ್ತಿಯು ಅಲ್ಲಿಯ ಫ್ಯಾಕ್ಟರಿಗಳಲ್ಲಿ ಸಂಗ್ರಹಿಸಲ್ಪಡುತ್ತಿದ್ದ ಸಾಂಬಾರು ಪದಾರ್ಥಗಳ ಲೆಕ್ಕಾಚಾರ, ಜವಾಬ್ದಾರಿ ನಿರ್ವಹಿಸುತ್ತಿದ್ದನು. ಪೋರ್ಚುಗಲ್ ದೇಶಕ್ಕೆ ಹಡಗಿನಲ್ಲಿ ಕಳುಹಿಸುವ ಜವಾಬ್ದಾರಿಯನ್ನೂ ನಿರ್ವಹಿಸಬೇಕಾಗಿತ್ತು. ಸಾಮಾನ್ಯವಾಗಿ ಫ್ಯಾಕ್ಟರ್ಸ್‌ರವರ ಅಡಿಯಲ್ಲಿ ಎರಡು ಬರಹಗಾರರು, ಎರಡು ಕೋಶಾಧಿಕಾರಿಗಳು ಮತ್ತು ಓರ್ವ ತೂಕ ಮಾಡುವ ವ್ಯಕ್ತಿ ಕಾರ್ಯ ನಿರ್ವಹಿಸುತ್ತಿದ್ದರು.

೮. ಲೀಗ್ ಎಂಬುದು ದೂರವನ್ನು ಲೆಕ್ಕಾಚಾರ ಮಾಡುವ ಒಂದು ವಿಧಾನವಾಗಿದೆ. ಈ ವಿಧಾನವನ್ನು ಸಾಮಾನ್ಯವಾಗಿ ಯುರೋಪಿಯನ್ ಮತ್ತು ಲ್ಯಾಟಿನ್ ಅಮೇರಿಕಾದಲ್ಲಿ ಉಪಯೋಗಿಸುತ್ತಾರೆ. ಆದರೆ ಇದು ಯಾವುದೇ ದೇಶದಲ್ಲಿ ಅಧಿಕೃತ ಮಾಪಕ ಆಗಿರುವುದಿಲ್ಲ. ಸಾಮಾನ್ಯವಾಗಿ ಒಂದು ಗಂಟೆಯಲ್ಲಿ ಒಂದು ವ್ಯಕ್ತಿ ಕ್ರಮಿಸುವ ದೂರವನ್ನು ಲೀಗ್ ಎಂದು ಹೇಳುತ್ತಾರೆ. ಇಂಗ್ಲೀಷ್ ಭಾಷೆ ಮಾತನಾಡುವ ದೇಶದಲ್ಲಿ ಒಂದು ಲೀಗ್ ಎಂದರು ಮೂರು ಮೈಲು (೪.೮ ಕಿ.ಮೀ)ಗಳಿಗೆ ಸಮ.

೯. ಕಾರವಾರದಿಂದ ಪಶ್ಚಿಮಕ್ಕೆ ಇರುವ ಐದು ದ್ವೀಪಗಳ ಸಮೂಹವನ್ನು ಅಂಜುದೀವ್ ದ್ವೀಪ ಎಂದು ಕರೆಯುತ್ತಾರೆ. ಇಲ್ಲಿ ಸಮುದ್ರದ ಭಾಗದಿಂದಲೇ ಸದಾಶಿವ ಘಡ ಬೆಟ್ಟಗಳ ಸಾಲುಗಳ ಪ್ರಾರಂಭವಾಗುತ್ತದೆ. ಅಂಜುದೀವ್ ದ್ವೀಪವು ಇದರಿಂದ ಸುಮಾರು ಮೂರು ಕಿ. ಮೀ. ದೂರದಲ್ಲಿದೆ. ಇದರ ಒಟ್ಟು ವಿಸ್ತೀರ್ಣ ೧.೫ ಚ. ಕಿ. ಮೀ ಆಗಿರುತ್ತದೆ. ಇಲ್ಲಿ ೧೫೦೨ ರಲ್ಲಿ ಪೋರ್ಚುಗೀಸರು ಒಂದು ಸಣ್ಣ ಚಾಪೆಲ್‌ನ್ನು(ಪ್ರಾರ್ಥನಾ ಮಂದಿರ) ಕಟ್ಟಿದ್ದರು. ೧೫೦೬ರಲ್ಲಿ ಚರ್ಚನ್ನು ನಿರ್ಮಿಸಲಾಯಿತು.

೧೦. ವಾಸ್ಕೋಡಗಾಮನು ಪೋರ್ಚುಗಲ್‌ನ ವಿದ್ಯುಗೇರ್ ಎಂಬ ಪ್ರಾಂತ್ಯದ ಕೌಂಟ್ (ಮುಖ್ಯ ಅಧಿಕಾರಿ) ಆಗಿರುತ್ತಾನೆ. ಈತನು ಸಾಹಸಮಯ ಪ್ರವೃತ್ತಿಗಳಿಗೆ ಹೆಸರುವಾಸಿಯಾಗಿದ್ದು ಭಾರತಕ್ಕೆ ಸಮುದ್ರ ಮಾರ್ಗವನ್ನು ಕಂಡು ಹಿಡಿದ ಖ್ಯಾತಿ ಇವನಿಗೆ ಸಲ್ಲುತ್ತದೆ. ೧೪೯೯ ರಲ್ಲಿ ವೈಸ್‌ರಾಯ್‌ಯಾಗಿ ಮತ್ತೊಮ್ಮೆ ಭಾರತಕ್ಕೆ ಆಗಮಿಸುತ್ತಾನೆ. ಈತನು ೧೫೨೪ ರಲ್ಲಿ ಕೊಚ್ಚಿಯಲ್ಲಿ ಅಸೌಖ್ಯದಿಂದ ಮರಣವನ್ನಪ್ಪುತ್ತಾನೆ.

೧೧. ಫ್ರಾನ್ಸಿಯನ್‌ಗಳು ಕ್ಯಾಥೊಲಿಕ್ ಧರ್ಮ ಪಂಥದ ಒಂದು ಧಾರ್ಮಿಕ ವಿಭಾಗ ಆಗಿದ್ದು ೧೨೮೦ ರಲ್ಲಿ ಫ್ರಾನ್ಸಿಸ್ ಆಫ್ ಆಸಿಸೀಯವರಿಂದ ಪ್ರಾರಂಭವಾಗಿರುತ್ತದೆ. ಈ ಪಂಥವು ಕ್ರೈಸ್ತ ಮತದ ಧರ್ಮಗುರುಗಳನ್ನು ತರಬೇತುಗೊಳಿಸುವ ಜಾಗತಿಕ ಮಟ್ಟದ ಪ್ರಮುಖ ವ್ಯವಸ್ಥೆಯಾಗಿದೆ.

೧೨. ವಿಕಾರ್ ಎಂಬುದು ಲ್ಯಾಟಿನ್ ಪದ ವಿಕಾರಿಯಸಸ್‌ನ ಧಾತು ಆಗಿದೆ. ಇದರರ್ಥ ಚರ್ಚಿನ ಧಾರ್ಮಿಕ ಪ್ರತಿನಿಧಿತ್ವ ಆಗಿದೆ. ಇವರು ಚರ್ಚಿನಲ್ಲಿ ಉಪ ಅಥವಾ ಪರ್ಯಾಯ ಧಾರ್ಮಿಕ ವಿಧಿ ವಿಧಾನಗಳ ನಿರ್ವಹಣೆ ಮತ್ತು ಜವಾಬ್ದಾರಿಯನ್ನು ವಹಿಸುತ್ತಾರೆ. ಚರ್ಚ್ ವ್ಯವಸ್ಥೆಯಲ್ಲಿ ವಿಕಾರ್‌ರವರಿಗೆ ಸಮಕಾಲೀನ ಸಂದರ್ಭದಲ್ಲೂ ಅತ್ಯಂತ ಮಹತ್ವದ ಧಾರ್ಮಿಕ ಸ್ಥಾನಮಾನವಿದೆ.

೧೩. ಪೋರ್ಚುಗೀಸರು ಜಾರಿಗೊಳಿಸಿದ ಸುಂಕ ಮತ್ತು ಸಮುದ್ರ ವ್ಯಾಪಾರ ನಿಯಂತ್ರಣದ ಎರಡು ವಿಧಾನಗಳನ್ನು ಕಾರ್ಟಜ್ ಮತ್ತು ಖಫಿಲ್ ಎಂದು ಕರೆಯುತ್ತಾರೆ. ಕಾರ್ಟಜ್ ಎಂದರೆ ನಾವಿಕ ವ್ಯಾಪಾರದ ಪರವಾನಿಗೆ ಎಂದು ಅರ್ಥ. ಭಾರತದ ಪಶ್ಚಿಮ ಕರಾವಳಿಯಲ್ಲಿ ಸಂಚರಿಸಬೇಕಾದರೆ ಗೋವಾದಿಂದ ಈ ಶುಲ್ಕವನ್ನು ಪಾವತಿಸಿ ಪರವಾನಿಗೆಯನ್ನು ಪಡೆಯಬೇಕು. ಪರವಾನಿಗೆ ಇಲ್ಲದೆ ಸಂಚರಿಸುವ ಹಡಗುಗಳ ಮೇಲೆ ಪೋರ್ಚುಗೀಸರು ದಾಳಿ ಮಾಡಿ ಅದರ ಸಿಬ್ಬಂದಿಗಳನ್ನು ಹತ್ಯೆಗೈದು ಅದರಲ್ಲಿರುವ ಸರಕು ಸರಂಜಾಮುಗಳನ್ನು ಪೋರ್ಚುಗೀಸರು ಮುಟ್ಟುಗೋಲು ಹಾಕುತ್ತಿದ್ದರು. ಇದೇ ರೀತಿ ಪರವಾನಿಗೆ ಪಡೆದು ಸಂಚರಿಸುತ್ತಿರುವ ಹಡಗುಗಳಿಗೆ ಕಡಲುಗಳ್ಳರ ದಾಳಿಯಿಂದ ರಕ್ಷಿಸಲು ಪೋರ್ಚುಗೀಸರ ಬೆಂಗಾವಲು ನೌಕೆಗಳ ಪದ್ಧತಿಯನ್ನು ಖಫಿಲ್ ಎಂದು ಕರೆಯುತ್ತಾರೆ. ಸರಕು ಹೊತ್ತ ಹಡಗಿನ ಎರಡೂ ಬದಿಗಳಲ್ಲಿ ಮತ್ತು ಹಿಂಭಾಗದಲ್ಲೂ ಪೋರ್ಚುಗೀಸರ ರಕ್ಷಣಾ ಹಡಗುಗಳು ಸಂಚರಿಸುತ್ತಿತ್ತು.

೧೪. ಗೇರುಸೊಪ್ಪೆಯ ಜನರಲ್ ತಿಮ್ಮಯ್ಯನನ್ನು ಪೋರ್ಚುಗೀಸರು ತಿಮೋಜ ಎಂದು ಕರೆಯುತ್ತಿದ್ದರು. ಎರಡನೇ ಬಾರಿಗೆ ಬಂದ ವಾಸ್ಕೋಡಗಾಮನು ಹೊನ್ನಾವರದ ನದಿಯಲ್ಲಿ ಇದ್ದ ತಿಮೋಜನನ್ನು ಮುಸ್ಲಿಂ ವ್ಯಾಪಾರಿ ಎಂದು ಅಂದಾಜಿಸಿ ಬೆನ್ನಟ್ಟುತ್ತಾನೆ. ಪೋರ್ಚುಗೀಸ್ ಚರಿತ್ರೆಕಾರರು ತಿಮ್ಮಯ್ಯನನ್ನು ಕಡಲುಗಳ್ಳನೆಂದೂ ಆತನು ತಳ ಸಮುದಾಯಕ್ಕೆ ಸೇರಿದ ವ್ಯಕ್ತಿ ಎಂದೂ ದಾಖಲೆಗಳಲ್ಲಿ ಬರೆದಿದ್ದಾರೆ. ವಾಸ್ತವಿಕವಾಗಿ ಈತನು ಗೋವಾದಲ್ಲಿ ಹುಟ್ಟಿ ಗೇರುಸೊಪ್ಪೆಯ ಸಾಮಂತರ ಅಡಿಯಲ್ಲಿ ವಿಜಯನಗರದ ಪರವಾಗಿ ಕುದುರೆಗಳ ಸರಬರಾಜಿನ ಜವಾಬ್ದಾರಿಯನ್ನು ನಿರ್ವಹಿಸುತ್ತಾನೆ. ಪ್ರಪ್ರಥಮ ಗೋವಾದ ಗವರ್ನರ್ ಆಗಿ ಕಾರ್ಯ ನಿರ್ವಹಿಸಿ ಅನಂತರ ಪದಚ್ಯುತಿ ಹೊಂದುತ್ತಾನೆ.

೧೫. ಜನರಲ್ ತಿಮ್ಮಯ್ಯನು ಬಿಜಾಪುರದ ಆದಿಲ್ ಶಾಹಿಯ ಸೈನಿಕ ವ್ಯವಸ್ಥೆಯ ಬಗ್ಗೆ ಅಲ್ಬುಕರ್ಕ್‌ನಿಗೆ ಸಾಕಷ್ಟು ವಿವರಗಳನ್ನು ನೀಡುತ್ತಾನೆ. ಆ ಪ್ರಕಾರ ಆದಿಲ್ ಶಾಹಿಯ ಗೋವಾ ಪ್ರದೇಶದ ದಂಡ ನಾಯಕನು ಹೊಂದಿರುವ ಸೈನಿಕರ ಸಂಖ್ಯೆ, ಅವರಲ್ಲಿರುವಂತಹ ಶಸ್ತ್ರಾಸ್ತ್ರಗಳ ಬಗ್ಗೆ ಹಾಗೂ ಅವರಲ್ಲಿರುವ ಪರ್ಷಿಯಾ ಮತ್ತು ಟರ್ಕಿ ದೇಶದ ಸೈನಿಕರ ಅಂಕಿ ಸಂಖ್ಯೆಳ ಬಗ್ಗೆ ತಿಳಿಸುತ್ತಾನೆ. ಗೋವಾ ನಗರಕ್ಕೆ ಪ್ರವೇಶಗೈಯ್ಯಲು ಬಿಜಾಪುರದ ಕಡೆಯಿಂದ ಅಗಲ ಕಿರಿದಾದ ಏಕೈಕ ಪ್ರವೇಶ

ಕಣಿವೆ ಇದ್ದು ಅದನ್ನು ಬಾರ್ಡೆರ್ಝ್ ಗೇಟ್ ಎಂದು ಕರೆಯುತ್ತಾರೆ ಇದರ ಮೂಲಕ ಗೋವಾದ ಮೇಲೆ ದಾಳಿ ಮಾಡಲು ಸಲಹೆ ನೀಡಿದನು. ಸಮುದ್ರ ಹಾಗೂ ನದಿಗಳ ಸಂಗಮದ ಪ್ರಯೋಜನ ಪಡೆಯಲು ಸೂಕ್ತವಾದ ಭೌಗೋಳಿಕ ಮಾರ್ಗದರ್ಶನ ನೀಡುತ್ತಾನೆ. ಈತನ ಮಾರ್ಗದರ್ಶನ ಆಧರಿಸಿ ಅಲ್ಬುಕರ್ಕ್ ಗೋವಾದ ಮೇಲೆ ದಾಳಿ ನಡೆಸುತ್ತಾನೆ.

೧೬. ಕರಾವಳಿ ಕರ್ನಾಟಕದಲ್ಲಿ ಕಬ್ಬಿಣ ರಫ್ತಾಗುತ್ತಿದ್ದ ಏಕೈಕ ಬಂದರು ಭಟ್ಕಳ ಆಗಿತ್ತು. ಭಟ್ಕಳ ಬಂದರಿಗೆ ಕಬ್ಬಿಣವು ಕೊಲ್ಲೂರಿನಲ್ಲಿ ಬುಡಕಟ್ಟು ಸಮುದಾಯಗಳು ನಡೆಸುತ್ತಿದ್ದ ಗಣಿಗಾರಿಕೆಯಿಂದ ಸರಬರಾಜು ಆಗುತ್ತಿತ್ತು. ೧೮ ಮತ್ತು ೧೯ನೇ ಶತಮಾನದಲ್ಲಿ ಕಬ್ಬಿಣದ ರಫ್ತಿನ ಬಗ್ಗೆ ಹೆಚ್ಚಿನ ವಿವರಗಳು ಕಂಡು ಬರುವುದಿಲ್ಲ.

೧೭. ಮಾನ್ಸೂನ್ ಹವಾಗುಣದಲ್ಲಿ ಬೆಳೆಯುವ ಅತ್ಯಂತ ಮುಖ್ಯ ಸಾಂಬಾರು ಬೆಳೆಗಳಲ್ಲಿ ಕರಿಮೆಣಸು ಒಂದಾಗಿದೆ. ಯುರೋಪಿಯನ್ ದೇಶಗಳಲ್ಲಿ ಇದಕ್ಕೆ ಅತ್ಯಂತ ಹೆಚ್ಚಿನ ಬೇಡಿಕೆಯಿತ್ತು. ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡ ಕೂಡಲೆ ಕರಿಮೆಣಸಿನ ಮೇಲೆ ಏಕಸ್ವಾಮ್ಯವನ್ನು ಘೋಷಿಸಿದರು. ೧೫೮೦ರ ನಂತರ ಕರಾವಳಿ ಕರ್ನಾಟಕದ ಬಂದರುಗಳಿಂದ ಪೋರ್ಚುಗಲ್‌ಗೆ ಸಂಚರಿಸುತ್ತಿದ್ದ ಹಡಗುಗಳಲ್ಲಿ ಅತ್ಯಂತ ಹೆಚ್ಚಿನ ಭಾಗವನ್ನು ಕರಿಮೆಣಸು ಹೊಂದಿತ್ತು.

ಅಧ್ಯಾಯ ೩

# ಕೆಳದಿ–ಪೋರ್ಚುಗೀಸರ ನಡುವಿನ ವಾಣಿಜ್ಯ ಸಂಬಂಧಗಳ ಉತ್ಕರ್ಷ ಮತ್ತು ಅವನತಿ

ವಾಸ್ಕೋಡಗಾಮನ ಪ್ರಥಮ ಸಮುದ್ರಯಾನದ ಅಪರಿಮಿತ ಲಾಭಗಳಿಂದ ಸಂತುಷ್ಟಗೊಂಡ ಪೋರ್ಚುಗಲ್ ದೊರೆ ಭಾರತಕ್ಕೆ ಪ್ರತಿ ವರ್ಷ ಎಲ್ಲಾ ರೀತಿಯಿಂದಲೂ ಸಜ್ಜಿತವಾದ ವ್ಯಾಪಾರಿ–ಸೈನಿಕ ಮತ್ತು ಧಾರ್ಮಿಕ ಉದ್ದೇಶದ ನೌಕಾಯಾನ ತಂಡವನ್ನು ಕಳುಹಿಸಲು ತೀರ್ಮಾನಿಸಿದ್ದನು. ಪೋರ್ಚುಗೀಸರ ಪ್ರಾರಂಭದ ಅವಧಿಯಲ್ಲಿ ಅವರು ನಡೆಸಿದ ಸಂಘರ್ಷದ ಮೂಲಭೂತ ಹಿತಾಸಕ್ತಿಗಾಗಿ ವಾಣಿಜ್ಯೋದ್ಯಮದಲ್ಲಿ ಏಕಸಾಮ್ಯ ಸಾಧಿಸಿ, ಮುಸ್ಲಿಂ ವ್ಯಾಪಾರಿಗಳನ್ನು ಸದೆ ಬಡಿದು ಪೋರ್ಚುಗಲ್ ದೊರೆಗೆ ಅಪಾರ ಲಾಭ ಗಳಿಸುವುದಾಗಿತ್ತು. ಇದರ ಮುಂದುವರಿಕೆಯ ಭಾಗವಾಗಿ ಗೋವಾವನ್ನು ಕೇಂದ್ರೀಕರಿಸಿ ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ರಾಜಕೀಯ ಮತ್ತು ವ್ಯಾಪಾರ ಸಾರ್ವಭೌಮತೆ ಸಾಧಿಸಿದರು. ೧೫೨೮ರ ವೇಳೆಗೆ ಕರಾವಳಿ ಕರ್ನಾಟಕದಲ್ಲಿ ಇವರು ಅನಭಿಷಕ್ತರಾಗಿ ಎಲ್ಲ ಪ್ರಮುಖ ಬಂದರುಗಳಲ್ಲಿ ಕೋಟೆ ಹೊಂದಿದ್ದರು. ಇಂತಹ ಸಂದರ್ಭದಲ್ಲಿ ಇಕ್ಕೇರಿ ಸಂಸ್ಥಾನ ಬೆಳೆದು ಬಂದು ಪೋರ್ಚುಗೀಸರ ವಾಣಿಜ್ಯ ಏಕಸ್ವಾಮ್ಯ ಮತ್ತು ರಾಜಕೀಯ ಸಾರ್ವಭೌಮಕ್ಕೆ ಪ್ರಬಲ ಪ್ರತಿರೋಧ ಒಡ್ಡಿದ್ದನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ. ಪೋರ್ಚುಗೀಸರೊಂದಿಗ ಸ್ಥಳೀಯ ಜನತೆ ಮತ್ತು ವ್ಯಾಪಾರ ಸಮುದಾಯವೂ ವಾಣಿಜ್ಯೋದ್ಯಮದ ಹಿನ್ನೆಲೆಯಿಂದ ನಡೆಸಿದ ಸಂಘರ್ಷವನ್ನು ವಿಶ್ಲೇಷಿಸಲಾಗಿದೆ.

ಪೋರ್ಚುಗೀಸರು ಕರಾವಳಿ ಕರ್ನಾಟಕದ ಉದ್ದಗಲಕ್ಕೂ ವ್ಯಾಪಾರ–ವ್ಯವಹಾರ ಮತ್ತು ರಾಜಕೀಯ ಅಧಿಕಾರವನ್ನು ತಮ್ಮ ನಿಯಂತ್ರಣಕ್ಕೆ ಒಳಪಡಿಸಿದ ಬಗ್ಗೆ ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಈ ಪ್ರಕ್ರಿಯೆಯಲ್ಲಿ ಸ್ಥಳೀಯ ಸಾಮಂತ ರಾಜರುಗಳು, ವ್ಯಾಪಾರಿಗಳು ಮತ್ತು ಜನತೆ ತೋರ್ಪಡಿಸಿದ ಪ್ರತಿರೋಧದ ಸ್ವರೂಪಗಳನ್ನು ಸಮಗ್ರವಾಗಿ ಚರ್ಚಿಸಲಾಗಿದೆ. ಇಕ್ಕೇರಿ ಆಳ್ವಿಕೆಯಲ್ಲಿ ನಡೆದ ಎಲ್ಲಾ ಯುದ್ಧಗಳಲ್ಲಿ ಮತ್ತು ಒಪ್ಪಂದಗಳಲ್ಲಿ ಕರಿಮೆಣಸು ಹಾಗೂ ವಾಣಿಜ್ಯೋದ್ಯಮದ ಅಂಶಗಳು ನಿರ್ಣಾಯಕ ಪಾತ್ರವಹಿಸಿರುವುದನ್ನು

ಚಿತ್ರಿಸಲಾಗಿದೆ. ಇಕ್ಕೇರಿ ಸಂಸ್ಥಾನ ಪೋರ್ಚುಗೀಸರನ್ನು ನಿಯಂತ್ರಿಸಿದ ಬಗ್ಗೆ ಕೂಡಾ ವಿಶ್ಲೇಷಿಸಲಾಗಿದೆ. ಒಟ್ಟಾರೆಯಾಗಿ ಪೋರ್ಚುಗೀಸರ ಉಚ್ಛ್ರಾಯ ಸ್ಥಿತಿಯಿಂದ ಇಳಿಮುಖದ ಸ್ಥಿತಿಗೆ ಬರುವ ಕಾಲಾವಧಿಯಲ್ಲಿ ನಡೆದ ಎಲ್ಲಾ ಒಪ್ಪಂದಗಳು ಮತ್ತು ಯುದ್ಧಗಳಲ್ಲಿ ವ್ಯಾಪಾರದ ಹಿತಾಸಕ್ತಿಯೇ ಅಡಕವಾಗಿದೆ ಎಂಬುದನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಸರಿಸುಮಾರು ೧೬ ನೇ ಶತಮಾನದಲ್ಲಿ ಭಟ್ಕಳ ಬಂದರು ವ್ಯಾಪಾರ-ವ್ಯವಹಾರದಲ್ಲಿ ಇಡೀ ಕರಾವಳಿ ಕರ್ನಾಟಕದಲ್ಲೇ ಅತೀ ಪ್ರಮುಖ ಬಂದರಾಗಿತ್ತು. ಕುದುರೆಯ ವ್ಯಾಪಾರಕ್ಕೆ ಜಾಗತಿಕವಾಗಿ ಪ್ರಖ್ಯಾತವಾಗಿತ್ತು. ಇಂತಹ ಬಂದರಿನಲ್ಲಿ ಪೋರ್ಚುಗೀಸರಿಗೆ ಮಳಿಗೆ ತೆರೆಯಲು ಸಾಕಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಆದರೆ ಇಲ್ಲಿಯ ವ್ಯಾಪಾರವನ್ನು ನಿಯಂತ್ರಿಸಲು ಮತ್ತು ಮುಸ್ಲಿಂ ವ್ಯಾಪಾರಿಗಳನ್ನು ಸದೆಬಡಿಯಲು ನಿರಂತರವಾಗಿ ಪ್ರಯತ್ನಿಸುತ್ತಿದ್ದರು. ಈ ಪ್ರಕ್ರಿಯೆಯಲ್ಲಿ ಗೇರುಸೊಪ್ಪೆಯ ಸಾಮಂತ ರಾಜರುಗಳು ಪೋರ್ಚುಗೀಸರೊಂದಿಗೆ ಆಗಾಗ ಮುಖಾಮುಖಿ ಸಂಘರ್ಷ ನಡೆಸಿರುವುದಲ್ಲದೆ ಸ್ಥಳೀಯ ವ್ಯಾಪಾರಿಗಳೂ ಪೋರ್ಚುಗೀಸರೊಂದಿಗೆ ನಡೆಸಿದ ಸಂಘರ್ಷ ರಕ್ತಸಿಕ್ತ ಅಧ್ಯಾಯವಾಗಿದೆ. ಪ್ರಾರಂಭದ ದಿನಗಳಲ್ಲಿ ಪೋರ್ಚುಗೀಸ್ ಸಾಮ್ರಾಜ್ಯದ ಅಸ್ತಿಭಾರಕ್ಕೆ ಮಹತ್ವಪೂರ್ಣ ಕೊಡುಗೆ ನೀಡುವ ಗೇರುಸೊಪ್ಪೆಯ ಸಾಮಂತರಾಜರ ಆಡಳಿತಕ್ಕೆ ಒಳಪಟ್ಟ ಬಂದರು ಹೊನ್ನಾವರ ಆಗಿದ್ದು ಪ್ರಥಮ ದಶಕದ ನಂತರ ಹಲವಾರು ಸಂದರ್ಭದಲ್ಲಿ ಪೋರ್ಚುಗೀಸರೊಂದಿಗೆ ಸಂಘರ್ಷಕ್ಕೆ ಇಳಿಯಬೇಕಾಯಿತು. ೧೫೧೬ ರಲ್ಲಿ ಮತ್ತು ೧೫೬೯ ರಲ್ಲಿ ನಡೆದ ಜನಸಾಮಾನ್ಯರನ್ನು ಒಳಗೊಂಡ ಗೇರುಸೊಪ್ಪೆ ಪ್ರಾಂತ್ಯ ಮತ್ತು ಪೋರ್ಚುಗೀಸರ ಮುಖಾಮುಖಿಯಲ್ಲಿ ಅಂತಿಮವಾಗಿ ಪೋರ್ಚುಗೀಸರೇ ಮೇಲುಗೈ ಪಡೆದರು. ಇಲ್ಲಿ ೧೫೬೯ ರಲ್ಲಿ ಅವರು ನಿರ್ಮಿಸಿದ ಕೋಟೆ ಕರಿಮೆಣಸಿನ ವ್ಯಾಪಾರದ ದೃಷ್ಟಿಯಿಂದ ಅತ್ಯಂತ ಆಯಕಟ್ಟಿನ ಬಂದರು ಪ್ರದೇಶವಾಗಿತ್ತು.

ಮಂಗಳೂರು ಪ್ರಮುಖ ಇನ್ನೊಂದು ಬಂದರು ಆಗಿದ್ದು ಇಲ್ಲಿ ಅವರು ಎರಡು ಪ್ರಮುಖ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ನಿರ್ಧರಿಸಿದ್ದರು. ಒಂದನೆಯದಾಗಿ ಈ ಮೇಲಿನ ಮೂರು ಬಂದರುಗಳು ಆಹಾರ ವಸ್ತುಗಳ ಪೂರೈಕೆಯ ಕಣಜವಾಗಿತ್ತು. ಎರಡನೆಯದಾಗಿ ಪೋರ್ಚುಗೀಸರ ಕಡು ವೈರಿ ಜಾಮೋರಿನ್‌ಗಳಿಗೆ ಆಹಾರ ಸರಬರಾಜು ಇಲ್ಲಿಯ ಬಂದರುಗಳಿಂದಲೇ ಆಗುತ್ತಿದ್ದ ಹಿನ್ನೆಲೆಯಲ್ಲಿ ಅದನ್ನು ತಡೆಹಿಡಿಯಲು ಸಾಧ್ಯವಾಗುತ್ತದೆ ಎಂಬ ಲೆಕ್ಕಾಚಾರ ಪೋರ್ಚುಗೀಸರದ್ದಾಗಿತ್ತು. ಮಂಗಳೂರು, ಬಸ್ರೂರು ಮತ್ತು ಗಂಗೊಳ್ಳಿಗಳಲ್ಲಿ ಕೋಟೆ ಕಟ್ಟುವ ಪ್ರಕ್ರಿಯೆಯಲ್ಲಿ ಸ್ಥಳೀಯ ವ್ಯಾಪಾರಿ ವರ್ಗ ಹಾಗೂ ಜನತೆ ಪೋರ್ಚುಗೀಸರೊಂದಿಗೆ ನಡೆಸಿದ ಸಂಘರ್ಷಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

ಪೋರ್ಚುಗೀಸರು ಮಂಗಳೂರಿನ ಬಂದರಿನಲ್ಲಿ ಮೊದಲ ಹತ್ಯಾಕಾಂಡ ೧೫೧೩ ರಲ್ಲಿ ನಡೆಸಿದ ನಂತರ ೧೫೨೫, ೧೫೩೯ ಮತ್ತು ೧೫೫೮ ರಲ್ಲಿ ನಡೆಸಿದ ಕ್ರೂರ ಹತ್ಯಾಕಾಂಡಗಳನ್ನು ವಾಣಿಜ್ಯೋದ್ಯಮದ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಉಳ್ಳಾಲದ ರಾಣಿಯು ಪೋರ್ಚುಗೀಸರೊಂದಿಗೆ ಪ್ರಾರಂಭದಿಂದಲೇ ಸಂಘರ್ಷವನ್ನು ರೂಪಿಸಿದ ಕರಾವಳಿ ಕರ್ನಾಟಕದ ಓರ್ವ ಪ್ರಮುಖ ಸಾಮಂತ ರಾಣಿಯಾಗಿದ್ದಾರೆ.

ಗಂಗೊಳ್ಳಿಯಲ್ಲಿ ಪೋರ್ಚುಗೀಸರು ಕಟ್ಟಿರುವ ಕೋಟೆ ಕರಾವಳಿ ಕರ್ನಾಟಕದ ಬಂದರುಗಳಲ್ಲೇ ಅತ್ಯಂತ ಕೊನೆಯ ಕೋಟೆಯಾಗಿದೆ. ೧೬೩೩ರಲ್ಲಿ ಕೋಟೆ ನಿರ್ಮಾಣವಾಗಿದ್ದು ಇದರಿಂದ ಪೋರ್ಚುಗೀಸರಿಗೆ ಆದ ಲಾಭವೆಂದರೆ ಈ ಪ್ರದೇಶದಲ್ಲಿ ವರ್ಷಕ್ಕೆ ೩೦೦೦ ಚೀಲ ಅಕ್ಕಿ ಉತ್ಪಾದನೆಯಾಗುತ್ತಿದ್ದು ಅದು ಈಗ ಸಂಪೂರ್ಣ ಪೋರ್ಚುಗೀಸರ ನಿಯಂತ್ರಣಕ್ಕೆ ಬಂತು. ಕೇವಲ ಇಲ್ಲಿಯ ಆಹಾರ ಉತ್ಪಾದನೆಯೊಂದರಿಂದಲೇ ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ಹೊಂದಿದ್ದ ಎಲ್ಲಾ ಕೋಟೆಗಳ ಆಹಾರದ ವೆಚ್ಚವನ್ನು ನಿಭಾಯಿಸಲು ಸಾಧ್ಯವಿತ್ತು. ಮಂಗಳೂರು, ಬಸ್ರೂರು, ಬಾರ್ಕೂರುಗಳನ್ನು ಕೇಂದ್ರೀಕರಿಸಿ ನಡೆದ ವಾಣಿಜ್ಯೋದ್ಯಮದ ಸಂಘರ್ಷಗಳನ್ನು ಹಾಗೂ ಈ ಸಂಘರ್ಷಗಳು ರೂಪಿಸಿದ ರಾಜಕೀಯ, ಸಾರ್ವಭೌಮತೆಯ ಸ್ವರೂಪ ಮತ್ತು ಫಲಿತಾಂಶಗಳನ್ನು ಚರ್ಚಿಸಲಾಗಿದೆ.

೧೪೯೯ ರಲ್ಲಿ ಅಸ್ತಿತ್ವಕ್ಕೆ ಬಂದ ಇಕ್ಕೇರಿ ಸಂಸ್ಥಾನ ಪ್ರಾರಂಭದಲ್ಲಿ ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿ ಆಳ್ವಿಕೆ ನಡೆಸಿದರು. ೧೫೧೫ ರಿಂದ ಇಕ್ಕೇರಿಯ ರಾಜನಾದ ವೆಂಕಟಪ್ಪ ನಾಯಕನು ಪೋರ್ಚುಗೀಸರನ್ನು ಸಮರ್ಥವಾಗಿ ಎದುರಿಸಿ ಕರಾವಳಿ ಕರ್ನಾಟಕದ ಎಲ್ಲಾ ಸಾಮಂತರಾಜರನ್ನು ಬಗ್ಗುಬಡಿದು ವ್ಯಾಪಾರ ವ್ಯವಹಾರದ ಮೇಲೆ ನಿಯಂತ್ರಣ ಸಾಧಿಸಿ ಪೋರ್ಚುಗೀಸರೊಂದಿಗೆ ವಾಣಿಜ್ಯದ ಸಂಘರ್ಷಕ್ಕೆ ಅಡಿಗಲ್ಲು ಹಾಕುತ್ತಾನೆ. ಇಕ್ಕೇರಿಯ ಪ್ರಾರಂಭದ ದಿನಗಳ ಸಂಘರ್ಷವನ್ನು ಇಲ್ಲಿ ಚರ್ಚಿಸಲಾಗಿದೆ.

ವೆಂಕಟಪ್ಪ ನಾಯಕನು ೧೬೨೯ ರಿಂದ ೧೬೪೫ ರವರೆಗೆ ಇಕ್ಕೇರಿಯ ರಾಜನಾಗಿ ಪೋರ್ಚುಗೀಸರೊಂದಿಗೆ ಮುಖಾಮುಖಿ ಸಂಘರ್ಷ ನಡೆಸಿದ್ದಾನೆ. ಈತನು ಬಸ್ರೂರಿನಲ್ಲಿ ಪೋರ್ಚುಗೀಸರಿಗಾಗಿ ಸಾಗಿಸಲ್ಪಡುತ್ತಿದ್ದ ಅಕ್ಕಿಯನ್ನು ತಡೆಹಿಡಿದಾಗ ಅಪ್ಪರ್ ಬಸ್ರೂರಿನ ಜನತೆ ಮತ್ತು ವ್ಯಾಪಾರಿಗಳು ದಂಗೆ ಎದ್ದು ಸಾಮಂತ ರಾಜರುಗಳ ಒಕ್ಕೂಟವನ್ನು ಸೇರಿಕೊಂಡು ಪ್ರತಿರೋಧ ರೂಪಿಸಿರುವುದನ್ನು ಚರ್ಚಿಸಲಾಗಿದೆ. ವೀರಭದ್ರ ನಾಯಕರನು ಕರಿಮೆಣಸಿನ ವಿಕ್ರಯಕ್ಕೆ ಸಂಬಂಧಿಸಿ ಪೋರ್ಚುಗೀಸರ ಮೇಲೆ ನಿರಂತರ ಮೇಲುಗೈ ಸಾಧಿಸಿದ್ದನು. ಪೋರ್ಚುಗೀಸರು ಕೂಡಾ ಅನಿವಾರ್ಯವಾಗಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ವೀರಭದ್ರನು ನಿಗದಿ ಪಡಿಸಿದ ದರ ಮಾರುಕಟ್ಟೆಗಿಂತ ಜಾಸ್ತಿ ಇದ್ದರೂ ಒಪ್ಪಬೇಕಾಯಿತು.

ಇಕ್ಕೇರಿಯ ರಾಜರುಗಳಲ್ಲೇ ಶಿವಪ್ಪ ನಾಯಕನು ಅತ್ಯಂತ ದಕ್ಷ ಮತ್ತು ಪ್ರಬಲ ರಾಜನಾಗಿ ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರ ಪ್ರಾಬಲ್ಯವನ್ನು ಮುರಿದು ಅದರ ವ್ಯಾಪಾರ, ವಾಣಿಜ್ಯಗಳಿಗೆ ಗಂಭೀರ ತಡೆಯನ್ನು ಉಂಟು ಮಾಡಿದನು. ಈತನ ಅವಧಿಯಲ್ಲಿಯೇ ಪೋರ್ಚುಗಲ್‌ನಲ್ಲಿ ಅವರ ಪ್ರಭುತ್ವ ಆರ್ಥಿಕತೆ ಕುಸಿತಗೊಂಡಿದ್ದು ಇದು ಶಿವಪ್ಪ ನಾಯಕನಿಗೆ ಲಾಭವಾಯಿತು. ಕರಿಮೆಣಸಿನ ವಿಕ್ರಯಕ್ಕೆ ಸಂಬಂಧಿಸಿ ವಿಪರೀತ ದರ ನಿಗದಿ ಮಾಡಿ ಅಪಾರ ಲಾಭ ಗಳಿಸಿದ ಶಿವಪ್ಪ ನಾಯಕನು ಡಚ್ಚರಿಗೆ ಕರಾವಳಿ ಕರ್ನಾಟಕದಲ್ಲಿ ವ್ಯಾಪಾರ ವ್ಯವಹಾರ ನಡೆಸಲು ಅನುಮತಿ ನೀಡಿದನು.

ಸೂರತ್ ನಂತರ ಇಂಗ್ಲೀಷರು ಕಾರವಾರದಲ್ಲಿ ನಿರ್ಮಿಸಿದ ಫ್ಯಾಕ್ಟರಿಗೆ ದೀರ್ಘ ಚರಿತ್ರೆ ಇದೆ. ೧೭೭೯ ರಲ್ಲಿ ಕರಾವಳಿ ಕರ್ನಾಟಕವು ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ನಂತರ ಅದು

ಬ್ರಿಟಿಷರ ವಶಕ್ಕೆ ಬರುವವರೆಗೆ ಅದರಲ್ಲೂ ನಿರ್ದಿಷ್ಟವಾಗಿ ೧೭೬೩ರವರೆಗೆ ವಿವಿಧ ಏರಿಳಿತಗಳನ್ನು ಇಂಗ್ಲೀಷರ ಕಾರವಾರ ಫ್ಯಾಕ್ಟರಿ ಅನುಭವಿಸಿದೆ. ಪೋರ್ಚುಗೀಸರಿಗೆ ಪ್ರತಿಸ್ಪರ್ಧಿಯಾಗಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಇಂಗ್ಲೀಷರು ಮತ್ತು ಡಚ್ಚರು ಬೆಳೆದು ಬಂದರು. ಈ ಬೆಳವಣಿಗೆಗಳ ಪ್ರತಿಬಿಂಬ ಕರಾವಳಿ ಕರ್ನಾಟಕದಲ್ಲೂ ಕಂಡು ಬಂದಿದೆ. ಇಕ್ಕೇರಿಯ ಸಂಸ್ಥಾನ ಇಂಗ್ಲೀಷರಿಗೆ ವ್ಯಾಪಾರ ವ್ಯವಹಾರ ಮಾಡಲು ಅವಕಾಶ ಕಲ್ಪಿಸಿದೆ. ಆದರೆ ಇಂಗ್ಲೀಷರು ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮಕ್ಕೆ ಸಂಘರ್ಷದ ನಡೆಯನ್ನು ಪ್ರಾರಂಭಿಸದಿರುವುದನ್ನು ಚರ್ಚಿಸಲಾಗಿದೆ. ಒಟ್ಟಿನಲ್ಲಿ ೧೭ನೇ ಶತಮಾನದ ಕೊನೆಯಾರ್ಧದಲ್ಲಿ ಕರಾವಳಿ ಕರ್ನಾಟಕ ಪ್ರಾಂತ್ಯದಲ್ಲಿ ಬ್ರಿಟಿಷರು ನಿರ್ಣಾಯಕ ಹಂತಕ್ಕೆ ಬೆಳೆದು ಬಂದಿರುವ ಪೂರ್ವಭಾವಿ ಘಟನೆಗಳನ್ನು ಇಲ್ಲಿ ಚರ್ಚೆಗೆ ಕೈಗೆತ್ತಿಕೊಳ್ಳಲಾಗಿದೆ.

ಪೋರ್ಚುಗೀಸರ ಉಚ್ಛ್ರಾಯ ಸ್ಥಿತಿಯ ಘಟ್ಟವಾದ ೧೫ನೇ ಶತಮಾನದ ಪ್ರಾರಂಭದಿಂದ ೧೮ನೇ ಶತಮಾನದ ಕೊನೆಯಾರ್ಧದವರೆಗಿನ ಕಾಲಾವಧಿಯಲ್ಲಿ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಸಾಗಿ ಬಂದ ಸನ್ನಿವೇಶಗಳನ್ನು ವಿಶೇಷ ಮಹತ್ವ ನೀಡಿ ಚರ್ಚಿಸಲಾಗಿದೆ. ಖಡ್ಗ, ತಕ್ಕಡಿ ಮತ್ತು ಶಿಲುಬೆಗಳೊಂದಿಗೆ ಪ್ರವೇಶಗೈದು ಈ ಮೂರು ಸಂಕೇತಗಳು ವಿಜೃಂಭಿಸಿ ಕೊನೆಯ ಅವಧಿಗೆ ಶಿಲುಬೆ ಮಾತ್ರ ಈ ಪ್ರದೇಶದಲ್ಲಿ ಶಾಶ್ವತವಾಗಿ ನೆಲೆಯೂರುವಂತಾಯಿತು. ಆದರೆ ಈ ಪ್ರಕ್ರಿಯೆ ಕೇವಲ ಸರಳ ಸಾಂಕೇತಿಕವಾಗಿ ನಡೆದಿರುವುದಿಲ್ಲ. ಲಕ್ಷಾಂತರ ಜನರ ಮಾರಣಹೋಮ, ಮಾಸಲಾರದ ಗಾಯಗಳು, ಬೆಂಕಿಯ ಕೆನ್ನಾಲಗೆ ಹಾಗೂ ಮದ್ದು ಗುಂಡಿನ ಶಬ್ದಗಳೊಂದಿಗೆ ಮುನ್ನಡೆದ ಸಂಕಥನವಾಗಿದೆ. ಈ ಅವಧಿಯ ಉದ್ದಗಲಕ್ಕೂ ಸಾಂಬಾರು ಪದಾರ್ಥಗಳು ಮತ್ತು ಕರಿಮೆಣಸು ನಿರ್ಣಾಯಕ ಪಾತ್ರವಹಿಸಿದೆ ಎಂಬುದು ಗೊತ್ತಾಗುತ್ತದೆ.

ಪೋರ್ಚುಗೀಸರ ಮೇಲ್ಮಟ್ಟದ ಯುದ್ಧ ತಂತ್ರಜ್ಞಾನ ದೇಶೀಯ ಸಾಮಂತರಾಜರ ಅನೈಕ್ಯತೆ ಮತ್ತು ಪರಸ್ಪರ ದ್ವೇಷದ ಮನೋಭಾವಗಳನ್ನು ಉಪಯೋಗಿಸಿಕೊಂಡು ಪೋರ್ಚುಗೀಸರು ಫಲವತ್ತಾದ ಆದಾಯದ ಕಣಜವಾಗಿರುವ ಕರಾವಳಿ ಕರ್ನಾಟಕವನ್ನು ೧೫೨೬ ರಲ್ಲಿ ಸಂಪೂರ್ಣವಾಗಿ ತಮ್ಮ ಕೈವಶಪಡಿಸಿದರು. ಇಲ್ಲಿಯ ಜನರ ಮೇಲೆ ತೆರಿಗೆ ಮತ್ತಿತರೆ ಕಂದಾಯಗಳನ್ನು ಏರಿಕೆ ಮಾಡುವ ಮೂಲಕ ಹಿಂಸಿಸಲಿಲ್ಲ. ಆದರೆ ಆಹಾರ ಧಾನ್ಯಗಳ ಬೆಲೆ ನಿರ್ಧಾರದಲ್ಲಿ ಶೋಷಣೆ ನಡೆಯುತ್ತಿತ್ತು. ಮಧ್ಯವರ್ತಿ ಏಜೆಂಟರೆಂಬ ಹೊಸ ಪದ್ಧತಿ ಜಾರಿಗೆ ಬಂತು.

ಈ ಅವಧಿಯಲ್ಲಿ ಭಟ್ಕಳ ಮತ್ತು ಬಸ್ರೂರುಗಳಲ್ಲಿ ಪೋರ್ಚುಗೀಸರ ವಿರುದ್ಧ ವ್ಯಾಪಾರಿ ಸಮುದಾಯ ಮತ್ತು ಜನತೆ ನಡೆಸಿದ ಪ್ರತಿರೋಧದ ಅಲೆ ಗಮನಾರ್ಹವಾಗಿದೆ. ಈ ಮುಖಾಮುಖಿಯಲ್ಲಿ ಸ್ಥಳೀಯರ ಅಪಾರ ಸಾವು-ನೋವು ಸಂಭವಿಸಿದರೂ ಪೋರ್ಚುಗೀಸರಿಗೆ ದೇಶೀಯ ಶಸ್ತ್ರಾಸ್ತ್ರಗಳೊಂದಿಗೆ ತೀವ್ರ ಪ್ರತಿರೋಧ ವ್ಯಕ್ತಪಡಿಸಿರುತ್ತಾರೆ.

ಪೋರ್ಚುಗೀಸರೊಂದಿಗೆ ಮಂಗಳೂರು ಪ್ರಾಂತ್ಯದಲ್ಲಿ ನಡೆದ ನಾಲ್ಕು ಪ್ರಮುಖ ಸಂಘರ್ಷಗಳು ಗಮನಾರ್ಹವಾಗಿದೆ. ಕಲ್ಲಿಕೋಟೆಯ ಜಾಮೋರಿನ್‌ಗಳನ್ನು ಸದೆ ಬಡಿಯಬೇಕಿದ್ದರೆ ಮಂಗಳೂರಿನಲ್ಲಿ

ನಿಯಂತ್ರಣ ಸಾಧಿಸಿ ಕೋಟೆ ಕಟ್ಟಿ ಅಲ್ಲಿಯ ವ್ಯಾಪಾರಿ ಹಡಗುಗಳನ್ನು ನಾಶ ಮಾಡುವ ಉದ್ದೇಶದಿಂದ ಈ ಪ್ರಕ್ರಿಯೆ ನಿರಂತರ ನಡೆಯಿತು. ಇಂತಹ ಸಂದರ್ಭದಲ್ಲಿ ಮಂಗಳೂರಿನ ಜನತೆ ಕೂಡಾ ಪೋರ್ಚುಗೀಸರ ವಿರುದ್ಧ ಹೋರಾಡಿದ್ದಾರೆ. ಮತ್ತೊಂದೆಡೆಯಲ್ಲಿ ಉಳ್ಳಾಲದ ರಾಣಿಯು ಧೀರೋದಾತ್ತ ಹೋರಾಟವನ್ನು ಇತಿಮಿತಿಯಲ್ಲಿ ನಡೆಸಿರುತ್ತಾಳೆ. ಉಳ್ಳಾಲದ ರಾಣಿ ಅಬ್ಬಕ್ಕದೇವಿಗೆ ಪ್ರಥಮ ಸ್ವಾತಂತ್ರ್ಯ ಹೋರಾಟಗಾರ್ತಿ ಎಂಬ ವಿಶ್ಲೇಷಣೆ ಉತ್ಪ್ರೇಕ್ಷ ಮತ್ತು ಅವಾಸ್ತವಿಕವಾದುದಾಗಿದೆ.

ವೀರಭದ್ರ ನಾಯಕ, ವೆಂಕಟಪ್ಪ ನಾಯಕ ಮತ್ತು ಶಿವಪ್ಪ ನಾಯಕರ ಇಕ್ಕೇರಿಯ ಕಾಲಘಟ್ಟದಲ್ಲಿ ಸಂಭವಿಸಿದ ವಿವಿಧ ಒಪ್ಪಂದಗಳು ವಾಣಿಜ್ಯೋದ್ಯಕ್ಕೆ ಸಂಬಂಧಿಸಿದುದಾಗಿದೆ. ಕರಿಮೆಣಸು ನಿರ್ಣಾಯಕ ಪಾತ್ರವಹಿಸಿದೆ. ಕರಿಮೆಣಸಿಗೆ ಸಂಬಂಧಿಸಿ ದರ ಸಮರ ಪ್ರಕ್ರಿಯೆ ೧೭ನೇ ಶತಮಾನದಿಂದಲೇ ಕರಾವಳಿ ಕರ್ನಾಟಕದಲ್ಲಿ ಚಾಲ್ತಿಗೆ ಬಂತು ಎಂಬುದು ತಿಳಿದು ಬರುತ್ತದೆ. ಈ ಎಲ್ಲಾ ವಿವರಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಈ ಅಧ್ಯಾಯದಲ್ಲಿ ಐದು ವಿಭಾಗಗಳಿವೆ. ಮೊದಲನೆಯ ಭಾಗದಲ್ಲಿ ಭಟ್ಕಳ ಸಂಘರ್ಷ – ಸ್ವರೂಪ ಮತ್ತು ವ್ಯಾಪಾರಿ ಸಮುದಾಯಗಳ ಪ್ರತಿರೋಧ ಎಂಬ ಬಗ್ಗೆ ಮಾಹಿತಿಗಳನ್ನು ಚರ್ಚಿಸಿ ವಿಶ್ಲೇಷಿಸಲಾಗಿದೆ. ಎರಡನೇ ಭಾಗದಲ್ಲಿ ಮಂಗಳೂರು ಕೇಂದ್ರೀಕರಿಸಿ ಬಸ್ರೂರು, ಗಂಗೊಳ್ಳಿಗಳ ಬಂದರುಗಳನ್ನು ಒಳಗೊಂಡಂತೆ ನಡೆದ ಸಂಘರ್ಷ ಮತ್ತು ಫಲಿತಾಂಶಗಳನ್ನು ವಿಶ್ಲೇಷಿಸಿಲಾಗಿದೆ. ಮೂರನೇ ಅಧ್ಯಾಯದಲ್ಲಿ ಕೆಳದಿ ನಾಯಕರ ಉಚ್ಛ್ರಾಯ ಸ್ಥಿತಿಗತಿ, ಪೋರ್ಚುಗೀಸರೊಂದಿಗೆ ದರ ಸಮರ ಮತ್ತು ಅವರ ಅವನತಿಯ ಪ್ರಾರಂಭದ ಹಂತದ ಬೆಳವಣಿಗೆಗಳನ್ನು ವಿಮರ್ಶೆಗೆ ಕೈಗೆತ್ತಿಕೊಳ್ಳಲಾಗಿದೆ. ನಾಲ್ಕನೇ ಭಾಗದಲ್ಲಿ ಕರಾವಳಿ ಕರ್ನಾಟಕದಲ್ಲಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿಯು ತನ್ನ ಪ್ರಾರಂಭದ ದಿನಗಳಲ್ಲಿ ಕಾರ್ಯಾಚರಿಸಿದ ವಿಧಿವಿಧಾನಗಳನ್ನು ಚರ್ಚಿಸಲಾಗಿದೆ. ಮುಂದಿನ ಭಾಗದಲ್ಲಿ ಇಕ್ಕೇರಿ ಮತ್ತು ಪೋರ್ಚುಗೀಸರ ನಡುವಿನ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನಿರ್ಣಾಯಕ ಘಟ್ಟಗಳ ಬಗ್ಗೆ ವಿವರವಾಗಿ ಚರ್ಚಿಸಿ ವಿಶ್ಲೇಷಿಸಲಾಗಿದೆ. ಅಂತಿಮ ಭಾಗದಲ್ಲಿ ಈ ಅಧ್ಯಾಯದ ಮುಖ್ಯ ಫಲಿತಾಂಶಗಳನ್ನು ಕ್ರೋಡೀಕರಿಸಿ ಮಂಡಿಸಲಾಗಿದೆ.

ಖಡ್ಗ, ತಕ್ಕಡಿ ಮತ್ತು ಶಿಲುಬೆಗಳೊಂದಿಗೆ ಸರ್ವ ರೀತಿಯಿಂದಲೂ ಸುಸಜ್ಜಿತವಾದ ಪೋರ್ಚುಗೀಸರ ದಂಡಯಾತ್ರೆ ಕಲ್ಲಿಕೋಟೆಗೆ ಬಂದು ಇಳಿದ ಪ್ರಾರಂಭದಿಂದಲೇ ತನ್ನ ಮೂಲ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಸಂಘರ್ಷಕ್ಕೆ ಇಳಿಯಿತು. ತನ್ಮೂಲಕ ಪ್ರಾರಂಭದ ಹದಿನಾರು ವರ್ಷಗಳಲ್ಲಿ ಪೋರ್ಚುಗೀಸರ ಆಡಳಿತಾತ್ಮಕ, ಸೈನಿಕ ಮತ್ತು ವ್ಯಾಪಾರೋದ್ಯಮದ ಉದ್ದೇಶಕ್ಕಾಗಿ ನಡೆಸಿದ ರಕ್ತಸಿಕ್ತ ಅಧ್ಯಾಯಗಳ ಬಗ್ಗೆ ಈ ಮೊದಲಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಸರಿಸುಮಾರು ೧೮ ನೇ ಶತಮಾನದ ವರೆಗೆ ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮದ ಹಿತಾಸಕ್ತಿಗಾಗಿ ನಡೆಸಿದ ಸಂಘರ್ಷಗಳು ಹೂಡಿದ ಪಿತೂರಿಗಳು, ಮಾಡಿದ ಒಪ್ಪಂದಗಳು, ಸುಟ್ಟ ನಗರಗಳು, ಹರಿಸಿದ ರಕ್ತದೋಕುಳಿ ಇವುಗಳೆಲ್ಲವುದರ ಬಗ್ಗೆ ವಿಶ್ಲೇಷಿಸಲಾಗಿದೆ. ನಿರ್ದಿಷ್ಟ ಧಾರ್ಮಿಕ ಉದ್ದೇಶಗಳನ್ನು ಹೊತ್ತ ಕ್ರೈಸ್ತ ಮಿಶನರಿಗಳು ಪೋರ್ಚುಗೀಸರ ವ್ಯಾಪಾರದ ಉದ್ದೇಶ ಈಡೇರಿಕೆಗಳಿಗಾಗಿ ಇವರುಗಳೆಲ್ಲರನ್ನೂ ರಾಜತಾಂತ್ರಿಕರಾಗಿ, ಕೆಲವೊಮ್ಮೆ ವ್ಯಾಪಾರಿ ಪ್ರತಿನಿಧಿಗಳಾಗಿ ಮತ್ತು ವಿಶೇಷ ಸಂದರ್ಭಗಳಲ್ಲಿ

ಯುದ್ಧರಂಗದಲ್ಲೂ ಕಾರ್ಯ ನಿರ್ವಹಿಸಿದ ಸನ್ನಿವೇಶಗಳಿವೆ. ಈ ಎಲ್ಲಾ ವಿವರಗಳನ್ನು ಪ್ರಸ್ತುತ ಅಧ್ಯಾಯವು ಚರ್ಚಿಸುವ ಪ್ರಯತ್ನ ಮಾಡಿದೆ.

* * * *

### ಭಟ್ಕಳ ಸಂಘರ್ಷ– ಸ್ವರೂಪ ಮತ್ತು ವ್ಯಾಪಾರಿ ಸಮುದಾಯಗಳ ಪ್ರತಿರೋಧ

ಭಾರತದಲ್ಲಿ ಪೋರ್ಚುಗೀಸ್ ಸಾರ್ವಭೌಮತೆಯ ಸಂಸ್ಥಾಪಕರೂ ಚತುರ ದಂಡ ನಾಯಕನೂ ಎಂದು ಪರಿಗಣಿಸಲ್ಪಟ್ಟಿದ್ದ ಅಲ್ಫೋನ್ಸೋ ಅಲ್ಬುಕರ್ಕನು, ಕರಾವಳಿ ಕರ್ನಾಟಕ ಮತ್ತು ಮಲಬಾರ್ ತೀರದ ಎಲ್ಲಾ ರಾಜರುಗಳಿಗೆ, ಸಾಮಂತರುಗಳಿಗೆ, ದೇಶೀಯ ಮತ್ತು ವಿದೇಶೀ ಮುಸ್ಲಿಂ ವ್ಯಾಪಾರಿಗಳಿಗೆ ಸಿಂಹಸ್ವಪ್ನವಾಗಿ ಇದ್ದ ಕಾರಣ ಅವರೆಲ್ಲರೂ ಅಸಹಾಯಕರಾಗಿದ್ದರು. ಅಲ್ಬುಕರ್ಕನು ೧೫೧೬ರಲ್ಲಿ ಮರಣವನ್ನಪ್ಪಿದ ನಂತರ ಪೋರ್ಚುಗೀಸರ ವಿರುದ್ಧ ಅಲ್ಲಲ್ಲಿ ಪ್ರತಿರೋಧಗಳು ಬೆಳೆದು ಬಂದವು. ಆ ವೇಳೆಗಾಗಲೇ ಭಟ್ಕಳದಲ್ಲಿ ಮುಸ್ಲಿಂ ವ್ಯಾಪಾರಿ ಸಮುದಾಯ ವಿವಿಧ ಸಂದರ್ಭಗಳಲ್ಲಿ ಪೋರ್ಚುಗೀಸರ ವಿರುದ್ಧ ತಿರುಗಿ ಬಿದ್ದಿರುವುದನ್ನು ಗಮನಿಸಿದ್ದೇವೆ. ಇದೇ ರೀತಿಯ ಮತ್ತೊಂದು ದಂಗೆ ೧೫೧೬ ರ ಪ್ರಾರಂಭದಲ್ಲಿ ಪೋರ್ಚುಗೀಸರು ತಮ್ಮ ದೊಡ್ಡ ಹಡಗಿಗೆ ಭಟ್ಕಳದಲ್ಲಿ ಸಕ್ಕರೆ, ಕಬ್ಬಿಣ, ಅಕ್ಕಿ, ಕರಿಮೆಣಸು ಮೊದಲಾದ ಆಹಾರ ವಸ್ತುಗಳನ್ನು ಮತ್ತು ಸಾಂಬಾರು ಪದಾರ್ಥಗಳನ್ನು ತುಂಬಿಸಿಕೊಳ್ಳುತ್ತಿದ್ದಾಗ ನಡೆದಿದೆ. ಹಡಗಿನ ಕ್ಯಾಪ್ಟನ್ ಆದ 'ಸಾಮಾವ್ರೋ ಡಿ ಅಂದ್ರಾದೆ' ಮತ್ತು ಅವರಿಗೆ ಸಹಾಯಕರಾಗಿ ಭಟ್ಕಳ ಬಂದರಿನ ಫ್ಯಾಕ್ಟರ್ ಅಥವಾ ಮುಖ್ಯಸ್ಥ 'ಅಲೆಕ್ಸಿಕೋ'ರವರು ಕೆಲಸದ ಮೇಲುಸ್ತುವಾರಿ ನಿರ್ವಹಿಸುತ್ತಿದ್ದರು. ಆ ಸಮಯದಲ್ಲಿ ಯಾವುದೋ ಕ್ಷುಲ್ಲಕ ಕಾರಣಕ್ಕೆ ಬೆಳೆದು ಬಂದ ಸಣ್ಣ ಪ್ರಮಾಣದ ಜಗಳ ಹಿಂಸೆಗೆ ತಿರುಗಿ ಸ್ಥಳೀಯ ವ್ಯಾಪಾರಿಗಳು ಪೋರ್ಚುಗೀಸ್ ಸಿಬ್ಬಂದಿಗಳ ಮೇಲೆ ಮುಗಿಬಿದ್ದು ೨೪ ಮಂದಿಯನ್ನು ಕೊಂದರು. ಇನ್ನು ಹಲವಾರು ಮಂದಿ ಗಾಯಗೊಂಡರು. ಇಷ್ಟು ಮಾತ್ರವಲ್ಲದೆ ಸುಮಾರು ಹತ್ತು ಸಾವಿರಕ್ಕೂ ಹೆಚ್ಚಿನ ಬೆಲೆಬಾಳುವ ವಸ್ತುಗಳನ್ನು ದರೋಡೆ ಮಾಡಿದರು(ಶಾಸ್ತ್ರಿ ೨೦೦೦:೬೬). ಈ ಹಿಂಸಾತ್ಮಕ ಘಟನೆಗೆ ಪೋರ್ಚುಗೀಸರು ಪ್ರತಿಕ್ರಿಯಿಸಿದ ಬಗ್ಗೆ ವಿವರಗಳು ಆ ಕಾಲದ ಚಾರಿತ್ರಿಕ ದಾಖಲೆಗಳಲ್ಲಾಗಲೀ ಅಥವಾ ಆಸ್ಥಾನ ಬರಹಗಾರರ ದಾಖಲೆಗಳಲ್ಲಾಗಲೀ ದೊರೆಯುವುದಿಲ್ಲ. ಬಹುಶಃ ಈ ಘಟನೆ ಭಟ್ಕಳದಲ್ಲಿ ಪೋರ್ಚುಗೀಸರಿಂದ ಭೀಕರ ಮಾರಣಹೋಮ ಮತ್ತು ಭಯಾನಕ ಹಿಂಸೆ, ಕೊಳ್ಳಿ ಇಡುವಿಕೆಗೆ ಭಟ್ಕಳ ಬಲಿಯಾಗಿರಬಹುದಾದ ಸಾಧ್ಯತೆಗಳು ಹೆಚ್ಚಿವೆ. ಏಕೆಂದರೆ ಪೋರ್ಚುಗೀಸರು ಪ್ರಾರಂಭದಿಂದಲೇ ವ್ಯಾಪಾರಿ ಸಮುದಾಯದ ಮಧ್ಯೆ, ಸಾಮಂತ ರಾಜರುಗಳ ಮಧ್ಯೆ ಹಾಗೂ ಜನಸಾಮಾನ್ಯರುಗಳ ಮಧ್ಯೆ ಭಯಮಿಶ್ರಿತ ವಾತಾವರಣವನ್ನು ನಿರ್ಮಾಣ ಮಾಡಲು ಪ್ರಯತ್ನಿಸುತ್ತಿದ್ದರು. ಇಂತಹ ಈ ಪ್ರಯತ್ನ ೧೬ನೇ ಶತಮಾನದ ಪ್ರಥಮ ದಶಕದಲ್ಲಿ ನಿರೀಕ್ಷಿತ ಪ್ರತಿಫಲವನ್ನು ನೀಡಿದ್ದನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ಸಂಜಯ ಸುಬ್ರಮಣ್ಯಂರವರ ಪ್ರಕಾರ ಮುಸ್ಲಿಂ ವ್ಯಾಪಾರಿಗಳು ದಂಗೆ ಎದ್ದು ೩೪ ಮಂದಿಯನ್ನು ಕೊಲೆ ಮಾಡಿದರು. ಮೃತಪಟ್ಟವರಲ್ಲಿ ಕಮಾಂಡರ್ 'ಸೀಮಾವೋ ಡಿ ಅಂದ್ರಾದೇ'ಯವರೂ ಸಹ ಸೇರಿರುತ್ತಾರೆ ಎಂದು ವಿವರಿಸಿದ್ದಾರೆ(ಸುಬ್ರಮಣ್ಯಂ ೨೦೦೪:೧೨೬).

ದೂರ್ತೆ ಬಾರ್ಬೋಸಾ ಎಂಬ ಓರ್ವ ಪೋರ್ಚುಗೀಸ್ ಪ್ರವಾಸಿಗ ೧೫೦೦ ರಿಂದ ೧೫೧೬ ರವರೆಗೆ ಭಾರತದ ಪಶ್ಚಿಮ ಕರಾವಳಿಯಲ್ಲಿ ಇದ್ದುಕೊಂಡು ಮಲಯಾಳಂ ಭಾಷೆಯನ್ನು ಕಲಿತಿದ್ದನು. ೧೫೦೨-೦೩ ರಲ್ಲಿ ಅಲ್ಬುಕರ್ಕ್ ಮತ್ತು ಸ್ಥಳೀಯ ರಾಜರುಗಳ ಮಧ್ಯೆ ಭಾಷಾಂತರದ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಆತ ಭಟ್ಕಳ ಬಂದರನ್ನು 'ಗೇಟ್ ವೇ ಆಫ್ ಸೀ ಟ್ರೇಡ್ ಇನ್ ಕೋಸ್ಟಲ್ ರೀಜನ್' ಎಂದು ಕರೆದಿರುತ್ತಾನೆ. ಪ್ರಾರಂಭದಲ್ಲಿ ಎಲ್ಲಾ ಗವರ್ನರ್‌ಗಳು ಇಂತಹ ಮಹತ್ವಪೂರ್ಣ ಬಂದರಿನ ಹತೋಟಿಗಾಗಿ ಪ್ರಯತ್ನಿಸಿದ್ದಾರೆ (ನಾಗರಾಜಯ್ಯ ೨೦೧೧:೪೫).

ಪೋರ್ಚುಗೀಸ್ ಗವರ್ನರ್ ೧೫೧೭ಕ್ಕೆ ಕೊಚ್ಚಿಯ ನೌಕಾಪಡೆಯ ಕ್ಯಾಪ್ಟನ್ ಜಾವ್ರೋ ಗೋಮ್ ಸಾಲ್ವೇಸ್ ಡಿ ಕ್ಯಾಸ್ಟರೋ ಬ್ರಾಂಕೋನಿಕೆ ತನ್ನ ಸೈನ್ಯವನ್ನು 'ದಿಯೂ'ವಿಗೆ ಕೊಂಡೊಯ್ಯಬೇಕೆಂದು ಆದೇಶಿಸಿದನು. ಈ ಸಂಬಂಧವಾಗಿ ಸೈನ್ಯ ಪ್ರಯಾಣಿಸುವಾಗ ಭಟ್ಕಳ ಮತ್ತು ಇತರೆ ಪ್ರಯಾಣದ ಮಾರ್ಗದಲ್ಲಿ ಬರುವ ಬಂದರುಗಳನ್ನು ಪೋರ್ಚುಗೀಸ್‌ರ ಹತೋಟಿಗೆ ಒಳಪಡಿಸಬೇಕೆಂದು ಆದೇಶವಿತ್ತನು. ಅದರಲ್ಲೂ ಪ್ರಮುಖವಾಗಿ ಭಟ್ಕಳದಲ್ಲಿ ಒರ್ವ ಫ್ಯಾಕ್ಟರ್‌ನ್ನು ನೇಮಿಸಿ ಆ ಬಂದರಿನ ಸುತ್ತಮುತ್ತಲಿನ ಕಾಡುಗಳಲ್ಲಿ ದೊರೆಯುವ ಎಲ್ಲಾ ದಾಲ್ಚಿನಿ ಸಾಂಬಾರು ಪದಾರ್ಥಗಳನ್ನು ಸಂಗ್ರಹಿಸಬೇಕೆಂದು ಆದೇಶಿಸಿದನು. ಇಂತಹ ಈ ಮಹತ್ವದ ಆದೇಶಗಳನ್ನು ಕ್ಯಾಪ್ಟನ್ ಯಾವ ರೀತಿಯಲ್ಲಿ ಜಾರಿಗೊಳಿಸಿದನೆಂಬ ಬಗ್ಗೆ ಪೋರ್ಚುಗೀಸ್ ದಾಖಲೆಗಳಲ್ಲಿ ವಿವರಗಳು ದೊರೆಯುವುದಿಲ್ಲ.

ಭಟ್ಕಳದ ರಾಣಿಯನ್ನು ಶಿಕ್ಷಿಸುವ ಇರಾದೆಯಿಂದ ೧೫೧೮ ರ ಕೊನೆಯಲ್ಲಿ ಗವರ್ನರ್ ಲೋಪೇಜ್ ಮುಂದುವರಿಯುತ್ತಾನೆ. ಭಟ್ಕಳ ಮತ್ತು ಪೋರ್ಚುಗೀಸ್‌ರ ಮಧ್ಯೆ ೧೫೦೯ ರಲ್ಲಿ ನಡೆದ ಒಪ್ಪಂದದ ಪ್ರಕಾರ ಭಟ್ಕಳವು ಪ್ರತೀ ವರ್ಷ ೨೦೦೦ ಚೀಲ ಅಕ್ಕಿಯನ್ನು ಕಪ್ಪ ಕಾಣಿಕೆಯಾಗಿ ಕೊಡಬೇಕಾಗಿತ್ತು. ಕೆಲವು ವರ್ಷಗಳ ಕಾಲ ಚಾಚೂ ತಪ್ಪದೆ ಪಾವತಿಸುತ್ತಿದ್ದ ಭಟ್ಕಳದ ರಾಣಿ ಇದನ್ನು ನಿಲ್ಲಿಸಿ ಬಿಟ್ಟಿದ್ದಳು. ಆದುದರಿಂದ ಬಾಕಿ ವಸೂಲಿಯನ್ನು ಮಾಡಿ ರಾಣಿಯನ್ನು ದಂಡಿಸಬೇಕೆಂದು ಪೋರ್ಚುಗೀಸ್ ಗವರ್ನರ್ ನಿರ್ಧರಿಸಿದನು. ಮೂರು ಹಡಗುಗಳನ್ನು ನಿಯಮಿಸಿ ಅದಕ್ಕೆ ದಂಡ ನಾಯಕನಾಗಿ ಅಲ್ಫಾನ್ಸೋ ಡಿ' ಮೆನೆಜಸ್‌ರವರನ್ನು ನೇಮಿಸಿದನು. ಆತನು ಭಟ್ಕಳದ ನದಿ ಸಮುದ್ರವನ್ನು ಸೇರುವ ಅಳಿವೆ ಬಾಗಿಲಿನಲ್ಲಿ ತನ್ನ ಸೈನ್ಯವನ್ನು ನಿಲ್ಲಿಸಿ ಭಟ್ಕಳದ ಯಾವುದೇ ಹಡಗುಗಳು ಬಂದರಿಗೆ ಬರುವುದು ಮತ್ತು ಹೋಗುವುದನ್ನು ತಡೆ ಹಿಡಿಯಬೇಕೆಂದು ನಿರ್ದೇಶನ ನೀಡಿದನು. ಅಷ್ಟು ಮಾತ್ರವಲ್ಲದೆ ಗವರ್ನರ್ ಲೋಪೇಜ್ ಸೈನ್ಯದೊಂದಿಗೆ ಬಂದು ಭಟ್ಕಳದ ಸೈನ್ಯವನ್ನು ಸದೆ ಬಡಿಯಬೇಕೆಂದು ನಿರ್ಧರಿಸಿದನು. ಆಗ ಅತ್ಯಂತ ಸಂದಿಗ್ಧಮಯ ಸನ್ನಿವೇಶ ನಿರ್ಮಾಣವಾಯಿತು. ಭಟ್ಕಳದ ರಾಣಿಗೆ ಈ ಸನ್ನಿವೇಶದಲ್ಲಿ ಬಾಕಿಯಾಗಿರುವ ಕಪ್ಪ ಕಾಣಿಕೆಯನ್ನು ಪಾವತಿಸಿ ಬಿಗುವಿನ ವಾತಾವರಣವನ್ನು ಇಲ್ಲದಾಗಿಸಿರುವುದನ್ನು ಹೊರತು ಪಡಿಸಿ ಬೇರೆ ದಾರಿಯೇ ಇರಲಿಲ್ಲ ಮತ್ತು ಅದೇ ರೀತಿ ಕಪ್ಪ ಕಾಣಿಕೆಯನ್ನು ಪಾವತಿಸಿದಳು (ಶಾಸ್ತ್ರಿ ೨೦೦೦:೬೮). ಆದರೆ ರಾಬರ್ಟ್ ಸೀವೆಲ್ ಪ್ರಕಾರ, ಗವರ್ನರ್ ಅಲ್ಫಾನ್ಸೋ ಡಿ'ಸೋಜಾ ಭಟ್ಕಳದ ರಾಣಿಯ ಪ್ರಾಂತ್ಯದ ಮೇಲೆ ಪೋರ್ಚುಗಲ್ ರಾಜನಿಗೆ ನೀಡಬೇಕಾದ ಕಪ್ಪ ಕಾಣಿಕೆಯನ್ನು ನೀಡದೇ ಬಾಕಿ ಇಟ್ಟಿರುವುದರಿಂದ ಆ ಪ್ರಾಂತ್ಯವನ್ನು ಸಂಪೂರ್ಣವಾಗಿ ಕತ್ತಿನ ಅಲಗು ಮತ್ತು ಕೆನ್ನಾಲಗೆ ಆಹುತಿ ಆಗುವ ಹಾಗೆ ಬೆಂಕಿ

ಹಾಕಿ ಸುಡಲಾಯಿತು. ದೊಡ್ಡ ಸಂಖ್ಯೆಯಲ್ಲಿ ಹಿಂದುಗಳನ್ನು ಹತ್ಯೆ ಮಾಡಿದ್ದರಿಂದ ರಾಣಿ ಬೇರೆ ದಾರಿ ಕಾಣದೆ ಒಪ್ಪಂದಕ್ಕೆ ಬರಲೇ ಬೇಕಾಯಿತು (ಸೀವೆಲ್ ೧೯೮೪:೧೮೫).

ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿದ್ದ ಭಟ್ಕಳದಲ್ಲಿ ಪೋರ್ಚುಗೀಸರು ಮಳಿಗೆಯನ್ನು ನಿರ್ಮಿಸುವ ನಿರಂತರ ಪ್ರಯತ್ನದ ಎಲ್ಲಾ ರಾಜತಾಂತ್ರಿಕ ಪ್ರಕ್ರಿಯೆಗಳು ವಿಫಲಗೊಂಡಿತ್ತು. ಆದರೂ ಸಹ ಭಟ್ಕಳದಲ್ಲಿ ಅನಧಿಕೃತವಾಗಿ ಪೋರ್ಚುಗೀಸರ ದರ್ಬಾರೇ ನಡೆಯುತ್ತಿತ್ತು. ಭಟ್ಕಳ ಬಂದರು ಮತ್ತು ಇಲ್ಲಿಂದ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆಗೆ ಇದ್ದ ಭಾರೀ ಮಹತ್ವದ 'ದಿ ಗ್ರೇಟ್ ವೆಸ್ಟರ್ನ್ ರೋಡ್'[೩] ವಾಣಿಜ್ಯಾತ್ಮಕ ದೃಷ್ಟಿಕೋನದಿಂದ ಅತ್ಯಂತ ಪ್ರಮುಖ ಆಯಕಟ್ಟಿನ ನಗರ ಪಟ್ಟಣಗಳನ್ನು ಸಂಪರ್ಕಿಸುತ್ತಿತ್ತು. ಆದರೂ ಸಹ ವಿಜಯನಗರದ ಕೃಷ್ಣ ದೇವರಾಯ ಯಾವುದೇ ಸಂದರ್ಭದಲ್ಲೂ ಮಧ್ಯ ಪ್ರವೇಶ ಮಾಡದಿರುವುದನ್ನು ನಾವು ಗಮನಿಸಬಹುದು. ಸಂಜಯ ಸುಬ್ರಹ್ಮಣ್ಯಂರವರು ಭಟ್ಕಳ ಬಂದರನ್ನು 'ಮೆಟ್ರೋ ಪೋಲಿಟನ್ ಬಂದರು' ಆಗಿ ಬಹುಮುಖೀಯ ಚಟುವಟಿಕೆಗಳನ್ನು ನಡೆಸುತ್ತಿದ್ದ ಒಂದು ಪ್ರಮುಖ ಬಂದರು ಎಂದು ಹೇಳಿದ್ದಾರೆ (ಸುಬ್ರಮಣ್ಯಂ ೨೦೦೪:೧೨೨). ಸಮುದ್ರದಲ್ಲಿ ಸಂಚರಿಸುವ ನೌಕಾಯಾನದ ಹಡಗುಗಳ ತಾಂತ್ರಿಕತೆಯನ್ನು ಮತ್ತು ದಿಕ್ಕನ್ನು ಭಟ್ಕಳದ ರೇಖಾಂಶದೊಂದಿಗೆ ಹೊಂದಾಣಿಕೆ ಮಾಡಿಕೊಂಡಿದ್ದ ಹಡಗುಗಳ ನಾವಿಕರುಗಳು ಸಹಜವಾಗಿಯೇ ಭಟ್ಕಳದಲ್ಲಿ ತಂಗಿ ವಿಶ್ರಾಂತಿ ಪಡೆದು ಅವಶ್ಯಕವಾದ ರಿಪೇರಿಗಳನ್ನು ನಡೆಸಿ ಅನಂತರ ಕೊಚ್ಚಿನ್ ಮತ್ತಿತರೆ ಕೇಂದ್ರಗಳಿಗೆ ಪ್ರಯಾಣಿಸುವ ಪರಿಪಾಠ ಚಾಲನೆಯಲ್ಲಿತ್ತು (ಸುಬ್ರಮಣ್ಯಂ ೨೦೦೪:೧೨೨). ಇಂತಹ ಭಟ್ಕಳದಲ್ಲಿ ೪ ಪ್ರಮುಖ ವ್ಯಾಪಾರಿ ಸಮುದಾಯಗಳು ಬಿರುಸಿನ ವ್ಯಾಪಾರಿ ಚಟುವಟಿಕೆಗಳಲ್ಲಿ ಗುರುತಿಸಿಕೊಂಡಿದ್ದರು. ಅವರುಗಳೆಂದರೆ ನವಾಯತ್‌ಗಳು,[೪] ಪರದೇಶಿಗಳು ಅಂದರೆ ತಾತ್ಕಾಲಿಕವಾಗಿ ನೆಲೆ ನಿಂತಿರುವ ಇತರೆ ದೇಶದ ವ್ಯಾಪಾರಿಗಳು, ಸಾರಸ್ವತ ಕೊಂಕಣಿ ಸಮುದಾಯ ಮತ್ತು ಜೈನ ಸಮುದಾಯದವರಾಗಿದ್ದರು. ಭಟ್ಕಳದ ರಾಣಿ ಜೈನ ಮತಾವಲಂಬಿಯಾಗಿದ್ದಳು. ಟೋಮೋ ಪೆರಿಸ್ ಪ್ರಕಾರ ೧೫೦೦ರಲ್ಲಿ ಭಟ್ಕಳವು ಗೋವಾ ಮತ್ತು ಚಾಲ್ ಬಂದರುಗಳ ವ್ಯಾಪಾರ ವ್ಯವಹಾರಕ್ಕೆ ಸಮಾನವಾದಂತಹ ಸ್ಥಾನಮಾನವನ್ನು ಹೊಂದಿದ್ದ ಎರಡನೇ ಪ್ರಮುಖ ಬಂದರು ಎಂದು ಉಲ್ಲೇಖಿಸಿರುವುದನ್ನು ಗಮನಿಸಬಹುದು (ಸುಬ್ರಮಣ್ಯಂ ೨೦೦೪:೧೨೩). ಬಹುಶಃ ಟೋಮೋ ಪೆರಿಸ್‌ರವರ ಈ ಉಲ್ಲೇಖ ಕೊಂಕಣ ಮತ್ತು ಕರಾವಳಿ ಕರ್ನಾಟಕಕ್ಕೆ ಸಂಬಂಧಿಸಿ ಒಪ್ಪಬಹುದಾದ ನಿಷ್ಕರ್ಷೆಯಾಗಿದೆ. ಏಕೆಂದರೆ ಕುದುರೆಗಳು ಮತ್ತು ಆನೆಗಳು ಆ ಕಾಲದಲ್ಲಿ ಯುದ್ಧದ ಮೂಲಭೂತ ಅವಶ್ಯಕತೆಯಾಗಿತ್ತು. ಇದರಲ್ಲಿ ಕುದುರೆಗಳು ಪಶ್ಚಿಮ ಕರಾವಳಿಯ ಭಟ್ಕಳ ಬಂದರಿಗೆ ಪರ್ಷಿಯಾದಿಂದ ಆಮದಾಗುತ್ತಿತ್ತು.

ಈ ರೀತಿ ಭಟ್ಕಳವು ಸದಾ ಸಂಘರ್ಷದ ಮಜಲುಗಳನ್ನು ಪ್ರಾರಂಭದ ಮೂರು ದಶಕಗಳಲ್ಲಿ ಕಂಡುಕೊಂಡ ಒಂದು ಪ್ರಮುಖ ಬಂದರಾಗಿದೆ. ಮುಸ್ಲಿಂ ವ್ಯಾಪಾರಿಗಳು ಪೋರ್ಚುಗೀಸರೊಂದಿಗೆ ಬೇರೆಬೇರೆ ಸಂದರ್ಭಗಳಲ್ಲಿ ಬೇರೆಬೇರೆ ಕಾರಣಗಳಿಗಾಗಿ ದಂಗೆ ಎದ್ದು ಕೊನೆಯಲ್ಲಿ ಮಾರಣ ಹೋಮ ಅಥವಾ ಗಲ್ಲು ಶಿಕ್ಷೆಯೊಂದಿಗೆ ಕೊನೆಯಾಗುತ್ತಿತ್ತು.

ಚರಿತ್ರೆಕಾರರಾದ ಎ ಆರ್ ಡಿಸ್ನಿಯವರು ಹೊನ್ನಾವರದಿಂದ ಮೇಲ್ಭಾಗಕ್ಕೆ ೩೫ ಮೈಲು ದೂರದ ಗೇರುಸೊಪ್ಪೆಯಲ್ಲಿ ಕರಿಮೆಣಸು ಮೊದಲಾದವುಗಳನ್ನು ತೂಕ ಮಾಡುವ ಸ್ಥಳ ಇತ್ತೆಂದೂ ಅಲ್ಲಿ ತೂಕ ಮಾಡಿದ ವಸ್ತುಗಳನ್ನು ನದಿಯ ಮೂಲಕ ಹೊನ್ನಾವರ ಬಂದರಿಗೆ ತರುತ್ತಿದ್ದರು ಎಂದು ವಿವರಿಸುತ್ತಾರೆ. ಇದೇ ಅಂಶವನ್ನು ಸಂಜಯ್ ಸುಬ್ರಹ್ಮಣ್ಯಂ ವಿವರಿಸುತ್ತಾ, ಪಶ್ಚಿಮ ಕರಾವಳಿಯಲ್ಲಿ ಮತ್ತು ಮಲಬಾರಿನಲ್ಲಿ ನದಿಗಳು ಸಾಗಣಿಕೆಯ ಉದ್ದೇಶಕ್ಕಾಗಿ ಅತ್ಯುತ್ತಮ ರೀತಿಯಲ್ಲಿ ಉಪಯೋಗವಾಗುತ್ತಿತ್ತು. ಇದರಲ್ಲಿ ಅಕ್ಕಿ, ಕರಿಮೆಣಸು ನದಿಯ ಮೂಲಕವೇ ಸಾಗಿ ಸಮುದ್ರ ತೀರದ ಬಂದರುಗಳಿಗೆ ಬರುತ್ತಿತ್ತು ಎಂದು ವಿವರಿಸುತ್ತಾರೆ (ಸುಬ್ರಹ್ಮಣ್ಯಂ ೨೦೦೪:೬೬). ಈಗಾಗಲೇ ವಿವರಿಸಿದಂತೆ ಎ ಆರ್ ಡಿಸ್ನಿಯವರು ಹೊನ್ನಾವರದ ಬಗ್ಗೆ ವಿಶೇಷ ಮಹತ್ವ ನೀಡಿ ವಿಶ್ಲೇಷಿಸಿರುವುದನ್ನು ಕಾಣಬಹುದು.

> ಹೊನ್ನಾವರ ೧೭ ನೇ ಶತಮಾನದ ಪ್ರಥಮಾರ್ಧದವರೆಗೆ ಕೆನರಾದಿಂದ ಕರಿಮೆಣಸನ್ನು ರಫ್ತು ಮಾಡುವ ಅತ್ಯಂತ ಪ್ರಮುಖ ಬಂದರಾಗಿತ್ತು. ಪೋರ್ಚುಗಲ್ ಪ್ರಭುತ್ವಕ್ಕೆ ಏಷ್ಯಾ ಖಂಡದಿಂದಲೇ ಅತ್ಯಂತ ಜಾಸ್ತಿ ಪ್ರಮಾಣದ ಕರಿಮೆಣಸು ಸರಬರಾಜು ಮಾಡುವ ಬಂದರುಗಳಲ್ಲಿ ಹೊನ್ನಾವರ ಮೊತ್ತಮೊದಲನೆಯದಾಗಿದೆ (ಡಿಸ್ನಿ ೨೦೧೦:೦೫).

ಮೇಲ್ಕಂಡ ವಿಶ್ಲೇಷಣೆಯಿಂದ ಹೊನ್ನಾವರದಲ್ಲಿ ಪೋರ್ಚುಗೀಸರು ವಾಣಿಜ್ಯೋದ್ಯಮಕ್ಕಾಗಿ ಎಲ್ಲಾ ರೀತಿಯ ಸಂಘರ್ಷಗಳನ್ನು ನಡೆಸುವ ಅನಿವಾರ್ಯತೆಗೆ ಒಳಗಾಗಿದ್ದರು ಎಂದು ತಿಳಿದು ಬರುತ್ತದೆ.

ಹೊನ್ನಾವರ ಪ್ರಾರಂಭದ ದಿನದಿಂದಲೇ ಪೋರ್ಚುಗೀಸರೊಂದಿಗೆ ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದಂತೆ ಪರಸ್ಪರ ಸಹಾಯ ಸಹಕಾರಗಳನ್ನು ಬೆಳೆಸಿಕೊಂಡು ಬಂದ ಪ್ರಾಂತ್ಯವಾಗಿದೆ. ಕೆನರಾದ ಬಂದರುಗಳಲ್ಲಿ ಅತ್ಯುತ್ತಮ ಗುಣಮಟ್ಟದ ಕರಿಮೆಣಸು ಮತ್ತು ಅದರ ಸಾಗಾಣಿಕೆಗೆ ಸಂಬಂಧಿಸಿ ಪ್ರಸಿದ್ಧವಾದ ಬಂದರು ಹೊನ್ನಾವರ ಆಗಿತ್ತು. ಶರಾವತಿ ನದಿಯ ವಿಶಾಲ ಗಾತ್ರದ ನದಿ ಮುಖಜ ಭೂಮಿ, ದೇಶ ವಿದೇಶಗಳ ದೊಡ್ಡ ಗಾತ್ರದ ಹಡಗುಗಳಿಗೆ ತಂಗಲು ಅನುಕೂಲವಾಗಿತ್ತು. ಅಲ್ಬುಕರ್ಕ್‌ನ ಆಡಳಿತದ ದಿನಗಳಿಂದಲೇ ಪೋರ್ಚುಗೀಸರಿಗೆ ಸಂಬಂಧಿಸಿ ಯಾವುದೇ ಅಡೆತಡೆಗಳಿಲ್ಲದೆ ಶಾಂತಿ ಸೌಹಾರ್ದತೆಯ ವಾತಾವರಣ ಈ ಪ್ರಾಂತ್ಯದಲ್ಲಿ ನೆಲೆಸಿತ್ತು. ಚಾರಿತ್ರಿಕ ದಾಖಲೆಗಳ ಪ್ರಕಾರ ಹೊನ್ನಾವರದಲ್ಲಿ ಟರ್ಕರಿಗೆ ಸಂಬಂಧಪಟ್ಟ ದೊಡ್ಡ ಗಾತ್ರದ ಹಡಗುಗಳು ಸರಕುಗಳನ್ನು ತುಂಬಿಸಿಕೊಳ್ಳುವ ವಿಷಯವನ್ನು ತಿಳಿದುಕೊಂಡ ವೈಸ್‌ರಾಯ್ ಗಾರ್ಸಿಯಾ ಡಿ' ನೊರೋನ್ಹಾ ತನ್ನ ಮಗ ಅಲೆರೊವೋನ ನಾಯಕತ್ವದಲ್ಲಿ ದೊಡ್ಡ ಸೈನ್ಯವನ್ನು ಹೊನ್ನಾವರಕ್ಕೆ ಕಳುಹಿಸಿಕೊಟ್ಟನು. ಟರ್ಕರು ನದಿಯಲ್ಲಿ ಬಂದೋಬಸ್ತು ನಿರ್ಮಿಸಿ ಯುದ್ಧೋಪಕರಣಗಳೊಂದಿಗೆ ವ್ಯವಸ್ಥಿತರಾಗಿ ತಮ್ಮ ಹಡಗಿಗೆ ಸರಕುಸರಂಜಾಮುಗಳನ್ನು ತುಂಬಿಸುತ್ತಿದ್ದರು. ಆದರೆ ದೊಡ್ಡ ಸೈನ್ಯದೊಂದಿಗೆ ಅಲೆರೊವೋ ನದಿಯ ಭಾಗಕ್ಕೆ ತಲುಪಿದ ಕ್ಷಣದಲ್ಲೇ ಯಾವುದೇ ಪ್ರತಿರೋಧವನ್ನು ಮಾಡದೇ ಟರ್ಕರು ಪಲಾಯನಗೈದರು. ಅಲೆರೊವೋ ಹಡಗಿನ ಸರಕು ಸರಂಜಾಮುಗಳನ್ನು ವಶಪಡಿಸಿಕೊಂಡು ಹಡಗಿಗೆ ಬೆಂಕಿ ಕೊಟ್ಟು ನಾಶಮಾಡಿದನು (ಶಾಸ್ತ್ರೀ ೨೦೦೦:೮೪).

ಫರಿಯಾ ಇ ಸೋಜಾ ಎಂಬ ಪೋರ್ಚುಗೀಸ್ ಪ್ರವಾಸಿಗನ ಬರಹ ಬೇರೆಯೇ ಆಗಿದೆ. ಹೊನ್ನಾವರದ ರಾಣಿಯು ಪೋರ್ಚುಗೀಸರೊಂದಿಗೆ ಮಾಡಿರುವ ಶಾಂತಿ ಒಪ್ಪಂದಗಳಿಗೆ ಬದ್ಧರಾಗಿರದೆ ಸೋಪಾಲದ

ದೊರೆ ಪೋರ್ಚುಗೀಸರ ಶತ್ರುವಾಗಿದ್ದ ಸುಲೈಮಾನ್‌ನ ಹಡಗಿಗೆ ಸಹಕರಿಸಿದೆ ಎಂಬುದನ್ನು ತಿಳಿದುಕೊಂಡು ನ್ಯೂನೋ ಡಿ' ಕುನ್ಹಾ ಪ್ರಿಡೇಸರ್, ಗಾರ್ಸಿಯಾ ಡಿ' ನೊರೋನ್ಹಾ, ಗೋಸ್ಟಾಲಕೋ ವಾಸ್ ಕುಟಿನ್ಹಾರವರುಗಳು ಹೊನ್ನಾವರಕ್ಕೆ ಬಂದಿದ್ದರು. ಆಗ ರಾಣಿಯು ಕುಟಿನ್ಹಾರಲ್ಲಿ ಸುಲೈಮಾನನ ಹಡಗು ಆಕೆಯ ಇಚ್ಛೆಗೆ ವಿರುದ್ಧವಾಗಿಯೇ ಇದೆ ಎಂದು ಅದನ್ನು ಹೊರಹಾಕಲು ಸಾಧ್ಯವಾಗುತ್ತಿಲ್ಲ ಎಂದೂ ತಿಳಿಸಿದಳು. ಆದುದರಿಂದ ಪೋರ್ಚುಗೀಸರು ಅದನ್ನು ಬಂದರಿನಿಂದ ಹೊರ ಕಳುಹಿಸಿದರೆ ತಾನು ಅತ್ಯಂತ ಸಂತೋಷಿತಳಾಗುತ್ತೇನೆ ಎಂದು ಹೇಳಿದಳು. ಕಮಾಂಡರ್ ಕುಟಿನ್ಹೋ ಹಡಗಿನ ಮೇಲೆ ದಾಳಿ ನಡೆಸಿದನು. ದೀರ್ಘ ಕಾಲ ನಡೆದ ದಾಳಿ ಪ್ರತಿದಾಳಿಯಲ್ಲಿ ಪೋರ್ಚುಗೀಸ್ ಸೈನ್ಯದಲ್ಲಿದ್ದ ೮೦ ಜನರಲ್ಲಿ ೧೫ ಜನ ಸತ್ತರು. ಸತ್ತವರಲ್ಲಿ ಆತನ ಮಗ ಅಲೆರೋವೋ ಡಿಯೋಗನು ಸೇರಿದ್ದನು. ಶತ್ರುಗಳ ಹಡಗು ಪರಾರಿಯಾಗುವಲ್ಲಿ ಯಶಸ್ವಿಯಾಯಿತು.

ಶತ್ರುಗಳಿಂದ ಗಾಯಗೊಂಡಿದ್ದವರಿಗೆ ಸಾಂತ್ವನದ ನೆಲೆಯಲ್ಲಿ ಸಹಾಯ ಸಹಕಾರವನ್ನು ನೀಡಲು ಮುಂದಾದ ರಾಣಿಯ ಕೊಡುಗೆಯನ್ನು ಕುಟಿನ್ಹೋ ತಿರಸ್ಕರಿಸಿದನು. ಆತನ ಪ್ರಕಾರ ರಾಣಿಯು ಶತ್ರುಗಳಿಗೆ ಸಹಾಯ ಮಾಡುತ್ತಿದ್ದಾಳೆಂಬ ಬಲವಾದ ಸಂದೇಹ ಆತನಲ್ಲಿ ನೆಲೆಸಿತ್ತು. ಆಕೆಯ ಸಹಾಯವನ್ನು ಕುಟಿನ್ಹೋ ತಿರಸ್ಕರಿಸಿದ್ದರಿಂದ ರಾಣಿಯು ತನ್ನ ಧೋರಣೆಯ ಬಗ್ಗೆ ಕುಟಿನ್ಹೋರವರ ಮನಸ್ಸನ್ನು ಬದಲಾಯಿಸಲು ಪ್ರಯತ್ನಿಸಿದಳು. ಆಕೆಯು ಹೊಸ ಒಪ್ಪಂದಕ್ಕೆ ಬಂದು ಅದಕ್ಕೆ ಬದ್ಧಳಾಗಿರುತ್ತೇನೆಂದೂ ಘೋಷಿಸಿಕೊಂಡಳು. ಆ ಪ್ರಕಾರ ಪೋರ್ಚುಗೀಸ್ ಸೈನಿಕರು ಬಂದರಿನಿಂದ ಟರ್ಕರನ್ನು ಹೊರದಬ್ಬಿರುವುದನ್ನು ಪರಾಂಬರಿಸಲು ಆಸ್ಪದ ನೀಡಿದಳು (ಶಾಸ್ತ್ರೀ ೨೦೦೦:೮೫).

ಲೂಯಿಸ್ ಡಿ' ಅಟ್ಯಾಡೆ ವೈಸ್‌ರಾಯ್ (೧೫೬೮-೭೧) ಆಗಿ ಕಾರ್ಯನಿರ್ವಹಿಸುವುದಕ್ಕಿಂತ ಆರು ವರ್ಷಗಳ ಮೊದಲಿನಿಂದಲೇ (೧೫೬೨) ಗೇರುಸೊಪ್ಪೆ ಮತ್ತು ಬಸ್ರೂರು ಪ್ರಾಂತ್ಯಗಳು ಪೋರ್ಚುಗಲ್ ದೊರೆಗೆ ಕಪ್ಪಕಾಣಿಕೆ ಸಲ್ಲಿಸುವುದನ್ನು ನಿಲ್ಲಿಸಿರುವುದರಿಂದ ಈ ಪ್ರಾಂತ್ಯಗಳ ರಾಜರುಗಳನ್ನು ಶಿಕ್ಷಿಸಬೇಕೆಂದು ನಿರ್ಧರಿಸಿದ್ದನು. ಕೊನೆಗೂ ೧೫೬೯ ರಲ್ಲಿ ಅಟ್ಯಾಡೆಯು ೧೧೩ ಹಡಗುಗಳೊಂದಿಗೆ ಸುಮಾರು ೩೦೦೦ ಸೈನಿಕರೊಂದಿಗೆ ಕೆಲವೇ ಕೆಲವು ದಿನಗಳ ಅಂತರದಲ್ಲಿ ಹೊನ್ನಾವರಕ್ಕೆ ಬಂದು ತಲುಪಿದನು. ಅನಂತರ ನದಿಯ ಮೂಲಕ ಗೇರುಸೊಪ್ಪೆಯ ರಾಣಿಯ ಕೋಟೆಯಿರುವ ಎತ್ತರದ ಭಾಗಕ್ಕೆ ಚಲಿಸಿ ಗುಡ್ಡದ ತುತ್ತತುದಿಯಲ್ಲಿ ಗೋಡೆಗಳಿಂದ ರಚಿತವಾಗಿರುವ ಕೋಟೆಯತ್ತ ಮುನ್ನುಗ್ಗಿದ್ದರು. ಪೋರ್ಚುಗೀಸ್ ದಾಳಿಯ ಅಪಾಯವನ್ನು ಅರಿತು ಗೇರುಸೊಪ್ಪೆಯ ಸೈನಿಕರು ಕೋಟೆಯಿಂದ ಪೋರ್ಚುಗೀಸರತ್ತ ಕಲ್ಲುಗಳನ್ನು ಎಸೆದರು. ಆದರೂ ಸೈನಿಕರು ಎದೆಗುಂದದೆ ಮುನ್ನುಗ್ಗಿದರು. ಕೋಟೆಯನ್ನು ಪ್ರವೇಶಿಸುವಲ್ಲಿ ಯಶಸ್ವಿಯಾದರು. ಕೋಟೆಯ ರಕ್ಷಣೆಯ ಹೊಣೆ ಹೊತ್ತ ಸೈನಿಕರು ತೀರಾ ದುರ್ಬಲವಾದ ಪ್ರತಿರೋಧವನ್ನು ತೋರಿದರು. ಪೋರ್ಚುಗೀಸ್ ಕ್ಯಾಪ್ಟನ್ ಲಾವರ್ನ್‌ರಿಗೆ ಯಾವುದೇ ತೀವ್ರ ಪ್ರತಿರೋಧಗಳನ್ನು ಒಡ್ಡದಿರುವುದರಿಂದ ಗೇರುಸೊಪ್ಪೆಯ ಸೈನಿಕರಿಗೆ ತಮ್ಮ ಆಯುಧಗಳೊಂದಿಗೆ ಪರಾರಿಯಾಗಲು ಅವಕಾಶ ಕಲ್ಪಿಸಿಕೊಟ್ಟನು (ಶಾಸ್ತ್ರಿ ೨೦೦೦:೮೬). ವೈಸ್‌ರಾಯ್ ಅಟ್ಯಾಡೆಯು ಜೋರ್ಜ್ ಡಿ'ಮೌರಾನನ್ನು ಈ ನೂತನ ಕೋಟೆಯ ಕ್ಯಾಪ್ಟನ್ ಆಗಿ ನೇಮಿಸಿ ೨೦೦ ಸೈನಿಕರನ್ನು ರಕ್ಷಣೆಗಾಗಿ ನಿಯೋಜಿಸಿದನು. ಸಾಕಷ್ಟು ಪ್ರಮಾಣದಲ್ಲಿ

ಮದ್ದುಗುಂಡು ಮತ್ತು ಆಹಾರ ಸಾಮಾಗ್ರಿಗಳನ್ನೂ, ಹಣಕಾಸಿನ ಖಜಾನೆಯನ್ನು ಒದಗಿಸಿದನು. ಈ ಕೋಟೆಗೆ ಕ್ಯಾಥರಿನ್ ಕೋಟೆ ಎಂದು ಹೊಸ ನಾಮಕರಣ ಮಾಡಿದನು.

ಅಂತೋನಿ ಪಿಂಟೋ ಪೆರಿಯಾರರವರ ಪ್ರಕಾರ ಗೇರುಸೊಪ್ಪೆಯ ಸೈನಿಕರಿಂದ ತೀವ್ರ ಪ್ರತಿರೋಧ ಸಂಘರ್ಷಗಳು ನಡೆಯಿತು. ಕಟ್ಟಕಡೆಗೆ ಪೋರ್ಚುಗೀಸರು, ಉಪಾಯದಿಂದ ಕೋಟೆಯ ರಕ್ಷಣೆಯ ಜವಾಬ್ದಾರಿ ಹೊಂದಿದ್ದ ಕಾಂತಪ್ಪ ನಾಯಕನಿಗೆ ಶಸ್ತ್ರಾಸ್ತ್ರಗಳೊಂದಿಗೆ ಹೊರಹೋಗಲು ಅವಕಾಶ ಕಲ್ಪಿಸಿದರು ಎಂದು ದಾಖಲಿಸಿದ್ದಾನೆ. ಕೋಟೆಯಲ್ಲಿ ಅಳಿದುಳಿದ ಶಸ್ತ್ರಾಸ್ತ್ರ, ಮದ್ದುಗುಂಡುಗಳನ್ನು ಪೋರ್ಚುಗೀಸರು ತಮ್ಮ ಸ್ವಾಧೀನಕ್ಕೆ ಒಳಪಡಿಸಿಕೊಂಡರು. ಸಂತ ಕ್ಯಾಥರಿನ್ ದಿನ ಅಂದರೆ ೧೫೬೯ ರ ನವೆಂಬರ ೧೫ ರಂದು ಸಾಮೂಹಿಕ ಪ್ರಾರ್ಥನೆಯನ್ನು ನಡೆಸುವ ಮೂಲಕ ಹೊನ್ನಾವರದ ಕೋಟೆಗೆ ಅಸ್ತಿಭಾರ ಹಾಕಲಾಯಿತು (ದನ್‌ವೀರ್ ೧೯೮೪:೧೫೭).

ಹೊನ್ನಾವರದ ಸಾಮಂತರಾಗಿದ್ದ ಗೇರುಸೊಪ್ಪೆಯ ರಾಣಿಯು ತಮಗೆ ಬಾಕಿಯಾಗಿರುವ ಕಪ್ಪಕಾಣಿಕೆಯನ್ನು ಪಾವತಿಸಬೇಕೆಂದು ಪೋರ್ಚುಗೀಸರು ಒತ್ತಾಯಿಸಿದರು. ಅಷ್ಟು ಮಾತ್ರವಲ್ಲದೆ ಒಂದು ಕಂಡಿಗೆ ೨೨.೫ ಪರಡೋಸ್ ದರದಲ್ಲಿ ಒಂದು ಹಡಗಿಗೆ ಬೇಕಾಗುವಷ್ಟು ಕರಿಮೆಣಸನ್ನು ಒದಗಿಸಬೇಕೆಂದೂ ಒತ್ತಾಯಿಸಲಾಯಿತು. ಈಗಾಗಲೇ ನಡೆದ ಯುದ್ಧದ ಖರ್ಚು ೨೦,೦೦೦ ಪಗೋಡಾ ನಾಣ್ಯಗಳನ್ನು ರಾಣಿಯು ಪಾವತಿಸಬೇಕೆಂದು ಪೋರ್ಚುಗೀಸ್ ಗವರ್ನರ್ ಒತ್ತಾಯಿಸಿದಾಗ ರಾಣಿ ದಿಕ್ಕು ತೋಚದಾದಳು. ರಾಣಿ ಉತ್ತರಿಸಲು ಹಿಂದೆ ಮುಂದು ನೋಡುತ್ತಿರುವುದನ್ನು ಗಮನಿಸಿದ ಗವರ್ನರ್‌ರವರೂ ಸ್ಪಷ್ಟ ಉತ್ತರಕ್ಕಾಗಿ ಕಾಯಲು ಸಮಯಾವಕಾಶವಿಲ್ಲದಿರುವುದಾಗಿ ಹೇಳಿದನು. ಆ ಪ್ರಕಾರ ತುರ್ತಾಗಿ ಗವರ್ನರ್ ಅಟ್ಯಾಡೆಯು ಬಸ್ರೂರನ್ನು ವಶಪಡಿಸಲು ತನ್ನ ಸೈನ್ಯವನ್ನು ಅಲ್ಲಿಗೆ ಕೊಂಡೊಯ್ದನು. ಕೊನೆಗೂ ಆ ಷರತ್ತುಗಳನ್ನು ರಾಣಿಯು ಒಪ್ಪಲು ಸಾಧ್ಯವಿಲ್ಲವೆಂದು ನಿರಾಕರಿಸಿದಳು (ಶಾಸ್ತ್ರಿ ೨೦೦೦:೮೭).

೧೫೭೦ ರ ಪ್ರಾರಂಭದಲ್ಲಿ ಗೇರುಸೊಪ್ಪೆಯ ರಾಣಿಯು ಹೊನ್ನಾವರದ ಮೇಲೆ ದಾಳಿ ನಡೆಸುವ ಸಾಧ್ಯತೆ ಇದೆ ಎಂಬ ಮಾಹಿತಿಯನ್ನು ಸಂಗ್ರಹಿಸಿದ ವೈಸ್‌ರಾಯ್ ಅಟ್ಯಾಡೆಯು ಒಂದು ದೊಡ್ಡ ಸೈನಿಕ ನೌಕೆಯನ್ನು ಅಲ್ಲಿಗೆ ಕಳುಹಿಸಿಕೊಟ್ಟನು. ಕೋಟೆಯನ್ನು ಕಾವಲು ಕಾಯುತ್ತಿದ್ದ ಸೈನಿಕರಿಗೆ 'ಮತ್ತು ಭರಿಸುವ ಕಾಯಿ'ಯೊಂದನ್ನು ತಿನ್ನಿಸುವ ಮೂಲಕ ಬಹುಸುಲಭವಾಗಿ ದಾಳಿ ನಡೆಸುವ ವ್ಯವಸ್ಥಿತ ಪಿತೂರಿಯೊಂದನ್ನು ಹೆಣೆದರು. ಆದರೆ ಈ ಪಿತೂರಿ ವಿಫಲವಾಗಿ ಪೋರ್ಚುಗೀಸರು ಪಿತೂರಿಗಾರರನ್ನು ಗಲ್ಲಿಗೇರಿಸಿದರು. ಹೊನ್ನಾವರದ ಮೇಲೆ ದಾಳಿ ಮಾಡುವ ಯೋಜನೆಗೆ ಬಿಜಾಪುರದ ಆದಿಲ್ ಷಾಹಿಯು ಕೂಡಾ ಪ್ರಚೋದನೆ ನೀಡುತ್ತಿದ್ದನು. ಹೊನ್ನಾವರದಲ್ಲಿ ಗೇರುಸೊಪ್ಪೆಯ ರಾಣಿಯ ಸೈನ್ಯದೊಂದಿಗೆ ಆದಿಲ್‌ಷಾಹಿ ಮತ್ತು ಜಾಮೋರಿನ್‌ನ ಸೈನ್ಯವನ್ನು ಪೋರ್ಚುಗೀಸರು ಎದುರಿಸುವ ಮೂಲಕ ಹೊನ್ನಾವರವನ್ನು ಬಳಸಿಕೊಂಡರು.

ಬಿಜಾಪುರದ ಆದಿಲ್‌ಷಾಹಿ ದೊರೆಗಳು ತಮ್ಮ ಪ್ರಯತ್ನವನ್ನು ಮುಂದುವರಿಸಿ ಜುಲೈ ೧೫೭೧ ರಲ್ಲಿ ಮತ್ತೊಮ್ಮೆ ೨೦೦೦ ಸೈನಿಕರ ತುಕಡಿಯನ್ನು ಹೊನ್ನಾವರದ ಮೇಲೆ ದಾಳಿಗಾಗಿ ಕಳುಹಿಸಿಕೊಟ್ಟನು.

ರಾಣಿಯು ೩೦೦೦ ಜನರ ಸೈನ್ಯದೊಂದಿಗೆ ಒಗ್ಗಟ್ಟಾಗಿ ಪೋರ್ಚುಗೀಸರ ಮೇಲೆ ದಾಳಿ ನಡೆಸಿದಳು. ಮತ್ತೊಮ್ಮೆ ಹೊನ್ನಾವರದ ಕೋಟೆಗೆ ಮುತ್ತಿಗೆ ಹಾಕಿರುವ ವಿಷಯ ತಿಳಿದುಕೊಂಡ ವೈಸ್‌ರಾಯ್ ೧೦ ಹಡಗುಗಳುಳ್ಳ ಒಂದು ಸೈನಿಕ ತಂಡವನ್ನು ಕಳುಹಿಸಿಕೊಟ್ಟನು. ಪೋರ್ಚುಗೀಸರ ಸೈನ್ಯವು ರಾಣಿಯ ಜಂಟಿ ಸೈನ್ಯದ ಮೇಲೆ ಎರಗಿದಾಗ ಅವರು ಸೋತು ಚೆಲ್ಲಾಪಿಲ್ಲಿಯಾಗಿ ಪಲಾಯನಗೈದರು. ಈ ಯುದ್ಧದಲ್ಲಿ ಗೇರುಸೊಪ್ಪೆಯ ರಾಣಿಯ ಬಹಳಷ್ಟು ದೊಡ್ಡ ಸಂಖ್ಯೆಯ ಸೈನಿಕರು ಹತರಾದರು. ಸಾಕಷ್ಟು ಸಂಖ್ಯೆಯ ಆಯುಧಗಳನ್ನು ಕಳೆದುಕೊಂಡರು. ಈ ಸೋಲಿನಿಂದ ತತ್ತರಿಸಿದ ರಾಣಿ ಮುಂದೆ ಇಂತಹ ಪ್ರಯತ್ನಕ್ಕೆ ಕೈ ಹಾಕಲಿಲ್ಲ (ಮೋರಾಸ್ ೧೯೨೭:೯೪).

ಆದುದರಿಂದ ಭಟ್ಕಳ ಬಂದರು ಒಂದೊಮ್ಮೆ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಪೋರ್ಚುಗೀಸರು ಇಲ್ಲಿ ಕೋಟೆ ಕಟ್ಟಲು ಪ್ರಯತ್ನಿಸಿದರೂ ಅದು ಸಾಧ್ಯವಾಗಲಿಲ್ಲ. ಆದರೆ ಅವರು ಇಲ್ಲಿಯ ಎಲ್ಲಾ ವ್ಯಾಪಾರ ವ್ಯವಹಾರಗಳನ್ನು ಅನೌಪಚಾರಿಕವಾಗಿ ನಿರ್ವಹಿಸುತ್ತಿದ್ದರು. ರಕ್ಕಸ ತಂಗಡಿ (ತಾಳಿಕೋಟೆ) ಯುದ್ಧದ ನಂತರ ಭಟ್ಕಳದ ಪ್ರಾಮುಖ್ಯತೆ ಕಡಿಮೆಯಾಯಿತು. ಇಲ್ಲಿಯ ಆದಾಯದ ಮೂಲಕ್ಕೂ ಕತ್ತರಿ ಬಿತ್ತು. ಎಂ ಎನ್ ಪಿಯರ್‌ಸನ್‌ರವರ ಪ್ರಕಾರ ಭಟ್ಕಳ, ಹೊನ್ನಾವರ ಮೊದಲಾದವುಗಳು ಬಹುಮುಖ್ಯ ಬಂದರು ಆಗಿದ್ದು ರಾಜಕೀಯ, ಸೈನಿಕ, ಆರ್ಥಿಕ ಕಾರಣಕ್ಕಾಗಿ ಕುದುರೆಗಳು ಇಲ್ಲಿಯೇ ಆಮದಾಗುತ್ತಿತ್ತು. ಇವುಗಳಿಂದಲೇ ಈ ಬಂದರಿನ ಆದಾಯ ಬರುತ್ತಿತ್ತು (ಪಿಯರ್‌ಸನ್ ೨೦೦೪:೭೦).

ಮುಂದೆ ಕುದುರೆಯನ್ನು ಹೊರತುಪಡಿಸಿದ ಕರಿಮೆಣಸು, ಅಕ್ಕಿ ಮತ್ತು ಸಾಂಬಾರು ಪದಾರ್ಥಗಳು ಇಲ್ಲಿಂದ ರಫ್ತಾಗುತ್ತಿದ್ದವು. ೧೬೩೭ರಲ್ಲಿ ಇಂಗ್ಲೀಷ್ ಪ್ರವಾಸಿಗ ಹಾಗೂ ವ್ಯಾಪಾರಿ ಪೀಟರ್ ಮುಂಡಿಯವರು ಭಟ್ಕಳದಲ್ಲಿ ಪೋರ್ಚುಗೀಸರಿಗೆ ಸಂಬಂಧಿಸಿದ ಸಂಪೂರ್ಣವಾಗಿ ದಾಲ್ಚಿನಿಯನ್ನು ಒಳಗೊಂಡ ಹಡಗು ಕೆನರಾ ಪ್ರಾಂತ್ಯದ ಗಸ್ತುಪಡೆಯೊಂದಿಗೆ ಲಂಗರು ಹಾಕಿರುವುದನ್ನು ಗಮನಿಸಿದ್ದಾನೆ (ಡಿಸ್ಸಿ ೨೦೧೦:೨೫). ಆದುದರಿಂದ ಕರಾವಳಿ ಕರ್ನಾಟಕದಲ್ಲಿ ಭಟ್ಕಳ ಮತ್ತು ಹೊನ್ನಾವರ ಪ್ರಮುಖ ಬಂದರುಗಳಾಗಿ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳು ಸದಾ ಸ್ಫೋಟಿಸುತ್ತಿದ್ದ ಬಂದರು ನಗರಗಳಾಗಿವೆ.

**ಮಂಗಳೂರು ಬಂದರು ಕೇಂದ್ರೀಕೃತ ಸಂಘರ್ಷ ಮತ್ತು ಫಲಿತಾಂಶಗಳ ವಿಶ್ಲೇಷಣೆ**

ಪೋರ್ಚುಗೀಸರು ಕರಾವಳಿ ಕರ್ನಾಟಕದ ಬಂದರುಗಳಲ್ಲಿ ಕೊನೆಯ ತುತ್ತತುದಿಯ ಬಂದರು ಆದ ಮಂಗಳೂರಿನ ಮೇಲೆ ವಿಶೇಷ ಗಮನವನ್ನು ನೀಡಿದ್ದರು. ಪೋರ್ಚುಗೀಸರಿಗೆ ಸದಾ ಪ್ರತಿಸ್ಪರ್ಧಿಗಳಾಗಿದ್ದ ಕಲ್ಲಿಕೋಟೆಯ ಜಾಮೋರಿನ್‌ಗಳನ್ನು ಸದೆಬಡಿಯಲು ಮಂಗಳೂರು ಆಯ ಕಟ್ಟಿನ ಪ್ರದೇಶ ಆಗಿತ್ತು. ಮತ್ತೊಂದೆಡೆಯಲ್ಲಿ ಸದಾ ಆಹಾರ ಧಾನ್ಯಗಳ ಕೊರತೆಯನ್ನು ಅನುಭವಿಸುತ್ತಿದ್ದ ಮಲಬಾರ್ ಪ್ರಾಂತ್ಯ ಕೂಡ ಆಹಾರ ಧಾನ್ಯಗಳಿಗಾಗಿ ಮಂಗಳೂರನ್ನೇ ಆಶ್ರಯಿಸುತ್ತಿತ್ತು. ಆದುದರಿಂದ ಪೋರ್ಚುಗೀಸರು ಒಂದೇ ಕಲ್ಲಿನಿಂದ ಎರಡು ಉದ್ದೇಶಗಳನ್ನು ಶತ್ರುವಿನ ದೃಷ್ಟಿಯಿಂದ ಈಡೇರಿಸಿಕೊಳ್ಳಲು ನಿರ್ಧರಿಸಿ ಕೊಂಡಿದ್ದರು. ಪೋರ್ಚುಗೀಸರ ನೇರ ವ್ಯಾಪಾರದ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಮಂಗಳೂರು ಬಂದರು ತೀರಾ ಪಕ್ವವಾಗಿದ್ದ ಬಂದರಾಗಿತ್ತು. ಸಮಕಾಲೀನ ಚರಿತ್ರೆಕಾರರಾದ ಬೊಕಾರೋರವರು ಮಂಗಳೂರು ಮತ್ತು ಬಸ್ರೂರು ಬಗ್ಗೆ ಈ ರೀತಿ ಚಿತ್ರಣವನ್ನು ನೀಡಿದ್ದಾರೆ.

ಬಸ್ರೂರು ಮತ್ತು ಮಂಗಳೂರು ಎರಡೂ ಸೇರಿ ಒಂದು ಬೃಹತ್ ಆಹಾರ ಧಾನ್ಯಗಳ ಉಗ್ರಾಣವಾಗಿತ್ತು. ಇಲ್ಲಿಂದ ಗೋವಾ, ಮಲಬಾರ್, ಮೊಝಾಂಬಿಕ್, ಮುಂಬಸ್ಸಾ, ಮಸ್ಕತ್‌ಗಳಿಗೆ ಆಹಾರ ಧಾನ್ಯಗಳ ಸರಬರಾಜು ಆಗುತ್ತಿತ್ತು. ಅತೀ ಹೆಚ್ಚಿನ ಪ್ರಮಾಣದ ಅಕ್ಕಿ ಕೆನರಾದಿಂದ ದಕ್ಷಿಣ ಗೋವಾಕ್ಕೆ ಸರಬರಾಜು ಆಗುತ್ತಿದ್ದು ಯುದ್ಧದ ಸಮಯದಲ್ಲೂ ಕೂಡಾ ಅಕ್ಕಿ ಸರಬರಾಜು ಮಾಡುತ್ತಿದ್ದ ಹಡಗುಗಳಿಗಾಗಲೀ, ವ್ಯಾಪಾರಿಗಳಿಗಾಗಲೀ ಪೋರ್ಚುಗೀಸರು ಯಾವುದೇ ತೊಂದರೆ ಕೊಡದೆ ಸುಗಮವಾಗಿ ವಹಿವಾಟು ನಡೆಸಲು ಅವಕಾಶ ಕಲ್ಪಿಸಿಕೊಟ್ಟಿದ್ದರು(ಪಿಯರ್‌ಸನ್ ೨೦೦೪:೧೦೭).

ಮಂಗಳೂರಿನಲ್ಲಿ ಪೋರ್ಚುಗೀಸರು ಮೊದಲು ದಾಳಿ ನಡೆಸಿದ್ದು ೧೫೧೩ ರಲ್ಲಿ. ೧೫೧೩ ರಲ್ಲಿ ಅಲ್ಬುಕರ್ಕ್ ಗೊಮೇಜ್ ಡಿ' ಲೇಮೋಸ್‌ರವರ ದಂಡನಾಯಕತ್ವದಲ್ಲಿ ಮಂಗಳೂರಿಗೆ ಒಂದು ನೌಕಾಸೈನ್ಯವನ್ನು ಕಳಿಸಿ ಅಲ್ಲಿಯ ಬಂದರಿನಲ್ಲಿ ನಿಂತಿರುವ ಹಡಗುಗಳನ್ನು ವಶಪಡಿಸಿಕೊಳ್ಳಲು ಆದೇಶಿಸಿದನು. ಮಂಗಳೂರಿಗೆ ಬಂದ ದಂಡನಾಯಕನು ಬಂದರಿನಲ್ಲಿ ನಿಂತಿರುವ ಜಾಮೋರಿನ್ ಹಡಗುಗಳನ್ನು ಹಸ್ತಾಂತರಿಸಬೇಕೆಂದು ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟ ಮಂಗಳೂರಿನ ಗವರ್ನರ್‌ರವರನ್ನು ಕೇಳಿಕೊಂಡನು. ಒಂದು ವೇಳೆ ಮಂಗಳೂರಿನ ಗವರ್ನರ್‌ರವರು ಹಡಗುಗಳನ್ನು ಹಸ್ತಾಂತರಿಸಿ ಒಪ್ಪಂದಕ್ಕೆ ಬರಲು ಸಿದ್ಧರಿಲ್ಲವೆಂದಾದರೆ ಸೈನಿಕ ದಾಳಿ ನಡೆಸಿ ವಶಪಡಿಸುವ ಬೆದರಿಕೆ ಹೂಡಿದನು. ಬಂದರಿನ ಎಲ್ಲಾ ವ್ಯಾಪಾರ ವ್ಯವಹಾರಗಳನ್ನೂ ತಡೆಯುವುದಾಗಿ ಪೋರ್ಚುಗೀಸ್ ದಂಡನಾಯಕ ಗೋಮೇಜ್ ಡಿ' ಲೆಮೋಸ್ ಘೋಷಿಸಿದಾಗ ಯಾವುದೇ ಅಡೆತಡೆಗಳಿಲ್ಲದೆ ಆ ಹಡಗುಗಳನ್ನು ವಶಪಡಿಸಿಕೊಂಡು ಅದರಲ್ಲಿದ್ದ ಸರಕು ಸರಂಜಾಮುಗಳನ್ನು ಪೋರ್ಚುಗೀಸರ ಪರವಾಗಿ ಮುಟ್ಟುಗೋಲು ಹಾಕಿದನು. ಮಂಗಳೂರು ಬಂದರನ್ನು ಹಾದು ಕಲ್ಲಿಕೋಟೆ, ಮಲಕ್ಕಾ ಮತ್ತಿತರೆ ಗಲ್ಫ್ ದೇಶದ ಹಡಗುಗಳು ನಿರಾತಂಕವಾಗಿ ಸಂಚಾರ ಮಾಡುತ್ತಿದ್ದವು. ಆದುದರಿಂದ ಮಂಗಳೂರಲ್ಲಿ ಶಾಶ್ವತವಾಗಿ ಪೋರ್ಚುಗೀಸ್ ಸೈನಿಕರ ದಂಡು ನೆಲೆ ನಿಲ್ಲಿಸಲು ಗವರ್ನರ್ ನಿರ್ಧರಿಸಿದನು. ಇದರಿಂದಾಗಿ ಪೋರ್ಚುಗೀಸ್ ಬೊಕ್ಕಸಕ್ಕೆ ಸಾಕಷ್ಟು ವರಮಾನ ಬರುವ ಲೆಕ್ಕಾಚಾರ ಗವರ್ನರ್‌ರವರದಾಗಿತ್ತು.

ಈಗಾಗಲೇ ಪೋರ್ಚುಗೀಸರು ೧೫೨೫ ರಲ್ಲಿ ಮಂಗಳೂರಿನ ಬಗ್ಗೆ ತೆಗೆದುಕೊಂಡ ನಿರ್ಧಾರದನುಸಾರ ನಾಲ್ಕು ಯುದ್ಧ ಹಡಗುಗಳು ಮಂಗಳೂರಿನ ಸಮುದ್ರ ಮತ್ತು ನದಿ ಸೇರುವ ಅಳಿವೆ ಬಾಗಿಲಿಗೆ ಅಡ್ಡವಾಗಿ ನಿಲ್ಲಿಸಿ ಅಲ್ಲಿದ್ದ ನೂರಾರು ಮುಸ್ಲಿಂ ವ್ಯಾಪಾರಿಗಳ ಹಡಗುಗಳ ಸಂಚಾರವನ್ನು ಬಂದ್ ಮಾಡಲಾಯಿತು. ಈ ರೀತಿ ಪೋರ್ಚುಗೀಸರು ಸೈನಿಕ ಕಾರ್ಯಾಚರಣೆ ನಡೆಸುತ್ತಿರುವ ಸಂದರ್ಭದಲ್ಲಿ ಕಲ್ಲಿಕೋಟೆಯಿಂದ ಮಂಗಳೂರಿಗೆ ಬರುತ್ತಿರುವಂತಹ ಹಡಗುಗಳು ಪೋರ್ಚುಗೀಸರ ಸೈನ್ಯ ಕಾವಲು ಕಾಯುವುದನ್ನು ಕಂಡುಕೊಂಡರು. ಆ ಹಡಗುಗಳಿಗೆ ಸರಕುಗಳನ್ನು ತುಂಬಿಸುವ ಬದಲು ಆ ಹಡಗಿನ ಸಿಬ್ಬಂದಿಗಳು ನದಿಯಲ್ಲಿರುವ ಹಡಗುಗಳಿಗೆ ಅಪಾಯ ಎದುರಾಗಿರುವುದನ್ನು ಗಮನಿಸಿ ಪೋರ್ಚುಗೀಸರ ಸೈನಿಕ ಹಡಗಿನ ಮೇಲೆ ಹಿಂಭಾಗದಿಂದ ಅಂದರೆ ಸಮುದ್ರದ ಭಾಗದಿಂದ ದಾಳಿಗೆ ಮುಂದಾದರು. ಅನಿರೀಕ್ಷಿತವಾದ ಈ ದಾಳಿಗೆ ಪ್ರತಿಯಾಗಿ ಪೋರ್ಚುಗೀಸರ ಹಡಗುಗಳನ್ನು ನದಿಯಿಂದ ಸಮುದ್ರಕ್ಕೆ ಚಲಿಸಿ ಕಲ್ಲಿಕೋಟೆಯ ಹಡಗಿನ ಮೇಲೆ ದಾಳಿಗಾಗಿ ಮುನ್ನುಗ್ಗಿದರು. ಆ ಸಮಯದಲ್ಲಿ ನದಿಯಲ್ಲಿದ್ದ ಮುಸ್ಲಿಂ ವ್ಯಾಪಾರಿ ಹಡಗುಗಳು ನದಿಯಿಂದ ಹೊರಬಂದು ಸಮುದ್ರದಲ್ಲಿ ಒಟ್ಟು ಸೇರಿ ಪೋರ್ಚುಗೀಸರ ಹಡಗಿನ ಮೇಲೆ

ದಾಳಿ ನಡೆಸಿದರು. ದಾಳಿಗಾಗಿಯೇ ಬಂದಿದ್ದ ಪೋರ್ಚುಗೀಸರಿಗೆ ಈ ಅನಿರೀಕ್ಷಿತ ದಾಳಿಯಿಂದ ವಿಮುಖರಾಗಬೇಕಾಯಿತು. ಅವರಿಗೆ ಹೆಚ್ಚಿನ ಯಶಸ್ಸು ದೊರೆಯಲಿಲ್ಲ. ಆದರೆ ನದಿಯಿಂದ ಹೊರಬಂದ ನೂರಾರು ಹಡಗುಗಳಲ್ಲಿ ಕೆಲವು ಹಡಗುಗಳನ್ನು ಬೆನ್ನಟ್ಟಿದ ಪೋರ್ಚುಗೀಸರು ಅವುಗಳ ಮೇಲೆ ದಾಳಿ ನಡೆಸಿ ನಾಶ ಮಾಡುವುದರಲ್ಲಿ ಯಶಸ್ವಿಯಾದರು. ಪ್ರಾರಂಭದಲ್ಲಿಯೇ ಎದುರಾದ ದಾಳಿಯು ಪೋರ್ಚುಗೀಸರ ಪಾಲಿಗೆ ಮಂಗಳೂರಿನ ವ್ಯಾಪಾರಿ ಸಮುದಾಯ ಕಹಿ ಘಟನೆಯನ್ನು ಉಣ್ಣಿಸಿದ ಸಂಘರ್ಷವಾಗಿದೆ. ಇದರಲ್ಲಿ ಸ್ಥಳೀಯ ಸಾಮಂತರಾಜರುಗಳ ಪಾತ್ರ ನಗಣ್ಯವಾಗಿದೆ.

೧೫೪೯ ರಲ್ಲಿ ವೈಸ್‌ರಾಯ್ ಆಗಿದ್ದ ನೊರೋನ್ಹಾರವರ ಮಗ ಅಲೆವೊರೋ ಡಿ' ನೊರೋನ್ಹಾ ಮಂಗಳೂರು ಅಳಿವೆ ಬಾಗಿಲಲ್ಲಿ ಇದ್ದನು. ಕಲ್ಲಿಕೋಟೆಗೆ ಸಂಬಂಧಿಸಿದ ೨೫ ಹಡಗುಗಳನ್ನು ಪೋರ್ಚುಗೀಸ್ ಸೈನಿಕ ಹಡಗುಗಳು ಗಮನಿಸಿತು. ಅವುಗಳಲ್ಲಿ ಎರಡು ಹಡಗುಗಳು ಅಳಿವೆ ಬಾಗಿಲಿಗೆ ಒಳಪ್ರವೇಶಿಸಿದವು. ನೊರೋನ್ಹಾ ಅವುಗಳನ್ನು ಬೆನ್ನಟ್ಟಿ ದಾಳಿ ನಡೆಸಿದನು. ಆಗ ಸ್ಥಳೀಯರು ಪೋರ್ಚುಗೀಸರ ವಿರುದ್ಧವಾಗಿ ಅವರ ಶತ್ರುಗಳಿಗೆ ಸಹಕರಿಸಿದರು. ಆದರೆ ಪೋರ್ಚುಗೀಸರು ಅವರನ್ನು ಸೋಲಿಸಿ ಅವರ ಹಡಗುಗಳಿಗೆ ಬೆಂಕಿಕೊಟ್ಟು ನಾಶ ಮಾಡಿದರು.

ಮಲಬಾರ್ ಪೋರ್ಚುಗೀಸ್ ದಂಡನಾಯಕನಾಗಿದ್ದ ಲೂಯಿಸ್ ಮೆಲ್ಲೋ ಡಿ' ಸಿಲ್ವ ಇವರು ಮಂಗಳೂರಿನ ಬಂದರು ಪ್ರದೇಶದಲ್ಲಿ ಕಣ್ಣನೂರಿನ ಹಡಗುಗಳು ಲಂಗರು ಹಾಕಿರುವುದನ್ನು ಗಮನಿಸಿ ಅಲ್ಲಿಗೆ ಬಂದು ನದಿ ಮುಖಜ ಭೂಮಿಯಲ್ಲಿ ತಾನು ಶಸ್ತ್ರ ಸಜ್ಜಿತನಾಗಿ ಇದ್ದುಕೊಂಡು ತನ್ನ ಎರಡು ಕ್ಯಾಪ್ಟನ್‌ಗಳನ್ನು ನದಿಯ ಒಳ ಭಾಗಕ್ಕೆ ಕಳುಹಿಸಿ ಅಲ್ಲಿದ್ದ ಹಡಗುಗಳು ಸಮುದ್ರ ಸೇರಬೇಕೆಂದು ಆದೇಶ ನೀಡಿದನು. ಈ ರೀತಿ ಮಾತುಕತೆ ನಡೆಯುತ್ತಿರುವ ಸಂದರ್ಭದಲ್ಲಿ ಸ್ಥಳೀಯ ಜನತೆ ಪೋರ್ಚುಗೀಸರಿಗೆ ವಿರುದ್ಧವಾಗಿ ಕಣ್ಣನೂರಿನ ವ್ಯಾಪಾರಿ ಹಡಗುಗಳಿಗೆ ಸಹಕರಿಸುತ್ತಿರುವುದನ್ನು ಗಮನಿಸಿದನು. ಇದಕ್ಕಾಗಿ ಸ್ಥಳೀಯ ಜನತೆಗೆ ತಕ್ಕ ಪಾಠ ಕಲಿಸಬೇಕೆಂದು ಉದ್ದೇಶಿಸಿ ತನ್ನ ಸೈನಿಕರನ್ನು ನದಿಯ ಮೇಲ್ಭಾಗದಿಂದ ನೆಲಕ್ಕೆ ಪ್ರವೇಶಗೈಯ್ಯಬೇಕೆಂದು ಆದೇಶಿಸಿದನು. ನಗರವನ್ನು ಪ್ರವೇಶಗೈದ ಪೋರ್ಚುಗೀಸ್ ಸೈನಿಕರು ಎದುರಿಗೆ ಸಿಕ್ಕಿದ ಮಕ್ಕಳು, ಮಹಿಳೆಯರು ಎನ್ನದೆ ಎಲ್ಲರನ್ನೂ ಕೊಚ್ಚಿ ಕೊಂದರು. ಮನೆಗಳಿಗೆ ಬೆಂಕಿ ಕೊಟ್ಟರು. ಬೃಹತ್ ಪ್ರಮಾಣದ ಸ್ಥಳೀಯ ಜನರ ಮಾರಣ ಹೋಮ ಮಾಡಿದರು (ಶಾಸ್ತ್ರಿ ೨೦೦೦:೮೧).

ಕೆನರಾ ಪ್ರಾಂತ್ಯದಲ್ಲಿ ಬಂದರುಗಳು ಪ್ರವರ್ಧಮಾನಕ್ಕೆ ಬಂದು ಸಾಕಷ್ಟು ವ್ಯಾಪಾರ ವ್ಯವಹಾರದಲ್ಲಿ ನಿರತರಾಗಿರುವ ಸಂದರ್ಭಕ್ಕೆ ಸಂಬಂಧಿಸಿ ಎಂ ಎನ್ ಪಿಯರ್‌ಸನ್‌ರವರು ಪೋರ್ಚುಗೀಸರ ಎರಡು ಉದ್ದೇಶಗಳನ್ನು ವಿಶ್ಲೇಷಿಸಿದ್ದಾರೆ. ಒಂದನೆಯದಾಗಿ ಮುಸ್ಲಿಮರನ್ನು ವ್ಯಾಪಾರದಿಂದ ಹಿಮ್ಮುಖಗೊಳಿಸುವ ಉದ್ದೇಶದಿಂದ ಪೋರ್ಚುಗೀಸರು ನಡೆಸಿದ ದೌರ್ಜನ್ಯ, ದಾಳಿಗಳಿಂದ ಅವರು ಬಂದರು ನಗರವನ್ನು ತ್ಯಜಿಸಿ ಭಾರತದ ಒಳನಾಡಿನ ಪ್ರಾಂತ್ಯಗಳಿಗೆ, ಗುಜರಾತ್ ತೀರ, ಕೆಂಪು ಸಮುದ್ರದ ದ್ವೀಪಗಳಿಗೆ ವಲಸೆ ಹೋದರೆಂದು ತಿಳಿಸುತ್ತಾರೆ. ಆ ಪ್ರಕಾರ ಕೆನರಾ ಪ್ರಾಂತ್ಯದಿಂದ ಇತರ ಕಡೆಗಳಿಗೆ ನೇರ ವ್ಯಾಪಾರವು ೧೫೩೦ ರಲ್ಲಿ ಕೊನೆಗೊಂಡಿತ್ತು. ಆದರೆ ಕೆಂಪು ಸಮುದ್ರದ ತೀರ ಪ್ರದೇಶಗಳಿಗೆ ಅಕ್ಕಿಯ ಸರಬರಾಜು ಕೆನರಾ ಪ್ರಾಂತ್ಯದಿಂದಲೇ ನಡೆಯುತ್ತಿತ್ತು. ಈ ಸಂಬಂಧವಾಗಿ ಕೆನರಾ ಪ್ರಾಂತ್ಯದಲ್ಲಿ ಕೂಡಾ ಮುಸ್ಲಿಂ

ವ್ಯಾಪಾರಿಗಳ ವ್ಯಾಪಾರ ವ್ಯವಹಾರಕ್ಕೆ ಗಂಭೀರ ಪ್ರಮಾಣದಲ್ಲಿ ಅಡೆತಡೆಯುಂಟಾಗಿ ಕೆಲವೇ ಕೆಲವು ಕುಟುಂಬಗಳು ಮಾತ್ರ ವ್ಯಾಪಾರದಲ್ಲಿ ನಿರತರಾದರು(ಪಿಯರ್‌ಸನ್ ೨೦೦೪:೨೮).

ಕೆನರಾ ಮತ್ತು ಮಲಬಾರ್, ಭಾರತದ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸ್ ಸಾಮ್ರಾಜ್ಯಕ್ಕೆ ಅತೀ ಹೆಚ್ಚು ಆದಾಯ ತರುವ ಕರಿಮೆಣಸು ಬೆಳೆಯುವ ಪ್ರಾಂತ್ಯವಾಗಿತ್ತು. ಮಲಬಾರಿಗೆ ಸಂಬಂಧಿಸಿದಂತೆ ಪೋರ್ಚುಗೀಸರು ಈಗಾಗಲೇ ಕೊಚ್ಚಿನ್‌ನಲ್ಲಿ ಭದ್ರ ನೆಲೆಯನ್ನು ಸಂಘಟಿಸಿದರು. ಕೆನರಾ ಪ್ರಾಂತ್ಯಕ್ಕೆ ಸಂಬಂಧಿಸಿ ಹೇಳುವುದಾದರೆ ಭಟ್ಕಳ ಒಂದು ಪ್ರಮುಖ ಬಂದರು ಆಗಿದ್ದರೂ ಅಲ್ಲಿ ಮಳಿಗೆ ಕಟ್ಟಲು ಸಾಧ್ಯವಾಗದೇ ಅನೌಪಚಾರಿಕವಾಗಿ ವ್ಯಾಪಾರ ವ್ಯವಹಾರ ಕಾರ್ಯಾಚರಣೆ ನಡೆಸುತ್ತಿದ್ದರು. ಕೆನರಾದಲ್ಲಿದ್ದ ಕರಿಮೆಣಸಿನ ಇನ್ನೊಂದು ಮುಖ್ಯ ಪ್ರಾಂತ್ಯವಾಗಿದ್ದ ಗೇರುಸೊಪ್ಪೆಗೆ ಸಂಬಂಧಿಸಿ ಹೊನ್ನಾವರ ಬಂದರು ಪ್ರಮುಖ ಸಾಂಬಾರು ಪದಾರ್ಥಗಳ ಸಂಗ್ರಹಣಾ ಕೇಂದ್ರ ಮತ್ತು ರಫ್ತಿನ ಕೇಂದ್ರವಾಗಿತ್ತು. ಈ ಎಲ್ಲಾ ವ್ಯಾಪಾರ ವ್ಯವಹಾರ ಮತ್ತು ಆಡಳಿತದ ಹಿನ್ನೆಲೆಯಿಂದ ಪೋರ್ಚುಗೀಸರು ೧೬ನೇ ಶತಮಾನದ ಕೊನೆಯಾರ್ಧದಲ್ಲಿ ಹೊನ್ನಾವರ ಮತ್ತು ಬಸ್ರೂರುಗಳಲ್ಲಿ ಮಳಿಗೆ ಮತ್ತು ಕೋಟೆಗಳನ್ನು ಕಟ್ಟಲು ಮುಂದಡಿ ಇಟ್ಟರು. ೧೫೬೮ ರಲ್ಲಿ ಮಂಗಳೂರಿನಲ್ಲಿ ಪ್ರಪ್ರಥಮ ಬಾರಿಗೆ ಈ ಕಾರ್ಯಾಚರಣೆಯನ್ನು ಪ್ರಾರಂಭಿಸಿದರು. ಲೂಯಿಸ್ ಡಿ ಆಟ್ಯಾದೆ ೧೫೬೮-೭೧ರ ಅವಧಿಯಲ್ಲಿ ವೈಸ್‌ರಾಯ್ ಆಗಿದ್ದನು. ಕಲ್ಲಿಕೋಟೆಯ ಜಾಮೋರಿನ್ ವಿರುದ್ಧ ಯುದ್ಧ ಮಾಡಬೇಕೆಂದು ನಿರ್ಧರಿಸಿದ್ದನು. ಕಲ್ಲಿಕೋಟೆಯಾದರೂ ತನ್ನ ಜೀವನಾವಶ್ಯಕ ಆಹಾರ ವಸ್ತುಗಳಿಗಾಗಿ ಕೆನರಾ ಪ್ರಾಂತ್ಯವನ್ನೇ ಆಶ್ರಯಿಸಿತ್ತು. ಕಲ್ಲಿಕೋಟೆಯ ರಾಜನ ಹಡಗುಗಳನ್ನು ಈ ಬಂದರುಗಳಲ್ಲಿ ನಿಷೇಧಿಸಿ ತಡೆಯುವುದರಿಂದ ಆಹಾರ ಸರಬರಾಜುಗಳಿಗೆ ತೊಂದರೆಯುಂಟಾಗುತ್ತದೆ. ಈ ರೀತಿ ತಡೆಯೊಡ್ಡಬೇಕಾದರೆ ಕೆನರಾ ಪ್ರಾಂತ್ಯದ ಹಲವಾರು ಕಡೆಗಳಲ್ಲಿ ಕೋಟೆಗಳನ್ನು ಕಟ್ಟಬೇಕೆಂದು ನಿರ್ಧರಿಸಿದನು. ಅವುಗಳಲ್ಲಿ ಪ್ರಮುಖ ಸ್ಥಳಗಳೆಂದರೆ ಮಂಗಳೂರು, ಹೊನ್ನಾವರ, ಬಸ್ರೂರು ಆಗಿತ್ತು.

ಪ್ರಾರಂಭದಲ್ಲಿ ಮಂಗಳೂರಿನ ದಕ್ಷಿಣದ ನದಿಯ ದಡವನ್ನು ಪೋರ್ಚುಗೀಸ್ ವೈಸ್ ರಾಯ್ ಆಂಟೋನಿಯೋ ಡಿ ನೊರೋನ್ಹಾ ಕೋಟೆ ಕಟ್ಟಲು ಆಯ್ಕೆ ಮಾಡಿದನು. ಆದರೆ ಆ ಜಾಗದಲ್ಲಿ ಸಮುದ್ರ ಕೊರೆತ ಮತ್ತು ಕಡಲತಡಿಯ ಜಾಗಕ್ಕೆ ಸಂಬಂಧಿಸಿ ಸಮಸ್ಯೆಗಳು ಭೌಗೋಳಿಕವಾಗಿ ಉದ್ಭವಿಸುವುದರಿಂದ ಅದನ್ನು ಅದಲು ಬದಲು ಮಾಡಿ ಉತ್ತರ ದಿಕ್ಕಿನ ನದಿಯ ದಡವನ್ನು ಆಯ್ಕೆ ಮಾಡಿದನು[೨]. ಈ ಸ್ಥಳವು ಸ್ಥಳೀಯ ಸಾಮಂತ ಅರಸನಾದ ಬಂಗರಸನಿಗೆ ಸೇರಿತು. ಸ್ವತಃ ಬಂಗರಸನು ವೈಸ್ ರಾಯ್‌ರವರನ್ನು ಭೇಟಿ ಮಾಡಿ ಕೋಟೆ ನಿರ್ಮಾಣಕ್ಕೆ ಬೇಕಾದ ವಸ್ತು ಪರಿಕರಗಳನ್ನು ಅಲ್ಲದೆ ಕಾರ್ಮಿಕರ ಸಂಬಳವನ್ನೂ ತಾನು ಪಾವತಿಸುವುದಾಗಿ ಭರವಸೆ ನೀಡಿ ಅನಂತರ ಪರಸ್ಪರ ಒಪ್ಪಂದಕ್ಕೆ ಸಹಿ ಮಾಡಿದನು.

> ಆ ಪ್ರಕಾರ ಬಂಗರಸನನ್ನು ಪೋರ್ಚುಗೀಸ್ ದೊರೆಯು ಆತನನ್ನು ಬೆಂಗಾವಲಿಗೆ ಇರುವ ಸಹೋದರನೆಂದು ಘೋಷಿಸಿದನು. ಮಾತ್ರವಲ್ಲದೆ ಆ ಜಾಗದಲ್ಲಿ ಕಟ್ಟುವ ಕೋಟೆಯ ಸುರಕ್ಷತೆ ಅಲ್ಲಿ ವಾಸಿಸುವ ಜನರ ರಕ್ಷಣೆಗಾಗಿ ಹಣ ಮತ್ತು ಇತರೆ ಎಲ್ಲಾ ಅಗತ್ಯವಿದ್ದ ಸಹಾಯ ಸಹಕಾರವನ್ನು ನೀಡುವುದಾಗಿ ಘೋಷಿಸಿದನು(ಶಾಸ್ತ್ರಿ ೨೦೦೦:೮೨).

ಪೋರ್ಚುಗೀಸರು ಕೇವಲ ೧೫ ದಿನಗಳ ಕಾಲಾವಧಿಯಲ್ಲಿ ಕೋಟೆಯ ಅಡಿಪಾಯ ರಚನೆ ಮಾಡಿದರು. ಸ್ವತಃ ವೈಸ್‌ರಾಯ್‌ರವರೇ ಅಡಿಪಾಯದ ಪ್ರಪ್ರಥಮ ಕಲ್ಲನ್ನು ಹಾಕಿದನು. ಆತನೊಂದಿಗೆ ಆತನ ಸೈನಿಕರೂ ಶಕ್ತಿ ಮೀರಿ ದುಡಿದು ೧೫೫೮ರ ಜನವರಿ ೨೦ ರಂದು ಅಂದರೆ ಸಂತ ಸೆಬೆಸ್ಟಿನ್‌ರವರ ಜನ್ಮ ದಿನದಂದು ಈ ಕೋಟೆಯನ್ನು ಉದ್ಘಾಟಿಸಿದರು. ಮಂಗಳೂರಿನಲ್ಲಿ ಈ ಕೋಟೆಗೆ ಸಂತ ಸೆಬೆಸ್ಟಿನ್ ಕೋಟೆ ಎಂದು ಹೆಸರಿಟ್ಟರು. ಇದರಲ್ಲಿ ಕ್ಯಾಪ್ಟನ್‌ರವರ ಮನೆ, ಒಂದು ಫ್ಯಾಕ್ಟರಿ, ಒಂದು ಚಾಪೆಲ್, ಒಂದು ಗೋಡಾನ್ ಇವುಗಳನ್ನು ಒಳಗೊಂಡಿತ್ತು. ಮುನ್ನೂರು ಸೈನಿಕರು, ಮೂರು ಪ್ಲಾಗ್ ಕಮಾಂಡರ್‌ಗಳು ಈ ಕೋಟೆಯ ಸಂರಕ್ಷಣೆಗಾಗಿ ನೇಮಿಸಲ್ಪಟ್ಟರು(ಶಾಸ್ತ್ರಿ ೨೦೦೦:೮೨).

ವೈಸ್‌ರಾಯ್‌ರವರ ರಾಜಾಜ್ಞೆ ಪ್ರಕಾರ ಮಂಗಳೂರು ಕೋಟೆಯಲ್ಲಿ ಇನ್ನೂರು ಜನ ಮತ್ತು ಅವರ ಅಧಿಕಾರಿಗಳು ಇದ್ದರು. ಅದರಲ್ಲಿ ನೂರು ಜನ ರೈಫಲ್‌ಧಾರಿಗಳಿದ್ದರು. ಇಪ್ಪತ್ತೈದು ಮಂದಿಗೆ ಒಬ್ಬರಂತೆ ಕಮಾಂಡರುಗಳಿದ್ದರು. ಈ ರೀತಿ ಒಟ್ಟು ನಾಲ್ಕು ಕಮಾಂಡರುಗಳು ಓರ್ವ ಮುಖ್ಯ ಕಮಾಂಡರ್‌ರವರ ಅಧಿನಾಯಕತ್ವದಲ್ಲಿದ್ದರು. ರೈಫಲ್ ಮಾನ್‌ಗಳು ಸ್ಥಳೀಯ ಪ್ರಜೆಗಳಾಗಿದ್ದು, ಪೋರ್ಚುಗೀಸ್ ಅಧಿಕಾರಿಗಳ ವಿಶ್ವಾಸಕ್ಕೆ ಒಳಪಟ್ಟವರಾಗಿದ್ದರು.

ಪೌಲ್ ಡಿ ಟೆನಿಡಾಡೆ ಎಂಬ ಚರಿತ್ರ ಬರಹಗಾರರ ಅಭಿಪ್ರಾಯದ ಪ್ರಕಾರ ಬಂಗರಸನು ಉದ್ದೇಶ ಪೂರ್ವಕವಾಗಿಯೇ ಮಂಗಳೂರು ಉತ್ತರದ ನದಿಯ ದಡವನ್ನು ಪೋರ್ಚುಗೀಸರಿಗೆ ಮಳಿಗೆ ಕಟ್ಟಲು ನೀಡಿದನು ಎಂದು ಹೇಳಿದ್ದಾನೆ. ಆ ಸಮಯದಲ್ಲಿ ಸದ್ರಿ ಜಾಗವು ಮಾರುಕಟ್ಟೆ ಪ್ರದೇಶವಾಗಿತ್ತು.[೬] ಅಲ್ಲಿ ಮುಸ್ಲಿಂ ಸಮುದಾಯ ಬಹುಸಂಖ್ಯಾತರಾಗಿದ್ದರು. ಇವರು ಬಂಗರಸನಿಗೆ ಗೌರವ ಕೊಡದೆ ಅವಮಾನ ಎಸಗುತ್ತಿದ್ದರು. ಆ ಮಾರುಕಟ್ಟೆ ಪ್ರದೇಶದಲ್ಲಿ ಬಂಗರಸನು ನಗರ ಸಂಚಾರಗೈಯುವಾಗ ಪಲ್ಲಕ್ಕಿಯನ್ನು ತೊರೆದು ನಡೆದುಕೊಂಡೇ ಹೋಗಬೇಕೆಂದು ತಾಕೀತು ಮಾಡುತ್ತಿದ್ದರು. ಇದಕ್ಕೆಲ್ಲಾ ಪ್ರತೀಕಾರವಾಗಿ ಈ ಜಾಗವನ್ನೇ ಪೋರ್ಚುಗೀಸರಿಗೆ ಬಿಟ್ಟುಕೊಡಲು ನಿರ್ಧರಿಸಿದನು. ಪೋರ್ಚುಗೀಸರು ಕೋಟೆ ಕಟ್ಟಿರುವ ಪ್ರದೇಶ ಬೋಳೂರು ಗ್ರಾಮಕ್ಕೆ ಸೇರಿದ್ದು ಬಹುಶಃ ಪ್ರಸ್ತುತ ಕುದ್ರೋಳಿಯ ಅಕ್ಕಪಕ್ಕವೇ ಆಗಿರುವ ಸಾಧ್ಯತೆ ಇದೆ.

ಚರಿತ್ರೆಕಾರರಾದ ಎ ಆರ್ ಡಿಸ್ನಿಯವರ ಪ್ರಕಾರ ಕೆನರಾಕ್ಕೆ ಒಳಪಟ್ಟ ಮಂಗಳೂರಿನ ಉತ್ತರ ಭಾಗದಲ್ಲಿ ಕೋಟೆ ಕಟ್ಟುವ ಅವಶ್ಯಕತೆ ಪೋರ್ಚುಗೀಸರಿಗೆ ಇತ್ತು. ನಿರ್ದಿಷ್ಟವಾಗಿ ಗೊತ್ತುಪಡಿಸಿದ ಭೂಪ್ರದೇಶದಲ್ಲಿ ಒಂದು ಹಳೆಯ ದೇವಸ್ಥಾನದ ಅವಶೇಷಗಳನ್ನು ಕೆಡವಿ ಕೋಟೆ ನಿರ್ಮಿಸಲಾಯಿತು. ಆ ದೇವಸ್ಥಾನದ ಅಡಿಪಾಯವು ಭದ್ರವಾಗಿದ್ದು ಚೌಕಾಕಾರದಲ್ಲಿತ್ತು. ಅದಕ್ಕೆ ಅನುಗುಣವಾಗಿ ಕೋಟೆ ನಿರ್ಮಿಸಲ್ಪಟ್ಟು ಅದರ ನಾಲ್ಕು ಮೂಲೆಗಳಲ್ಲಿ ಬುರುಜುಗಳಿದ್ದವು. ಒಂದು ಚರ್ಚ್, ಕ್ಯಾಪ್ಟನ್‌ನ ಮನೆ, ಉಗ್ರಾಣಗಳು ಇದ್ದವು(ಡಿಸ್ನಿ ೨೦೧೦:೫). ಅಂದರೆ ಡಿಸ್ನಿಯವರು ಕೂಡ ವಿವರಿಸುವ ಕೋಟೆಯ ಬಗೆಗಿನ ವಿವರಣೆಗಳು ಲೇಖಕರು ಯಾರೆಂದು ನಮೂದಿಸದ ದಾಖಲೆಗಳಿಗೆ ತಾಳೆ ಹೊಂದುತ್ತದೆ.

ಲೇಖಕರು ಯಾರೆಂದು ನಮೂದಿಸಲ್ಪಡದ ೧೫೮೨ರ ದಾಖಲೆಯೊಂದಾದ 'ಲಿವ್ರೋ ದಾಸ್ ಸಿಡಡಾನ್ ಇ ಪೋರ್ಟ್ ಲೇಜಿಸ್' ಪ್ರಕಾರ ಕೋಟೆ ಕಟ್ಟಿದ ಈ ಜಾಗವು ಹಿಂದೂ ದೇವಾಲಯಗಳನ್ನು

ಹೊಂದಿದ್ದು ಅದನ್ನು ಕೆಡವಿ ಅದರ ಕಬ್ಬಿಣವನ್ನು ಈ ನಿರ್ಮಾಣಕ್ಕೆ ಉಪಯೋಗಿಸಲಾಗಿದೆ ಎಂದು ಬರೆಯಲಾಗಿದೆ (ಶಾಸ್ತ್ರಿ ೨೦೦೦:೮೩). ಈ ರೀತಿಯ ಎರಡು ವ್ಯತಿರಿಕ್ತ ಅಭಿಪ್ರಾಯಗಳಿವೆ. ಮೇಲ್ನೋಟಕ್ಕೆ ಕುದ್ರೋಳಿಯ ಭಾಗದಲ್ಲಿ ಮುಸ್ಲಿಂ ಜನ ವಾಸಿಸುತ್ತಿದ್ದ ಪ್ರದೇಶವೇ ಕೋಟೆ ಕಟ್ಟಿರುವ ಜಾಗ ಆಗಿರಬಹುದೆಂದು ಊಹಿಸಬಹುದು. ಬಂಗರಸನು ಹಿಂದೂ ಧಾರ್ಮಿಕ ನಂಬಿಕೆಯ ವ್ಯಕ್ತಿಯಾಗಿದ್ದು ಸ್ವತಃ ಆತನೇ ದೇವಾಲಯ ಕೆಡವಲು ಅವಕಾಶ ಕಲ್ಪಿಸಿದ್ದಾನೆಂಬುದನ್ನು ನಂಬಲು ಸಾಧ್ಯವಿಲ್ಲ. ಮಂಗಳೂರಿನ ಸುತ್ತಮುತ್ತಲಿನ ಸಾಮಂತರಲ್ಲೇ ಬಂಗರಸನು ಪೋರ್ಚುಗೀಸರಿಗೆ ಅತ್ಯಂತ ನಂಬಿಗಸ್ತ ಸಾಮಂತ ರಾಜನಾಗಿರುವ ಹಿನ್ನೆಲೆಯಲ್ಲಿ ದೇವಸ್ಥಾನವನ್ನು ಕೆಡವಲು ಪೋರ್ಚುಗೀಸರು ನಿರ್ದೇಶಿಸುವ ಸಾಧ್ಯತೆಗಳೂ ಇಲ್ಲ.

ಇದೇ ವಿಷಯವಾಗಿ ಮುಂದೆ ೧೬೩೫ ರಲ್ಲಿ ಪೋರ್ಚುಗೀಸ್ ಪತ್ರಾಗಾರದ ಅಧಿಕಾರಿಯೂ ಚರಿತ್ರೆ ಬರಹಗಾರರು ಆದ ಬೊಕಾರೋರವರು ನೀಡುವ ವಿವರಣೆಯಲ್ಲಿ ಯಾವುದೇ ಮತೀಯ ಧಾರ್ಮಿಕ ಅಂಶಗಳು ಉಲ್ಲೇಖಿಸಲ್ಪಡದೇ ಕೇವಲ ಕೋಟೆಯ ವಿಸ್ತಾರ, ಎತ್ತರ, ಸ್ವರೂಪ ಹಾಗೂ ಭೌಗೋಳಿಕ ನೆಲೆಗಟ್ಟನ್ನು ವಿವರಿಸಲಾಗಿದೆ. ಮಾತ್ರವಲ್ಲದೆ ಅದರ ಸುತ್ತ ಇರುವ ಸಂರಕ್ಷಣೆ ವಿಧಾನಗಳನ್ನೂ ವಿವರಿಸಲಾಗಿದೆ.

ಪೋರ್ಚುಗೀಸ್ ವೈಸ್‌ರಾಯ್ ಡೊಮಿಂಗೋ ಡಿ'ಸೋಜಾ ಇ ಮೆನೆಜಸ್‌ನು ಇಲ್ಲಿಯ ಅಪ್ಪರ್ ಬಸ್ರೂರು ಮುನ್ಸಿಪಾಲಿಟಿಯ ನಾಯಕತ್ವದೊಂದಿಗೆ ಮಾತುಕತೆ ನಡೆಸಿದನು. ಆ ಪ್ರಕಾರ ಹೊಸ ಕೋಟೆ ನಿರ್ಮಾಣ ಮಾಡಿದ ಮೇಲೆ ಬಸ್ರೂರು ಕೋಟೆಯಲ್ಲಿ ಪೋರ್ಚುಗೀಸರು ಹೊಂದಿದ್ದ ಎಲ್ಲಾ ವ್ಯವಸ್ಥೆಗಳನ್ನು ಹೊಸ ಕೋಟೆಗೆ ವರ್ಗಾಯಿಸುವುದಾಗಿ ನಿರ್ಧರಿಸಲಾಯಿತು.

ವೈಸ್‌ರಾಯ್ ಆ್ಯಂಟೋನಿಯಾ ಡಿ'ಸೋಜಾನು ३೦೦೦ ಜನರ ಒಂದು ದೊಡ್ಡ ನೌಕಾ ಸೈನ್ಯವನ್ನು ನೇತ್ರಾವತಿ ನದಿಯ ದಕ್ಷಿಣ ದಡಕ್ಕೆ ಇರುವ ಉಳ್ಳಾಲದ ಕಡೆಗೆ ಕಳುಹಿಸಿದನು. ಉಳ್ಳಾಲದ ರಾಣಿಯು ಅಲ್ಲಿರುವ ಕಾವಲು ಗೋಪುರದ ರಕ್ಷಣೆಗಾಗಿ ೫೦೦ ಜನರನ್ನು ನೇಮಿಸಿದ್ದಳು. ೧೫೬೮ ರ ಜನವರಿ ४ ರಂದು ಪೋರ್ಚುಗೀಸ್ ವೈಸ್‌ರಾಯ್ ದಾಳಿಯನ್ನು ನಡೆಸಿದನು. ವೈಸ್‌ರಾಯ್ ಆ್ಯಂಟೋನಿಯಾ ಡಿ'ಸೋಜಾನ ಭಾವ ಆ್ಯಂಟೋನಿಯಾ ಪಿರೇರಾನು ಕೋಟೆಯ ಮೇಲೆ ದಾಳಿ ನಡೆಸಲು ನಿಯುಕ್ತಿಗೊಂಡಿದ್ದನು. ರಾತ್ರಿ ವೇಳೆ ವಿಶ್ರಾಂತಿ ಪಡೆಯುತ್ತಿದ್ದ ಪೋರ್ಚುಗೀಸರ ಮೇಲೆ ಉಳ್ಳಾಲದ ರಾಣಿಯ ಸೈನಿಕರು ಏಕಾಏಕಿ ಮಿಂಚಿನ ತುರ್ತು ದಾಳಿ ನಡೆಸಿ ಶತ್ರು ಸೈನ್ಯದ ನೂರಾರು ಸೈನಿಕರನ್ನು ಕೊಂದು ಹಾಕಿದರು. ಸರಿಸುಮಾರು ಉಳ್ಳಾಲದ ಸೈನ್ಯವೇ ಮೇಲುಗೈ ಸಾಧಿಸುವ ಸ್ಥಿತಿಯಲ್ಲಿ ಇತ್ತು. ವೈಸ್‌ರಾಯ್ ಹಲವಾರು ಯುದ್ಧ ತಂತ್ರಗಳಿಗೆ ಪ್ರಸಿದ್ಧನಾಗಿದ್ದನು. ಆ ಹಿನ್ನೆಲ್ಲೆಯಲ್ಲಿ ಅವೆಲ್ಲವುಗಳನ್ನು ಪ್ರಯೋಗಿಸಿದನು. ಒಂದು ರಾತ್ರಿ ಬೆಳಗಾಗುವುದರ ಒಳಗೆ ಪೋರ್ಚುಗೀಸ್ ಸೈನಿಕರು ವೀರಾವೇಶದಿಂದ ಹೋರಾಡಿ ಜನವರಿ ೫ ರಂದು ಅವರು ಉಳ್ಳಾಲದ ನಗರವನ್ನು ಪ್ರವೇಶಿಸುವಲ್ಲಿ ಯಶಸ್ವಿಯಾಗಿ ಸುಮಾರು ೬೦೦೦ ಜನ ಸೈನಿಕರನ್ನು ಹತ್ಯೆ ಮಾಡಿದರು. ನಗರ ಮತ್ತು ಅರಮನೆಗಳಿಗೆ ಬೆಂಕಿ ಹಚ್ಚಿದರು. ನಿರ್ಣಾಯಕವಾಗಿ ಯುದ್ಧ ಗೆದ್ದು ತಮ್ಮ ಸೈನಿಕ ಹಡಗಿಗೆ ವಾಪಾಸಾಗುತ್ತಿದ್ದ ಪೋರ್ಚುಗೀಸರ ಮೇಲೆ ಉಳ್ಳಾಲದ ಸೈನಿಕರು ಮತ್ತೆ ಮಿಂಚಿನ ಮರುದಾಳಿ ನಡೆಸಿದರು. ಆದರೆ ಇದರಿಂದಾಗಿ ಪೋರ್ಚುಗೀಸರಿಗೆ

ಯಾವುದೇ ಹೆಚ್ಚಿನ ಸಾವು–ನೋವು ನಷ್ಟ ಸಂಭವಿಸಲಿಲ್ಲ. ಅದಾದ ನಂತರ ಪೋರ್ಚುಗೀಸರ ಅಧಿಕಾರಿಗಳು ಆ ಪ್ರದೇಶದಲ್ಲಿ ಕೋಟೆಕಟ್ಟಲು ಯಾವ ಜಾಗ ಸೂಕ್ತವೆಂಬುದನ್ನು ನಿರ್ಧರಿಸಲು ಸ್ಥಳ ಪರಿಶೀಲನೆ ನಡೆಸಿದರು. ಆದರೆ ಅಲ್ಲಿ ನದಿಯ ಮುಖಜ ಭೂಮಿ ಕೋಟೆ ನಿರ್ಮಿಸಲು ಸೂಕ್ತ ಪ್ರದೇಶ ಎಂದು ಪ್ರಾರಂಭದಲ್ಲಿ ನಿರ್ಧರಿಸಿದ ಪೋರ್ಚುಗೀಸರು ಈ ಪ್ರಸ್ತಾಪವನ್ನು ಬದಿಗಿಟ್ಟು ಉತ್ತರದ ಮಂಗಳೂರಿನಲ್ಲಿ ಬಂಗರಸನ ವ್ಯಾಪ್ತಿಯಲ್ಲಿ ಕೋಟೆ ನಿರ್ಮಿಸಲು ನಿರ್ಧರಿಸಿದರು.

ಪೋರ್ಚುಗೀಸರ ಸಹಾಯದಿಂದ ಕೋಟೆ ನಿರ್ಮಿಸಿದ ಬಂಗರಸನ ಮೇಲೆ ಉಳ್ಳಾಲದ ರಾಣಿ ಕೌಟುಂಬಿಕ ದ್ವೇಷವನ್ನೂ ಹೊಂದಿದ್ದಳು. ಪೋರ್ಚುಗೀಸರಿಗೆ ಫಲವತ್ತಾದ ಈ ಪ್ರಾಂತ್ಯದಲ್ಲಿ ಸಾಮಂತ ಅರಸರ ಮಧ್ಯೆ ಯುದ್ಧ ಬೇಕಾಗಿರಲಿಲ್ಲ. ಆದುದರಿಂದ ಸ್ವತಃ ಪೋರ್ಚುಗೀಸ್ ವೈಸ್‌ರಾಯ್‌ರವರೇ ಮಂಗಳೂರಿಗೆ ಆಗಮಿಸಿ ಇವರಿಬ್ಬರ ಮಧ್ಯೆ ಪರಸ್ಪರ ಶಾಂತಿ ಒಪ್ಪಂದಕ್ಕೆ ಸಹಿ ಹಾಕಿಸಿದನು. ಫಾದರ್ ಹೀರಾರವರ ಪ್ರಕಾರ ಇದಾದ ನಂತರವೇ ಇವರಿಬ್ಬರ ಮಧ್ಯೆ ವೈವಾಹಿಕ ಸಂಬಂಧ ಕೂಡಾ ಬೆಳೆದು ಬಂತು. ಉಳ್ಳಾಲದ ರಾಣಿಯು ಪೋರ್ಚುಗೀಸರ ಬಗ್ಗೆ ಅಸಹನೆಯನ್ನು ಹೊಂದಿದ್ದಳು. ಈ ನಿಟ್ಟಿನಲ್ಲಿ ಜಾಮೋರಿನ್ ದೊರೆಗಳು ಮತ್ತು ಆದಿಲ್‌ಷಾಹಿ ದೊರೆಗಳೊಂದಿಗೆ ಸೇರಿಕೊಂಡು ಐಕ್ಯರಂಗವನ್ನು ಕೂಡಾ ಮಾಡಿದಳು.

ಮತ್ತೆ ಮಂಗಳೂರಿನ ಬಂಗರಸನಿಗೂ ಉಳ್ಳಾಲದ ರಾಣಿಗೂ ಮಧ್ಯೆ ೧೫೬೮ರಲ್ಲಿ ಯುದ್ಧ ನಡೆದು ರಾಣಿ ಮೇಲುಗೈ ಸಾಧಿಸಿದಳು. ೧೫೭೧ ರ ಜನವರಿ ೧೨ ರಂದು ಪೋರ್ಚುಗಲ್ ದೊರೆಗೆ ಬರೆದ ಪತ್ರದಲ್ಲಿ ಉಳ್ಳಾಲದ ರಾಣಿಯು ಬಂಗರಸನ ಪ್ರಾಂತ್ಯವನ್ನು ವಶಪಡಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ತಮ್ಮ ಮಿತ್ರ ಬಂಗರಸನ ಪರವಾಗಿ ಉಳ್ಳಾಲದ ರಾಣಿಯ ವಿರುದ್ಧ ದಾಳಿ ಮಾಡಲು ಪೋರ್ಚುಗೀಸರು ನಿರ್ಧರಿಸುತ್ತಾರೆ. ಆದರೆ ಈ ಸಮಯದಲ್ಲಿ ಉಳ್ಳಾಲದ ರಾಣಿ ಪೋರ್ಚುಗೀಸರೊಂದಿಗೆ ಶಾಂತಿಯನ್ನು ಬಯಸುತ್ತಾಳೆ. ಈತನ್ಮಧ್ಯೆ ಪೋರ್ಚುಗೀಸ್ ಗವರ್ನರ್‌ರವರು ಮಲಬಾರ್‌ನ ದಂಡನಾಯಕನಿಗೆ ಆದೇಶ ನೀಡಿ ಉಳ್ಳಾಲ ಮತ್ತು ಬಂಗರಸರ ಮಧ್ಯೆ ಶಾಂತಿ ಒಪ್ಪಂದ ಏರ್ಪಡಿಸಬೇಕೆಂದೂ, ಉಳ್ಳಾಲದ ರಾಣಿ ನಿರ್ಮಿಸಿರುವ ಹೊಸ ಕೋಟೆಯನ್ನು ನಾಶಪಡಿಸಬೇಕೆಂದೂ ಒಂದು ವೇಳೆ ರಾಣಿಯು ಅದಕ್ಕೆ ಒಪ್ಪದಿದ್ದಲ್ಲಿ ಉಳ್ಳಾಲದೊಂದಿಗೆ ಯುದ್ಧ ಮಾಡಬೇಕೆಂದೂ ಆದೇಶ ನೀಡುತ್ತಾನೆ. ಆ ಪ್ರಕಾರ ಕಮಾಂಡರ್ ತೋಮ್ ಡಿ'ಸೋಜಾನು ೩೦ ಹಡಗುಗಳೊಂದಿಗೆ ೧೫೬೮ ರ ಡಿಸೆಂಬರ್ ೧ ರಂದು ಮಂಗಳೂರಿನ ಬಂದರಿಗೆ ಬಂದನು. ಪರಸ್ಪರ ಶಾಂತಿ ಒಪ್ಪಂದದ ಪ್ರಕ್ರಿಯೆ ಪ್ರಾರಂಭಿಸುತ್ತಾನೆ. ಆ ಪ್ರಕಾರ ಕೋಟೆಯನ್ನು ಕೆಡವಲು ಉಳ್ಳಾಲದ ರಾಣಿ ಸಮ್ಮತಿಸುತ್ತಾಳೆ. ಆಕೆ ಬಂಗರಸನ ಪ್ರಾಂತ್ಯದಿಂದ ವಶಪಡಿಸಿಕೊಂಡಿದ್ದ ಕೆಲ ಪ್ರದೇಶಗಳನ್ನು ಹಿಂತಿರುಗಿಸಲು ಒಪ್ಪುತ್ತಾಳೆ. ಆದರೆ ೧೫೭೩ ರ ಫೆಬ್ರವರಿ ೧೫ರ ಒಂದು ಪತ್ರದ ಪ್ರಕಾರ ಕೋಟೆಯನ್ನು ರಾಣಿಯು ನೆಲಸಮ ಮಾಡದಿರುವ ಅಂಶ ಗೊತ್ತಾಗುತ್ತದೆ (ಶಾಸ್ತ್ರಿ ೨೦೦೦:೧೨೦). ಕೊನೆಗೆ ೧೫೭೪ರಲ್ಲಿ ಕೋಟೆಯನ್ನು ನೆಲಸಮ ಮಾಡುತ್ತಾಳೆ. ಇದಾದ ನಂತರವೇ ಉಳ್ಳಾಲದ ರಾಣಿ, ಬಂಗರಸ ಮತ್ತು ಪೋರ್ಚುಗೀಸರ ಮಧ್ಯೆ ಶಾಂತಿ ಏರ್ಪಡುತ್ತದೆ. ಇದೇ ಅವಧಿಯಲ್ಲಿ ಇಟಲಿಯನ್ ಪ್ರವಾಸಿಗ ಡೆಲ್ಲಾ ವೆಲ್ಲಾನು ಮಂಗಳೂರಿಗೆ ಬಂದಿದ್ದು ಆತನು ಉಳ್ಳಾಲದ ರಾಣಿಯ ಬಗ್ಗೆ ಪೋರ್ಚುಗೀಸ್ ಮತ್ತು

ಇಕ್ಕೇರಿಯ ನಡುವಿನ ಸಂಬಂಧದ ಬಗ್ಗೆ ವಿವರಿಸುತ್ತಾನೆ. ಆತನು ನದಿಯ ಮುಖಾಂತರ ಗುರುಪುರದವರೆಗೆ ಪ್ರಯಾಣಿಸಿದನು. ಅವನ ಪ್ರಕಾರ ಉಳ್ಳಾಲದ ರಾಣಿ ಮತ್ತು ಆಕೆಯ ವಿಚ್ಛೇದಿತ ಬಂಗರಾಜನ ಮಧ್ಯೆಯ ಸಂಘರ್ಷ ನಡೆಯುತ್ತದೆ. ರಾಣಿಯು ವೆಂಕಟಪ್ಪ ನಾಯಕನ ಸಹಾಯ ಪಡೆದು ನಿರ್ಣಾಯಕವಾದ ಮೇಲುಗೈಯನ್ನು ಬಂಗರಸನ ಮೇಲೆ ಸಾಧಿಸುತ್ತಾಳೆ. ಬಂಗರಸ ಮತ್ತು ಆತನ ಪರವಾಗಿರುವ ಪೋರ್ಚುಗೀಸರು ಒಪ್ಪಂದಕ್ಕೆ ಅನಿವಾರ್ಯವಾಗಿ ಸಹಿ ಹಾಕಬೇಕಾಯಿತು ಎಂದು ಡೆಲ್ಲಾ ವೆಲ್ಲಾನು ವಿವರಿಸುತ್ತಾನೆ (ಸ್ಟರಕ್ (೧) ೧೯೯೪:೨೨).

ಈ ಅವಧಿಯಲ್ಲಿ ಕೆನರಾ ಪ್ರಾಂತ್ಯದಿಂದ ಗೋವಾ ಬಂದರಿಗೆ ಕರಿಮೆಣಸನ್ನು ಸಾಗಿಸಲಾಗುತ್ತಿತ್ತು. ಅಲ್ಲಿಂದ ಇತರ ಕಡೆಗಳಿಗೆ ರಫ್ತು ಆಗುತ್ತಿತ್ತು. ಈ ಗೋವಾ–ಕೆನರಾ ವ್ಯಾಪಾರವನ್ನು ಸುಮಾರು ಮೂವತ್ತು ವರ್ಷಗಳ ಕಾಲ ಒಂದು ಹಿಂದೂ ಕುಟುಂಬ ನಿರ್ವಹಿಸುತ್ತಿತ್ತು. ಪೋರ್ಚುಗೀಸರು ೧೬೧೭ ರ ಕಾಲದಲ್ಲಿ ಈ ಕುಟುಂಬಕ್ಕೆ ೧.೮೦.೦೦೦ ನಾಣ್ಯಗಳನ್ನು ಬಾಕಿ ಪಾವತಿ ಮಾಡಲು ಇತ್ತು. ಇದರಲ್ಲಿ ಸುಮಾರು ೧.೭೨.೫೦೦ ರಷ್ಟು ಕರಿಮೆಣಸಿನ ಪಾವತಿಗೆ ಸಂಬಂಧಪಟ್ಟ ಬಾಕಿಯಾಗಿತ್ತು. ಉಳಿದ ಮೊತ್ತ ಗೋವಾ ಸರಕಾರ ಪಡೆದ ಸಾಲವಾಗಿತ್ತು ಎಂದು ಎಂ ಎನ್ ಪಿಯರ್ಸನ್ ಉಲ್ಲೇಖಿಸಿದ್ದಾರೆ (ಪಿಯರ್ಸನ್ ೨೦೦೪:೧೦೮).

೧೬೭೧ ರಲ್ಲಿ ಪೋರ್ಚುಗೀಸರೊಂದಿಗೆ ವೈಮನಸ್ಸು ಹೊಂದಿದ್ದ ಉಳ್ಳಾಲದ ರಾಣಿ ಕಲ್ಲಿಕೋಟೆಯ ರಾಜನನ್ನು ಸಂಪರ್ಕಿಸಿ ಮಂಗಳೂರಿನ ಕೋಟೆಯ ಮೇಲೆ ದಾಳಿ ನಡೆಸಬೇಕೆಂದು ಕೇಳಿಕೊಂಡಳು. ಪೋರ್ಚುಗೀಸರೊಂದಿಗೆ ಬಂಗರಸನು ಹೊಂದಿರುವ ಸಖ್ಯತೆ ಉಳ್ಳಾಲದ ರಾಣಿಗೆ ಒಂದು ದೊಡ್ಡ ತಲೆ ನೋವು ಆಗಿತ್ತು. ಈ ಹಿನ್ನೆಲೆಯಲ್ಲಿ ಕಲ್ಲಿಕೋಟೆಯ ಜಾಮೋರಿನ್ ದೊರೆಗಳ ಸಹಾಯ ಪಡೆದು ಆ ಕೋಟೆಯನ್ನು ನಾಶ ಮಾಡಲು ತೀರ್ಮಾನಿಸಿದಂತೆ ಸರಿ ಸುಮಾರು ಮೂರು ವರ್ಷಗಳ ನಂತರ ಕಲ್ಲಿಕೋಟೆಯ ಜಾಮೋರಿನ್ ದೊರೆಯು ನೌಕಾ ಸೈನ್ಯದ ಅಡ್ಮಿರಲ್ ಕುಟ್ಟಿ ಪೋಕರೆಗೆ ದಾಳಿ ಮಾಡಲು ಆದೇಶಿಸಿದನು. ಆ ಪ್ರಕಾರ ಕುಟ್ಟಿ ಪೋಕರೆಯು ತನ್ನ ಸೈನ್ಯದೊಂದಿಗೆ ಮಂಗಳೂರಿಗೆ ಬಂದು ಪೋರ್ಚುಗೀಸರಿಗೆ ಯಾವುದೇ ಮುನ್ಸೂಚನೆ ನೀಡದೆ ದಾಳಿ ನಡೆಸಲು ತೀರ್ಮಾನಿಸಿದನು. ರಾತ್ರಿ ಸಮಯದಲ್ಲಿ ಕೋಟೆಗೆ ಪ್ರವೇಶಗೈಯಲು ಪ್ರಯತ್ನಿಸುತ್ತಿರುವುದನ್ನು ಪೋರ್ಚುಗೀಸರ ಒರ್ವ ಸೈನಿಕ ಗಮನಿಸಿದನು. ಉಳಿದ ಪೋರ್ಚುಗೀಸ್ ಸೈನಿಕರು ನಿದ್ರೆಯಲ್ಲಿದ್ದರು. ಏಕಾಏಕಿ ದಾಳಿ ನಡೆಯುತ್ತಿರುವುದನ್ನು ಗಮನಿಸಿದ ಪೋರ್ಚುಗೀಸ್ ಸೈನಿಕ ಉಳಿದ ಸೈನಿಕರನ್ನು ಎಬ್ಬಿಸಲು ಸಮಯಾವಕಾಶ ಇರಲಿಲ್ಲ. ಆದುದರಿಂದ ತನ್ನ ಎದುರಲ್ಲೇ ಇದ್ದ ಬೆಳ್ಳಿಯ ನಾಣ್ಯಗಳ ತಿಜೋರಿಯನ್ನು ಕೋಟೆ ಹತ್ತುತ್ತಿರುವ ಸೈನಿಕರ ಮೇಲೆ ಹಾಕಿದನು. ಆಗ ಅದು ನೆಲಕ್ಕೆ ಬಿದ್ದು ಉಂಟಾದ ಶಬ್ದಕ್ಕೆ ಪೋರ್ಚುಗೀಸ್ ಸೈನಿಕರೆಲ್ಲಾ ಎಚ್ಚೆತ್ತು ಮರು ದಾಳಿ ಪ್ರಾರಂಭಿಸಿದರು. ಕುಟ್ಟಿ ಪೋಕರೆಯ ಸೈನ್ಯವು ಹಣದ ತಿಜೋರಿಯೊಂದಿಗೆ ಪಲಾಯನಗೈದಿತು. ಕಲ್ಲಿಕೋಟೆಗೆ ಹಿಂತಿರುಗುವಾಗ ಸಮುದ್ರದಲ್ಲಿ ಕಣ್ಣೂರಿನ ಹೊರವಲಯದಲ್ಲಿ ಪೋರ್ಚುಗೀಸರ ಇನ್ನೊಂದು ನೌಕಾ ದಂಡು ಎದುರಾಗಿ ತಡೆದು ನಿಲ್ಲಿಸಿ ದಾಳಿ ನಡೆಸಿದರು. ಆಗ ಈ ದಾಳಿಯಲ್ಲಿ ಅಡ್ಮಿರಲ್ ಕುಟ್ಟಿ ಪೋಕರೆ ಹತನಾದನು (ಮೋರಸ್ ೧೯೨೭:೧೨, ೧೩). ಹಣದ ತಿಜೋರಿಯನ್ನು ಪೋರ್ಚುಗೀಸರು

ವಶಪಡಿಸಿಕೊಂಡರು. ಈ ಘಟನೆಯ ನಂತರ ಮುಂದಿನ ೧೭೧೨ ರ ವರೆಗೆ ಮಂಗಳೂರಿನಲ್ಲಿ ಪೋರ್ಚುಗೀಸರು ಯಾವುದೇ ದಾಳಿಗೆ ಒಳಗಾಗದೆ ನಿಶ್ಚಿಂತೆಯಿಂದ ಇದ್ದರು.

ಮಂಗಳೂರು ಹೊನ್ನಾವರ, ಬಸ್ರೂರುಗಳಲ್ಲಿ ನಡೆಯುತ್ತಿದ್ದ ಬಂದರಿನ ವ್ಯಾಪಾರ ವ್ಯವಹಾರಗಳು ಪೋರ್ಚುಗೀಸರ ವಾಣಿಜ್ಯದ ಹಿತಾಸಕ್ತಿಯಿಂದ ಅತೀ ಮಹತ್ವದ್ದಾಗಿತ್ತು. ಈಗಾಗಲೇ ಮಂಗಳೂರು ಮತ್ತು ಹೊನ್ನಾವರಗಳಲ್ಲಿ ಕೋಟೆಗಳನ್ನು ನಿರ್ಮಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಲಿವ್ರೋ ಡಾನ್, ಸಿಡಡಾಸ್, ಇ. ಪೋರ್ಟ್ ಲಿಜಾಸ್ ಎಂಬ ಲೇಖಕರು ಯಾರು ಎಂಬ ವಿವರಗಳು ಇಲ್ಲದ ಗ್ರಂಥದಲ್ಲಿ ಉಲ್ಲೇಖಿತವಾಗಿರುವ ಅಂಶಗಳು ಮಹತ್ವದ್ದಾಗಿದೆ.

> ಮೂರು ಕೋಟೆಗಳೂ ಅತ್ಯಂತ ಮಹತ್ವದ್ದಾಗಿದೆ. ಇವೆಲ್ಲವುಗಳನ್ನು ಸಂರಕ್ಷಿಸುವುದು ಅತ್ಯಂತ ಅವಶ್ಯಕವಾಗಿದೆ. ಅವುಗಳು ಒಂದು ವೇಳೆ ಶತ್ರುಗಳ ಕೈವಶವಾದರೆ ಇದರಿಂದ ದೊಡ್ಡ ಪ್ರಮಾಣದಲ್ಲಿ ಕೆಂಪು ಸಮುದ್ರ ಮತ್ತು ಇತರೆ ವಿಭಾಗಗಳಿಗೆ ತೊಂದರೆ ಉದ್ಭವಿಸುತ್ತದೆ. ಈ ದೃಷ್ಟಿಯಿಂದ ಕೆನರಾ ಪ್ರಾಂತ್ಯವು ಉತ್ತಮ ದರ್ಜೆಯ ಕರಿಮೆಣಸು, ಶುಂಠಿ, ಕಬ್ಬಿಣ, ನಾರಿನ ಉತ್ಪನ್ನ ಮತ್ತು ಕೆಲ ಆಯುಧಗಳಿಗೆ ಪ್ರಖ್ಯಾತವಾಗಿದೆ. ಈ ಪ್ರಾಂತ್ಯದಲ್ಲಿ ಸ್ವತಃ ಭಾರತದ ಇತರೆ ಭಾಗಗಳಿಗೆ ಆಹಾರ ವಸ್ತುಗಳು ಸರಬರಾಜು ಆಗುತ್ತಿದೆ. ನಿರ್ದಿಷ್ಟವಾಗಿ ಆಹಾರ ಧಾನ್ಯಗಳ ಕೊರತೆ ಅನುಭವಿಸುತ್ತಿರುವ ಮಲಬಾರಿಗೆ ಇಲ್ಲಿಂದಲೇ ಆಹಾರ ಧಾನ್ಯಗಳು ಸರಬರಾಜು ಆಗುತ್ತಿದೆ. ಆಹಾರ ಧಾನ್ಯಗಳು ಮಾತ್ರವಲ್ಲದೆ ಸ್ಫೋಟಕಗಳು, ಗನ್ ಪೌಡರ್, ಬಂದೂಕು, ಮತ್ತಿತರೆ ಯುದ್ಧೋಪಕರಣ ವಸ್ತುಗಳು ಇಲ್ಲಿಂದಲೇ ಸರಬರಾಜು ಆಗುತ್ತಿದೆ. ಹೊನ್ನಾವರ, ಬಸ್ರೂರು, ಮಂಗಳೂರು ಮಲಬಾರಿಗಳ ಮುಖ್ಯ ಬಂದರುಗಳಾಗಿವೆ. ಅಲ್ಲಿ ಅವರು ಬಿರುಸಿನಿಂದ ವ್ಯಾಪಾರ ನಡೆಸುತ್ತಿದ್ದಾರೆ. ಇವರೊಂದಿಗೆ ಕೆಲವು ಕಳ್ಳರೂ ಸೇರಿದ್ದಾರೆ. ಅವರುಗಳಲ್ಲಿ ಕಡಲ್ಗಳ್ಳರೂ, ದರೋಡೆಕೋರರೂ ಇದ್ದು ಹಡಗುಗಳಿಂದ ದರೋಡೆ ನಡೆಸಿದ ವಸ್ತುಗಳನ್ನು ಈ ಬಂದರುಗಳಲ್ಲಿ ಸಂಗ್ರಹಿಸಿ ಇಡುತ್ತಿದ್ದಾರೆ. ಇವೆಲ್ಲವುಗಳ ಫಲಿತಾಂಶವೆಂದರೆ ಬಹಳಷ್ಟು ದೊಡ್ಡ ಪ್ರಮಾಣದ ನಷ್ಟ ಭಾರತಕ್ಕೆ ಆಗುತ್ತಿದೆ. ಮಲಬಾರಿಗಳು ಪೋರ್ಚುಗಿಸರ ಪ್ರಮುಖ ಶತ್ರುಗಳಾಗಿದ್ದು ಅಲ್ಲಿ ಪ್ರಾರಂಭದಿಂದಲೇ ನಿರಂತರ ಸಂಘರ್ಷ ನಡೆಯುತ್ತಾ ಇದೆ. ಮಲಬಾರಿಗೆ ಕೆನರಾ ಪ್ರಾಂತ್ಯದ ಈ ಬಂದರುಗಳು ಕೈತಪ್ಪಿದಲ್ಲಿ ಅವರ ವಾಣಿಜ್ಯ ವ್ಯವಹಾರಕ್ಕೆ ಧಕ್ಕೆ ಹಾಗೂ ಆಹಾರ ವಸ್ತುಗಳ ಕೊರತೆ ಅನುಭವಿಸಿ ತೊಂದರೆಗೆ ಒಳಗಾಗುತ್ತಾರೆ. ಅವರು ಮಕ್ಕಾ ಮತ್ತು ಭಾರತದ ಮತ್ತಿತರೆ ಪ್ರದೇಶಗಳಲ್ಲಿ ನಡೆಸುತ್ತಿದ್ದ ವಾಣಿಜ್ಯ ವ್ಯವಹಾರಕ್ಕೆ ಧಕ್ಕೆ ಒದಗುತ್ತದೆ(ಶಾಸ್ತ್ರಿ ೨೦೦೦:೯೫).

ಎಂದು ವಿಸ್ತೃತವಾಗಿ ಈ ಮೂರು ಬಂದರುಗಳ ಮಹತ್ವವನ್ನು ವಿವರಿಸಲಾಗಿದೆ.

ಇಷ್ಟೊಂದು ಆಯಕಟ್ಟಿನ ಕೆನರಾದ ಬಂದರುಗಳ ಮಹತ್ವವನ್ನು ಸರಿಯಾಗಿಯೇ ಅಂದಾಜಿಸಿರುವ ಪೋರ್ಚುಗೀಸ್ ಪ್ರಭುತ್ವ ಕರಾರುವಕ್ಕಾಗಿ ಎರಡು ಬಂದರು ನಗರಗಳಲ್ಲಿ ಕೋಟೆ ನಿರ್ಮಿಸಿ ಪೂರ್ಣ ಪ್ರಮಾಣದ ಸಾರ್ವಭೌಮ ಅಧಿಕಾರವನ್ನು ಚಲಾಯಿಸಿತ್ತು.

ಬಸ್ರೂರು ಕೂಡಾ ಪೋರ್ಚುಗೀಸರಿಗೆ ಅಲ್ಬುಕರ್ಕನ ದಿನಗಳಿಂದಲೇ ಗೊತ್ತಿತ್ತು. ಇಲ್ಲಿಯ ಜನರ ಆಡಳಿತ ವ್ಯವಸ್ಥೆಯೊಂದಿಗೆ ಶಾಂತಿಯುತ ವಾಣಿಜ್ಯಾತ್ಮಕ ವ್ಯವಹಾರಗಳನ್ನು ಪ್ರಾರಂಭದಿಂದಲೇ ನಡೆಸುತ್ತಾ

ಬಂದರು. ಆದರೆ ವೈಸ್‌ರಾಯ್ ಲೂಯಿಸ್ ಡಿ' ಅಟ್ಯಾಡೆ ಈ ಪ್ರದೇಶವನ್ನು ವಶಪಡಿಸಿಕೊಳ್ಳಬೇಕೆಂಬ ತೀರ್ಮಾನದ ಪ್ರಕಾರ ಬಸ್ರೂರಿನ ಮೇಲೆ ದಾಳಿ ನಡೆಸಿದನು. ಅಲ್ಲಿ ಹರಿಯುವ ನದಿಯ ದಕ್ಷಿಣ ಭಾಗದ ದಡದ ಬಳಿ ಇರುವ ಗುಡ್ಡದ ಮೇಲೆ ೧/೪ ಲೀಗ್ ದೂರದಲ್ಲಿ ಕೋಟೆಯನ್ನು ನಿರ್ಮಿಸಲಾಗಿತ್ತು. ಇದಕ್ಕೊಂದು ಕಾವಲು ಗೋಪುರವಲ್ಲದೆ ಸಣ್ಣ ಸೈನಿಕ ತುಕಡಿಯು ಕಾವಲು ಕಾಯುತ್ತಿತ್ತು. ಈ ಪ್ರದೇಶದ ಆಡಳಿತವು ಸ್ಥಳೀಯ ವ್ಯಾಪಾರಿ ವರ್ಗವಾಗಿರುವ ಶೆಟ್ಟಿಗಳ ಕೈಯಲ್ಲಿ ಇತ್ತು. ಹೆಚ್ಚು ಕಡಿಮೆ ನಗರದ ಆಡಳಿತವು ಒಂದು ರೀತಿಯ ಗಣತಂತ್ರವೆನ್ನುವ ರೂಪದಲ್ಲಿ ಆಳ್ವಿಕೆಯನ್ನು ಹೊಂದಿತ್ತು.[೬] ಇಲ್ಲಿಯ ಆಡಳಿತಾಧಿಕಾರಿಗಳು ವಿಜಯನಗರದ ಸಾಮ್ರಾಜ್ಯಕ್ಕೆ ಕಪ್ಪಕಾಣಿಕೆಯನ್ನು ಸಲ್ಲಿಸಿ ಅವರ ಅಧೀನದಲ್ಲಿ ಇದ್ದರು.

ಪೋರ್ಚುಗೀಸ್ ಸೈನ್ಯದ ತುಕಡಿಯ ಕಮಾಂಡರ್ ಆಗಿರುವ ಲೂಯಿಸ್ ಮೇನ್ಸೋ ಡಿ'ಸಿಲ್ವಾ'ನು ಬಸ್ರೂರು ಕೋಟೆಯ ಕಡೆಯಿಂದ ಬರುತ್ತಿದ್ದ ಫಿರಂಗಿಗಳ ಮಧ್ಯೆಯೂ ಧೈರ್ಯದಿಂದ ಮುನ್ನುಗ್ಗಿದನು. ಕೋಟೆಯ ಒಳಗೆ ತಲುಪುತ್ತಿದ್ದಂತೆಯೇ ಅದರ ರಕ್ಷಣೆಯನ್ನು ಹೊತ್ತಿದ್ದ ಸೈನಿಕರು ಪಲಾಯನಗೈದರು. ಶತ್ರು ಸೈನ್ಯ ಪಲಾಯನಗೈದ ವಿಷಯವನ್ನು ವೈಸ್‌ರಾಯ್‌ಗೆ ತಿಳಿಸಿದನು. ಆತ ಸಂತೋಷದಲ್ಲಿ ನಿರತರಾದ ಸೈನಿಕರಲ್ಲಿಗೆ ಬಂದು ಸೇರಿದನು. ಅದೇ ಸಮಯದಲ್ಲಿ ವೈಸ್‌ರಾಯ್‌ರವರ ಸಂಬಂಧಿ ಭಾವನಾದ ಆಂಟೋನಿಯಾ ಭೋಥೆಲೋರವರನ್ನು ಹೊಸದಾಗಿ ಜಯಿಸಲಾದ ಬಸ್ರೂರು ಕೋಟೆಯ ಕ್ಯಾಪ್ಟನ್‌ನನ್ನಾಗಿ ನೇಮಿಸಿದನು. ಕೋಟೆಯ ರಕ್ಷಣೆಗೆ ೩೦೦ ಜನ ಸೈನಿಕರನ್ನು ನಿಯೋಜಿಸಿದನು. ಕೋಟೆಯನ್ನು ಸುಭದ್ರಗೊಳಿಸುವ ಉದ್ದೇಶದಿಂದ ವೈಸ್‌ರಾಯ್ ತನ್ನೊಂದಿಗೆ ಕರೆದುಕೊಂಡು ತಂದಿರುವ ಕೆಲಸಗಾರರನ್ನು ನಿಯೋಜಿಸಿ ಈ ಕೋಟೆಯನ್ನು ಸುಭದ್ರತೆಯ ತಾಣವನ್ನಾಗಿ ಮಾಡಲು ಆದೇಶಿಸಿದನು(ಶಾಸ್ತ್ರಿ ೨೦೦೦:೮೯).

ಆದರೆ ಆ್ಯಂಟೋನಿಯಾ ಪಿಂಟೋ ಪೆರಿಯೋನ ದಾಖಲೆಗಳ ಪ್ರಕಾರ ವೈಸ್‌ರಾಯ್ ಅಟ್ಯಾಡೆ ಮಸ್ಕರೇನಸ್, ಫ್ರಾನ್ಸಿಸ್ಕೋರವರನ್ನು ಬಸ್ರೂರಿಗೆ ಮೊದಲೇ ಕಳುಹಿಸಿ ಅಲ್ಲಿಯ ಆಡಳಿತದೊಂದಿಗೆ ಮಾತುಕತೆ ನಡೆಸಿ ಪೋರ್ಚುಗೀಸರ ವ್ಯಾಪಾರ ವ್ಯವಹಾರ ನಡೆಸಲು ಅನುಕೂಲವಾಗುವ ಹಿನ್ನೆಲೆಯಲ್ಲಿ ಕೋಟೆ ಕಟ್ಟಲು ಅವಕಾಶ ನೀಡಬೇಕೆಂದು ಕೇಳಿಕೊಂಡಿದ್ದನೆಂದು ದಾಖಲೆಗಳು ತಿಳಿಸುತ್ತವೆ. ಆದರೆ ಬಸ್ರೂರಿನ ಆಡಳಿತದೊಂದಿಗೆ ತೋಳ್ಹಾರರು ಮತ್ತು ಗಂಗೊಳ್ಳಿ ಸಾಮಂತರುಗಳ ಮಧ್ಯೆ ಪರಸ್ಪರ ಸಹಕಾರದ ಒಪ್ಪಂದವಿದ್ದು ಗೇರುಸೊಪ್ಪೆಯ ರಾಣಿಯ ಪ್ರಭಾವ ಕೂಡಾ ಇದ್ದುದರಿಂದ ಪೋರ್ಚುಗೀಸರ ಬೇಡಿಕೆಯನ್ನು ತಿರಸ್ಕರಿಸಿದರು ಎಂದು ಹೇಳಲಾಗಿದೆ.

ಆಸ್ಥಾನ ಬರಹಗಾರ ಫರೋಯ ಇ ಸೋಜಾನ್ ಪ್ರಕಾರ ತೋಳ್ಹಾರರು ರಾಜನು ಪೋರ್ಚುಗೀಸರನ್ನು ನಗಣ್ಯ ಮಾಡಿದುದಕ್ಕೆ ಪ್ರತೀಕಾರವಾಗಿ ರಾತ್ರೋರಾತ್ರಿ ಪೆಡ್ರೋ ಸಿಲ್ವಾ ಡ ಮೆನೇಜಸ್‌ರವರ ಕ್ಯಾಪ್ಟನ್‌ಗಿರಿಯಲ್ಲಿ ೧೩ ಹಡಗುಗಳಲ್ಲಿ ಸೈನ್ಯವನ್ನು ಬಸ್ರೂರಿಗೆ ಕಳುಹಿಸಿಕೊಡುತ್ತಾನೆ. ಆ ಸೈನ್ಯ ರಾತ್ರೋರಾತ್ರಿ ಬಸ್ರೂರಿನ ಮೇಲೆ ದಾಳಿ ನಡೆಸಿ ೨೦೦ ಜನ ಸೈನಿಕರನ್ನು ಸೆರೆ ಹಿಡಿದು ಕೊಂದು ಹಾಕಿತು. ಅದಾದ ನಂತರ ಕೋಟೆಯನ್ನು ಅವರ ವಶಕ್ಕೆ ಒಪ್ಪಿಸಿದರು. ಆದರೆ ಗಂಗೊಳ್ಳಿ ಮತ್ತು ತೋಳ್ಹಾರ ಸಾಮಂತರು ೧೫೦೦ ಜನರನ್ನು ಸಂಗ್ರಹಿಸಿ ಪೋರ್ಚುಗೀಸರ ಮೇಲೆ ಮರುದಾಳಿ ನಡೆಸಿದರು. ಮರುದಿನ ೫೦೦೦ ಜನ ಒಗ್ಗಟ್ಟಾಗಿ ಪೋರ್ಚುಗೀಸರ ಎದುರು ಕಾದಾಟ ನಡೆಸಿದರು ಎಂದು ಹೇಳಲಾಗಿದೆ.

ಇನ್ನೊಂದು ದಾಖಲೆಯ ಪ್ರಕಾರ ಹೊನ್ನಾವರದಿಂದ ಗೇರುಸೊಪ್ಪೆಯ ರಾಣಿಯೊಂದಿಗೆ ಕಪ್ಪ ಕಾಣಿಕೆ ಬಾಕಿಯಾದುದರ ಬಗ್ಗೆ ಮತ್ತು ಯುದ್ಧದ ಖರ್ಚನ್ನು ಪಾವತಿಸುವರೇ ನಿಗದಿತ ಮೊತ್ತ ಪಾವತಿಸಲು ಮಾತುಕತೆ ನಡೆಯುತ್ತಿತ್ತು. ಇದಕ್ಕೆ ಗೇರುಸೊಪ್ಪೆಯ ಕಡೆಯಿಂದ ನಿರ್ದಿಷ್ಟ ಪ್ರಸ್ತಾಪ ನೀಡಲು ವಿಳಂಬಿಸುತ್ತಿದ್ದರು. ಆಗ ವೈಸ್‌ರಾಯ್ ಅಟ್ಯಾಡೆ ತುರ್ತಾಗಿ ಅಲ್ಲಿಂದ ಬಸ್ರೂರಿಗೆ ಹೊರಟು ೧೧೦೦೦ ಸೈನಿಕರೊಂದಿಗೆ ಯುದ್ಧರಂಗಕ್ಕೆ ಇಳಿದನು. ಯುದ್ಧದಲ್ಲಿ ಪೋರ್ಚುಗೀಸರನ್ನು ಸೋಲಿಸಲಾಗದ ಬಸ್ರೂರಿನ ಆಡಳಿತ ಕೊನೆಗೆ ಒಂದು ಒಪ್ಪಂದಕ್ಕೆ ಬಂದಿತು ಎಂದು ಹೇಳಲಾಗಿದೆ. ಆಗ ಮಾಡಲಾದ ಒಪ್ಪಂದದ ಷರತ್ತುಗಳು ಕೆಳಕಂಡಂತೆ ಇವೆ.

ಅ. ಪೋರ್ಚುಗೀಸರಿಗೆ ಬಸ್ರೂರಿನಲ್ಲಿ ಯೋಗ್ಯವಾದ ಸ್ಥಳವನ್ನು ಆಯ್ಕೆ ಮಾಡಿ ಕೋಟೆಯನ್ನು ಕಟ್ಟಲು ಅವಕಾಶ ಕಲ್ಪಿಸಿಕೊಡುವುದಕ್ಕೆ ಬದ್ಧತೆ ತೋರ್ಪಡಿಸುವುದು.

ಬ. ಪೋರ್ಚುಗೀಸರಿಗೆ ಕೋಟೆಯನ್ನು ಉಳಿಸಿ ರಕ್ಷಿಸಿಕೊಳ್ಳಲು ಅನುಕೂಲವಾಗುವರೇ ಕಪ್ಪ ಕಾಣಿಕೆಯ ರೂಪದಲ್ಲಿ ಪ್ರತೀ ವರ್ಷ ಕನಿಷ್ಟ ೫೦೦ ಚೀಲ ಅಕ್ಕಿಯನ್ನು ಬಸ್ರೂರಿನ ಆಡಳಿತ ಒದಗಿಸುವುದು.

ಕ. ಬಸ್ರೂರಿನ ಪ್ರಾಂತ್ಯದಲ್ಲಿ ಉತ್ಪಾದಿಸಲ್ಪಡುವ ಎಲ್ಲಾ ಕರಿಮೆಣಸನ್ನು ಪೋರ್ಚುಗೀಸರಿಗೆ ನೀಡುವುದು.

ಇ. ಒಪ್ಪಂದದಲ್ಲಿ ಭಾಗಿದಾರರು ಶತ್ರು ಮತ್ತು ಗೆಳೆಯರೊಂದಿಗೆ ಸಮಾನ ನೆಲೆಯಲ್ಲಿ ಕಾರ್ಯಾಚರಿಸುವುದು (ಶಾಸ್ತ್ರಿ ೨೦೦೦:೯೦).

ಈ ಎಲ್ಲಾ ಬೆಳವಣಿಗೆಗಳ ಸಮ್ಮುಖದಲ್ಲಿ ೧೫೭೦ರ ಮಾರ್ಚ್ ೩೦ ರಂದು ಬಸ್ರೂರಿನಲ್ಲಿ ಕೋಟೆ ಕಟ್ಟುವ ಕೆಲಸವನ್ನು ಪ್ರಾರಂಭಿಸಲಾಯಿತು. ಸ್ವತಃ ವೈಸ್‌ರಾಯ್‌ರವರೇ ೪೦ ದಿನಗಳ ಕಾಲ ಅಲ್ಲಿ ಇದ್ದು ಕೆಲಸದ ಮೇಲುಸ್ತುವಾರಿ ವಹಿಸಿದರು. ಒಟ್ಟಿನಲ್ಲಿ ಕೋಟೆ ನಿರ್ಮಾಣಗೊಂಡು ಕಾರ್ಯಾಚರಿಸಲು ಪ್ರಾರಂಭಿಸಿದ ನಂತರ ಗರಿಷ್ಠ ಪ್ರಮಾಣದ ಆದಾಯ ಪೋರ್ಚುಗಲ್‌ಗೆ ದೊರೆಯಿತು. ಅದೇ ರೀತಿ ಇಲ್ಲಿ ನೆಲೆನಿಂತು ಕಾರ್ಯಾಚರಿಸುತ್ತಿದ್ದ ಎಲ್ಲಾ ವಿದೇಶಿ ವ್ಯಾಪಾರಿಗಳು ನಿರ್ದಿಷ್ಟವಾಗಿ ಪೋರ್ಚುಗೀಸರನ್ನು ಹೊರತು ಪಡಿಸಿ ಉಳಿದವರ ಮೇಲೆ ನಿರ್ಬಂಧಗಳನ್ನು ಹೇರಿದರು.

ಬಸ್ರೂರಿನ ವ್ಯಾಪಾರಿ ವರ್ಗವು ಪೋರ್ಚುಗೀಸರ ವಾಣಿಜ್ಯ ಸಂಬಂಧದ ಶೋಷಣೆಯಿಂದ ಮುಕ್ತಿವಾಗಲು ಹಲವಾರು ಬಾರಿ ಪ್ರಯತ್ನಿಸಿತ್ತು. ಈ ಕುರಿತು ನಿರ್ದಿಷ್ಟವಾಗಿ ಎರಡು ಘಟನೆಗಳನ್ನು ಗಮನಿಸಬಹುದಾಗಿದೆ.

೧೫೪೩ರಲ್ಲಿ ಫ್ರಾನ್ಸಿಸ್‌ಕೋ ಮೆಲ್ಲೋ ಡಿ' ಸಾಂಫಿಯೋ ಬಸ್ರೂರಿನ ಕ್ಯಾಪ್ಟನ್ ಆಗಿರುವ ಸಂದರ್ಭದಲ್ಲಿ ಸ್ಥಳೀಯ ವ್ಯಾಪಾರ ವ್ಯವಹಾರವನ್ನು ನಿಯಂತ್ರಿಸಿ ಪೋರ್ಚುಗೀಸರ ಆದಾಯದ ಪ್ರಮಾಣವನ್ನು ಹೆಚ್ಚಿಸುವ ಬಗ್ಗೆ ಹೆಚ್ಚಿನ ಗಮನ ನೀಡಿದನು. ಇವರ ಧೋರಣೆಯಿಂದ ಸ್ಥಳೀಯ ವ್ಯಾಪಾರಿಗಳ ವಾಣಿಜ್ಯ ವ್ಯವಹಾರಕ್ಕೆ ನಷ್ಟ ಸಂಭವಿಸುತ್ತಿರುವುದರಿಂದ ಅವರುಗಳು ಪೋರ್ಚುಗೀಸರ ವಿರುದ್ಧ ಒಂದು ಪಿತೂರಿ ಯೋಜನೆಯನ್ನು ರೂಪಿಸಿದರು. ಆ ಪಿತೂರಿಯ ಪ್ರಕಾರ ಬಸ್ರೂರಿನ ಕೋಟೆಯನ್ನು ಕೈವಶ ಪಡಿಸಿಕೊಳ್ಳಲು ಉದ್ದೇಶಿಸಿದ್ದರು. ಈ ವ್ಯಾಪಾರಿ ಸಮುದಾಯ ಸ್ಥಳೀಯ ನಂಬಿಗಸ್ಥ ಕ್ರೈಸ್ತ ಸಮುದಾಯದ ಕೆಲ ವ್ಯಕ್ತಿಗಳಿಗೆ ಸಾಕಷ್ಟು

ಲಂಚ ಮತ್ತು ಉಡುಗೊರೆ ನೀಡಿ ಕೋಟೆ ವಶಪಡಿಸಿಕೊಳ್ಳಲು ಸಹಕರಿಸುವಂತೆ ಒಂದು ಒಮ್ಮತಕ್ಕೆ ಬರಲಾಯಿತು. ಈ ಪ್ರಕ್ರಿಯೆಯಲ್ಲಿ ಕೋಟೆ ಕಾಯುವ ದ್ವಾರಪಾಲಕರನ್ನು ಪಿತೂರಿಗಾರರು ಮನವೊಲಿಸಿದರು. ಆ ಸಮಯ ಪವಿತ್ರ ಶುಕ್ರವಾರದ (ಗುಡ್ ಫ್ರೈಡೆ) ಕಾಲವಾಗಿತ್ತು. ಆ ದಿನದಲ್ಲಿ ಪೋರ್ಚುಗೀಸ್ ಸೈನಿಕರು ದೇವತಾ ಕಾರ್ಯಕ್ರಮಕ್ಕಾಗಿ ಚರ್ಚಿನ ಮೆರವಣಿಗೆಯಲ್ಲಿ ಜಮಾಯಿಸುವುದು ಪದ್ಧತಿಯಾಗಿತ್ತು. ಈ ಸಂದರ್ಭದಲ್ಲಿ ಬಸ್ರೂರಿನ ವ್ಯಾಪಾರಿ ಸಮುದಾಯದ ಸೈನಿಕರಲ್ಲಿ ಕೆಲವರು ಕೋಟೆಯ ಒಳಗಡೆ ಪ್ರವೇಶಗೈದು ಅಲ್ಲಿಯ ಆಂತರಿಕ ವ್ಯವಸ್ಥೆಯ ಪೂರ್ಣ ಹತೋಟಿ ಪಡೆಯುವುದು. ಹೊರಗಿನಲ್ಲಿರುವ ಸೈನಿಕರು ದೇವತಾ ಕಾರ್ಯದಲ್ಲಿ ನಿರತರಾದ ಸೈನಿಕರ ಮೇಲೆ ಹಾಗೂ ಅವರ ಮೆರವಣಿಗೆಯ ಮೇಲೆ ದಾಳಿ ನಡೆಸುವುದೆಂದು ಯೋಜನೆ ರೂಪಿಸಲಾಗಿತ್ತು. ಆದರೆ ನಿರ್ಧಾರಿತ ದಿನಾಂಕದಂದು ಪಿತೂರಿಗಾರರ ಲೆಕ್ಕಾಚಾರ ತಪ್ಪಿತ್ತು. ಅಂದು ಕ್ಯಾಪ್ಟನ್ ಗಿಲಿಯಾನೀಸ್ ಮಸ್ಕರೇನಸ್ ಒಂದು ದೊಡ್ಡ ಸೈನ್ಯದೊಂದಿಗೆ ಬಂದಿಳಿದನು. ಆ ದಿನದ ಹಗಲು ಮತ್ತು ರಾತ್ರಿಯೂ ಅಲ್ಲೇ ಇದ್ದು ಮರುದಿನ ಆತ ಗೋವಾಕ್ಕೆ ತೆರಳಿದನು. ತನ್ಮೂಲಕ ದಾಳಿಕೋರರು ಕೋಟೆ ವಶಪಡಿಸುವ ಪಿತೂರಿ ಸಂಪೂರ್ಣವಾಗಿ ವಿಫಲವಾಯಿತು.

ಕೋಟೆ ವಶಪಡಿಸಿಕೊಳ್ಳುವ ಸುವರ್ಣಾವಕಾಶವನ್ನು ಕಳೆದುಕೊಂಡ ಸ್ಥಳೀಯ ವ್ಯಾಪಾರಿ ಸಮುದಾಯ ಮತ್ತೊಂದು ಪ್ರಯತ್ನಕ್ಕೆ ಮುಂದಡಿಯಿಟ್ಟರು. ಈ ಬಾರಿ ಮತ್ತೆ ಈ ಮೊದಲಿನ ಕ್ರೈಸ್ತ ಮತೀಯ ವ್ಯಕ್ತಿಗಳನ್ನು ಸಂಪರ್ಕಿಸಿದರು. ಕೋಟೆಯ ದ್ವಾರಪಾಲಕನಿಗೆ ಲಂಚ ನೀಡಿ ತಮ್ಮ ಪರ ಒಲಿಸಿಕೊಂಡರು. ಆ ಪಿತೂರಿಯ ಪ್ರಕಾರ ಕೋಟೆಗೆ ಏಣಿಯ ಮೂಲಕ ೫೦ ಮಂದಿ ಸೈನಿಕರು ರಾತ್ರಿ ಸಮಯದಲ್ಲಿ ಒಳ ಪ್ರವೇಶಿಸಿ ವಿಶ್ರಾಂತಿಯಲ್ಲಿರುವ ಸೈನಿಕರ ಮೇಲೆ ಗುಂಡಿನ ಮಳೆಗರೆಯುವುದು ಒಂದೆಡೆಯಾದರೆ, ಮತ್ತೊಂದೆಡೆಯಲ್ಲಿ ದ್ವಾರದ ಬಾಗಿಲನ್ನು ತೆರೆಯುವ ಮೂಲಕ ಸುಮಾರು ೩೦೦೦ ಸೈನಿಕರು ಎದುರಿನ ಭಾಗದಿಂದ ಪ್ರವೇಶಗೈದು ಪೋರ್ಚುಗೀಸ್ ಸೈನಿಕರ ಮೇಲೆ ಎರಗಿ ಅವರನ್ನು ಕೊಲ್ಲುವುದು. ಆ ಮೂಲಕ ಕೋಟೆಯನ್ನು ಕೈವಶ ಪಡಿಸುವುದಾಗಿ ಪಿತೂರಿ ಯೋಜನೆಯನ್ನು ನಿರ್ಧರಿಸಲಾಗಿತ್ತು. ಆದರೆ ನಿರ್ಧಾರಿತ ದಿನಾಂಕದಂದು ಕೋಟೆಯ ಬಾಗಿಲಿನ ಕೀ ತೆರೆಯಲು ಅಸಾಧ್ಯವಾಯಿತು. ಇದು ಮತ್ತೆ ವ್ಯಾಪಾರಿ ಸಮುದಾಯಕ್ಕೆ ನಿರಾಶೆ ಆಯಿತು. ಅದೇ ಸಮಯದಲ್ಲಿ ಪಿತೂರಿ ನಡೆಯುವ ಸಾಧ್ಯತೆಗಳನ್ನು ಅಂದಾಜಿಸಿದ ಕ್ಯಾಪ್ಟನ್‌ಗೆ ಗುಪ್ತ ಮಾಹಿತಿಯ ಮೂಲಕ ವಿವರಗಳು ತಿಳಿದು ಬಂತು. ಕೂಡಲೆ ಕ್ಯಾಪ್ಟನ್ ಪಿತೂರಿಗಾರರನ್ನು ಪತ್ತೆ ಹಚ್ಚಿ ಅವರನ್ನು ಸಾರ್ವಜನಿಕವಾಗಿ ನೇಣಿಗೆ ಹಾಕಿದನು. ಆ ಪ್ರಕಾರ ಎರಡನೇ ಪಿತೂರಿ ಯತ್ನವೂ ಕೂಡಾ ವಿಫಲವಾಯಿತು (ದನ್‌ವೀರ್ (೧) ೧೮೬೪:೨೫೮).

ಈ ಘಟನೆಗಳು ಬಸ್ರೂರಿನ ವ್ಯಾಪಾರ ಸಮುದಾಯದ ಸಮರಧೀರ ಸಂಘರ್ಷದ ಪ್ರತಿರೋಧದ ಘಟನೆಯಾಗಿದೆ. ಬಸ್ರೂರು ಸದಾ ಲವಲವಿಕೆಯಿಂದ ಇರುವ ಒಂದು ಪ್ರಮುಖ ವ್ಯಾಪಾರ ಕೇಂದ್ರ ಎಂದು ಎ ಆರ್ ಡಿಸ್ನಿಯವರು ಹೇಳುತ್ತಾರೆ. ಇಲ್ಲಿಂದ ಅಕ್ಕಿ, ಬಟ್ಟೆಗಳು, ದಾಲ್ಚಿನಿ ಮತ್ತು ಕಬ್ಬಿಣ ರಫ್ತು ಆಗುತ್ತಿತ್ತು. ಇದಕ್ಕೆ ಪರ್ಯಾಯವಾಗಿ ಮುತ್ತು, ಹವಳಗಳು ಇತರೆ ಬೆಲೆಬಾಳುವ ಆಭರಣದ ಕಲ್ಲುಗಳು, ಕುದುರೆ ಆಮದಾಗುತ್ತಿತ್ತು (ಡಿಸ್ನಿ ೨೦೧೦:೫).

ಪೋರ್ಚುಗೀಸರು ಗಂಗೊಳ್ಳಿಯನ್ನು "ಕಾಂಬೋಲಿಯಂ" ಎಂದು ಕರೆಯುತ್ತಿದ್ದರು. ಕೆನರಾ ಪ್ರಾಂತ್ಯದಲ್ಲಿ ಅಥವಾ ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರು ಕಟ್ಟಿದ ಕೊನೆಯ ಕೋಟೆ ಇದಾಗಿತ್ತು.

ಬಹಳ ಹಿಂದಿನಿಂದಲೂ ಗಂಗೊಳ್ಳಿಯನ್ನು ವಶಪಡಿಸಿಕೊಳ್ಳಬೇಕೆಂಬ ವಿಷಯ ಪೋರ್ಚುಗೀಸ್ ಗೋವಾ ಕೌನ್ಸಿಲ್‌ನಲ್ಲಿ ಚರ್ಚೆಯಾಗುತ್ತಾ ಬಂದಿದ್ದಿತ್ತು. ಬಹಳ ನಿರ್ದಿಷ್ಟವಾಗಿ ವೈಸ್‌ರಾಯ್ ಕೌಂಟ್‌ಲಿನ್ ಹೇರವರ ಅಧಿಕಾರದ ಸಂದರ್ಭದಲ್ಲಿ ನಡೆದ ಗೋವಾ ಕೌನ್ಸಿಲ್‌ನ ಸಭೆ ೧೬೨೯ರ ನವೆಂಬರ್ ೨೨ರಂದು ನಡೆಯಿತು. ಆ ಸಭೆಯ ನಿರ್ಣಯದಂತೆ ಗಂಗೊಳ್ಳಿಯನ್ನು ವಶಪಡಿಸಿ ಕೋಟೆ ಕಟ್ಟಲು ತೀರ್ಮಾನವಾಗಿತ್ತು. ಆದರೆ ಇಕ್ಕೇರಿಯ ರಾಜ ವೆಂಕಟಪ್ಪ ನಾಯಕನು ಇದನ್ನು ಸದಾ ವಿರೋಧಿಸುತ್ತಿದ್ದನು. ಈ ಮೊದಲು ರಾಜ ವೆಂಕಟಪ್ಪ ನಾಯಕನು ಸ್ಥಳೀಯ ಸಾಮಂತರೆಲ್ಲರನ್ನು ಸದೆ ಬಡಿದು ಗಂಗೊಳ್ಳಿಯನ್ನು ತನ್ನ ಸ್ವಾಧೀನದಲ್ಲಿ ಇರಿಸಿಕೊಂಡಿದ್ದನು. ೧೬೨೯ರಲ್ಲಿ ಆತ ಮರಣವನ್ನಪ್ಪುತ್ತಾನೆ. ಈ ಅವಕಾಶವನ್ನು ಉಪಯೋಗಿಸಿ ಎಲ್ಲಾ ಸ್ಥಳೀಯ ಸಾಮಂತರುಗಳು ದಂಗೆ ಎದ್ದು ಪೋರ್ಚುಗೀಸರಿಗೆ ಗಂಗೊಳ್ಳಿಯನ್ನು ವಶಪಡಿಸಿಕೊಳ್ಳಲು ಸಹಕರಿಸಿದರು. ಪರಿಣಾಮವಾಗಿ ಕೋಟೆ ಕಟ್ಟುವ ಕಾಮಗಾರಿ ಪ್ರಾರಂಭವಾಯಿತು. ಇದು ೧೬೩೦ರಲ್ಲಿ ಪ್ರಾರಂಭಿಸಿ ೧೬೩೩ರಲ್ಲಿ ಮುಕ್ತಾಯವಾಯಿತು. ನದಿ ಮತ್ತು ಸಮುದ್ರ ಪರಸ್ಪರ ಸಂಧಿಸುವ ಸ್ಥಳದಲ್ಲಿ ನಿರ್ಮಾಣವಾಗುತ್ತಿರುವ ದ್ವೀಪದಲ್ಲಿ ನಿರ್ಮಾಣ ಕಾಮಗಾರಿ ಪ್ರಾರಂಭವಾಯಿತು. ಇಲ್ಲಿ ಕೋಟೆಕಟ್ಟುವ ಪ್ರಕ್ರಿಯೆಯಿಂದ ಪೋರ್ಚುಗೀಸರಿಗೆ ಆದ ಲಾಭವೆಂದರೆ, ಈ ಪ್ರದೇಶದಲ್ಲಿ ವರ್ಷಕ್ಕೆ ೩೦೦೦ ಚೀಲ ಅಕ್ಕಿ ಉತ್ಪಾದನೆಯಾಗುತ್ತಿದ್ದು ಇದು ಇವರ ನಿಯಂತ್ರಣಕ್ಕೆ ಬಂತು. ಇಲ್ಲಿ ಆಗುತ್ತಿರುವ ಅಕ್ಕಿಯ ಉತ್ಪಾದನೆಯಿಂದ ಪೋರ್ಚುಗೀಸರು ಹೊಂದಿರುವ ಕರಾವಳಿ ಕರ್ನಾಟಕದ ಎಲ್ಲಾ ಕೋಟೆಗಳ ಆಹಾರದ ವೆಚ್ಚವನ್ನು ನಿಭಾಯಿಸಲು ಸಾಧ್ಯವಿತ್ತು.

**ಕೆಳದಿ ನಾಯಕರ ಉತ್ಕರ್ಷ– ಪೋರ್ಚುಗೀಸ್ ದರ ಸಮರ ಮತ್ತು ಅವನತಿಯ ಪ್ರಾರಂಭದ ಹಂತ**

ಇಕ್ಕೇರಿ ಸಂಸ್ಥಾನ ಅಥವಾ ಕೆಳದಿ ಸಂಸ್ಥಾನದ ಆಡಳಿತವು ೧೪೯೯ ರಲ್ಲಿ ಚೌಡಗೌಡನ ಮುಖಾಂತರ ಅಸ್ತಿತ್ವಕ್ಕೆ ಬಂತು. ಈ ರಾಜ ಮನೆತನವು ಕರಾವಳಿ ಕರ್ನಾಟಕದಲ್ಲಿ ಅಥವಾ ಕೆನರಾ ಪ್ರಾಂತ್ಯದಲ್ಲಿ ಸುಮಾರು ೨೬೦ ವರ್ಷಗಳ ಅವಧಿಯವರೆಗೆ ಸಾರ್ವಭೌಮ ರಾಜ್ಯಭಾರ ನಡೆಸಿದೆ. ರಾಜಕೀಯವಾಗಿ ಮತ್ತು ವಾಣಿಜ್ಯಾತ್ಮಕವಾಗಿ ಪೋರ್ಚುಗೀಸರನ್ನು ಇಕ್ಕಟ್ಟಿಗೆ ಸಿಲುಕಿಸಿ ಪೋರ್ಚುಗೀಸರ ಆಡಳಿತ ವಿಸ್ತರಣೆಯ ಕನಸನ್ನು ಭಂಗಗೊಳಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಆಡಳಿತದ ಪ್ರಾರಂಭದ ೧೪ ವರ್ಷಗಳು ಅಂದರೆ ೧೫೧೩ ರ ವರೆಗೆ ಈ ಮನೆತನವು ವಿಜಯನಗರದ ಸಾಮಂತರಾಗಿ ರಾಜ್ಯಭಾರ ನಡೆಸಿದರು. ಆನಂತರ ಸ್ವತಂತ್ರ ಸಾರ್ವಭೌಮರಾಗಿ ಬೆಳೆದು ಬಂದು ರಾಜ್ಯಭಾರ ಮಾಡಿದರು. ಇಕ್ಕೇರಿಯ ಆರನೆಯ ರಾಜನಾದ ವೆಂಕಟಪ್ಪ ನಾಯಕನ ಆಳ್ವಿಕೆಯ ಸಂದರ್ಭದಲ್ಲಿ ಬಿಜಾಪುರದ ಆದಿಲ್‌ಷಾಹಿಗಳ ಪ್ರಭುತ್ವಕ್ಕೆ ಈತ ಕಪ್ಪಕಾಣಿಕೆ ನೀಡುತ್ತಾನೆ.

ಪೋರ್ಚುಗಲ್ ದೊರೆ ೧೫೮೯ರ ನವೆಂಬರ್ ೨೧ ರಂದು ವೈಸ್‌ರಾಯ್‌ಗೆ ಬರೆದಿರುವ ಪತ್ರದಲ್ಲಿ ವೆಂಕಟಪ್ಪನ ಆಳ್ವಿಕೆಯ ಅಪಾಯಕಾರಿ ಸನ್ನಿವೇಶ ಮತ್ತು ಆತಂಕಗಳ ಬಗ್ಗೆ ತಿಳಿಸಲಾಗಿದ್ದು ಸ್ಥಳೀಯ ಸಾಮಂತರನ್ನು ಹತೋಟಿಗೆ ತಂದು ಗೇರುಸೊಪ್ಪೆ ಮತ್ತು ಭಟ್ಕಳದ ಆಡಳಿತದ ಸಾಮಂತ ರಾಣಿಯು ಕಪ್ಪಕಾಣಿಕೆಯನ್ನು ನಿಯಮಿತವಾಗಿ ಪೋರ್ಚುಗೀಸರಿಗೆ ಸಲ್ಲಿಸದೆ ವೆಂಕಟಪ್ಪ ನಾಯಕನಿಗೆ ಸಲ್ಲಿಸುತ್ತಿರುವುದನ್ನು ಚರ್ಚಿಸಲಾಗಿತ್ತು. ವೆಂಕಟಪ್ಪ ನಾಯಕನು ಕರಾವಳಿ ಕರ್ನಾಟಕದ ಎಲ್ಲಾ ಸಾಮಂತ ರಾಜರನ್ನು ಬಗ್ಗು

ಬಡಿದು ಅಲ್ಲಿಯ ಅಧಿಕಾರ ವ್ಯಾಪಾರ ವ್ಯವಹಾರದ ಮೇಲೆ ಹತೋಟಿ ಸಾಧಿಸಿರುವುದರಿಂದ ಪೋರ್ಚುಗೀಸ್ ರಾಜ ಪ್ರಭುತ್ವದ ವ್ಯಾಪಾರ ವ್ಯವಹಾರಕ್ಕೆ ತಡೆಯಾಗಿರುವುದನ್ನು ಆ ಪತ್ರದಲ್ಲಿ ಚರ್ಚಿಸಲಾಗಿತ್ತು. ವೆಂಕಟಪ್ಪ ನಾಯಕನಿಂದ ಪೋರ್ಚುಗೀಸ್ ರಾಜ್ಯ ವ್ಯವಸ್ಥೆಗೆ ಗಂಭೀರ ಅಪಾಯ ಎದುರಾಗಲಿದ್ದು ಇದನ್ನು ಎದುರಿಸಲು ಸರ್ವರೀತಿಯಿಂದಲೂ ಶ್ರಮವಹಿಸಬೇಕೆಂದು ತಿಳಿಸಲಾಗಿತ್ತು (ಪಿಯರ್‌ಸನ್ ೨೦೦೪:೭೮).

ವೆಂಕಟಪ್ಪ ನಾಯಕನಿಗೂ ಗೇರುಸೊಪ್ಪೆಯ ರಾಣಿ ಬೈರಾ ದೇವಿಗೂ ೧೫೯೯ರಲ್ಲಿ ಯುದ್ಧ ನಡೆಯಿತು. ರಾಣಿ ಬೈರಾದೇವಿಯು ಪೋರ್ಚುಗೀಸರ ಮತ್ತು ಆದಿಲ್‌ಷಾಹಿ ದೊರೆಗಳ ಸಹಾಯ ಪಡೆದು ವೆಂಕಟಪ್ಪ ನಾಯಕನನ್ನು ಎದುರಿಸಿದಳು. ಪಿತ್ರೋ ಡೆಲ್ಲಾ ವಿಲ್ಲಾನ ಪ್ರಕಾರ ಬೈರಾದೇವಿಯನ್ನು ಕುತಂತ್ರದಿಂದ ಪಿತೂರಿ ನಡೆಸಿ ವೆಂಕಟಪ್ಪ ನಾಯಕನು ಆಕೆಯನ್ನು ಬಂಧಿಸಿ ಬಂಧಿಖಾನೆಯಲ್ಲಿ ಇಟ್ಟನು. ಅಕೆ ಬಂಧಿಖಾನೆಯಲ್ಲೇ ಸತ್ತಳು. ಒಂದು ದಾಖಲೆಯ ಪ್ರಕಾರ ೧೬೦೬ರಲ್ಲಿ ಇದು ನಡೆಯಿತು. ಈ ಯುದ್ಧವನ್ನು ಜಯಿಸಿದ ವೆಂಕಟಪ್ಪ ನಾಯಕನಿಗೆ ಮಿರ್ಜಾನದಿಂದ ಭಟ್ಕಳದವರೆಗಿನ ಪ್ರಾಂತ್ಯವು ನೇರವಾಗಿ ವೆಂಕಟಪ್ಪನ ಅಧೀನಕ್ಕೆ ಒಳಪಟ್ಟಿತ್ತು. ಈ ಪ್ರಾಂತ್ಯದಲ್ಲಿ ಈ ತನಕ ಕಪ್ಪಕಾಣಿಕೆ ಪಡೆಯುತ್ತಿದ್ದ ಬಿಜಾಪುರದ ಆದಿಲ್‌ಷಾಹಿಗೂ ಇಕ್ಕೇರಿಯ ವೆಂಕಟಪ್ಪ ನಾಯಕನಿಗೂ ದೀರ್ಘಕಾಲ ಸಂಘರ್ಷ ಬೆಳೆದು ಬಂತು. ಕೊನೆಗೂ ೧೬೧೬ರಲ್ಲಿ ವೆಂಕಟಪ್ಪ ನಾಯಕನು ಆದಿಲ್‌ಷಾಹಿಗೆ ಕಪ್ಪಕಾಣಿಕೆ ಕೊಡಲು ತೀರ್ಮಾನಿಸಿದನು. ಈ ಎಲ್ಲಾ ರಾಜಕೀಯ, ವಾಣಿಜ್ಯಾತ್ಮಕ ಬೆಳವಣಿಗೆಗಳ ಮಧ್ಯೆ ಪೋರ್ಚುಗೀಸರು ತಟಸ್ಥ ಧೋರಣೆ ತಳೆದರು. ಆದರೆ ನೇರವಾಗಿ ಯುದ್ಧದಲ್ಲಿ ಭಾಗವಹಿಸದಿದ್ದರೂ, ಪೋರ್ಚುಗೀಸರು ವ್ಯಾಪಾರದ ಸರಕುಗಳಾದ ಕರಿಮೆಣಸು, ಸಾಂಬಾರ ಪದಾರ್ಥಗಳು ಮತ್ತು ಆಹಾರ ಧಾನ್ಯಗಳಿಗಾಗಿ ವೆಂಕಟಪ್ಪ ನಾಯಕನೊಂದಿಗೆ ಮೈತ್ರಿಯನ್ನು ಬಯಸಿದರು. ಈ ನಿಟ್ಟಿನಲ್ಲಿ ಬಸ್ರೂರಿನ ಕೋಟೆಯ ಕ್ಯಾಪ್ಟನ್ ಲೂಯಿಸ್ ಡಿ' ಮೆಂಡೋನ್ಸಾ ವೆಂಕಟಪ್ಪ ನಾಯಕನನ್ನು ಸಂಪರ್ಕಿಸಿ "ಪೋರ್ಚುಗೀಸ್ ರಾಜನ ಪರವಾಗಿ ಯಾವುದೇ ರೀತಿಯ ಸಹಾಯ ಸಹಕಾರವನ್ನು ನೀಡಲು ಬದ್ಧರಿದ್ದೇವೆ" ಎಂದು ಘೋಷಿಸಿದನು. ಆ ಪ್ರಕಾರ ಕೆಳಕಂಡ ಒಪ್ಪಂದದ ಅಂಶಗಳ ಬಗ್ಗೆ ಪ್ರಸ್ತಾಪಿಸಲಾಯಿತು.

೧. ವೆಂಕಟಪ್ಪ ನಾಯಕ ಮತ್ತು ಆತನ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟ ಬಂದರುಗಳಲ್ಲಿ ಕಡಲ್ಗಳ್ಳರಿಗೆ ಸಹಾಯ ಸಹಕಾರ, ಮತ್ತು ಆಶ್ರಯ ನೀಡದಿರುವುದು.

೨. ಪೋರ್ಚುಗೀಸರ ಎದುರಾಳಿಗಳ ಹಡಗುಗಳನ್ನು ಕೆನರಾ ಪ್ರಾಂತ್ಯದ ಬಂದರುಗಳಿಗೆ ಪ್ರವೇಶಿಸಲು ಅವಕಾಶ ನೀಡದಿರುವುದು ಮತ್ತು ಒಂದು ವೇಳೆ ಪೋರ್ಚುಗೀಸರ ಲೈಸೆನ್ಸ್ ಇದ್ದರೂ ಅದರ ಮೇಲೆ ದಾಳಿ ನಡೆಸಿ ಅದರ ಸಿಬ್ಬಂದಿಗಳನ್ನು ಬಂಧಿಸಿ ಅದರಲ್ಲಿ ಇದ್ದ ಸರಕು ಸರಂಜಾಮುಗಳನ್ನು ಮುಟ್ಟುಗೋಲಿಗೆ ಅವಕಾಶ ಇರುವ ಹಲವಾರು ಷರತ್ತುಗಳನ್ನು ಒಳಗೊಂಡ ಒಂದು ಒಪ್ಪಂದವನ್ನು ಘೋಷಿಸಬೇಕೆಂದು ಕೇಳಿಕೊಂಡರು.

ಆದರೆ ವೆಂಕಟಪ್ಪ ನಾಯಕನು ಒಪ್ಪಂದದ ಯಾವುದೇ ನಿರ್ದಿಷ್ಟ ಅಂಶಗಳಿಗೆ ಸ್ಪಂದಿಸಲಿಲ್ಲ. ವೆಂಕಟಪ್ಪ ನಾಯಕನು ಪೋರ್ಚುಗೀಸರೊಂದಿಗೆ ಸೌಹಾರ್ದತೆ ಬಯಸಿದನು. ಆದರೆ ಪರಸ್ಪರ ಪೂರಕವಾದ ನೆಲೆಗಟ್ಟಿನಲ್ಲಿ ಮಾತ್ರ ಮೈತ್ರಿ ಬಯಸಿದ್ದನು. ವೆಂಕಟಪ್ಪ ನಾಯಕನ ಅಧೀನಕ್ಕೆ ಕೆನರಾ ಪ್ರಾಂತ್ಯವು

ಒಳಪಟ್ಟಿರುವುದರಿಂದ ಕರಿಮೆಣಸಿನ ಕಂಟ್ರಾಕ್ಟದಾರರೆಲ್ಲರೂ ವೆಂಕಟಪ್ಪ ನಾಯಕನಿಗೆ ಶುಲ್ಕ ಪಾವತಿಸಬೇಕೆಂದು ಆದೇಶ ಜಾರಿಗೊಳಿಸಿದ್ದನು. ಈ ಆದೇಶದಿಂದ ಕರಿಮೆಣಸಿನ ಬೆಲೆಯೂ ಹೆಚ್ಚಳವಾಯಿತು. ವೆಂಕಟಪ್ಪ ನಾಯಕನ ಬೇಡಿಕೆಗೆ ಪೋರ್ಚುಗೀಸರು ಒಪ್ಪದಿರುವುದರಿಂದ ಹಡಗಿಗೆ ಕರಿಮೆಣಸನ್ನು ತುಂಬಿಸಬಾರದೆಂದು ವೆಂಕಟಪ್ಪ ನಾಯಕನು ತಾಕೀತು ಮಾಡಿದನು. ಈ ಹೊಸ ಬೆಳವಣಿಗೆಯಿಂದ ವಾಣಿಜ್ಯ ವ್ಯವಹಾರಕ್ಕೆ ಭಂಗ ಬಂದಿರುವುದನ್ನು ತಪ್ಪಿಸಲು ಸೌಹಾರ್ದಯುತವಾಗಿ ಪರಿಹರಿಸಲು ಗೋವಾದ ಪೋರ್ಚುಗೀಸ್ ವೈಸ್‌ರಾಯ್ ಬಯಸಿದನು. ಶಾಂತಿಯುತ ಒಪ್ಪಂದಕ್ಕೆ ಬರಲು ಅಸಾಧ್ಯವಾದಾಗ ಪೋರ್ಚುಗೀಸರು ವಿಜಯನಗರ ಸಂಸ್ಥಾನಕ್ಕೆ ಮನವಿಯೊಂದನ್ನು ಸಲ್ಲಿಸಿ ಇಕ್ಕೇರಿಯ ವೆಂಕಟಪ್ಪ ನಾಯಕನ ಮೇಲೆ ಒತ್ತಡ ಹೇರಿ ಸಮಸ್ಯೆ ಪರಿಹರಿಸಲು ಒತ್ತಾಯಿಸಿದರು. ಈ ತಂತ್ರ ಫಲ ನೀಡದಿದ್ದರೂ ಆದಿಲ್‌ಷಾಹಿಗೆ ಇಕ್ಕೇರಿ ಸಂಸ್ಥಾನದ ಮೇಲೆ ದಂಡೆತ್ತಿ ಯುದ್ಧ ಸಾರಲು ಪ್ರಚೋದಿಸಬೇಕೆಂದೂ ವೈಸ್‌ರಾಯ್ ನಿರ್ಧರಿಸಿದನು. ಕೊನೆಗೂ ೧೬೦೮ರಲ್ಲಿ ಆದಿಲ್‌ಷಾಹಿ ದೊರೆಗಳಿಗೂ ವೆಂಕಟಪ್ಪ ನಾಯನಿಗೂ ಯುದ್ಧ ಸಂಭವಿಸಿತು. ಆದರೆ ಅದು ದೀರ್ಘಕಾಲ ಮುಂದುವರಿಯಲಿಲ್ಲ. ಪೋರ್ಚುಗೀಸರಂತೂ ಈ ಮೊದಲಿನಿಂದಲೂ ಇವರ ಮಧ್ಯೆ ಪರಸ್ಪರ ಯುದ್ಧ ನಡೆಯುವುದನ್ನು ಬಯಸಿದ್ದು ಆ ಬಗ್ಗೆ ಎಲ್ಲಾ ರೀತಿಯಿಂದಲೂ ಗಮನ ನೀಡಿದರು.

ವೆಂಕಟಪ್ಪ ನಾಯಕನು ಮುಂದೆ ತನ್ನ ಗಮನವನ್ನು ದಕ್ಷಿಣ ಪ್ರಾಂತ್ಯದ ಬಗ್ಗೆ ವಿಸ್ತರಿಸಲು ಯೋಚಿಸಿದನು. ಮಂಗಳೂರಿನ ಬೋಳೂರಿನಲ್ಲಿ ಕೋಟೆ ಹೊಂದಿದ್ದ ಬಂಗರಸರಿಗೂ, 'ಪರ್ವತಗಳ ರಾಜ' ಎಂದು ಕರೆಯಲ್ಪಡುತ್ತಿದ್ದ ಕಣ್ಣಾನೂರಿನ ದೊರೆಗಳಿಗೂ ಯುದ್ಧ ನಡೆಯಿತು. ಸಹಜವಾಗಿಯೇ ಬಂಗರರಸನು ವೆಂಕಟಪ್ಪ ನಾಯಕನ ಸಹಾಯವನ್ನು ಬಯಸಿದನು. ಈ ಅವಕಾಶವನ್ನು ಸಮರ್ಪಕವಾಗಿ ಉಪಯೋಗಿಸಿದ ವೆಂಕಟಪ್ಪ ನಾಯಕನು ತಕ್ಷಣ ಸರ್ವರೀತಿಯಿಂದಲೂ ಸಹಕಾರ ನೀಡಿ ಬಂಗರಸನನ್ನು ತನ್ನ ಸಾಮಂತ ರಾಜನನ್ನಾಗಿ ೧೬೧೨ರಲ್ಲಿ ಮಾಡಿದನು.

ಆದರೆ ವೆಂಕಟಪ್ಪ ನಾಯಕನ ಸಾಮಂತರಾಜನಾಗಿ ಇರಲು ಅಪೇಕ್ಷಿಸದ ಬಂಗರಸನು ಪೋರ್ಚುಗೀಸರ ಕಡೆಗೆ ವಾಲಿದನು. ಬಂಗರಸನು ಪೋರ್ಚುಗೀಸರೊಂದಿಗೆ ೧೫೬೮ರಿಂದಲೂ ಸಖ್ಯತೆಯಲ್ಲಿ ಇದ್ದು ಪೋರ್ಚುಗೀಸರಿಗೆ ಮಂಗಳೂರಲ್ಲಿ ಕೋಟೆ ಕಟ್ಟಲು ಹಾಗೂ ಅವರ ವ್ಯಾಪಾರ ವ್ಯವಹಾರ ನಡೆಸಿಕೊಂಡು ಬರಲು ಸರ್ವರೀತಿಯ ಸಹಕಾರ ನೀಡಿದ್ದನು. ಆತನಿಂದ ಫಲವತ್ತಾದ ಕೃಷಿ ಭೂಮಿಯನ್ನು ಪೋರ್ಚುಗೀಸರು ಪಡೆದಿದ್ದರಲ್ಲದೆ ಬಂಗರಸನು ಪೋರ್ಚುಗೀಸರಿಗೆ ವ್ಯಾಪಾರಕ್ಕೆ ಸಂಬಂಧಿಸಿ ಹಲವಾರು ರಿಯಾಯಿತಿಗಳನ್ನು ಕೂಡಾ ಘೋಷಿಸಿದ್ದನು. ಅವುಗಳೆಂದರೆ

ಅ. ಬಂಗರಸನ ಪ್ರಾಂತ್ಯದಲ್ಲಿ ನದಿಯ ಮೂಲಕ ಸಾಗಿಸಲ್ಪಡುವ ವಸ್ತುಗಳಿಗೆ ಸುಂಕದಿಂದ ವಿನಾಯಿತಿ ಘೋಷಣೆ.

ಬ. ಆತನ ಪ್ರಾಂತ್ಯದಲ್ಲಿ ಸುಮಾರು ೫೦೦೦ ಪಗೋಡ ವಾರ್ಷಿಕ ವರಮಾನ ಇರುತ್ತಿದ್ದ ದೇವಾಲಯವನ್ನು ಪೋರ್ಚುಗೀಸರ ಆಡಳಿತ ವ್ಯಾಪ್ತಿಗೆ ಒಳಪಡಿಸಿದನು(ಶಾಸ್ತ್ರಿ ೨೦೦೦:೧೧೬). ಬಹುಶಃ ಪೋರ್ಚು ಗೀಸರಿಗೆ ಬಂಗರಸನು ಹಸ್ತಾಂತರಿಸಿರುವ ದೇವಸ್ಥಾನ ಪ್ರಸ್ತುತ ಉರ್ವಾದ ಮಾರಿಗುಡಿ ದೇವಸ್ಥಾನವಾಗಿರುವ ಸಾಧ್ಯತೆ ಇದೆ.

೧೬೧೨ರಲ್ಲಿ ಬಂಗರಸನು ವೆಂಕಟಪ್ಪ ನಾಯಕನ ವಿರುದ್ಧ ಪೋರ್ಚುಗೀಸರ ಸಹಾಯ ಕೇಳಿದಾಗ ಅದನ್ನು ನೀಡಲು ಪೋರ್ಚುಗೀಸರು ಹಿಂದೇಟು ಹಾಕಿದರು. ಏಕೆಂದರೆ ಪೋರ್ಚುಗೀಸರ ವಾಣಿಜ್ಯ ಹಿತಾಸಕ್ತಿಯು ವೆಂಕಟಪ್ಪ ನಾಯಕರ ಧೋರಣೆಯ ಮೇಲೆ ಕೇಂದ್ರೀಕರಿಸಲ್ಪಟ್ಟಿತ್ತು. ವೆಂಕಟಪ್ಪ ನಾಯಕನೊಂದಿಗೆ ವೈರತ್ತ್ವ ಸಾಧಿಸಿದ್ದೇ ಆದಲ್ಲಿ ಕರಾವಳಿ ಕರ್ನಾಟಕ ಮತ್ತು ಗೋವಾದ ಬಂದರುಗಳಿಗೆ ಆಹಾರ ವಸ್ತುಗಳ ಸರಬರಾಜು ಮತ್ತು ಕರಿಮೆಣಸಿನ ಸರಬರಾಜಿಗೆ ಧಕ್ಕೆ ಒದಗಿ ಬರಲಿದೆ. ಇದರಿಂದ ಪೋರ್ಚುಗೀಸ್ ಸಾಮ್ರಾಜ್ಯದ ಅಸ್ತಿತ್ವಕ್ಕೆ ಕೂಡಾ ಪರೋಕ್ಷವಾಗಿ ದುಬಾರಿಯಾಗುವ ಆರ್ಥಿಕ ಹೊರೆ ಬೀಳಲಿದೆ. ಈ ನಿಟ್ಟಿನಲ್ಲಿ ಪೋರ್ಚುಗೀಸರು ಚಾಣಾಕ್ಷತನವನ್ನು ಪ್ರದರ್ಶಿಸಿ ಬಹಿರಂಗವಾಗಿ ವೆಂಕಟಪ್ಪ ನಾಯಕನನ್ನು ವಿರೋಧಿಸದೆ ಬಂಗರಸನನ್ನು ಕೂಡಾ ಈ ಬಗ್ಗೆ ಬೆಂಬಲಿಸಲಿಲ್ಲ. ಇಂತಹ ಬೆಳವಣಿಗೆಗಳ ಸಂದಿಗ್ಧಮಯ ಸನ್ನಿವೇಶದಲ್ಲಿ ಬಂಗರಸ, ಕಣ್ಣನೂರಿನ ಪರ್ವತಗಳ ರಾಜ ಮತ್ತು ಕಾರ್ನಾಡಿನ ರಾಣಿಯವರುಗಳು ಸೇರಿಕೊಂಡು ತ್ರಿಪಕ್ಷೀಯ ಒಕ್ಕೂಟವನ್ನು ಮಾಡಿಕೊಂಡು ಪರಸ್ಪರ ಸಹಕಾರ ನೀಡುವ ಒಪ್ಪಂದಕ್ಕೆ ಬದ್ಧರಾದರು.

ವೈಸ್‌ರಾಯ್‌ರವರು ಕ್ಯಾಪ್ಟನ್ ಹೆನ್ರಿ ಡಿ'ಸೋಜಾರವರನ್ನು ಮಂಗಳೂರಿಗೆ ಕಳುಹಿಸಿ ಈ ಮೂರು ಒಕ್ಕೂಟಗಳ ಪ್ರತಿನಿಧಿಗಳ ಜಂಟಿ ಸಭೆ ಕರೆದು ಅವರುಗಳೊಂದಿಗೆ ಇಂತಹ ಸಹಕಾರ ಒಪ್ಪಂದದ ಅಗತ್ಯತೆಯ ಬಗ್ಗೆ ಮನವರಿಕೆ ಮಾಡಿ ಕೊಟ್ಟನು. ಅನಂತರದ ದಿನಗಳಲ್ಲಿ ಈ ಒಕ್ಕೂಟಕ್ಕೆ ಮತ್ತೆ ಮೂರು ಮಂದಿ ಸ್ಥಳೀಯ ಸಾಮಂತರನ್ನು ಸೇರ್ಪಡೆ ಮಾಡಿಕೊಳ್ಳಲಾಯಿತು. ಅವರುಗಳೆಂದರೆ ಅಜಿಲ, ಕೊಂಡಗೇರೆ ಸಾಮಂತರು ಮತ್ತು ಉಳ್ಳಾಲದ ರಾಣಿಯಾಗಿದ್ದಳು. ಬಂಗರಸನು ಇದರ ಮುಖ್ಯ ನಾಯಕನಾಗಿದ್ದನು. ಬಂಗರಸನು ಪೋರ್ಚುಗೀಸ್ ವೈಸ್‌ರಾಯ್‌ಗೆ ಪತ್ರ ಬರೆದು ಮಂಜೇಶ್ವರದ ಕೋಟೆ ಮತ್ತು ಉಳ್ಳಾಲದಲ್ಲಿರುವ ವೆಂಕಟಪ್ಪ ನಾಯಕನ ಸುಪರ್ದಿಗೆ ಒಳಪಟ್ಟ ಪ್ರಾಂತ್ಯವನ್ನು ಕೈವಶ ಮಾಡಿಕೊಳ್ಳಲು ಸಹಾಯಕವಾಗುವಂತೆ ಒಂದು ನೌಕೆಯನ್ನು ಕಳುಹಿಸಿಕೊಡಬೇಕೆಂದು ಕೇಳಿಕೊಂಡನು. ಉಳ್ಳಾಲದ ರಾಣಿಯ ಪ್ರಸ್ತಾಪದಲ್ಲಿ ತಲಪಾಡಿ ಕೋಟೆಯ ಸಂರಕ್ಷಣೆಗಾಗಿ ೭೦ ಸೈನಿಕರನ್ನು ನಿಯುಕ್ತಿಗೊಳಿಸಿದ್ದೇ ಆದಲ್ಲಿ ಪೋರ್ಚುಗೀಸರಿಗೆ ಪ್ರತೀ ವರ್ಷ ೩೦೦೦ ಚೀಲ ಭತ್ತವನ್ನು ನೀಡಲು ಸಿದ್ಧವಿರುವುದಾಗಿ ಘೋಷಿಸಿದಳು. ಪೋರ್ಚುಗೀಸರು ಈಗ ಇಕ್ಕಟ್ಟಿನ ಸನ್ನಿವೇಶದಲ್ಲಿ ಸಿಲುಕಿದರು. ಇಕ್ಕೇರಿಯ ವೆಂಕಟಪ್ಪ ನಾಯಕನು ದಿನೇ ದಿನೇ ಪ್ರಬಲಗೊಳ್ಳುತ್ತಾ ಇದ್ದನು. ಇಂತಹ ಸಂದರ್ಭದಲ್ಲಿ ಆರು ಪ್ರಾಂತ್ಯಗಳ ಒಕ್ಕೂಟಕ್ಕೆ ಸಹಾಯ ಸಹಕಾರ ನೀಡಿದ್ದೇ ಆದಲ್ಲಿ ಪೋರ್ಚುಗೀಸರು ಕರಾವಳಿ ಕರ್ನಾಟಕದ ಪ್ರಾಂತ್ಯದಲ್ಲಿ ಹೊಂದಿದ್ದ ವಾಣಿಜ್ಯೋದ್ಯಮದ ಪ್ರಬಲ ಹಿತಾಸಕ್ತಿಯನ್ನು ಬಲಿಕೊಟ್ಟಂತಾಗುತ್ತದೆ ಎಂಬ ಲೆಕ್ಕಾಚಾರ ಪೋರ್ಚುಗೀಸರದ್ದಾಗಿತ್ತು. ವೆಂಕಟಪ್ಪ ನಾಯಕನ ಪ್ರಾಂತ್ಯದಿಂದ ೨೮೫೦ ಕ್ವಿಂಟಾಲ್ ಕರಿಮೆಣಸು ಪೋರ್ಚುಗೀಸರಿಗೆ ದೊರೆಯುತ್ತಿತ್ತು. ವೆಂಕಟಪ್ಪ ನಾಯಕನು ಬಸ್ರೂರು, ಮಂಗಳೂರು ಮತ್ತು ಹೊನ್ನಾವರ ಬಂದರಿನ ಮೇಲೆ ದಾಳಿ ಮಾಡುವ ಸಾಧ್ಯತೆಯೂ ಇದೆ ಎಂದು ವೈಸ್‌ರಾಯ್ ಕೌನ್ಸಿಲ್ ಸಭೆ ಆತಂಕಕ್ಕೆ ಒಳಗಾಗಿತ್ತು. ಆದುದರಿಂದ ಪೋರ್ಚುಗೀಸ್ ವೈಸ್‌ರಾಯ್‌ಯವರು ವೆಂಕಟಪ್ಪ ನಾಯಕನಿಗೆ ಸಾಮಂತರಾಜರ ಒಕ್ಕೂಟದೊಂದಿಗೆ ಯುದ್ಧ ಮಾಡಬಾರದೆಂದು ಮನವಿ ಮಾಡಿದರು.

ಬಂಗರಸನು ಪೋರ್ಚುಗಲ್ ರಾಜನಿಗೆ ೧೬೧೫ರಲ್ಲಿ ಪತ್ರ ಬರೆದು ವೆಂಕಟಪ್ಪ ಮತ್ತು ಇತರೆ ಶತ್ರುಗಳು ಆತನನ್ನು ಪದಚ್ಯುತ ಮಾಡಲು ಪ್ರಯತ್ನಿಸುತ್ತಿರುವುದಾಗಿಯೂ, ವೆಂಕಟಪ್ಪನು, ಪ್ರಬಲವಾಗಿ ಬೆಳೆದಿರುವುದನ್ನು ತಿಳಿಸಿದನು. ಈ ಹಿನ್ನೆಲೆಯಲ್ಲಿ ಪೋರ್ಚುಗಲ್ ರಾಜನು ವೈಸ್‌ರಾಯ್‌ಗೆ ಪತ್ರ ಬರೆದು ವೆಂಕಟಪ್ಪ ನಾಯಕನು ಬಲಿಷ್ಠನಾಗಿರುವ ಬಗ್ಗೆ ಹಾಗೂ ಆತನ ರಾಜ್ಯದ ಆಡಳಿತದ ಬಗ್ಗೆ ನಿಗಾವಹಿಸುವಂತೆ ಕೇಳಿಕೊಂಡನು.

ಬೆರ್ನಾರ್ಡೋ ಎಂಬ ಮಲಬಾರ್ ಪ್ರಾಂತ್ಯದ ಕ್ಯಾಪ್ಟನನು ೧೬೧೬ರಲ್ಲಿ ಕೊಚ್ಚಿನ್‌ಗೆ ತೆರಳುವ ಸಮಯದಲ್ಲಿ ಮಂಗಳೂರಲ್ಲಿ ಆತನ ಹಡಗು ನಿಂತಿತ್ತು. ಆ ಸಮಯದಲ್ಲಿ ಬಂಗರಸನು ಆತನನ್ನು ಭೇಟಿ ಮಾಡಿ ಪೋರ್ಚುಗೀಸ್‌ರ ಸಹಾಯವನ್ನು ಯಾಚಿಸಿದನು. ಅದಕ್ಕೆ ಬೆರ್ನಾರ್ಡನು ಸಮ್ಮತಿಸಿದರೂ ತಕ್ಷಣವೇ ಸಾಧ್ಯವಿಲ್ಲ ಎಂದು ಉತ್ತರಿಸಿದನು. ಇಂತಹ ಸಮಯದಲ್ಲಿ ಬಂಗರಸನು ಪೋರ್ಚುಗೀಸರ ಬಗ್ಗೆ ಒಂದು ವ್ಯತಿರಿಕ್ತ ನಿಲುವಿಗೆ ಬಂದನು. ಪೋರ್ಚುಗೀಸರು ಎಲ್ಲರನ್ನೂ ನಿಭಾಯಿಸಿಕೊಂಡು ಪರಸ್ಪರ ಹೊಂದಾಣಿಕೆ-ರಾಜಿ ಒಪ್ಪಂದ ಮಾಡಿಕೊಂಡು ವ್ಯಾಪಾರ ವ್ಯವಹಾರವನ್ನು ಮುಂದುವರಿಸುವುದೇ ಅವರ ಉದ್ದೇಶವಾಗಿದೆ ಎಂದು ತಿಳಿದನು (ಶಾಸ್ತ್ರಿ ೨೦೦೦:೧೨೨). ಇದೇ ವರ್ಷ ಇತ್ತ ಉಳ್ಳಾಲದ ರಾಣಿಯು ಐಕ್ಯ ಒಕ್ಕೂಟದಿಂದ ಬೇರ್ಪಡೆಗೊಂಡು ವೆಂಕಟಪ್ಪ ನಾಯಕನೊಂದಿಗೆ ಸೇರಿಕೊಂಡಳು. ಇದರಿಂದ ಆಕ್ರೋಶಿತರಾದ ಪೋರ್ಚುಗೀಸರು ಉಳ್ಳಾಲದ ಕಡೆಗೆ ಒಂದು ಸೈನ್ಯದ ತುಕುಡಿಯನ್ನು ಕಳುಹಿಸಿಕೊಟ್ಟರು. ಆಗ ವೆಂಕಟಪ್ಪ ನಾಯಕನು ಉಳ್ಳಾಲದ ರಾಣಿಗೆ ಸಹಾಯ ಮಾಡುವುದಕ್ಕಾಗಿ ದೌಡಾಯಿಸಿದನು.

ಸರಿಸುಮಾರು ೧೬೧೬ರ ಹೊತ್ತಿಗೆ ಬಂಗರಸನ ಹೆಚ್ಚಿನ ಪ್ರಾಂತ್ಯವು ವೆಂಕಟಪ್ಪ ನಾಯಕನ ಆಳ್ವಿಕೆಗೆ ಒಳಪಟ್ಟಿತು. ಕೊಡಿಯಾಲಬೈಲಿನಲ್ಲಿದ್ದ ಕೋಟೆಯನ್ನು ಕೂಡಾ ವೆಂಕಟಪ್ಪ ನಾಯಕನು ವಶಕ್ಕೆ ಒಪ್ಪಿಸಬೇಕೆಂದು ಆಗ್ರಹಿಸಿದನು. ಆಗ ಬಂಗರಸನು ಉಪಾಯದಿಂದ ಕೊಡಿಯಾಲ್‌ಬೈಲ್ ಕೋಟೆಯ ಕೀಯನ್ನು ಪೋರ್ಚುಗೀಸ್ ಕ್ಯಾಪ್ಟನ್‌ಗೆ ಹಸ್ತಾಂತರಿಸಿ ಅದೇ ವಿಷಯವನ್ನು ವೆಂಕಟಪ್ಪ ನಾಯಕನಿಗೂ ತಿಳಿಸಿದರು.

ಈ ವಿಚಿತ್ರ ವಿದ್ಯಮಾನದಿಂದ ವಿಚಲಿತರಾದ ಪೋರ್ಚುಗೀಸ್‌ರು ವೈಸ್‌ರಾಯ್ ಕೌನ್ಸಿಲ್ ಸಭೆ ಸೇರಿ ೭೦ ಮಂದಿ ಸೈನಿಕರನ್ನು ಮಂಗಳೂರಿಗೆ ಕಳುಹಿಸಿದರು. ಮಂಗಳೂರಿನ ಕ್ಯಾಪ್ಟನ್‌ನ ನೇತೃತ್ವದಲ್ಲಿ ಬಂಗರಸನಿಗೆ ಆತನ ಕೋಟೆಯನ್ನು ದಕ್ಕಿಸಿಕೊಳ್ಳಲು ಸಹಕರಿಸಬೇಕೆಂದು ನಿರ್ಧರಿಸಲಾಯಿತು. ಆ ಪ್ರಕಾರ ಆದೇಶವನ್ನು ಕೂಡ ಜಾರಿ ಮಾಡಲಾಯಿತು. ಮಂಗಳೂರಲ್ಲಿ ಪರಸ್ಪರ ಯುದ್ಧ ನಡೆಯಿತು. ವೆಂಕಟಪ್ಪ ನಾಯಕನ ಸೈನ್ಯವೇ ಮೇಲುಗೈ ಸಾಧಿಸಿತು. ಅನಂತರ ವೆಂಕಟಪ್ಪ ನಾಯಕನು ಬಂಗರಸನನ್ನು ಪದಚ್ಯುತಗೊಳಿಸಿ ಪೋರ್ಚುಗೀಸರ ಸುಪರ್ದಿಯಲ್ಲಿ ಕಾಸರಗೋಡಿಗೆ ಕಳುಹಿಸಿಕೊಟ್ಟನು. ಅದಾದ ನಂತರ ವೆಂಕಟಪ್ಪ ನಾಯಕನು ಮಂಗಳೂರಲ್ಲಿ ಕೋಟೆ ನಿರ್ಮಿಸಿದನು. ಈ ಪ್ರಕ್ರಿಯೆಯಲ್ಲಿ ವೆಂಕಟಪ್ಪ ನಾಯಕನಿಗೆ ಉಳ್ಳಾಲದ ರಾಣಿ ಸಹಾಯ ಮಾಡಿದಳು. ಗೋವಾದಿಂದ ಪೋರ್ಚುಗೀಸರು ೫೦೦ಕ್ಕೂ ಮಿಕ್ಕಿದ ಸೈನಿಕರ ದಂಡನ್ನು ಮಂಗಳೂರಿಗೆ ಕಳುಹಿಸಿಕೊಟ್ಟಿತ್ತು. ೧೬೧೮ರ ಹೊತ್ತಿಗೆ ಮತ್ತೆ ವೆಂಕಟಪ್ಪ ನಾಯಕನ ಕೈಯೇ ಮೇಲಾಯಿತು. ಪೋರ್ಚುಗೀಸರು ಅನಿವಾರ್ಯವಾಗಿ ಒಪ್ಪಂದಕ್ಕೆ ಬರುವಂತಾಯಿತು.

ಪೋರ್ಚುಗೀಸರಿಗೆ ದೊಡ್ಡ ಸೋಲಾಯಿತು. ಬಹಳಷ್ಟು ನಷ್ಟವೂ ಆಯಿತು. ಇಂತಹ ಸಮಯದಲ್ಲಿ ಮತ್ತಷ್ಟು ಸಹಾಯವನ್ನು ಕಳುಹಿಸಿಕೊಡಲು ವೈಸ್‌ರಾಯ್‌ರವರ ಬಳಿಯಲ್ಲಿ ಸಾಕಷ್ಟು ಹಣವೂ ಇರಲಿಲ್ಲ. ಮಂಗಳೂರಿನಿಂದ ಸುಮಾರು ೮೦೦೦ ಪಗೋಡಾದಷ್ಟು ಬೆಲೆಬಾಳುವ ವಸ್ತುಗಳೊಂದಿಗೆ ತಪ್ಪಿಸಿಕೊಂಡು ಗೋವಾಕ್ಕೆ ಹೋಗುತ್ತಿದ್ದ ಪೋರ್ಚುಗೀಸ್ ಅಧಿಕಾರಿ ಗೋಮೆನ್ ಡಿ' ಸಿಲ್ವಾರವರನ್ನು ದರೋಡೆ ಮಾಡಲಾಯಿತು.

ಪೋರ್ಚುಗೀಸರ ವಾಣಿಜ್ಯ ವ್ಯಾಪಾರಕ್ಕೆ ಇರಿಸು ಮುರಿಸಿನ ಪರಿಸ್ಥಿತಿ ನಿರ್ಮಾಣವಾದಂತಹ ಸಮಯದಲ್ಲಿ ವೆಂಕಟಪ್ಪ ನಾಯಕನು ಈ ಪ್ರಾಂತ್ಯಕ್ಕೆ ವ್ಯಾಪಾರಕ್ಕಾಗಿ ಕಾಲೂರಲು ಪ್ರಯತ್ನಿಸುತ್ತಿದ್ದ ಇಂಗ್ಲೀಷರನ್ನು ಸಂಪರ್ಕಿಸಿದನು. ಅವರೊಂದಿಗೆ ಕರಿಮೆಣಸಿನ ವ್ಯಾಪಾರಕ್ಕೆ ಮುಂದಾದನು. ಫೆಬ್ರವರಿ ೧೬೧೮ರಲ್ಲಿ ವೆಂಕಟಪ್ಪ ನಾಯಕನು ಇಂಗ್ಲೀಷರ ಕೋಠಿ–ಮಳಿಗೆ ಇರುವ "ಸ್ವರಿ" ಎಂಬ ಸ್ಥಳಕ್ಕೆ ತನ್ನ ಪ್ರತಿನಿಧಿಯನ್ನು ಕಳುಹಿಸಿದನು. ಇಂಗ್ಲೀಷರೊಂದಿಗೆ ವ್ಯಾಪಾರದ ಮಾತುಕತೆಯನ್ನು ಕುದುರಿಸಿದನು. ಎರಡು ದೊಡ್ಡ ಹಡಗುಗಳಲ್ಲಿ ತುಂಬುವಷ್ಟು ಕರಿಮೆಣಸ್ಸನ್ನು ವಿಕ್ರಯಿಸಿಕೊಳ್ಳಲು ಇಂಗ್ಲೀಷರು ಮುಂದಾದರು. ಇಂಗ್ಲೀಷರು ತನ್ನ ಎರಡು ಪ್ರತಿನಿಧಿಗಳನ್ನು ಇಕ್ಕೇರಿಗೆ ಕಳುಹಿಸಿ ವ್ಯಾಪಾರದ ನೀತಿ ನಿಯಮಗಳ ಬಗ್ಗೆ ಚರ್ಚೆ ನಡೆಸಲು ಮುಂದಾದರು ಆ ವರ್ಷ ಪೂರ್ತಿ ಕರಿಮೆಣಸು ಇಂಗ್ಲೀಷರಿಗೆ ದೊರೆಯಿತು (ಶಾಸ್ತ್ರಿ ೨೦೦೦:೧೨೦).

ಅದಾಗಲೇ ಅಸ್ತಿತ್ವಕ್ಕೆ ಬಂದ ಶಾಂತಿಯ ಪ್ರಸ್ತಾಪಗಳು ಮತ್ತೆ ೧೬೨೦ರ ಮಾರ್ಚ್ ತಿಂಗಳಿನಲ್ಲಿ ಮರು ನಿರೂಪಿಸಲ್ಪಟ್ಟಿತ್ತು. ಆ ಪ್ರಕಾರ ಪೋರ್ಚುಗೀಸರು ಮತ್ತು ವೆಂಕಟಪ್ಪ ನಾಯಕನ ಮಧ್ಯೆ ಶಾಂತಿ–ಸೌಹಾರ್ದತೆ ಮತ್ತು ವ್ಯಾಪಾರಕ್ಕೆ ಸಂಬಂಧಿಸಿ ಒಂದು ಒಪ್ಪಂದಕ್ಕೆ ಸಹಿ ಹಾಕಲಾಯಿತು. ಈ ಅವಧಿಯಲ್ಲಿ ಕರಾವಳಿ ಕರ್ನಾಟಕದ ಬಂದರುಗಳಲ್ಲಿ ಇಂಗ್ಲೀಷರ ದೊಡ್ಡ ಗಾತ್ರದ ವ್ಯಾಪಾರಿ ಹಡಗು ಕೂಡ ಸಂಚರಿಸಲ್ಪಟ್ಟಿತ್ತು. ಆದರೆ ವೆಂಕಟಪ್ಪ ನಾಯಕನು ಇದಕ್ಕೆ ಸ್ವಾಗತ ನೀಡಲಿಲ್ಲ.

ಪೋರ್ಚುಗೀಸರಿಗೆ ಇತ್ತ ಬಂಗರಸನ ಖರ್ಚು ವೆಚ್ಚದ ಬಗ್ಗೆ ಸಮಸ್ಯೆಯಾಯಿತು. ಆತನ ಕಾಸರಗೋಡಿನ ವಾಸದ ಖರ್ಚು ಮತ್ತು ಕೋಟೆಯ ನಿರ್ವಹಣಾ ವೆಚ್ಚ ಹೊಸತಾಗಿ ಪೋರ್ಚುಗೀಸರ ಖಜಾನೆಗೆ ಅನಗತ್ಯ ಖರ್ಚು ಆಗಿತ್ತು. ಈ ಅವಧಿಯಲ್ಲಿ ಪೋರ್ಚುಗೀಸರ ಆರ್ಥಿಕ ಪರಿಸ್ಥಿತಿ ಕೂಡಾ ಉತ್ತಮವಾಗಿರಲಿಲ್ಲ. ಆದುದರಿಂದ ಬಂಗರಸನ ಮತ್ತು ವೆಂಕಟಪ್ಪ ನಾಯಕನ ಮಧ್ಯೆ ಶಾಂತಿ ಮಾತುಕತೆಗೆ ಪೋರ್ಚುಗೀಸರು ಪ್ರಯತ್ನಿಸಿದರು. ಆ ಪ್ರಕಾರ ಹಡಗಿನಲ್ಲಿ ಬಂಗರಸನನ್ನು ಕರೆ ತಂದು ಮಂಗಳೂರಿನಲ್ಲಿ ಶಾಂತಿ ಒಪ್ಪಂದಗಳು ನಡೆದವು. ನಂತರ ವೆಂಕಟಪ್ಪ ನಾಯಕನ ಪ್ರಖ್ಯಾತ ಮಂತ್ರಿ ಪುಟ್ಟಪ್ಪನು ಗೋವಾಕ್ಕೆ ಇಕ್ಕೇರಿ ರಾಜಭಾರಿಯಾಗಿ ತೆರಳಿದನು. ಈಗಾಗಲೇ ಸಾಂಪ್ರಿಯಾನನಿಂದ ಪತ್ರ ಪಡೆದಿದ್ದ ವೈಸ್‌ರಾಯ್ ಬಂಗರಸನ ಬಗ್ಗೆ ಸಹಕರಿಸುತ್ತಿರುವುದರಿಂದ ಲಾಭಕ್ಕಿಂತ ನಷ್ಟವೇ ಜಾಸ್ತಿ ಎಂಬ ಅಂದಾಜಿಗೆ ಬಂದಿದ್ದನು. ಈ ಎಲ್ಲ ಕಾರಣಗಳಿಂದಾಗಿ ವೆಂಕಟಪ್ಪ ನಾಯಕನ ಪ್ರತಿನಿಧಿ ಪುಟ್ಟಪ್ಪನೊಂದಿಗೆ ಶಾಂತಿ ಮಾತುಕತೆಗೆ ಬರಲಾಯಿತು. ಬಂಗರಸನು ತನ್ನ ಖಜಾನೆಯಿಂದ ವೆಂಕಟಪ್ಪ ನಾಯಕನಿಗೆ ಯುದ್ಧ ವೆಚ್ಚ ಎಂಬ ಖಾತೆಯಲ್ಲಿ ೩೦,೦೦೦ ಪಗೋಡಗಳನ್ನು ಪಾವತಿಸಲು ನಿರ್ದೇಶಿಸಲಾಯಿತು(ಶಾಸ್ತ್ರಿ ೨೦೦೦: ೧೩೦).

ಈ ರಾಜಿ ಸಂಧಾನ ಪ್ರಕ್ರಿಯೆಯು ಹಲವಾರು ಹಂತಗಳಲ್ಲಿ ಹಲವಾರು ಸಾಧ್ಯಾಸಾಧ್ಯತೆಗಳ ಮೇಲೆ ನಡೆಯಿತು. ಬಂಗರಸ ಮತ್ತು ಆತನ ಪ್ರಾಂತ್ಯ ಕೇಂದ್ರೀಕರಿಸಿ, ಯುದ್ಧ ಪರಿಹಾರ, ಕೋಟೆ ಕೊತ್ತಲಗಳ ಪ್ರಸ್ತಾಪವೂ ಇತ್ತು. ಅದರೊಂದಿಗೆ "ಪದ್ಮನಾಭ"ನೆಂಬ ಆನೆಯ ಪ್ರಸ್ತಾಪವೂ ಇತ್ತು. ಮಂಗಳೂರಿನ ಪೋರ್ಚುಗೀಸ್ ವ್ಯಾಪಾರದ ಪ್ರತಿನಿಧಿಗಳು ವೆಂಕಟಪ್ಪ ನಾಯಕನಿಗೆ ೫೦೦ ಚೀಲ ಹೊಸ ಅಕ್ಕಿ ಸರಬರಾಜಿಗೆ ಕಸ್ಟಂ ಸುಂಕ ಪಾವತಿಸಲು ಒತ್ತಾಯಿಸಲಾಯಿತು. ಗೋವಾದ ವೈಸ್‌ರಾಯ್ ಕೌನ್ಸಿಲ್‌ನಲ್ಲಿ ಈ ಎಲ್ಲಾ ಬೇಡಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ವಾಣಿಜ್ಯಾತ್ಮಕ ಉದ್ದೇಶದಿಂದ ವೆಂಕಟಪ್ಪನ ಬೇಡಿಕೆಗಳಿಗೆ ಸಮ್ಮತಿಸಬೇಕೆಂದು ನಿರ್ಧಾರವಾಯಿತು. ಈ ರೀತಿ ಒಪ್ಪಂದದಲ್ಲಿ ಪ್ರಸ್ತಾಪಿಸಲ್ಪಟ್ಟ ಆರು ಕಾರಣಗಳೆಲ್ಲವೂ ಪೋರ್ಚುಗೀಸ್ ವಾಣಿಜ್ಯದ ಬಲವಾದ ಕಾರಣದಿಂದ ದೃಢೀಕರಿಸಲ್ಪಟ್ಟಿತ್ತು. ಹೊನ್ನಾವರದಲ್ಲಿ ಕ್ಯಾಪ್ಟನ್ ಲೈಲೆಷ್ಟೋ ೧೬೨೦ರ ಜನವರಿ ೧೯, ೨೦ ರಲ್ಲಿ ಪೋರ್ಚುಗೀಸರು ಮತ್ತು ಬಂಗರಸನ ಪರವಾಗಿ ಸಹಿ ಹಾಕಿದನು. ಈ ಒಪ್ಪಂದಕ್ಕೆ ಸಹಿ ಹಾಕಿದ ತಕ್ಷಣದಿಂದಲೇ ವೆಂಕಟಪ್ಪ ನಾಯಕನು ವಾಣಿಜ್ಯ ವ್ಯವಹಾರಗಳನ್ನು ಪುನರಾರಂಭಿಸಿದನು. ಸರಿಸುಮಾರು ೧೦೦೦ ಕ್ವಿಂಟಾಲ್ ಕರಿಮೆಣಸ್ಸನ್ನು ಪೋರ್ಚುಗೀಸರಿಗೆ ತನ್ನ ಪ್ರಾಂತ್ಯದಿಂದ ಮಾರಾಟ ಮಾಡಿದನು. ಈ ಬಗೆಗಿನ ದರ ಪ್ರಸ್ತಾಪಗಳು ಒಪ್ಪಂದದಲ್ಲಿ ನಿರೂಪಿತವಾಗಿತ್ತು (ಶಾಸ್ತ್ರಿ ೨೦೦೦:೧೪೨).

ಪೋರ್ಚುಗೀಸರ ಪರವಾಗಿ ಡೆಲ್ಲಾವೆಲ್ಲಾ ಮತ್ತು ವಿಠಲ ಶೆಣೈಯವರ ನೇತೃತ್ವದ ರಾಯಭಾರ ನಿಯೋಗವು ಇಕ್ಕೇರಿಗೆ ಬಂದಾಗ ವೆಂಕಟಪ್ಪ ನಾಯಕನು ಬಹಳ ಉತ್ಸುಕತೆಯಿಂದ ಸ್ವಾಗತಿಸಲಿಲ್ಲ. ಏಕೆಂದರೆ ಪೋರ್ಚುಗೀಸರು ಈಗಾಗಲೇ ವಿಕ್ರಯಿಸಿದ ಕರಿಮೆಣಸಿನ ಹಣವನ್ನು ಪಾವತಿಸದೆ ಬಾಕಿ ಇರಿಸಿದ್ದರು. ಇದರೊಂದಿಗೆ ಹೊಸ ಕರಿಮೆಣಸು ವಿಕ್ರಯಿಸಿಕೊಳ್ಳಲು ಪೋರ್ಚುಗೀಸರಿಗೆ ಹಣದ ಸಮಸ್ಯೆ ಎದುರಾಗಿರುವುದನ್ನು ವೆಂಕಟಪ್ಪ ನಾಯಕನು ಮನಗಂಡಿದ್ದನು. ಈ ಹಿನ್ನೆಲೆಯಲ್ಲಿ ನಿಯೋಗಕ್ಕೆ ಉತ್ತಮ ಪ್ರತಿಕ್ರಿಯೆ ಕಂಡು ಬಾರದೆ ಆ ರಾಯಭಾರ ನಿಯೋಗ ಫಲಪ್ರದ ಕಾಣಲಿಲ್ಲ. ಇದೇ ಸಮಯದಲ್ಲಿ ಪೋರ್ಚುಗಲ್ ದೊರೆಯು ವೆಂಕಟಪ್ಪ ನಾಯಕನಿಗೆ ಪತ್ರ ಬರೆದು ಕರಿಮೆಣಸು ಮತ್ತು ಇತರೆ ಆಹಾರ ಪದಾರ್ಥಗಳ ವ್ಯಾಪಾರ ನಡೆಸಲು ಕರಾವಳಿ ಕರ್ನಾಟಕಕ್ಕೆ ಬಂದಿದ್ದ ಇಂಗ್ಲೀಷರ ಮತ್ತು ಡಚ್ಚರ ಹಡಗುಗಳನ್ನು ತಿರಸ್ಕರಿಸಿರುವ ವೆಂಕಟಪ್ಪ ನಾಯಕನ ಧೋರಣೆಯನ್ನು ಆ ಪತ್ರದಲ್ಲಿ ಮುಕ್ತ ಕಂಠದಿಂದ ಶ್ಲಾಘಿಸಿ ಅಭಿನಂದನೆ ಸಲ್ಲಿಸಲಾಗಿತ್ತು.

ಇದೇ ಸಮಯದಲ್ಲಿ ಜಾಗತಿಕವಾಗಿ ಮತ್ತು ಭಾರತದಲ್ಲಿ ಅದರಲ್ಲೂ ನಿರ್ದಿಷ್ಟವಾಗಿ ಮೂರು ಪ್ರಮುಖ ಬಂದರುಗಳನ್ನು ಹೊಂದಿದ್ದ ಕರಾವಳಿ ಕರ್ನಾಟಕದ ಪ್ರಾಂತ್ಯಗಳಲ್ಲಿ ಪೋರ್ಚುಗೀಸರ ಪರಿಸ್ಥಿತಿ ಸಂದಿಗ್ಧಮಯವಾಗಿತ್ತು. ಪೋರ್ಚುಗೀಸರ ಯುರೋಪಿಯನ್ ಪ್ರತಿಸ್ಪರ್ಧಿ ವ್ಯಾಪಾರಿ ದೇಶಗಳಾಗಿದ್ದ ನಿರ್ದಿಷ್ಟವಾಗಿ ಡಚ್ಚರು ವಿವಿಧೆಡೆಗಳಲ್ಲಿ ನೇರ ಸಂಘರ್ಷಕ್ಕೆ ಇಳಿದು ಅಪಾರವಾದ ಕಷ್ಟ ನಷ್ಟವನ್ನು ತಂದೊಡ್ಡಿದ್ದರು. ಇಂತಹ ಇಕ್ಕಟ್ಟಿನ ಅಪಾಯಕಾರಿ ಸನ್ನಿವೇಶದಲ್ಲಿ ಡಚ್ಚರಿಗೆ ವೆಂಕಟಪ್ಪ ನಾಯಕನು ವಿರೋಧಿಸಿದುದು ಪೋರ್ಚುಗಲ್ಲಿನ ಅಂತರಾಷ್ಟ್ರೀಯ ಧೋರಣೆಯಿಂದ ಮಹತ್ವಪೂರ್ಣ ಘಟನೆಯಾಗಿದೆ.

ವೆಂಕಟಪ್ಪ ನಾಯಕನು ೧೬೨೯ರ ನವೆಂಬರ್ ೧೦ರಂದು ಮರಣವನ್ನಪ್ಪಿದ ಮೇಲೆ ಆತನ ದೊಡ್ಡ ಮಗ ವೀರಭದ್ರ ನಾಯಕನು ಅಧಿಕಾರಕ್ಕೆ ಬಂದನು. ಅವನು ೧೬೨೯ರಿಂದ ೧೬೪೫ರವರೆಗೆ ಆಳ್ವಿಕೆ ನಡೆಸಿದನು. ಹೊಸ ರಾಜನ ಅನನುಭವದ ಸ್ಥಿತ್ಯಂತರದ ಈ ಸಂದರ್ಭದಲ್ಲಿ ಕರಾವಳಿ ಕರ್ನಾಟಕದ ಸಾಮಂತ ರಾಜರುಗಳಾದ ಮಂಗಳೂರಿನ ಬಂಗರಸ, ಉಳ್ಳಾಲದ ರಾಣಿ, ಕಾರ್ನಾಡಿನ ರಾಣಿ ಹಾಗೂ ಜನತೆ ಕೂಡಾ ಇಕ್ಕೇರಿಯ ವಿರುದ್ಧ ದಂಗೆ ಎದ್ದರು. ಈ ಸಮಯದಲ್ಲಿ "ಕೊಳದಲ್ಲಿ ಕದಡಿದ ನೀರಿನಲ್ಲಿ ಮೀನು ಹಿಡಿಯುವ" ತಂತ್ರವನ್ನು ಪೋರ್ಚುಗೀಸರು ಉಪಯೋಗಿಸಿಕೊಂಡರು ಎಂದು ಬಿ ಎಸ್ ಶಾಸ್ತ್ರಿಯವರು ಈ ಸಂದರ್ಭವನ್ನು ವಿವರಿಸಿದ್ದಾರೆ. ಕ್ಯಾಪ್ಟನ್ ಫ್ರಾನ್ಸಿಸೋ ಡಿ'ಸೋಜಾ ಮತ್ತು ಹೊನ್ನಾವರದ ಕ್ಯಾಪ್ಟನ್ ಅಲ್ಫಾನ್ಸೋ ಕರಾಡೋ ಇವರುಗಳು ಬಿಜಾಪುರದ ಆದಿಲ್ ಷಾಹಿಗಿಂತ ಇಕ್ಕೇರಿಯ ವೀರಭದ್ರ ನಾಯಕನೇ ತುಂಬಾ ದೊಡ್ಡ ಸವಾಲು ಎಂದು ವಾದ ಮಾಡಿದರು.

ಅಪ್ಪರ್ ಬಸ್ರೂರಿನ ವ್ಯಾಪಾರಿ ವರ್ಗ, ವೆಂಕಟಪ್ಪ ನಾಯಕ ಸತ್ತ ಕೂಡಲೇ ತಮ್ಮ ವಶದಲ್ಲಿದ್ದ ದ್ವೀಪವನ್ನು ಪೋರ್ಚುಗೀಸರಿಗೆ ಕೊಡಲು ನಿಶ್ಚಯಿಸಿದರು. ವ್ಯಾಪಾರಿಗಳಿಗಾದರೂ ಮುಂಬರುವ ಅಪಾಯದಿಂದ ಪಾರಾಗಲು ಪೋರ್ಚುಗೀಸರ ಸಹಾಯ ಬೇಕಿತ್ತು. ಇದೇ ರೀತಿ ಪೋರ್ಚುಗೀಸರಿಗೆ ಈ ದ್ವೀಪಕಲ್ಪದಲ್ಲಿ ಕೋಟೆ ಕಟ್ಟಿ ಅದನ್ನು ಸಂರಕ್ಷಿಸುವುದು ಆರ್ಥಿಕ ಮತ್ತು ವಾಣಿಜ್ಯದ ದೃಷ್ಟಿಯಿಂದ ಉತ್ತಮ ಎಂಬ ಭಾವನೆ ಬೆಳೆದು ಬಂದಿದ್ದಿತು. ಕ್ಯಾಪ್ಟನ್ ಮೆನೆಜಸ್ ಬಸ್ರೂರಿಗೆ ಬಂದಾಗ ಪೋರ್ಚುಗೀಸ್ ಸೈನ್ಯದಲ್ಲಿ ಅಶಿಸ್ತು, ಅಸುರಕ್ಷತೆ, ಅಪನಂಬಿಕೆ ನೆಲೆಸಿರುವುದನ್ನು ಗಮನಿಸಿದನು. ಅವರುಗಳು ವಿಕಾರ್‌ರವರೊಬ್ಬರನ್ನು ಕೊಂದಿದ್ದರು ಮತ್ತು ಇಂತಹುದೇ ಹಲವಾರು ಅಪರಾಧಗಳನ್ನು ಅಲ್ಲಿಯ ಅಧಿಕಾರಿಗಳು ಮಾಡಿದ್ದರು.

ವೀರಭದ್ರ ನಾಯಕನು ೧೬೩೦ರ ಜನವರಿ ೩ರಂದು ಬಸ್ರೂರಿನಲ್ಲಿ ಪೋರ್ಚುಗೀಸರಿಗಾಗಿ ಸಾಗಿಸಲ್ಪಡುತ್ತಿದ್ದ ಅಕ್ಕಿಯನ್ನು ತಡೆದು ನಿಲ್ಲಿಸಿದನು. ಆಗ ಅಪ್ಪರ್ ಬಸ್ರೂರಿನ ಜನತೆ ಮತ್ತು ವ್ಯಾಪಾರಿಗಳು ದಂಗೆ ಎದ್ದು ಸಾಮಂತ ರಾಜರುಗಳು ಮಾಡಿಕೊಂಡಿದ್ದ ಒಕ್ಕೂಟವನ್ನು ಸೇರಿಕೊಂಡರು. ಆಗ ಪೋರ್ಚುಗೀಸ್ ವೈಸ್‌ರಾಯ್ ಕೌನ್ಸಿಲ್ ಮಿನೇಜಸ್‌ನನ್ನು ಬಸ್ರೂರಿಗೆ ಕಳುಹಿಸಿ ಅವರೊಂದಿಗೆ ಒಂದು ಒಪ್ಪಂದಕ್ಕೆ ಬರಲಾಯಿತು. ಆ ಪ್ರಕಾರ ಅಪ್ಪರ್ ಬಸ್ರೂರಿನ ಮುನಿಸಿಪಾಲಿಟಿಯು ಗಂಗೊಳ್ಳಿಯನ್ನು ಪೋರ್ಚುಗೀಸರಿಗೆ ದಾನವಾಗಿ ನೀಡುವುದಕ್ಕೆ ಒಪ್ಪಲಾಯಿತು. ಅದೇ ರೀತಿ ಪ್ರತೀ ವರ್ಷ ಒಂದು ಕಂಡಿ ಕರಿಮೆಣಸ್ಸಿಗೆ ೫೬ ಝೆರಾಫಿನ್ ದರದಂತೆ ಸಾಕಷ್ಟು ಪ್ರಮಾಣದಲ್ಲಿ ಪೋರ್ಚುಗೀಸರಿಗೆ ಒದಗಿಸಿಕೊಡುವರೆ ಒಪ್ಪಂದಕ್ಕೆ ಬರಲಾಯಿತು. ಆ ಪ್ರಕಾರ ಪೋರ್ಚುಗೀಸರಿಗೆ ಪ್ರತೀ ವರ್ಷ ಸುಮಾರು ೧೫೦೦ ಕಂಡಿಯಷ್ಟು ಕರಿಮೆಣಸು ಸಾಧಾರಣ ದರದಲ್ಲಿ ಸುಲಭವಾಗಿ ದೊರೆಯುತ್ತಿತ್ತು.

ಇದೇ ಅವಧಿಯಲ್ಲಿ ಕಳೆದ ೩೩ ವರ್ಷಗಳಿಂದ ಜೈಲಿನಲ್ಲಿ ಬಂಧಿಯಾಗಿದ್ದ ವೀರಪ್ಪ ನಾಯಕನು ಜೈಲಿನಿಂದ ತಪ್ಪಿಸಿಕೊಳ್ಳಲು ಪೋರ್ಚುಗೀಸರು ಸಹಾಯ ಮಾಡಿದರು. ಅನಂತರ ಆತನನ್ನು ಇಕ್ಕೇರಿಯ ರಾಜನನ್ನಾಗಿ ಮಾಡಿದರು. ಇದರ ಮುಂದುವರಿದ ಭಾಗವಾಗಿ ೧೬೩೧ ರ ಮಾರ್ಚ್ ೭ರಂದು

ಆತನೊಂದಿಗೆ ಅಂತಿಮ ಒಪ್ಪಂದಕ್ಕೆ ಸಹಿ ಮಾಡಲಾಯಿತು. ಈ ಒಪ್ಪಂದವು ವಾಣಿಜ್ಯೋದ್ಯಮದ ದೃಷ್ಟಿಯಿಂದ ಮಹತ್ವದ್ದಾಗಿದೆ. ಅದರ ಕೆಲವು ಪ್ರಮುಖ ಅಂಶಗಳು ಕೆಳಗಿನಂತಿದೆ.

(ಅ) ಪೋರ್ಚುಗೀಸರಿಗೆ ಪ್ರತೀ ವರ್ಷ ಇಕ್ಕೇರಿ ಸಂಸ್ಥಾನದ ವ್ಯಾಪ್ತಿಯಲ್ಲಿ ಬರುವ ಅರಣ್ಯಗಳಿಂದ ಹಡಗು ನಿರ್ಮಾಣ ಮತ್ತು ಇತರೆ ಕೆಲಸ ಕಾರ್ಯಗಳಿಗಾಗಿ ಅಗತ್ಯವಿರುವಷ್ಟು ಮರಗಳನ್ನು ಸಾಗಿಸಲು ಅವಕಾಶ ನೀಡುವುದು. ಈ ರೀತಿ ಸಾಗಿಸಲ್ಪಡುವ ಮರಗಳಿಗೆ ಯಾವುದೇ ಸುಂಕ ವಿಧಿಸಲ್ಪಡುವುದಿಲ್ಲ.

(ಆ) ಕಳೆದ ಎಂಟು ವರ್ಷಗಳಿಂದ ಪೋರ್ಚುಗೀಸರು ಪಡೆದುಕೊಳ್ಳುತ್ತಿದ್ದ ಮತ್ತು ಅವರು ಮಾರುತ್ತಿದ್ದ ವಸ್ತುಗಳ ಮೇಲೆ ಇದ್ದ ಸುಂಕವನ್ನು ನಿಲ್ಲಿಸಲಾಯಿತು. ಮಸ್ಕತ್‌ನ ಹಡಗುಗಳಿಗೆ ಯಾವುದೇ ಸುಂಕ ವಿಧಿಸದಿರುವುದು.

(ಇ) ಇಕ್ಕೇರಿ ಪ್ರಾಂತ್ಯದ ಒಳಭಾಗ ಮತ್ತು ಗೇರುಸೊಪ್ಪೆಯ ಪ್ರಾಂತ್ಯದ ಕರಿಮೆಣಸು ಯಾವುದೇ ಅಡೆತಡೆಯಿಲ್ಲದೆ ಪೋರ್ಚುಗೀಸರು ಪಡೆದುಕೊಳ್ಳುವುದಕ್ಕೆ ಅಥವಾ ಮಾರುಕಟ್ಟೆಗೆ ತರುವುದಕ್ಕೆ ಅವಕಾಶ ಒದಗಿಸುವುದು. ಯಾವುದೇ ಮಿತಿಯಿಲ್ಲದೆ ವೀರಪ್ಪ ನಾಯಕನ ಪ್ರಾಂತ್ಯದಿಂದ ವೈಸ್‌ರಾಯ್ ಆಡಳಿತದ ಗೋವಾಕ್ಕೆ ಕರಿಮೆಣಸಿನ ಮಾರಾಟಕ್ಕೆ ಅವಕಾಶ ಒದಗಿಸುವುದು. ಒಂದು ವೇಳೆ ಮಾರಾಟದ ಸಮಯದಲ್ಲಿ ದರವನ್ನು ನಿಗದಿ ಮಾಡುವಾಗ ಒಪ್ಪಂದದಲ್ಲಿ ನಮೂದಿತವಾದ ಬೆಲೆಯನ್ನು ಪರಿಗಣನೆಗೆ ತೆಗೆದುಕೊಳ್ಳುವುದು (ಶಾಸ್ತ್ರಿ ೨೦೦೦:೧೫೭).

ಈ ಒಪ್ಪಂದಗಳು ಆದ ನಂತರದ ಎರಡು ತಿಂಗಳುಗಳ ಕಾಲಾವಧಿಯಲ್ಲೇ ವೀರಪ್ಪ ನಾಯಕನು ಮೃತನಾದನು. ಆದುದರಿಂದ ವೀರಭದ್ರ ನಾಯಕನೇ ಮತ್ತೆ ರಾಜನಾದ.  ಈಗಾಗಲೇ ಚಾಲ್ತಿಯಲ್ಲಿದ್ದ ಒಪ್ಪಂದಗಳಿಗೆ ಪೂರಕವಾಗಿ ವೀರಭದ್ರ ನಾಯಕನು ಹೊಸ ಷರತ್ತುಗಳನ್ನು ಹಾಕಿದನು. ಆ ಪ್ರಕಾರ ಈಗಾಗಲೇ ಆಗಿರುವ ಒಪ್ಪಂದದ ಪ್ರಕಾರ ಕರಿಮೆಣಸ್ಸನ್ನು ಪೋರ್ಚುಗೀಸರು ಪಡೆಯುವುದು. ಪೋರ್ಚುಗೀಸರು ಗಂಗೊಳ್ಳಿಯಲ್ಲಿ ಹೊಂದಿರುವ ಕೋಟೆಯನ್ನು ನಾಶಪಡಿಸುವುದು ಮೊದಲಾದವುಗಳು ಸೇರಿತ್ತು.

ವೀರಭದ್ರ ನಾಯಕನು ಬಂಡಾಯವೆದ್ದಿರುವ ಅಪ್ಪರ್ ಬಸ್ರೂರಿನ ಆಡಳಿತದ ವಿರುದ್ಧ ೧೬೩೨ರಲ್ಲಿ ಸೈನ್ಯವನ್ನು ಕಳುಹಿಸಿದನು. ವೀರಭದ್ರ ನಾಯಕ ಬಿಜಾಪುರದ ಆದಿಲ್‌ಷಾಹಿಯೊಂದಿಗೆ ಶಾಂತಿ ಮಾತುಕತೆ ನಡೆಸುವುದನ್ನು ಗಮನಿಸಿದ ವೈಸ್‌ರಾಯ್‌ರವರು ಕೆನರಾದ ಬೆಳವಣಿಗೆಗಳ ಬಗ್ಗೆ ಸಾಕಷ್ಟು ಪರಿಜ್ಞಾನ ಹೊಂದಿರುವ ಬಾಲ್ಟಿಜಾರ್ ಮರಿನ್ಹೋರವರನ್ನು ತನ್ನ ರಾಯಭಾರಿಯಾಗಿ ವೀರಭದ್ರನಲ್ಲಿ ಕಳುಹಿಸಿದನು. ಇದು ಫಲಪ್ರದವಾಗಲಿಲ್ಲ. ಅಪ್ಪರ್ ಬಸ್ರೂರಿನಲ್ಲಿ ವೀರಭದ್ರನ ಸೈನ್ಯ ಜಯಶಾಲಿಯಾಯಿತು.

ಮುಂದೆ ೧೬೩೨ರಲ್ಲಿ ವೀರಭದ್ರ ನಾಯಕನ ರಾಯಭಾರಿಯಾಗಿ ವಿಠಲ ಶೆಣೈ ಗೋವಾಕ್ಕೆ ಬಂದು ಪೋರ್ಚುಗೀಸರ ಮುಂದೆ ಶಾಂತಿ ಮತು ಗೆಳೆತನದ ಪ್ರಸ್ತಾಪಗಳನ್ನು ಸಲ್ಲಿಸಿದನು. ಒಟ್ಟು ೧೨ ಅಂಶಗಳನ್ನು ಒಳಗೊಂಡಿರುವ ಈ ಶಾಂತಿ ಒಪ್ಪಂದದ ಪ್ರಸ್ತಾಪದಲ್ಲಿ ಕೆಳಗೆ ಕಾಣಿಸಿರುವ ಅಂಶಗಳು ವಾಣಿಜ್ಯೋದ್ಯಮದ ಉದ್ದೇಶವನ್ನು ಒಳಗೊಂಡಿತ್ತು.

ಅ. ಸಾಂಪ್ರದಾಯಿಕ ಭೂ ತೆರಿಗೆಯನ್ನು ಗಂಗೊಳ್ಳಿಯ ಜನರಿಂದ ಪೋರ್ಚುಗೀಸರು ಸಂಗ್ರಹಿಸುವುದು. ಆದರೆ ದೇವಸ್ಥಾನಕ್ಕೆ ಸಂಬಂಧಿಸಿ ಈ ಬಗ್ಗೆ ಮಾಫಿ ನೀಡುವುದು.

ಆ. ಕರಿಮೆಣಸಿನ ದರವನ್ನು ವೈಸ್‌ರಾಯ್‌ರವರು ನಿರ್ಧರಿಸುವುದು.

ಇ. ಗೋವಾದ ವೈಸ್‌ರಾಯ್‌ರವರು ಪ್ರತಿ ವರ್ಷ ಮೆಕ್ಕಾ, ಮೆಸ್ಕತ್ ಮತ್ತು ಕಿಷಿನ್ ಪ್ರಾಂತ್ಯಗಳ ಮೂರು ವ್ಯಾಪಾರಿ ಹಡಗುಗಳಿಗೆ ತಂಗಲು ಲೈಸೆನ್ಸನ್ನು ಉಚಿತವಾಗಿ ನೀಡುವುದು.

ಈ. ಪೋರ್ಚುಗೀಸರಿಗೆ ಈ ಮೊದಲಿನಂತೆ ಅಕ್ಕಿ ಮತ್ತು ಮರವನ್ನು ಇಕ್ಕೇರಿಯ ಪ್ರಾಂತ್ಯದಿಂದ ಪಡೆಯಲು ಅವಕಾಶ ನೀಡುವುದು.

ಉ. ಯಾವುದೇ ದೇಶದ ಕಡ್ಗಳ್ಳರನ್ನು ಸೇರಿಸಿಕೊಳ್ಳದಿರುವುದು.

ಊ. ಸಾಂಪ್ರದಾಯಿಕವಲ್ಲದ ಯಾವುದೇ ತೆರಿಗೆಗಳನ್ನು ಪೋರ್ಚುಗೀಸರಿಗೆ ವಿಧಿಸದಿರುವುದು.

ಋ. ಪೋರ್ಚುಗೀಸರು ಮುಟ್ಟುಗೋಲು ಹಾಕಿರುವ ಇಕ್ಕೇರಿಯ ಎರಡು ಹಡಗುಗಳನ್ನು ಹಿಂತಿರುಗಿಸುವುದು.

ಕರಿಮೆಣಸು ಮತ್ತು ಇತರೆ ವಿಷಯಗಳಿಗೆ ಸಂಬಂಧಿಸಿದಂತೆ ವೈಸ್‌ರಾಯ್‌ರಿಂದ ಯಾವುದೇ ನಿರ್ದಿಷ್ಟ ತಿಳುವಳಿಕೆಗೆ ಬರಲು ಸಾಧ್ಯವಾಗದೆ ಮತ್ತೆ ಚೌಕಾಷಿ ಮುಂದುವರಿಯಿತು. ಅದರ ಅಂತಿಮ ಒಪ್ಪಂದವೆಂದರೆ ಪೋರ್ಚುಗೀಸರು ಪ್ರತೀ ವರ್ಷ ೩೫೦ ಕಂಡಿ[೧೦] ಕರಿಮೆಣಸನ್ನು ಇಕ್ಕೇರಿ ಸಂಸ್ಥಾನದಿಂದ ಪಡೆದುಕೊಳ್ಳುವುದು. ಕಂಡಿಗೆ ೨೨ ಪಗೋಡದಂತೆ ಪ್ರಸ್ತುತ ವರ್ಷ ೫೦೦ ಕಂಡಿ ಕರಿಮೆಣಸನ್ನು ಪಡೆಯುವುದು. ಅಂತಿಮವಾಗಿ ೧೬೬೩ರ ಎಪ್ರಿಲ್ ೫ರಂದು ವೀರಭದ್ರ ನಾಯಕ ಮತ್ತು ಪೋರ್ಚುಗೀಸರ ಮಧ್ಯೆ ಒಂದು ಒಪ್ಪಂದಕ್ಕೆ ಸಹಿ ಹಾಕಲಾಯಿತು. ಈ ಒಪ್ಪಂದದಲ್ಲಿ ಇದ್ದ ಕ್ರಮಾಂಕ ಐದು ಮತ್ತು ಎಂಟರ ಒಪ್ಪಂದದ ಅಂಶಗಳು ವಾಣಿಜ್ಯಾತ್ಮಕ ಅಂಶದಿಂದ ಮಹತ್ವದ್ದಾಗಿದೆ.

ಎ. ಪೋರ್ಚುಗಲ್ ದೊರೆಯಿಂದ ಬಸ್ರೂರು ಕೋಟೆಯನ್ನು ನೆಲಸಮ ಮಾಡಲು ಆದೇಶ ಬರುವವರೆಗೆ ಪೋರ್ಚುಗೀಸರು ಮತ್ತು ವೀರಭದ್ರ ನಾಯಕನು ಗಂಗೊಳ್ಳಿ ಮತ್ತು ಬಸ್ರೂರು ಕೋಟೆಗೆ ಸಂಬಂಧಿಸಿ ಯಾವುದೇ ಬದಲಾವಣೆ ಅಥವಾ ನವೀಕರಣ ಮಾಡದಿರುವುದು.

ಬಿ. ಪೋರ್ಚುಗೀಸ್ ಮತ್ತು ವೀರಭದ್ರ ನಾಯಕನ ಮಧ್ಯೆ ಎಂದೆಂದೂ ಅಳಿಯದ ಗೆಳೆತನ ಬೆಳೆಸುವುದು. ಆ ಪ್ರಕಾರ ಶತ್ರುವಿನ ವಿರುದ್ಧ ಮತ್ತು ಗೆಳೆಯನ ಪರವಾಗಿ ಪರಸ್ಪರ ಸಹಕರಿಸುವುದು. ವೀರಭದ್ರನು ಮಲಬಾರ್ ಪ್ರಾಂತ್ಯದ ಕಡಲುಗಳ್ಳರಿಗೆ ತನ್ನ ವ್ಯಾಪ್ತಿಯ ಬಂದರುಗಳಲ್ಲಿ ಅವಕಾಶ ನೀಡದಿರುವುದು.

ಸಿ. ಯಥಾ ಪ್ರಕಾರ ವೀರಭದ್ರ ನಾಯಕನು ಇಕ್ಕೇರಿಯ ಪ್ರಾಂತ್ಯದಿಂದ ಮತ್ತು ಪೋರ್ಚುಗೀಸ್ ಆಡಳಿತವಿರುವ ಇತರ ಕಡೆಗಳಿಗೆ ಅಕ್ಕಿ ಮತ್ತು ಇತರ ಆಹಾರ ಧಾನ್ಯಗಳನ್ನು ಸರಬರಾಜು ಮಾಡುವುದು. ಅಪ್ಪರ್ ಬಸ್ರೂರಿನ ಥಾನಾದಾರರಿಗೆ ಈ ಬಗ್ಗೆ ಸ್ಪಷ್ಟ ನಿರ್ದೇಶನ ನೀಡಿ ಅಕ್ಕಿಯ ಸರಬರಾಜು ನಿರಂತರವಾಗುವಂತೆ ಖಾತ್ರಿ ಪಡಿಸುವುದು.

ಡಿ. ವೀರಭದ್ರ ನಾಯಕನು ಅಪ್ಪರ್ ಬಸ್ರೂರಿನ ವ್ಯಾಪಾರಿಗಳು ಈ ಮೊದಲಿನಿಂದಲೂ ಸಾಂಪ್ರದಾಯಿಕವಾಗಿ ನೀಡುತ್ತಿದ್ದ ೫೦೦ ಚೀಲ ವಾರ್ಷಿಕ ಕಪ್ಪ ಕಾಣಿಕೆಯನ್ನು ಪೋರ್ಚುಗೀಸರಿಗೆ ಪಾವತಿಸುವಂತೆ ಕ್ರಮ ಕೈಗೊಳ್ಳುವುದು.

ಇ. ಪೋರ್ಚುಗೀಸರು ವೀರಭದ್ರ ನಾಯಕನಿಂದ ಪ್ರತೀ ವರ್ಷ ಒಂದು ಕಂಡಿಗೆ ೨೨ ಪಗೋಡದಂತೆ ವಾರ್ಷಿಕ ೩೫೦ ಕಂಡಿ ಕರಿಮೆಣಸು ವಿಕ್ರಯಿಸುವುದು. ಇದರ ಬೆಲೆ ಪಾವತಿಗೆ ಸಂಬಂಧಿಸಿ ೧೦೨ ಹಳೆಯ ಸಾವೋಟಾಮೆ ನಾಣ್ಯ ಅಂದರೆ ೧೦೦ ಇಕ್ಕೇರಿಯ ಪಗೋಡ ಎಂಬ ಲೆಕ್ಕಾಚಾರದಲ್ಲಿ ವಿನಿಮಯ ದರವನ್ನು ಅನ್ವಯಿಸುವುದು. ಒಂದು ವೇಳೆ ಇದಕ್ಕಿಂತ ಹೆಚ್ಚುವರಿ ಕರಿಮೆಣಸು ವಿಕ್ರಯಿಸಲು ಪೋರ್ಚುಗೀಸರು ಅಪೇಕ್ಷಿಸಿದಲ್ಲಿ ದರ ನಿಗದಿಯನ್ನು ಪರಸ್ಪರ ಒಪ್ಪಂದದನ್ವಯ ಪೋರ್ಚುಗೀಸರು ಮತ್ತು ವೀರಭದ್ರನ ಮಧ್ಯೆಯೂ ವ್ಯಾಪಾರಿಗಳ ಸಮುದಾಯದ ಮಧ್ಯೆಯೂ ನಿರ್ಧರಿತ ಒಪ್ಪಂದದನ್ವಯ ನಡೆಸುವುದು.

ಎಫ್.ವೀರಭದ್ರ ನಾಯಕನು ಪ್ರತೀ ವರ್ಷ ಗೋವಾ ಬಂದರಿನ ಮುಖಾಂತರ ೧೨ ಅರೇಬಿಯಾದ ಕುದುರೆಗಳನ್ನು ಪಡೆಯಬಹುದು. ಇದಕ್ಕೆ ಪ್ರತಿಯಾಗಿ ಗೇರುಸೊಪ್ಪೆಯ ನದಿ ಮೂಲಕ ಪೋರ್ಚುಗೀಸರ ಹಡಗಿಗೆ ಹಾಯಿ(ಕೈ ಕೋಲು) ಮಾಡುವರೇ ೨೦ ಕೂವೆ ಮರಗಳನ್ನು ಒದಗಿಸುವುದು.

ಜಿ. ಪೋರ್ಚುಗೀಸರು ವೀರಭದ್ರನ ಮೂರು ಹಡಗುಗಳಿಗೆ ಪ್ರತೀ ವರ್ಷ ಮಕ್ಕಾ, ಮಸ್ಕತ್ ಮತ್ತು ಕಿಸ್ಕಿನ್‌ಗಳಿಗೆ ಸಂಚರಿಸಲು ಉಚಿತ ಪಾಸ್‌ಪೋರ್ಟ್ ನೀಡುವುದು.

ಎಚ್.ಪೋರ್ಚುಗೀಸರ ಹಡಗು ನಿರ್ಮಾಣ ಮತ್ತು ಇತರೆ ಅವಶ್ಯಕತೆಗಳಿಗೆ ಅಗತ್ಯವಾದ ಮರಗಳನ್ನು ವೀರಭದ್ರನ ಪ್ರಾಂತ್ಯದಿಂದ ಕಡಿಯಲು ಅವಕಾಶ ನೀಡುವುದು. ಅದಕ್ಕೆ ಯಾವುದೇ ಶುಲ್ಕ ವಿಧಿಸದಿರುವುದು. ಅವರ ಹಡಗು ಧಕ್ಕೆಯಲ್ಲಿ ಸಾಗಾಟಕ್ಕೆ ಸಹಾಯ ನೀಡುವುದು.

ಐ. ಕೆನರಾ ಪ್ರಾಂತ್ಯದ ವೀರಭದ್ರನ ತೆರಿಗೆ ಸಂಗ್ರಹದ ಅಧಿಕಾರಿಗಳು ಪೋರ್ಚುಗೀಸರಿಂದ ಈ ಮೊದಲು ವೀರಭದ್ರನ ಹಿರಿಯ ಅಜ್ಜ ವೆಂಕಟಪ್ಪನ ಅವಧಿಯಲ್ಲಿ ವಿಧಿಸಿದ ತೆರಿಗೆಗಳಿಗಿಂತ ಹೆಚ್ಚುವರಿ ತೆರಿಗೆ ವಸೂಲು ಮಾಡಬಾರದೆಂದು ನಿರ್ದೇಶನ ನೀಡುವುದು.

ಜೆ. ಪೋರ್ಚುಗೀಸರು ವಶಪಡಿಸಿಕೊಂಡಿರುವ ವೀರಭದ್ರನ ಎರಡು ಹಡಗುಗಳನ್ನು ಹಿಂತಿರುಗಿಸುವುದು.

ಕೆ. ಈ ಒಪ್ಪಂದಕ್ಕೆ ಸಂಬಂಧಪಟ್ಟು ಯಾರಾದರೂ ಒಬ್ಬರು ಯಾವುದೇ ಅಂಶಗಳನ್ನು ಉಲ್ಲಂಘಿಸಿದ್ದೇ ಆದಲ್ಲಿ ಇನ್ನೊಂದು ಪಕ್ಷಕ್ಕೆ ಅದರ ನಷ್ಟ ಪರಿಹಾರವನ್ನು ಕೊಡತಕ್ಕದ್ದು (ಶಾಸ್ತ್ರಿ ೨೦೦೦:೧೬೫)

ವೀರಭದ್ರ ನಾಯಕನು ಒಪ್ಪಂದದ ಕೆಲವು ಅಂಶಗಳನ್ನು ಉಲ್ಲಂಘನೆ ಮಾಡಿದುದಕ್ಕಾಗಿ ಆತನನ್ನು ಪೋರ್ಚುಗೀಸರು ತರಾಟೆಗೆ ತೆಗೆದುಕೊಂಡರು. ೧೬೩೪ರ ನವೆಂಬರ್ ೧೮ರಂದು ವೈಸ್‌ರಾಯ್ ಕೌನ್ಸಿಲಿನ ನಡಾವಳಿಯ ಪ್ರಕಾರ ವೀರಭದ್ರ ನಾಯಕನು ಒಂದು ಕಂಡಿ ಕರಿಮೆಣಸಿಗೆ ೨೮ ಪಗೋಡಾಗಳ ಬೇಡಿಕೆ ಇಟ್ಟಿದ್ದಾನೆ. ಆದರೆ ಒಪ್ಪಂದದ ಪ್ರಕಾರ ಕರಿಮೆಣಸಿನ ಬೆಲೆ ಒಂದು ಕಂಡಿಗೆ ೨೨ ಪಗೋಡಾಗಳು

ಎಂದು ನಿಗದಿ ಮಾಡಲಾಗಿದೆ. ಈ ಸಮಯದಲ್ಲಿ ವೀರಭದ್ರ ನಾಯಕನು ಕನಿಷ್ಟ ಒಂದು ಲೋಡ್ ಕೂಡಾ ಕರಿಮೆಣಸ್ಸನ್ನು ಪೋರ್ಚುಗೀಸರಿಗೆ ನೀಡದೆ ಹೆಚ್ಚಿನ ಬೆಲೆ ನೀಡಬೇಕೆಂದು ತಗಾದೆ ಇಟ್ಟನು. ಆದರೆ ವೈಸ್‌ರಾಯ್ ಕೌನ್ಸಿಲ್ ವೀರಭದ್ರನಿಗೆ ಎಚ್ಚರಿಕೆ ನೀಡಿ ಈ ಮೊದಲಿನ ಒಪ್ಪಂದಕ್ಕೆ ಬದ್ಧರಾಗಿರಬೇಕೆಂದೂ ಮತ್ತು ಯಾವುದೇ ಕಾರಣಕ್ಕೂ ಹೊಸತಾಗಿ ಹಗೆತನವನ್ನು ಪ್ರಾರಂಭಿಸಬಾರದೆಂದೂ ಹೇಳಿದನು. ಆ ಪ್ರಕಾರ ಕರಿಮೆಣಸು ವಿಕ್ರಯಿಸಲು ಕಳುಹಿಸಲ್ಪಟ್ಟ ಬಾಲ್ಟಜಾರ್ ಮರಿನೋಗೆ ಕೌನ್ಸಿಲ್ ಸ್ಪಷ್ಟ ನಿರ್ದೇಶನ ನೀಡಿತ್ತು. ವೀರಭದ್ರ ಒಪ್ಪದಿದ್ದಲ್ಲಿ ತಕ್ಷಣವೇ ಅಲ್ಲಿಂದ ಹೊರಡಬೇಕೆಂದು ನಿರ್ದೇಶನ ಕೊಟ್ಟಿತ್ತು. ಸರಿಸುಮಾರು ೧೬೩೫ರ ಹೊತ್ತಿಗೆ ವೀರಭದ್ರ ನಾಯಕನು ವಿವಿಧೆಡೆಯಲ್ಲಿ ಎದ್ದ ಸಾಮಂತರ ಎಲ್ಲಾ ದಂಗೆಗಳನ್ನು ಹತ್ತೋಟಿಗೆ ತಂದು ಸಾರ್ವಭೌಮನಾಗಿದ್ದ. ಈ ಹಿನ್ನೆಲ್ಲೆಯಲ್ಲಿ ವೈಸ್‌ರಾಯ್‌ಯು ವೀರಭದ್ರ ನಾಯಕನ ಬಗ್ಗೆ, "ಕೊಟ್ಟಿರುವ ಭರವಸೆಯನ್ನು ಧಿಕ್ಕರಿಸಿ ಹಠಮಾರಿಯಾಗಿ ವರ್ತಿಸುತ್ತಿರುವ" ರಾಜ ಎಂದು ವಿಶ್ಲೇಷಿಸಿದ್ದಾನೆ. (ಶಾಸ್ತ್ರಿ ೨೦೦೦, ೧೬೬). ಕೊನೆಯದಾಗಿ ವೀರಭದ್ರ ನಾಯಕನು ತನ್ನ ಬೇಡಿಕೆಯನ್ನು ಸಡಿಲಿಸಿ ಒಂದು ಕಂಡಿ ಕರಿಮೆಣಸಿಗೆ ೨೦ ಪಗೋಡಗಳಂತೆ ಕರಿಮೆಣಸು ಮತ್ತು ಅಕ್ಕಿಯನ್ನು ಕೂಡಾ ಪಡೆಯಲು ಅವಕಾಶ ಕಲ್ಪಿಸಿದನು.

ಮುಂದಿನ ವರ್ಷ ಅಂದರೆ ೧೬೩೬ರಲ್ಲಿ ಮತ್ತೆ ಕರಿಮೆಣಸ್ಸಿಗೆ ಹೆಚ್ಚಿನ ಬೆಲೆ ನೀಡಬೇಕೆಂದು ವೀರಭದ್ರನು ಒತ್ತಾಯಿಸಿದನು. ಆದರೆ ಪೋರ್ಚುಗೀಸ್ ವೈಸ್‌ರಾಯ್ ಕೌನ್ಸಿಲಿನಲ್ಲಿ ಯಾವುದೇ ಕಾರಣಕ್ಕೂ ಹೆಚ್ಚು ಬೆಲೆ ತೆತ್ತು ಕರಿಮೆಣಸು ವಿಕ್ರಯಿಸಬಾರದೆಂದು ನಿರ್ಣಯ ತೆಗೆದುಕೊಂಡಿತ್ತು. ಕುಂಬಳೆ ಮತ್ತು ಮಂಜೇಶ್ವರದ ರೈತರು ಯಾರಿಗೆ ಬೇಕಾದರೂ ಅಕ್ಕಿ ಮಾರಾಟ ಮಾಡಲು ಸಿದ್ಧರಿರುವ ಕಾರಣ ಅಲ್ಲಿಂದಲೇ ಅದನ್ನು ಪಡೆಯಬೇಕೆಂದು ನಿರ್ಧರಿಸಿದರು. ಈ ಕೌನ್ಸಿಲ್ ತೆಗೆದುಕೊಂಡ ಇನ್ನೊಂದು ಪ್ರಮುಖ ತೀರ್ಮಾನದಲ್ಲಿ ಬಸ್ರೂರಿನ ಕೋಟೆಯನ್ನು ಯಾವುದೇ ಕಾರಣಕ್ಕೂ ನೆಲಸಮ ಮಾಡದಿರಲು ನಿರ್ಣಯಿಸಲಾಯಿತು.

ಉದ್ವಿಗ್ನಮಯ ಚರ್ಚೆಗಳ ಸನ್ನಿವೇಶದಲ್ಲಿ ವೀರಭದ್ರ ನಾಯಕನು ದೇವರಾಯ ಶೆಣೈ ನೇತೃತ್ವದ ರಾಯಭಾರಿಯನ್ನು ಎಪ್ರಿಲ್ ೧೬೩೬ರಲ್ಲಿ ಗೋವಾಕ್ಕೆ ಕಳುಹಿಸಿಕೊಟ್ಟನು. ಇಕ್ಕೇರಿ ಪೋರ್ಚುಗೀಸ್ ಸಂಬಂಧಗಳ ಮಧ್ಯೆ ಸೌಹಾರ್ದತೆಯನ್ನು ಕಾಯ್ದುಕೊಳ್ಳಲು ಹೆಚ್ಚು ಒತ್ತು ನೀಡುವ ದಾಖಲೆಗಳನ್ನು ಹಸ್ತಾಂತರಿಸಲಾಯಿತು. ಈ ದಾಖಲೆಗಳಲ್ಲಿ ಕರಿಮೆಣಸಿಗೆ ಹೆಚ್ಚಿನ ಬೆಲೆಯ ಪ್ರಸ್ತಾಪ, ಬಸ್ರೂರು ಮತ್ತು ಗಂಗೊಳ್ಳಿಗಳಲ್ಲಿ ಇರುವ ಪೋರ್ಚ್‌ಗೀಸರ ಕೋಟೆಗಳ ನೆಲ ಸಮಗೊಳಿಸುವ ಪ್ರಸ್ತಾಪವೂ ಇತ್ತು. ದೇವರಾಯ ಶೆಣೈ ನಿಯೋಗದ ಪ್ರಸ್ತಾಪಗಳಿಗೆ ನಿರ್ದಿಷ್ಟ ರೂಪುರೇಷೆ ಕೊಡಲು ಅಕ್ಟೋಬರ್ ತಿಂಗಳ ಕೊನೆಯವರೆವಿಗೂ ಸಾಧ್ಯವಾಗಲಿಲ್ಲ.

ವೀರಭದ್ರನಾಯಕನು ಪೋರ್ಚುಗೀಸರೊಂದಿಗೆ ವ್ಯಾಪಾರದ ಚೌಕಾಷಿಯಲ್ಲಿ ತನ್ನ ರಾಜ್ಯದ ಹಿತಾಸಕ್ತಿಯನ್ನು ಬಿಟ್ಟುಕೊಡಲು ಸಿದ್ಧನಿರಲಿಲ್ಲ. ೧೬೩೭ರ ಮಾರ್ಚ್ ತಿಂಗಳಲ್ಲಿ ವೈಸ್‌ರಾಯ್‌ರವರಿಗೆ ಪತ್ರ ಬರೆದು ಒಂದು ಕಂಡಿ ಕರಿಮೆಣಸಿಗೆ ೨೮ ಪಗೋಡ ಬೆಲೆ ನೀಡಬೇಕೆಂದು ಒತ್ತಾಯಿಸಿದನು. ಏಕೆಂದರೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಪ್ರತಿನಿಧಿಯು ಒಂದು ಕಂಡಿ ಕರಿಮೆಣಸನ್ನು ೩೦

ಪಗೋಡಕ್ಕೆ ಪಡೆದುಕೊಳ್ಳಲು ಸಿದ್ಧನಿದ್ದನು. ಬ್ರಿಟಿಷರು ಒಂದು ಕಂಡಿಗೆ ನೀಡುವ ಬೆಲೆಯಲ್ಲಿ ೨೨.೫ ಪಗೋಡವನ್ನು ಸೀಸದ ರೂಪದಲ್ಲಿ ಪಾವತಿಸಲು ತಯಾರಿರುವುದಾಗಿ ತಿಳಿಸಿದನು. ಇದಕ್ಕೆ ಪ್ರತಿಕ್ರಿಯಿಸಿದ ವೈಸ್‌ರಾಯ್‌ರವರು ಇಂಗ್ಲೀಷರು ಇಕ್ಕೇರಿಯನ್ನು ಮೋಸ ಮಾಡುತ್ತಿದ್ದಾರೆಂದೂ ವೀರಭದ್ರನಿಗೆ ತಿಳಿಸಿದನು. ಏಕೆಂದರೆ ಅದೇ ಸೀಸವನ್ನು ಒಂದು ಖಂಡಿಗೆ ಪೋರ್ಚುಗೀಸರಿಗೆ ಇಂಗ್ಲೀಷರು ಕಡಿಮೆ ದರಕ್ಕೆ ನೀಡುತ್ತಿರುವುದಾಗಿ ತಿಳಿಸುವ ಮೂಲಕ ವೀರಭದ್ರ ನಾಯಕನನ್ನು ಇಕ್ಕಟ್ಟಿನಲ್ಲಿ ಸಿಲುಕಿಸಿದರು. ಇಂಗ್ಲೀಷರ ದರದಲ್ಲಿ ಸೀಸವನ್ನು ಪೋರ್ಚುಗೀಸರಿಂದ ಖರೀದಿಸುವುದಾದರೆ ಕರಿಮೆಣಸನ್ನು ಪ್ರತೀ ಖಂಡಿಗೆ ೩೦ ಪಗೋಡಾ ದರದಲ್ಲಿ ವಿಕ್ರಯಿಸುವ ತಂತ್ರಪೂರಿತ ಬೇಡಿಕೆಯನ್ನು ಪೋರ್ಚುಗೀಸರು ಅನುಸರಿಸಿದರು. ಇದು ಪೋರ್ಚುಗೀಸರ ಅತ್ಯುತ್ತಮವಾದ ವಾಣಿಜ್ಯದ ತಂತ್ರವಾಗಿತ್ತು. ತನ್ಮೂಲಕ ವೀರಭದ್ರ ನಾಯಕನನ್ನು ಅತಂತ್ರವಾದ ಗೊಂದಲಮಯ ಮನೋಸ್ಥಿತಿಯಲ್ಲಿ ಇರಿಸಿ ಅಕ್ಕಿಯ ಸರಬರಾಜಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಂಡರು (ಶಾಸ್ತ್ರಿ ೨೦೦೦:೧೭೧).

ವೈಸ್‌ರಾಯ್ ಕೌನ್ಸಿಲ್, ಕೆನರಾ ಕ್ಯಾಪ್ಟನ್ ಮೇಜರ್ ಮಾರ್ಟಿವಲ್ ಜೆಕ್ಸಿಕಾ ಡಿ' ಅಜಾವೆಡೋ ಮತ್ತು ವ್ಯಾಪಾರಿಯಾಗಿರುವ ಶಂಕರ ಡಿ' ಗಾಮಾರನ್ನು ಒಳಗೊಂಡ ರಾಜಭಾರಿ ನಿಯೋಗವನ್ನು ವೀರಭದ್ರ ನಾಯಕನಲ್ಲಿಗೆ ಕಳುಹಿಸಿಕೊಟ್ಟಿತ್ತು. ಅಜಾವೆಡೋ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಮಾತುಕತೆಯನ್ನು ಪೂರೈಸಿ, ಕರಿಮೆಣಸು ಜುಲೈ ಮೊದಲಲ್ಲೇ ಬರಬೇಕೆಂದು ನಿರ್ದೇಶಿಸಲಾಗಿತ್ತು.

ಮುಂದುವರಿದು ನೀಡಿದ ನಿರ್ದೇಶನದಲ್ಲಿ ವೀರಭದ್ರ ನಾಯಕನ ಪ್ರಾಂತ್ಯದಿಂದ ಎಷ್ಟು ಬೇಕೋ ಅಷ್ಟು ಕರಿಮೆಣಸನ್ನು ಕಂಡಿಗೆ ೨೨ ಪಗೋಡಾಕ್ಕಿಂತ ಜಾಸ್ತಿ ದರದಲ್ಲಿ ಅನಿವಾರ್ಯವಾದರೆ ಪಡೆಯುವುದು. ಆದರೆ ಹೆಚ್ಚುವರಿ ಪ್ರಮಾಣದ ಕರಿಮೆಣಸ್ಸನ್ನು ಪ್ರಸ್ತುತ ದರಕ್ಕಿಂತ ಕಡಿಮೆ ದರದಲ್ಲಿ ಪಡೆದುಕೊಳ್ಳಬೇಕೆಂದೂ ಆ ಮೂಲಕ ಕರಿಮೆಣಸಿನ ದರ ಪ್ರಸ್ತುತ ದರಕ್ಕೆ ಸರಿದೂಗಿಸಿಕೊಳ್ಳಬೇಕೆಂದು ನಿರ್ದೇಶಿಸಲಾಗಿತ್ತು. ಇದು ಮಾರ್ಕೆಟ್‌ದರ ಈಗಾಗಲೇ ಚಾಲ್ತಿಯಲ್ಲಿರುವ ಒಪ್ಪಂದದ ದರಕ್ಕಿಂತ ಜಾಸ್ತಿ ಇದೆ ಎಂಬುದನ್ನು ತೋರಿಸುತ್ತದೆ. ಆದರೆ ಪೋರ್ಚುಗೀಸರು ಅದನ್ನು ಪಾವತಿಸಲು ಸಿದ್ಧರಿರಲಿಲ್ಲ. ಆದರೂ ಸಹ ವೀರಭದ್ರ ನಾಯಕನು ಪೋರ್ಚುಗೀಸರೊಂದಿಗೆ ಮಾಡಿದ ಒಪ್ಪಂದವನ್ನು ಮುರಿಯುತ್ತಿದ್ದಾನೆಂದು ಹೇಳುತ್ತಿದ್ದರು. ಎರಡನೆಯದಾಗಿ ಮಸ್ಕತ್ ಬಳಿ ವೀರಭದ್ರ ನಾಯಕನ ಹಡಗನ್ನು ವಶಪಡಿಸಿರುವ ಬಗ್ಗೆ ವಿವರ ಪಡೆದನು. ಇದಕ್ಕೆ ಪರಿಹಾರವಾಗಿ ೨೫೦೦ ಪಗೋಡಾ ವಸ್ತುಗಳನ್ನು ವೈಸ್‌ರಾಯ್‌ರವರು ಪಾವತಿಸಲು ಸಿದ್ಧರಿರುವುದಾಗಿಯೂ, ಆದರೆ ಮರವನ್ನು ಉಚಿತವಾಗಿ ನೀಡಬೇಕೆಂದೂ ಷರತ್ತನ್ನು ಹಾಕುತ್ತಾರೆ. ಇನ್ನೊಂದು ಪ್ರಮುಖ ಅಂಶ ಚರ್ಚಿತವಾಗಿರುವುದು ಪೋರ್ಚುಗೀಸರ ಎದುರಾಳಿ ಇಂಗ್ಲೀಷ್ ವರ್ತಕರಿಗೆ ಕೆನರಾ ಪ್ರಾಂತ್ಯದಲ್ಲಿ ಅವಕಾಶ ಕಲ್ಪಿಸಿಕೊಡದೇ ಇರುವ ನಿಲುವಿಗೆ ಬದ್ಧನಾಗಿರುವುದು. ಈ ಬಗ್ಗೆ ಲಿಖಿತ ಭರವಸೆಯನ್ನು ಪಡೆಯಲು ಪೋರ್ಚುಗೀಸರು ಒತ್ತಾಯಿಸಿದರು.

ಡಿಸೆಂಬರ್ ೧೬೩೮ರಲ್ಲಿ ವೀರಭದ್ರನ ದಂಡನಾಯಕ ಸಿದ್ಧಪ್ಪ ಲಿಂಗಪ್ಪನು ಭಟ್ಕಳದಲ್ಲಿ ಇಂಗ್ಲೀಷರ ಹಡಗು ಪ್ರವೇಶಿಸುವುದನ್ನು ತಡೆದನು. ಭಟ್ಕಳದಲ್ಲಿ ಇದ್ದ ಇಂಗ್ಲೀಷ್ ಫ್ಯಾಕ್ಟರಿಯನ್ನು ಕೂಡಾ ನಾಶ ಕೂಡ ಮಾಡಿದನು. ಆದರೆ ಇಂಗ್ಲೀಷರು ವೀರಭದ್ರನ ಆಸ್ಥಾನದಲ್ಲಿ ಇದ್ದ ಪ್ರಮುಖರಿಗೆ ಸಾಕಷ್ಟು ಲಂಚ

ಮತ್ತು ಉಡುಗೊರೆಗಳನ್ನು ನೀಡುತ್ತಾ ತಮ್ಮ ಪ್ರತಿನಿಧಿ ಅಲ್ಲಿ ಇದ್ದುಕೊಂಡು ವ್ಯಾಪಾರ-ವ್ಯವಹಾರ ಕುದುರಿಸುವಂತೆ ನೋಡಿಕೊಂಡರು.

ಇದೇ ಅವಧಿಯಲ್ಲಿ ಬಸ್ರೂರಿನಲ್ಲಿ ಇದ್ದ ವೀರಭದ್ರ ನಾಯಕನ ಆಡಳಿತಾಧಿಕಾರಿ ವಾಸುದೇವನು ಪೋರ್ಚುಗೀಸರ ವಿರೋಧಿಯಾಗಿದ್ದನು. ಈತನು ಬಸ್ರೂರು ಕೋಟೆಯ ಹತ್ತಿರದಲ್ಲಿ ಐದು ದಿನಗಳ ಕಾಲ ಡಚ್ಚರ ಹಡಗು ತಂಗಲು ಅವಕಾಶ ಮಾಡಿಕೊಟ್ಟನು. ಮುಂದೆ ಇವರು ವೀರಭದ್ರ ನಾಯಕನಿಗೆ ಪತ್ರ ಬರೆದು ಡಚ್ಚರಿಗೆ ಬಸ್ರೂರಲ್ಲಿ ಕೋಟೆಕಟ್ಟಲು ಅವಕಾಶ ಕಲ್ಪಿಸಬೇಕೆಂದು ಕೇಳಿಕೊಂಡನು. ವೀರಭದ್ರ ನಾಯಕನು ಪೋರ್ಚುಗೀಸ್ ವೈಸ್‌ರಾಯ್‌ಗೆ ಬರೆದ ಪತ್ರ ೧೬೪೫ ಮಾರ್ಚ್ ೬ ರ ಪ್ರಕಾರ ಭಟ್ಕಳದಲ್ಲಿ ಇದ್ದ ಇಂಗ್ಲೀಷರ ಕೋಟೆಯನ್ನು ನೆಲಸಮ ಮಾಡಲಾಗಿತ್ತು. ಆದರೆ ೧೬೪೨ರಲ್ಲಿ ಮತ್ತೆ ಅವರು ಅದನ್ನು ಮರು ಸ್ಥಾಪಿಸಿದರು. ವೀರಭದ್ರನು ಈ ರೀತಿಯ ಧೋರಣೆಯು ಪೋರ್ಚುಗೀಸರ ಮಧ್ಯೆ ಆತಂಕ ಮತ್ತು ತಳಮಳಕ್ಕೆ ಕಾರಣವಾಯಿತು (ಡಿಸ್ನಿ ೨೦೧೪:೧೧೧). ಅಷ್ಟೇ ಅಲ್ಲದೆ ಬಸ್ರೂರಲ್ಲಿ ಅವರಿಗೆ ವ್ಯಾಪಾರ ವ್ಯವಹಾರ ನಡೆಸಲು ಅವಕಾಶ ಕಲ್ಪಿಸಿಕೊಟ್ಟರು.

೧೬೪೪ರಲ್ಲಿ ವೀರಭದ್ರ ನಾಯಕನ ಮಾವ ಶಿವಪ್ಪ ನಾಯಕನು ದಂಗೆ ಎದ್ದನು. ಮುಂದೆ ೧೬೪೫ರಲ್ಲಿ ವೀರಭದ್ರ ನಾಯಕನನ್ನು ಕೊಲೆ ಮಾಡಿ ಇವನು ಇಕ್ಕೇರಿಯ ರಾಜನಾದನು.

ಶಿವಪ್ಪ ನಾಯಕನು (೧೬೪೫-೬೦) ಇಕ್ಕೇರಿಯ ರಾಜರುಗಳಲ್ಲೇ ಅತ್ಯಂತ ಹೆಸರಾಂತ ರಾಜನಾಗಿದ್ದು, ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರ ಪ್ರಾಬಲ್ಯವನ್ನು ಮುರಿಯಲು ಕಾರಣನಾಗಿದ್ದಾನೆ ಹ೧೬೫೦ರ ಒಳಗೆ ಕೆನರಾ ಪ್ರಾಂತ್ಯದಲ್ಲಿದ್ದ ಪೋರ್ಚುಗೀಸರ ಎಲ್ಲಾ ಕೋಟೆಗಳನ್ನು ಶಿವಪ್ಪ ನಾಯಕನು ಕೈವಶ ಮಾಡಿಕೊಂಡನು. ಆದರೆ ಪೋರ್ಚುಗೀಸರಿಗೆ ಅವರ ವ್ಯಾಪಾರದ ಮಳಿಗೆಯನ್ನು ಪ್ರಾರಂಭಿಸಲು ಕೆಲವು ಬಂದರುಗಳಲ್ಲಿ ಅವಕಾಶ ಒದಗಿಸಿದನು. ಆತನ ಮರಣದವರೆಗೆ ಯಾವುದೇ ನಿರ್ದಿಷ್ಟವಾದ ಒಪ್ಪಂದಗಳನ್ನು ಮಾಡಲಿಲ್ಲ. ಪೋರ್ಚುಗೀಸರು ಎದುರಿಸಿದ ಯುದ್ಧದ ಸಂದರ್ಭಗಳಲ್ಲಿ ಪರಿಸ್ಥಿತಿಯು ಶಿವಪ್ಪ ನಾಯಕನ ಪರವಾಗಿಯೇ ಇತ್ತು.

ಡಚ್ಚರು ಈಗಾಗಲೇ ಶಿವಪ್ಪ ನಾಯಕನೊಂದಿಗೆ ಸಂಪರ್ಕ ಸಾಧಿಸಿದ್ದು ಪೋರ್ಚುಗೀಸರ ವಿರುದ್ಧ ಹೋರಾಡಲು ಸಿದ್ಧರಾಗಿದ್ದರು. ಡಚ್ಚರು ಕೆನರಾ ಪ್ರಾಂತ್ಯದಲ್ಲಿ ತಮ್ಮ ವ್ಯಾಪಾರ-ವ್ಯವಹಾರಗಳನ್ನು ಕುದುರಿಸಲು ಹೆಚ್ಚು ಆಸಕ್ತಿ ವಹಿಸಿದ್ದರು.

ಡಚ್ಚರು ಪೋರ್ಚುಗೀಸರ ವಿರುದ್ಧ ಯುದ್ಧ ಸಾರಲು ಶಿವಪ್ಪ ನಾಯಕನನ್ನು ಪ್ರಚೋದಿಸಿದರು ಮಾತ್ರವಲ್ಲದೆ ಎಲ್ಲಾ ರಂಗಗಳಲ್ಲೂ ಅವರ ವ್ಯಾಪಾರ ವ್ಯವಹಾರವನ್ನು ತಡೆದು ನಷ್ಟ ಒಡ್ಡಲು ಪ್ರಯತ್ನಿಸಿದರು. ಈ ಅವಧಿಯಲ್ಲಿ ಪೋರ್ಚುಗಲ್ ಕೂಡಾ ಸಾಂಪತ್ತಿಕವಾಗಿ ಮತ್ತು ರಾಜಕೀಯವಾಗಿ ಕುಸಿತದತ್ತ ಸಾಗಿತ್ತು. ಶಿವಪ್ಪ ನಾಯಕನ ವಿರುದ್ಧ ಹೋರಾಡಲು ಭಾರತದ ಪೋರ್ಚುಗೀಸ್ ಆಡಳಿತಕ್ಕೆ ಆರ್ಥಿಕ-ಸೈನಿಕ-ಸಹಾಯ ಕಳುಹಿಸಲು ಸಾಕಷ್ಟು ವ್ಯವಸ್ಥೆ ಪೋರ್ಚುಗಲ್ ದೇಶದ ದೊರೆಯಲ್ಲಿ ಇರಲಿಲ್ಲ. ಪ್ರಕೃತಿ ವಿಕೋಪವೂ ಎದುರಾಯಿತು. ೧೬೫೨ರ ಮೇ ತಿಂಗಳಲ್ಲಿ ಶಿವಪ್ಪ ನಾಯಕನೊಂದಿಗೆ ಹಗೆತನ ಕಟ್ಟಿಕೊಂಡ

ಸ್ವಲ್ಪ ಸಮಯದ ಅಂತರದಲ್ಲಿ ಪೋರ್ಚುಗೀಸರ ಯುದ್ಧ ಹಡಗುಗಳು ಮತ್ತು ವ್ಯಾಪಾರ ಹಡಗುಗಳು ಬಲವಾದ ಗಾಳಿಗೆ ಸಿಕ್ಕಿ ನಾಶವಾಯಿತು. ಇಂತಹ ಬಹುಮುಖ ಸವಾಲುಗಳ ಸನ್ನಿವೇಶದಲ್ಲಿ ಪೋರ್ಚುಗೀಸರಿಗೆ ಶಿವಪ್ಪ ನಾಯಕನ ಮಿತ್ರತ್ವ ಗಳಿಸುವುದರಿಂದ ಸಾಕಷ್ಟು ಲಾಭ ಆಗುತ್ತಿತ್ತು. ಆ ಮೂಲಕ ಅವರ ದೇಶೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ದೊಡ್ಡ ಶತ್ರು ಡಚ್ಚರನ್ನು ಎದುರಿಸಬಹುದಿತ್ತು. ಆದರೆ ಪೋರ್ಚುಗೀಸರು ಶಿವಪ್ಪ ನಾಯಕನ ಸೈನಿಕ ತಾಕತ್ತು ಮತ್ತು ಅಗಾಧತೆಯನ್ನು ಅಂದಾಜಿಸುವಲ್ಲಿ ವಿಫಲರಾದರು (ಶಾಸ್ತ್ರಿ ೨೦೦೦:೧೮೦).

ಇದೇ ಸಮಯದಲ್ಲಿ ಇಂಗ್ಲೀಷರು ತಮ್ಮ ವ್ಯಾಪಾರ ವ್ಯವಹಾರ ವೃದ್ಧಿಸಲು ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಬಹುಮಾನಗಳ ರೂಪದಲ್ಲಿ, ಲಂಚದ ರೂಪದಲ್ಲಿ ಹಣ ಖರ್ಚು ಮಾಡುತ್ತಿದ್ದರು. ಅವರು ವೀರಭದ್ರರ ಆಸ್ಥಾನದ ಅತೀ ಪ್ರಮುಖ ವ್ಯಕ್ತಿಗಳಿಗೆ ತಮ್ಮ ಅಹವಾಲು ವೀರಭದ್ರನ ಸಮ್ಮುಖದಲ್ಲಿ ಮಂಡಿಸಲು ಲಂಚ ನೀಡುತ್ತಿದ್ದರು.

ಇಂತಹ ಹಿನ್ನೆಲ್ಲೆಯಲ್ಲಿ ಉದ್ದೇಶಪೂರ್ವಕವಾಗಿ ಶಿವಪ್ಪ ನಾಯಕ ತನ್ನ ಈ ಮೊದಲಿನ ರಾಜರುಗಳ ರೀತಿಯಲ್ಲಿ ಪೋರ್ಚುಗೀಸರಿಗೆ ಹೆಚ್ಚಿನ ದರಕ್ಕೆ ಕರಿಮೆಣಸಿನ ಮಾರಾಟ ನಿರ್ಧರಿಸಿದನು. ಆದರೆ ಪೋರ್ಚುಗೀಸರು ಒಂದು ಕಂಡಿಗೆ ೨೫ ಪಗೋಡದಂತೆ ಕೇವಲ ೨೦೦ ಕಂಡಿ ಕರಿಮೆಣಸು ಪಡೆದುಕೊಳ್ಳಲು ಮಾತ್ರ ಸಿದ್ಧರಿದ್ದರು. ಅದಕ್ಕಿಂತ ಹೆಚ್ಚುವರಿ ಕರಿಮೆಣಸನ್ನು ಕಡಿಮೆ ದರದಲ್ಲಿ ಕೊಳ್ಳಲು ಸಿದ್ಧರಿರುವುದಾಗಿ ತಿಳಿಸಿದರು. ಅದೇ ರೀತಿ ಬಿಜಾಪುರದ ಆದಿಲ್‌ಷಾಹಿಗಳ ವಿರುದ್ಧ ಪೋರ್ಚುಗೀಸರ ಸಹಾಯವನ್ನು ಶಿವಪ್ಪ ನಾಯಕನು ಬಯಸಿದರು. ೧೬೪೭-೫೧ರ ಮಧ್ಯೆ ಗಂಗೊಳ್ಳಿಯ ಬದಲು ಕಾಸರಗೋಡು ಬಂದರನ್ನು ಹಸ್ತಾಂತರಿಸುವ ಪ್ರಸ್ತಾಪ ಇಟ್ಟನು. ಆದರೆ ಪೋರ್ಚುಗೀಸರು ಕಾಸರಗೋಡಿನಲ್ಲಿ ಅಕ್ಕಿ ಮತ್ತು ಗೋಧಿ ಸಿಗದಿರುವ ಕಾರಣ ಆ ಬಗ್ಗೆ ಆಸಕ್ತಿ ವಹಿಸಲಿಲ್ಲ.

ಆಗಸ್ಟ್ ತಿಂಗಳಲ್ಲಿ ಶಿವಪ್ಪ ನಾಯಕ ತನ್ನ ರಾಯಭಾರಿಯನ್ನಾಗಿ ವಿಠಲಮಲ್ಯನನ್ನು ಗೋವಾಕ್ಕೆ ಕಳುಹಿಸಿಕೊಟ್ಟನು. ಆ ನಿಯೋಗದಲ್ಲಿ ಪೋರ್ಚುಗೀಸರು ಪ್ರಸ್ತಾಪಿಸಿರುವ ದರಕ್ಕಿಂತ ಹೆಚ್ಚಾದ ದರದಲ್ಲಿ ಕರಿಮೆಣಸು ವಿಕ್ರಯಿಸಬೇಕೆಂಬ ಬೇಡಿಕೆಯನ್ನು ಶಿವಪ್ಪ ನಾಯಕನ ಪರವಾಗಿ ಇಟ್ಟನು. ವೈಸ್‌ರಾಯ್ ಕೌನ್ಸಿಲ್ ತನ್ನ ಆಗಸ್ಟ್ ೧೪ರ ಸಭೆಯಲ್ಲಿ ಒಂದು ಕಂಡಿಗೆ ೨೮ ಪಗೋಡಾಗಳ ಹೆಚ್ಚುವರಿ ದರದಲ್ಲಿ ಕರಿಮೆಣಸನ್ನು ವಿಕ್ರಯಿಸಲು ನಿರ್ಧರಿಸಿತು. ಒಂದು ವೇಳೆ ಶಿವಪ್ಪ ನಾಯಕ ಇದರಿಂದ ತೃಪ್ತಿಯಾಗದಿದ್ದಲ್ಲಿ ೨೫ಕ್ಕೂ ಹೆಚ್ಚುವರಿ ಕಂಡಿ ಕರಿಮೆಣಸು ವಿಕ್ರಯಿಸಲು ಆದೇಶಿಸುತ್ತಾನೆ. ಈ ರೀತಿಯ ರಾಜಿ ಸಂಧಾನದ ಮನೋಭಾವ ತಳೆಯುವ ಮೂಲಕ ಶಿವಪ್ಪ ನಾಯಕನಲ್ಲಿ ಹಗೆತನ ಸಾಧಿಸುವ ಪ್ರಯತ್ನವನ್ನು ತಪ್ಪಿಸಲು ಶತಪಥ ಪ್ರಯತ್ನ ನಡೆಸಿದರು.

ಶಿವಪ್ಪ ನಾಯಕನು ಬಸ್ರೂರಿಗೆ ದಾಳಿ ಮಾಡಿ ಕೋಟೆಯನ್ನು ವಶಪಡಿಸಿಕೊಂಡನು. ಈ ಸಂದರ್ಭದಲ್ಲಿ ವೈಸ್‌ರಾಯ್ ಕೌನ್ಸಿಲ್ ಸಭೆ ಸೇರಿ ಫಾದರ್ ಮೈಗುಲ್ ಡಿ' ಅಲ್ಮೆರಿಯಾ ಇವರನ್ನು ಗಂಗೊಳ್ಳಿಗೆ ಕಳುಹಿಸಿ ಶಾಂತಿ ಮಾತುಕತೆ ಮಾಡಲು ವಿನಂತಿಸಿಕೊಂಡರು. ಸುಮಾರು ಏಳು ನಿರ್ದೇಶನಗಳನ್ನು ಒಳಗೊಂಡ

ಫಾದರ್ ಮೈಗುಲ್ ಡಿ' ಅಲ್ಮೇರಿಯಾ ನಿಯೋಗದಲ್ಲಿ ಮೂರನೆಯ ನಿರ್ದೇಶನ ವ್ಯಾಪಾರ ವ್ಯವಹಾರ ಬಗ್ಗೆ ಇತ್ತು. ಪೋರ್ಚುಗೀಸರು ೩೦೦ ಕಂಡಿ ಕರಿಮೆಣಸು ೨೦ ಪಗೋಡ ಕ್ರಯಕ್ಕೆ ಒಪ್ಪುವುದು. ಆದರೆ ಪ್ರಮಾಣ ೩೫೦ ಕಂಡಿವರೆಗೆ ವಿಕ್ರಯಿಸುವುದಕ್ಕೆ ಒಪ್ಪಬಹುದೆಂಬ ನಿರ್ದೇಶನವಿತ್ತು.

ಇನ್ನೊಂದು ಕಂತಿನ ನಿರ್ದೇಶನಗಳ ದಾಖಲೆಯಲ್ಲಿ ಎರಡನೆಯ ಅಂಶವಾದ ಪ್ರತಿ ವರ್ಷ ಪೋರ್ಚುಗೀಸರು ೩೦೦ ಅಥವಾ ೩೫೦ ಕಂಡಿ ಕರಿಮೆಣಸು ಕ್ರಯಕ್ಕೆ ಪಡೆದುಕೊಳ್ಳಲು ಸಿದ್ಧರಿರುವುದು. ರಾಯಭಾರಿಗಳು ಕೊನೆಗೆ ೪೦೦ ಕಂಡಿಯಷ್ಟು ಕರಿಮೆಣಸು ದರ ೨೮ ಪಗೋಡದಂತೆ ಪಡೆಯಲು ಒಪ್ಪುವುದು ಎಂಬ ನಿರ್ದೇಶನವಿತ್ತು.

ಆದರೂ ಸಹ ನಿರ್ದಿಷ್ಟವಾಗಿ ಯಾವುದೇ ಒಪ್ಪಂದಕ್ಕೆ ಬರಲು ಸಾಧ್ಯವಿಲ್ಲದಾದಾಗ ಡಿಸೆಂಬರ್ ೨೬ರ ವೈಸ್‌ರಾಯ್ ಕೌನ್ಸಿಲ್‌ನ ತೀರ್ಮಾನದ ಪ್ರಕಾರ ೫೦೦ ಕಂಡಿ ಕರಿಮೆಣಸನ್ನು ಕೂಡಲೇ ಕ್ರಯಕ್ಕೆ ಪಡೆಯಲು ಸಿದ್ಧರಿದ್ದು ಉಳಿದ ೩೦೦ ಕಂಡಿ ಮೆಣಸು ಪ್ರತೀ ವರ್ಷ ೨೮ ಪಗೋಡದಂತೆ, ಆದರೆ ಒಂದು ಷರತ್ತಿಗೆ ಒಳಪಟ್ಟು ಅಂದರೆ ಬಸ್ರೂರು ಮರು ಒಪ್ಪಿಸಿದ್ದಲ್ಲಿ ಪಡೆದುಕೊಳ್ಳಲು ಸಿದ್ಧರಿದ್ದರು. ಈ ಬೇಡಿಕೆಗೆ ಆಧಾರಿಸಿ ಶಾಂತಿ ಒಪ್ಪಂದ ಮಾಡಲು ಪೋರ್ಚುಗೀಸರು ಆತುರತೆಯಲ್ಲಿ ಇದ್ದರು.

೧೬೫೪ರಲ್ಲಿ ಹೊನ್ನಾವರದಲ್ಲಿ ಕ್ಯಾಪ್ಟನ್ ಆಗಿರುವ ಫ್ರಾನ್ಸಿಸ್ ಡಿ'ಸೋಜಾ ಅಲ್ಲಾ ಫೆರಾವೋ ಇವರೊಂದಿಗೆ ಮಲಪ್ಪ ಮಲ್ಯರವರ ಮಗ ವಿಠಲ ಮಲ್ಯರವರುಗಳು ಶಿವಪ್ಪ ನಾಯಕನ ಪ್ರತಿನಿಧಿಯಾಗಿದ್ದುಕೊಂಡು ಶಾಂತಿ ಮಾತುಕತೆ ಹೊನ್ನಾವರದಲ್ಲಿ ನಡೆಯಿತು. ಈ ಮಾತುಕತೆಯಲ್ಲಿ ಶಿವಪ್ಪ ನಾಯಕನ ಬೇಡಿಕೆ, ಪ್ರತೀ ಖಂಡಿಗೆ ೨೮ ಪಗೋಡದಂತೆ ಪ್ರತಿ ವರ್ಷ ೧೦೦೦ ಕಂಡಿ ಕರಿಮೆಣಸು ಪಡೆಯುವುದು. ಅನಂತರ ಪ್ರತೀ ವರ್ಷ ೫೦೦ ಕಂಡಿಯಷ್ಟು ಕರಿಮೆಣಸು ೨೮ ಪಗೋಡದಂತೆ ಪಡೆಯುವುದಾಗಿತ್ತು. ಆದರೆ ಪೋರ್ಚುಗೀಸರು ಇದಕ್ಕೆ ಒಪ್ಪದಿದ್ದಾಗ ಈ ನಿಯೋಗ ಕೂಡ ವಿಫಲವಾಯಿತು.

ಪೋರ್ಚುಗೀಸರು ಶಿವಪ್ಪ ನಾಯಕನ ವ್ಯಾಪಾರ-ವ್ಯವಹಾರ ಕುಗ್ಗಿಸಲು ಸರ್ವರೀತಿಯ ಪ್ರಯತ್ನ ಮಾಡಿದರು. ಆ ಉದ್ದೇಶದಿಂದ ವ್ಯಾಪಾರಿ ಹಡಗುಗಳಿಗೆ ಲೈಸೆನ್ಸ್ ನೀಡುವುದನ್ನು ತಡೆದರು. ಅದರಲ್ಲೂ ಮುಖ್ಯವಾಗಿ ಕಲ್ಲಿಕೋಟೆಯ ಜಾಮೋರಿನ್ ಪ್ರಾಂತ್ಯದ ವ್ಯಾಪಾರಿಗಳಿಗೆ ಲೈಸೆನ್ಸ್ ನೀಡಲೇ ಇಲ್ಲ (ಶಾಸ್ತ್ರಿ ೨೦೦೦:೧೯೫). ಡಚ್ಚರು ಶಿವಪ್ಪ ನಾಯಕನೊಂದಿಗೆ ಸೌಹಾರ್ದ ಸಂಬಂಧ ಬೆಳೆಸಿದ ಪರಿಣಾಮವಾಗಿ ಗಂಗೊಳ್ಳಿ ನದಿಯ ಮುಖಜ ಭೂಮಿಯ ಬದಿಯಲ್ಲಿ ವ್ಯಾಪಾರಿ ಮಳಿಗೆಗಳನ್ನು ನಿರ್ಮಿಸಿದರು.

**ಕರಾವಳಿ ಕರ್ನಾಟಕದಲ್ಲಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿಯ ಪ್ರಾರಂಭದ ಹೆಜ್ಜೆ ಗುರುತುಗಳು**

ಕಾರವಾರದಲ್ಲಿ ಇಂಗ್ಲೀಷ್ ಫ್ಯಾಕ್ಟರಿಯು ವಸಾಹತುಶಾಹಿ ಚರಿತ್ರೆಯಲ್ಲಿ ಸೂರತ್ ನಂತರ ಅಸ್ತಿತ್ವಕ್ಕೆ ಬಂದ ಒಂದು ಪ್ರಮುಖ ಫ್ಯಾಕ್ಟರಿಯಾಗಿದೆ. ಸರ್ ವಿಲಿಯಂ ಕೋರ್ಟೈನ್ ಕಂಪೆನಿಯ ಏಜೆಂಟ್, ಕ್ಯಾಪ್ಟನ್ ವೆಡ್ಡೆಲ್‌ನು ೧೬೩೮ರಲ್ಲಿ ಕಾರವಾರದಲ್ಲಿ ಬಿಜಾಪುರದ ಆದಿಲ್‌ಶಾಹಿಗಳು ಗ್ರಾಂಟ್ ನೀಡಿದ ಜಾಗದಲ್ಲಿ ಫ್ಯಾಕ್ಟರಿ ಪ್ರಾರಂಭಿಸಿದನು. ೧೬೫೩ರಲ್ಲಿ ಇದು ಲಂಡನ್ ಈಸ್ಟ್ ಇಂಡಿಯಾ ಕಂಪೆನಿಯ ಆಸ್ತಿಯಾಯಿತು. ತರುವಾಯ ಮುಂದಿನ ೩೦ ವರ್ಷಗಳ ಕಾಲ ಬಿರುಸಿನ ವ್ಯಾಪಾರಿ ಕೇಂದ್ರವಾಗಿ

ಬೆಳವಣಿಗೆಯಾಯಿತು. ಅನಂತರ ಪೋರ್ಚುಗೀಸ್ ಮತ್ತು ಸೊಂದಾ ಪ್ರಾಂತ್ಯದ ಸಾಮಂತರು ಇದನ್ನು ವಶಪಡಿಸಿಕೊಂಡರು. ಸೋಂದಾ ಪ್ರಾಂತ್ಯದ ಉತ್ಕೃಷ್ಟ ಗುಣಮಟ್ಟದ ಕರಿಮೆಣಸು, ದಖ್ಖನ್ನಿನ ಕೆಲವು ಪ್ರಮುಖ ಹತ್ತಿ ಸಾಮಾಗ್ರಿಗಳು, ಶ್ರೀಗಂಧದ ಮರ, ಏಲಕ್ಕಿ, ಲವಂಗ, ದಾಲ್ಚಿನಿ ಮೊದಲಾದವುಗಳು ವಿಕ್ರಯಿಸಲ್ಪಡುತ್ತಿತ್ತು.

ಪೋರ್ಚುಗೀಸರಿಂದ ಮುಚ್ಚಲ್ಪಟ್ಟ ಈ ಫ್ಯಾಕ್ಟರಿ ಮತ್ತೆ ೧೬೮೨ರಲ್ಲಿ ಪುನರ್ ತೆರೆಯಲ್ಪಟ್ಟಿತ್ತು. ಕೇವಲ ೩ ವರ್ಷಗಳ ಅವಧಿಯಲ್ಲಿ ಇಲ್ಲಿ ವ್ಯಾಪಾರವು ಈ ಮೊದಲಿನಂತೆ ಬೃಹತ್ ಪ್ರಮಾಣದಲ್ಲಿ ನಡೆಯಿತು. ಅನಂತರ ೪೦ ವರ್ಷಗಳ ಅವಧಿಯಲ್ಲಿ ನಿರಂತರವಾಗಿ ಮತ್ತೆ ಪೋರ್ಚುಗೀಸರಿಂದ ಹಾಗೂ ಸೊಂದಾದ ಸಾಮಂತರಿಂದ ವಿರೋಧ ಎದ್ದು ಬಂತು. ಡಚ್ಚರಿಂದ ಉಂಟಾದ ಕರಿಮೆಣಸಿನ ವ್ಯಾಪಾರಕ್ಕೆ ತಡೆ ಪ್ರಕ್ರಿಯೆಯಿಂದ ಕರಿಮೆಣಸಿನ ವ್ಯಾಪಾರ ಕುಸಿಯಿತು. ೧೬೯೭ರಲ್ಲಿ ಮರಾಠರು ಕಾರವಾರ ಫ್ಯಾಕ್ಟರಿಯ ಮೇಲೆ ದಾಳಿ ನಡೆಸಿದರು. ಮರಾಠರು ಬೇರೆ ಬೇರೆ ಅವಧಿಯಲ್ಲಿ ೧೬೬೫, ೧೬೭೪ ಮತ್ತು ೧೭೧೫ರಲ್ಲಿ ಕಾರವಾರ ಫ್ಯಾಕ್ಟರಿಯ ಮೇಲೆ ದಾಳಿ ನಡೆಸಿದ್ದರು. ಸೋಂದಾ ಪ್ರಾಂತ್ಯದ ಸಾಮಂತ ರಾಜ ಬಸವ ಲಿಂಗ (೧೬೯೫–೧೭೪೫) ಹಳೆಯ ಕೋಟೆಯನ್ನು ನೆಲಸಮ ಮಾಡಿ, ಕಾಳಿ ನದಿಯ ಉತ್ತರದ ದಡದಲ್ಲಿ ಚಿತ್ತಕೂಟ ಸದಾಶಿವ ಘಡದಲ್ಲಿ ಹೊಸ ಕೋಟೆ ನಿರ್ಮಿಸಿದನು. ಇಲ್ಲಿಯೇ ಇದ್ದ ಹಳೆಯ ಫ್ಯಾಕ್ಟರಿಯನ್ನು ಬಂಧಿಖಾನೆಯಾಗಿ ಪರಿವರ್ತಿಸಿದನು.

ಜಾರ್ಜ್ ಟೈಲರ್, ಫ್ಯಾಕ್ಟರಿಯ ಏಜೆಂಟ್ ಆಗಿದ್ದಾಗ ಆತ ಶತ್ರುಗಳನ್ನು ಪ್ರಚೋದಿಸಿ ದಾಳಿ ಮಾಡಲು ಸಹಕರಿಸುತ್ತಿದ್ದ. ಬಸವ ಲಿಂಗಪ್ಪ (ಸೊಂದಾದ ಸಾಮಂತರಾಜ)ನ ಶತ್ರುತ್ವದಿಂದ ಫ್ಯಾಕ್ಟರಿಯು ೧೭೨೦ರಲ್ಲಿ ಮುಚ್ಚಲ್ಪಟ್ಟಿತ್ತು. ಪುನಃ ೧೭೫೦ರಲ್ಲಿ ತೆರೆಯಲ್ಪಟ್ಟು ೨ ವರ್ಷ ಕಾರ್ಯಾರಂಭ ಮಾಡಿತ್ತು ೧೭೫೨ರಲ್ಲಿ ಪೋರ್ಚುಗೀಸರು ಮತ್ತೆ ವಶಪಡಿಸಿ ಕೊಂಡು ಏಕಸ್ವಾಮ್ಯವನ್ನು ಘೋಷಿಸಿದರು. ಕೆನರಾ ಪ್ರಾಂತ್ಯದಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಮಧ್ಯಪ್ರವೇಶವನ್ನು ಪ್ರಾರಂಭಿಸಿದ ಮೇಲೆ ಕಾರವಾರ ಫ್ಯಾಕ್ಟರಿ ಮತ್ತೆ ಜೀವಕಳೆ ಹೊಂದಿತ್ತು. ೧೭೯೯ರ ನಂತರ ತನ್ನ ಪಾತ್ರವನ್ನು ನಿರ್ಣಾಯಕವಾಗಿ ರೂಪೀಕರಿಸಿತು.

ಕಾರವಾರದ ಇಂಗ್ಲೀಷ್ ಏಜೆಂಟ್ ಆಗಿದ್ದ ರುಸ್ಟಾನ್ ಸೂರತಿನ ಇಂಗ್ಲೀಷ್ ಫ್ಯಾಕ್ಟರಿ ಕೌನ್ಸಿಲಿಗೆ ಪದೇ ಪದೇ ಮನವಿ ಮಾಡಿ ಕಾರವಾರದ ಫ್ಯಾಕ್ಟರಿಯನ್ನು ಅಲ್ಲಿಂದ ಹುಬ್ಬಳ್ಳಿಗೆ ವರ್ಗಾಯಿಸಲು ವಿನಂತಿಸಿದನು. ಆ ಪ್ರಕಾರ ಜುಲೈ ೧೬೬೩ರಲ್ಲಿ ಹುಬ್ಬಳ್ಳಿಗೆ ವರ್ಗಾಯಿಸಲು ಆದೇಶ ನೀಡಲಾಯಿತು. ಈ ಘಟನೆಗೆ ಮುಖ್ಯ ಕಾರಣ ಕಾರವಾರದಲ್ಲಿ ವ್ಯಾಪಾರಿಗಳಿಗೆ ವಿವಿಧ ರೀತಿಯ ಕಿರುಕುಳ ಮತ್ತು ತೊಂದರೆಗಳನ್ನು ನೀಡಲಾಗುತ್ತಿತ್ತು. ಆದಾಯವೂ ಅಲ್ಲಿ ಇಳಿಮುಖಗೊಂಡಿತ್ತು. ಆದಾಯದ ಕೊರತೆಯಿಂದ ಇತರೆ ಹಲವಾರು ಸಮಸ್ಯೆಗಳು ಎದುರಾದವು ಎಂದು ಜಾದುನಾಥ್ ಸರ್ಕಾರ್‌ರವರು ೧೬೬೩ರಲ್ಲಿ ಕಾರವಾರದ ಫ್ಯಾಕ್ಟರಿಯ ದುಃಸ್ಥಿತಿಯ ಬಗ್ಗೆ ವಿವರಿಸುತ್ತಾರೆ (ಜಾದುನಾಥ್ ೧೯೨೯:೨೩೮).

ಈ ರೀತಿ ಕಾರವಾರ ಫ್ಯಾಕ್ಟರಿಯು ಪ್ರಾರಂಭದ ದಿನಗಳಲ್ಲಿ ಅತ್ಯಂತ ಸಂಕಷ್ಟಮಯ ಸನ್ನಿವೇಶದಲ್ಲಿ ಕಾರ್ಯ ನಿರ್ವಹಿಸಿದ್ದನ್ನು ಗಮನಿಸಬಹುದು.

**ಇಕ್ಕೇರಿ– ಪೋರ್ಚುಗೀಸ್ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನಿರ್ಣಾಯಕ ಘಟ್ಟ**

ಶಿವಪ್ಪ ನಾಯಕನ ನಂತರದ ಸುಮಾರು ನೂರು ವರ್ಷಗಳ ಕಾಲವಧಿಯು ಇಕ್ಕೇರಿಯ ಪತನ ಮಾತ್ರವಲ್ಲದೆ ಪೋರ್ಚುಗೀಸರ ಭದ್ರ ಸಾಮ್ರಾಜ್ಯದ ಎಲ್ಲಾ ಕನಸುಗಳು ನುಚ್ಚುನೂರಾದ ಅವಧಿಯಾಗಿದೆ. ಶಿವಪ್ಪ ನಾಯಕನ ಅವಧಿಯಲ್ಲಿ ಮಹಾಕುಸಿತ ಅಥವಾ ಹಿನ್ನಡೆ ಅನುಭವಿಸಿದ ಪೋರ್ಚುಗೀಸರು ಅನಂತರ ಅವರ ರಾಜಕೀಯ ಬೆಳವಣಿಗೆಯಲ್ಲಿ ಮತ್ತೆ ಚೇತರಿಕೆ ಕಂಡು ಬಂದರೂ ದೇಶೀಯ ಮತ್ತು ಅಂತರಾಷ್ಟ್ರೀಯ ವಿದ್ಯಮಾನಗಳು ಸಮರ್ಥವಾಗಿ ಕೂಡಿ ಬರದೆ ಹಿನ್ನಡೆಯನ್ನೇ ಅನುಭವಿಸಿದರು.

ಶಿವಪ್ಪ ನಾಯಕನ ನಂತರ ಇಮ್ಮಡಿ ವೆಂಕಟಪ್ಪ ನಾಯಕ ಕೇವಲ ಎರಡು ವರ್ಷ ರಾಜ್ಯಭಾರ ಮಾಡಿದನು. ಈ ಅವಧಿಯಲ್ಲಿ ವ್ಯಾಪಾರ–ವ್ಯವಹಾರ ಮತ್ತು ಇತರೆ ಎಲ್ಲಾ ರಂಗಗಳಲ್ಲೂ ಇಕ್ಕೇರಿಯ ಪರ ಇತ್ತು. ಈತ ೧೬೬೦ರಲ್ಲಿ ಪೋರ್ಚುಗೀಸರ ವಿರುದ್ಧವಾಗಿ ಡಚ್ಚರೊಂದಿಗೆ ಒಪ್ಪಂದವನ್ನು ಮಾಡಿದನು.

ಶಿವಪ್ಪ ನಾಯಕನ ಮಗ ಭದ್ರಪ್ಪ ನಾಯಕ ೧೬೬೦–೬೪ರ ಅವಧಿಗೆ ರಾಜ್ಯಭಾರ ಮಾಡಿದ ಸಮಯದಲ್ಲಿ ಆದಿಲ್‌ಷಾಹಿಯು ಬಿದನೂರಿನ ಮೇಲೆ ದಾಳಿ ನಡೆಸಿ ಕಪ್ಪಕಾಣಿಕೆ ಸಂಗ್ರಹಿಸಿದನು. ಇದೇ ಅವಧಿಯಲ್ಲಿ ಪೋರ್ಚುಗೀಸರು ಆದಿಲ್‌ಷಾಹಿಯೊಂದಿಗೆ ಸಖ್ಯತೆ ಬೆಳೆಸಿ ಕೆನರಾ ಪ್ರಾಂತ್ಯದ ಬಂದರುಗಳ ಮೇಲೆ ಹಿಡಿತ ಸಾಧಿಸಲು ಬೇಡಿಕೆ ಇಟ್ಟರು. ಆಗ ಭದ್ರಪ್ಪ ನಾಯಕ ಪೋರ್ಚುಗೀಸರಲ್ಲಿ ರಾಯಭಾರಿ ಕಳುಹಿಸಿ ಶಾಂತಿ ಒಪ್ಪಂದಕ್ಕೆ ಪ್ರಯತ್ನಿಸಿದನು. ವೈಸ್‌ರಾಯ್‌ಯು ಸೀಮಾವೋ ಗೋಮ್ಸ್ ಡಿ'ಸಿಲ್ವರವರನ್ನು ಹತ್ತು ಸೈನಿಕ ನೌಕಾ ತುಕಡಿಗಳಿಗೆ ದಂಡನಾಯಕನಾಗಿ ಮಾಡಿ ಕೆನರಾದಿಂದ ಅಕ್ಕಿಯನ್ನು ಸಂಗ್ರಹಿಸಲು ಆದೇಶಿಸಿದನು. ಈ ಸೈನ್ಯ ಪೋರ್ಚುಗೀಸರು ರೂಪಿಸಿದ ಹೆದರಿಕೆ ಮತ್ತು ಬೆದರಿಕೆಯ ಭಾಗವಾಗಿತ್ತು.

ಭದ್ರಪ್ಪ ನಾಯಕನು ಫೆಬ್ರವರಿ ೧೬೬೪ರಲ್ಲಿ ಮಲ್ಲಪ್ಪ ರಾವ್‌ನನ್ನು ತನ್ನ ರಾಯಭಾರಿಯಾಗಿ ೬೦೦೦ ಚೀಲ ಅಕ್ಕಿಯೊಂದಿಗೆ ಗೋವಾಕ್ಕೆ ಕಳುಹಿಸಿದನು. ಪೋರ್ಚುಗೀಸರ ಈ ಮೊದಲಿನ ಹೊನ್ನಾವರ, ಬಸ್ರೂರು ಮತ್ತು ಮಂಗಳೂರು ಬಂದರುಗಳಲ್ಲಿ ಕೋಟೆ– ಕೊತ್ತಳಗಳನ್ನು ಹಿಂತಿರುಗಿಸುವರೇ ಶಾಂತಿ ಒಪ್ಪಂದಕ್ಕೆ ಬರುವಂತೆ ನಿರ್ದೇಶನ ನೀಡಿದನು. ಮಾತುಕತೆ ನಡೆಯುತ್ತಿರುವ ಸಮಯದಲ್ಲೇ ಭದ್ರಪ್ಪನನ್ನು ಕೊಲೆ ಮಾಡಲಾಯಿತು. ಆತನ ಯುವ ಸಹೋದರ ಸೋಮಶೇಖರ ನಾಯಕ ಅಧಿಕಾರ ವಹಿಸಿಕೊಂಡನು. (೧೬೬೪–೭೧) ನವೆಂಬರ್ ೧೦ರಂದು ಶಾಂತಿ ಒಪ್ಪಂದಕ್ಕೆ ಸಹಿ ಮಾಡಿದ ಪ್ರಕಾರ ಬಸ್ರೂರು, ಗಂಗೊಳ್ಳಿ ಮತ್ತು ಮಂಗಳೂರುಗಳನ್ನು ಪೋರ್ಚುಗೀಸರಿಗೆ ಹಿಂತಿರುಗಿಸಲಾಯಿತು. ಪೋರ್ಚುಗೀಸರಿಂದ ಶಿವಪ್ಪ ನಾಯಕ, ಭದ್ರಪ್ಪ ನಾಯಕನ ಕಾಲದಲ್ಲಿ ವಶಪಡಿಸಿಕೊಂಡ ಪ್ರದೇಶಗಳನ್ನು ಹಿಂತಿರುಗಿಸಲಾಯಿತು. ಇಕ್ಕೇರಿ ರಾಜನಿಂದ ಕಡ್ಡಾಯವಾಗಿ ಕರಿಮೆಣಸು ವಿಕ್ರಯಿಸಬೇಕೆಂಬ ಒತ್ತಡದಿಂದ ಪೋರ್ಚುಗೀಸರು ಮುಕ್ತರಾದರು. ಇಕ್ಕೇರಿಯು ಗೋವಾಕ್ಕೆ ನಿರಂತರವಾಗಿ ಅಕ್ಕಿ ಸರಬರಾಜು ಮಾಡಲು ಬದ್ಧವಾಯಿತು (ಶಾಸ್ತ್ರಿ ೨೦೦೦:೨೧೧).

ಮೇಲಿನ ಒಪ್ಪಂದದ ಪ್ರಕಾರ ಗಂಗೊಳ್ಳಿಯನ್ನು ವಶಪಡಿಸಿಕೊಳ್ಳಲು ಪೋರ್ಚುಗೀಸ್ ಸಿಲ್ವೇರಿಯಾ ಅಲ್ಲಿ ನೆಲೆಯೂರುವಾಗ ಡಚ್ಚರು ಅಲ್ಲಿ ಪ್ರತ್ಯಕ್ಷರಾದರು. ಡಚ್ಚರು ಮತ್ತು ಪೋರ್ಚುಗೀಸರ ಮಧ್ಯೆ ೧೬೬೩ರ

ನವೆಂಬರ್ ೨ರಂದು ಆಗಿರುವ ಒಪ್ಪಂದದ ಪ್ರಕಾರ ಡಚ್ಚರಿಗೆ ಫ್ಯಾಕ್ಟರಿ ಇದ್ದು ಪೋರ್ಚುಗೀಸರಿಗೆ ಕೋಟೆಯಾಗಲೀ ಫ್ಯಾಕ್ಟರಿಯಾಗಲೀ ಇರಲಿಲ್ಲ. ಆದುದರಿಂದ ಪೋರ್ಚುಗೀಸರು ಅಲ್ಲಿ ಕೋಟೆಯನ್ನು ಪುನಃ ಹೊಂದಲು ಅವಕಾಶವಿಲ್ಲ ಎಂದು ಹೇಳಿದನು. ಇಕ್ಕೇರಿಯ ಸೈನ್ಯ ಪೋರ್ಚುಗೀಸರ ಬಸ್ರೂರನ್ನು ಮುತ್ತಿಗೆ ಹಾಕಿರುವುದನ್ನು ಡಚ್ಚ್ ಕ್ಯಾಪ್ಟನ್ ಸ್ಪಷ್ಟಪಡಿಸಿದನು. ಹಿರಿಯ ಅಧಿಕಾರಿಗಳ ಸಂಧಾನದ ನಂತರ ತೀರ್ಮಾನಕ್ಕೆ ಇಬ್ಬರೂ ಬದ್ಧರಾದರು.

ಸೋಮಶೇಖರ ನಾಯಕ ಮತ್ತು ಪೋರ್ಚುಗೀಸರ ಮಧ್ಯೆ ರಾಯಭಾರಿ ಮಟ್ಟದ ಮಾತುಕತೆಗಳು ೧೬೭೧ರ ಫೆಬ್ರುವರಿ ೧೪ ರಂದು ನಿರ್ದಿಷ್ಟ ಪಡಿಸಿದ ೧೬ ಅಂಶಗಳ ಮೇಲೆ ಪ್ರಾರಂಭವಾಯಿತು. ಅಂತಿಮವಾಗಿ ೧೬೭೧ ರ ಎಪ್ರಿಲ್ ೨೦ ರಂದು ವೈಸ್‌ರಾಯ್ ಕೌನ್ಸಿಲ್‌ನ ಸಭೆಯಲ್ಲಿ ಇದಕ್ಕೆ ಅನುಮೋದನೆ ದೊರೆಯಿತು. ಇದರ ಒಂದು ಉಪಷರತ್ತು ಎಂದರೆ ಶಿವಪ್ಪ ನಾಯಕ ವಶಪಡಿಸಿಕೊಂಡಿದ್ದ ೭೦ ಕಂಡಿ ಕರಿಮೆಣಸನ್ನು ಹಿಂತಿರುಗಿಸುವುದಾಗಿತ್ತು. ಸೋಮಶೇಖರ ನಾಯಕನ ಪಾಲಿನ ಷರತ್ತುಗಳಲ್ಲಿ ಒಟ್ಟು ಹದಿನೈದು ವಿಧಿಗಳು ನೇರವಾಗಿ ವ್ಯಾಪಾರ, ವ್ಯವಹಾರ, ಸುಂಕ ವಸೂಲಾತಿ, ಮಳಿಗೆ ಮತ್ತು ಆಡಳಿತ ನಿರ್ವಹಣೆ ಬಗ್ಗೆ ಇತ್ತು. ಎರಡು ವಿಧಿಗಳು ಧಾರ್ಮಿಕ ಅಂಶಗಳ ಬಗ್ಗೆ ಇತ್ತು. ಆದರೆ ಯಾವುದೇ ವಿಧಿಗಳು ರಾಜಕೀಯ ಅಂಶಗಳ ಬಗ್ಗೆ ಇರಲಿಲ್ಲ. ಇದರಲ್ಲಿ ಐದು ಅಂಶಗಳ ಬಗ್ಗೆ ಅಲ್ಪಮಟ್ಟಿನ ಪೋರ್ಚುಗೀಸರ ಪರವಾದ ತಿದ್ದುಪಡಿಗಳನ್ನು ಸೇರಿಸಿ ಸಹಿ ಹಾಕಲಾಯಿತು.

೧೬೭೧ರಲ್ಲಿ ಸೋಮಶೇಖರ ನಾಯಕನ ಕೊಲೆಯಾಯಿತು. ಆತನ ಪತ್ನಿ ಚೆನ್ನಮಾಜಿಯು ೧೬೭೧ರಿಂದ ೧೬೯೬ರ ವರೆಗೆ ಅಧಿಕಾರ ನಡೆಸಿದಳು. ಪೋರ್ಚುಗೀಸರ ಪರವಾದ ಒಪ್ಪಂದಗಳು ಜಾರಿಯಲ್ಲಿದ್ದರೂ ೧೬೭೪ರಲ್ಲಿ ಪೋರ್ಚುಗೀಸರು ಚೆನ್ನಮಾಜಿಗೆ ಸಂಬಂಧಿಸಿದ ಎರಡು ಹಡಗುಗಳನ್ನು ಕೆಂಪು ಸಮುದ್ರದ ಪ್ರದೇಶದಲ್ಲಿ ತಡೆ ಹಿಡಿದು ಅವರಲ್ಲಿರುವ ವಸ್ತುಗಳನ್ನು ಮಾರಿದರು. ಆ ಮೂಲಕ ತಮಗೆ ತಾವೇ ಮತ್ತೆ ತೊಂದರೆಯನ್ನು ಮೈಮೇಲೆ ಎಳೆದುಕೊಂಡರು (ಶಾಸ್ತ್ರಿ ೨೦೦೦:೨೧೭). ಇದಕ್ಕೆ ಪ್ರತಿಕಾರವಾಗಿ ಕೆನರಾದಲ್ಲಿ ಅಕ್ಕಿಯ ಸರಬರಾಜಿಗಾಗಿ ಹೋಗಿದ್ದ ಪೋರ್ಚುಗೀಸರ ಹಡಗುಗಳನ್ನು ತಡೆಯಲಾಯಿತು. ಹಗೆತನದ ಸೂಚನೆಗಳು ಪರಸ್ಪರ ಬೆಳೆದು ಬಂದರೂ ಅಂತಿಮವಾಗಿ ಶಾಂತಿಯ ಮಾತುಕತೆಯಾಯಿತು. ೧೬೭೭ರ ನಂತರ ಅರಬರ ಮೇಲೆ ಮತ್ತು ಅವರ ಹಡಗಿನ ಮೇಲೆ ಪೋರ್ಚುಗೀಸರು ಇಕ್ಕೇರಿಯ ಪ್ರಾಂತ್ಯದಲ್ಲಿ ತೀವ್ರದಾಳಿ ನಡೆಸಿದ ಘಟನೆಗಳು ನಡೆಯುತ್ತವೆ. ಚೆನ್ನಮಾಜಿಯು ಅರಬ್ಬರಿಗೆ ತನ್ನ ಪ್ರಾಂತ್ಯದಲ್ಲಿ ಅಕ್ಕಿಯ ವಿಕ್ರಯಕ್ಕೆ ಅವಕಾಶ ಮಾತ್ರವಲ್ಲದೆ ಹೊನ್ನಾವರ, ಬಸ್ರೂರು, ಮಂಗಳೂರುಗಳಲ್ಲಿ ಫ್ಯಾಕ್ಟರಿ ಕಟ್ಟಲು ಅವಕಾಶ ಕಲ್ಪಿಸಿಕೊಟ್ಟಳು. ಪೋರ್ಚುಗೀಸರು ಇದು ೧೬೭೧ರ ಒಪ್ಪಂದ ನೇರ ಉಲ್ಲಂಘನೆ ಎಂದು ಹೇಳಿದರು. ಇದಕ್ಕಾಗಿ ಅರಬ್ಬರನ್ನು ಸದೆ ಬಡಿಯಲು ಕೆನರಾಕ್ಕೆ ಸೇನಾ ತುಕಡಿ ಕಳುಹಿಸಲು ತೀರ್ಮಾನಿಸಿದರು. ಅವರ ವ್ಯಾಪಾರ ನಾಶ ಮಾಡಿ ಅವರನ್ನು ಕರಾವಳಿ ಕರ್ನಾಟಕದಿಂದ ಓಡಿಸುವ ಉದ್ದೇಶವಿತ್ತು. ಇದೇ ಸಮಯದಲ್ಲಿ ಬಸ್ರೂರಲ್ಲಿ ಪೋರ್ಚುಗೀಸರು ಅಕ್ಕಿಗೆ ಬೇಡಿಕೆ ಸಲ್ಲಿಸಿದಾಗ ಇಕ್ಕೇರಿಯು ಹೆಚ್ಚಿನ ದರವನ್ನು ನಿಗದಿ ಮಾಡಿತ್ತು. ಅರಬ್ಬರಿಗೆ ಒಂದು ಕೋರ್ಗಿಗೆ ಎಂಟು ಪಗೋಡಾ ದರ ನಿಗದಿ ಮಾಡಿದ್ದರು. ಆದರೆ ಪೋರ್ಚುಗೀಸರಿಗೆ ೧೪ ಪಗೋಡಾ ದರ ನಿಗದಿ ಮಾಡಿದರು.

ಇದರಿಂದ ಅರಬ್ಬರಿಗಾಗಿ ಹೆಚ್ಚಿನ ಪ್ರಮಾಣದಲ್ಲಿ ಅಕ್ಕಿ ಶೇಖರಿಸಿಡಲು ಅನುಕೂಲವಾಗುವಂತೆ ಪೋರ್ಚುಗೀಸರಿಗೆ ವಿಪರೀತ ದರ ನಿಗದಿ ಮಾಡಿದ್ದಾರೆಂದು ಭಾವಿಸಿದರು. ಆದುದರಿಂದ ಪೋರ್ಚುಗೀಸರು ಅರಬ್ಬರ ಹಡಗಿನ ಮೇಲೆ ನಿರ್ದಿಷ್ಟ ದಾಳಿ ನಡೆಯಿತು.

ಈ ಎಲ್ಲಾ ಬೆಳವಣಿಗೆಗಳ ನಂತರ ಹಲವಾರು ಬಾರಿ ಪರಸ್ಪರ ರಾಯಭಾರಿ ನಿಯೋಗಗಳ ಶಾಂತಿ ಮಾತುಕತೆಗಳು ನಡೆದುವು. ಬಸವಪ್ಪ ನಾಯಕನ ಶಾಂತಿ ಪ್ರಸ್ತಾಪದ ಬಗ್ಗೆ ೧೬೭೪ರ ಡಿಸೆಂಬರ್ ೧೦ರಂದು ವೈಸ್‌ರಾಯ್ ಕೌನ್ಸಿಲ್ ಸಭೆಯು ಒಂದು ನಿರ್ಧಾರಕ್ಕೆ ಬಂದು ಸಂಪೂರ್ಣ ಶಾಂತಿ, ಸಹಕಾರ ಮತ್ತು ವ್ಯಾಪಾರದ ಒಪ್ಪಂದಕ್ಕೆ ೧೬೭೪ರ ಡಿಸೆಂಬರ್ ೧೫ರಂದು ಸಹಿ ಮಾಡಲಾಯಿತು. ಈ ಒಪ್ಪಂದದ ಪ್ರಥಮ ಭಾಗದಲ್ಲಿ ಒಂಬತ್ತು ನಿಬಂಧನೆಗಳು ಇತ್ತು. ಇವುಗಳು ನೇರವಾಗಿ ವ್ಯಾಪಾರ ವ್ಯವಹಾರ, ವಾಣಿಜ್ಯ, ಬಂದರು, ಸುಂಕ, ಆಹಾರಧಾನ್ಯ ಸರಬರಾಜುಗಳ ಬಗ್ಗೆ ಸಂಬಂಧಿಸಿತ್ತು. ೧೦ರಿಂದ ೧೪ರ ವರೆಗೆ ಧಾರ್ಮಿಕ ವಿಷಯಗಳ ಬಗ್ಗೆ ಇತ್ತು. ಬಸವಪ್ಪ ನಾಯಕನ ಪರವಾಗಿ ಪೋರ್ಚುಗೀಸರಿಗೆ ಅನ್ವಯಿಸುವ ಷರತ್ತುಗಳು ಕೂಡಾ ನೇರವಾಗಿ ವ್ಯಾಪಾರ, ವ್ಯವಹಾರ ವಾಣಿಜ್ಯೋದ್ಯಮದ ಬಗ್ಗೆ ಇತ್ತು (ಶಾಸ್ತ್ರಿ ೨೦೦೦:೨೨೧).

ಇಕ್ಕೇರಿ ಮತ್ತು ಪೋರ್ಚುಗೀಸರ ಮಧ್ಯೆ ೧೬೯೫ರವರೆಗೆ ಸೌಹಾರ್ದಯುತವಾದ ವಾತಾವರಣವಿತ್ತು. ೧೬೭೪ರ ಪ್ರಥಮಾರ್ಧದಲ್ಲಿ ಮಂಗಳೂರಿನ ಸಮುದ್ರ ತೀರದಲ್ಲಿ ಅರಬ್ಬರ ನೌಕಾ ಹಡಗು ಪೋರ್ಚುಗೀಸ್ ನೌಕಾ ತಂಡದ ಮೇಲೆ ದಾಳಿ ನಡೆಸಿ ಅವರಲ್ಲಿದ್ದ ವಸ್ತುಗಳನ್ನು ವಶಪಡಿಸಿಕೊಂಡಿತ್ತು. ಈ ದಾಳಿಗೆ ಇಕ್ಕೇರಿಯ ಆಳ್ವಿಕೆಯೇ ಸಹಕರಿಸಿದೆ ಎಂದೂ ೧೬೭೬ ಶಾಂತಿ ಒಪ್ಪಂದದ ಉಲ್ಲಂಘನೆ ಮಾಡಿದೆ ಎಂದೂ ಪೋರ್ಚುಗೀಸರು ಪ್ರತಿಭಟನೆ ಸಲ್ಲಿಸಿದರು. ಇದೇ ಅವಧಿಯಲ್ಲಿ ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಸಂಬಂಧಿಸಿ ಅಕ್ಕಿಯ ಅಭಾವವು ಕೆನರಾದ ರಾಜಕೀಯದ ಮೇಲೆ ಪ್ರತಿಫಲನ ಬೀರಿತ್ತು. ಮಸ್ಕತ್‌ನಲ್ಲಿ ಅಕ್ಕಿಯ ಭಾರೀ ಕೊರತೆ ನವೆಂಬರ್ ೧೬೯೫ರಲ್ಲಿ ಉಂಟಾಯಿತು. ಇದನ್ನು ತಿಳಿದುಕೊಂಡ ಕೆನರಾದ ವ್ಯಾಪಾರಿಗಳು ಹೆಚ್ಚಿನ ಬೆಲೆಗೆ ಮಸ್ಕತ್‌ಗೆ ಅಕ್ಕಿ ಮಾರಾಟ ಮಾಡಲು ಉತ್ಸುಕರಾಗಿದ್ದರು. ಅಲ್ಲಿಂದ ಹಡಗುಗಳು ಕೆನರಾಕ್ಕೆ ಬರುವುದನ್ನು ಗೋವಾದ ಪೋರ್ಚುಗೀಸರು ತಡೆದರು. ಆಗ ಕೆನರಾದ ವರ್ತಕರು ಕಾಂಗೋ ದೇಶಕ್ಕೆ ಅಕ್ಕಿ ಸರಬರಾಜು ಮಾಡಲು ಪೋರ್ಚುಗೀಸರಿಂದ ಲೈಸೆನ್ಸ್ ಬಯಸಿದರು. ಉದ್ದೇಶಪೂರ್ವಕವಾಗಿ ಲೈಸನ್ಸ್ ನೀಡಲು ತೊಂದರೆಯನ್ನು ಒಡ್ಡುತ್ತಿರುವಾಗ ಚೆನ್ನಮಾಜಿಯೇ ಪತ್ರ ಬರೆದು ತಕ್ಷಣ ನೀಡಲು ಒತ್ತಾಯಿಸಿದಳು.

ಬಸವಪ್ಪ ನಾಯಕನ ಆಳ್ವಿಕೆ ಮತ್ತು ಅನಂತರದ ೧೮ನೇ ಶತಮಾನದ ಕೆನರಾದಿಂದ ಅರಬ್ಬರನ್ನು ಹೊರದಬ್ಬುವ ಪ್ರಕ್ರಿಯೆಯಲ್ಲೇ ಪೋರ್ಚುಗೀಸರು ತಲ್ಲೀನರಾದರು. ೧೭೦೭ರ ಕೊನೆಯಲ್ಲಿ ಪೋರ್ಚುಗೀಸರ ನೌಕಾ ತುಕಡಿ, ವ್ಯಾಪಾರಿ ಹಡಗುಗಳೊಂದಿಗೆ ಕೆನರಾ ಪ್ರಾಂತ್ಯಕ್ಕೆ ಹೋಗಿತ್ತು. ಈ ಸಮಯದಲ್ಲಿ ಅದಕ್ಕೆ ಆಹಾರ ಸಾಮಾಗ್ರಿ ಸರಬರಾಜು ಕಷ್ಟವಾಗಿತ್ತು. ಏಕೆಂದರೆ ಅರಬ್ಬರು ೧೪ ತುಕಡಿಯೊಂದಿಗೆ ಬಂದಿದ್ದು ಅವರು ಹೊನ್ನಾವರ ಬಸ್ರೂರು ಮತ್ತು ಮಂಗಳೂರನ್ನು ಕೈವಶಪಡಿಸಲು ೨೦೦೦ ಮಂದಿ ಸೈನಿಕರು ಹೊನ್ನಾವರದಲ್ಲಿ ಇಳಿದಿದ್ದರು. ಆದರೆ ಬಸವಪ್ಪ ನಾಯಕನ ಸೈನ್ಯವು ಅವರ ವಿರುದ್ಧ ತಿರುಗಿಬಿದ್ದು

ಅವರಿಗೆ ದೊಡ್ಡ ಪ್ರಮಾಣದಲ್ಲಿ ಕಷ್ಟ ನಷ್ಟ ಉಂಟಾಯಿತು. ಅಲ್ಲಿಂದ ಅವರು ಮಂಗಳೂರಿಗೆ (ಅರಬ್ಬರು) ಬಂದು ಅಲ್ಲಿ ಪೋರ್ಚುಗೀಸರನ್ನು ಎದುರಿಸುವಂತಾಯಿತು. ಬಸ್ರೂರಲ್ಲೂ ಸಹ ಪೋರ್ಚುಗೀಸರನ್ನು ಎದುರಿಸುವಂತಾಯಿತು. ಈ ರೀತಿ ಅರಬ್ಬರು–ಇಕ್ಕೇರಿ ಮತ್ತು ಪೋರ್ಚುಗೀಸರ ಮಧ್ಯೆ ಕೆನರಾ ಪ್ರಾಂತ್ಯದಲ್ಲಿ ೧೭೦೮ರ ಪ್ರಥಮ ಕೆಲ ತಿಂಗಳುಗಳ ಕಾಲ ಸಂಘರ್ಷ ನಡೆಯಿತು (ಶಾಸ್ತ್ರಿ ೨೦೦೦:೨೨೭).

೧೭೧೨ಕ್ಕೆ ಪೋರ್ಚುಗೀಸರು ಬಸವಪ್ಪ ನಾಯಕನ ಕುದುರೆಗಳನ್ನು ಹೊಂದಿದ್ದ ಹಡಗುಗಳನ್ನು ವಶಪಡಿಸಿಕೊಂಡರು. ಇದಕ್ಕೆ ಲೈಸೆನ್ಸ್ ಇಲ್ಲ ಮತ್ತು ಕೆಲವು ನಿಷೇಧಿತ ವಸ್ತುಗಳನ್ನು ಹೊಂದಿತ್ತು ಎಂಬ ಕಾರಣ ನೀಡಿದ್ದರು. ಇದಕ್ಕೆ ಪ್ರತಿಕ್ರಿಯೆಯಾಗಿ ಬಸವಪ್ಪ ನಾಯಕನು ಅಕ್ಕಿಯ ಬೆಲೆಯನ್ನು ವಿಪರೀತ ಹೆಚ್ಚಿಸಿದ್ದು ಮಾತ್ರವಲ್ಲದೆ ಈ ವಿಕ್ರಯದ ಜವಾಬ್ದಾರಿ ಹೊಂದಿದ್ದ ಪೋರ್ಚುಗೀಸ್ ಅಧಿಕಾರಿಗಳಿಗೆ ಕಿರುಕುಳ ನೀಡಿದನು. ಬಸವಪ್ಪ ನಾಯಕನು ತನ್ನ ರಾಯಭಾರಿ ಕಳುಹಿಸಿ ಹಡಗು, ಕುದುರೆ ಮತ್ತು ಸಿಬ್ಬಂದಿಗಳನ್ನು ಬಿಡುಗಡೆಗೊಳಿಸಬೇಕೆಂದು ಒತ್ತಾಯಿಸಿದನು. ವೈಸ್‌ರಾಯ್ ತನ್ನ ಕೃತ್ಯವನ್ನು ಬೆಂಬಲಿಸಿದನು. ೧೩ ಹಡಗುಗಳಲ್ಲಿ ನಾವಿಕರನ್ನು ಕಳುಹಿಸಿ ಬಸವಪ್ಪ ನಾಯಕನ ವಿರುದ್ಧ ಎಲ್ಲಾ ರೀತಿಯ ಪ್ರತಿಕಾರ ಕ್ರಮಕೈಕೊಂಡು ಹಡಗಿನ ಮೇಲೆ ದಾಳಿ ನಡೆಸಿ ಅಕ್ಕಿ ಸರಬರಾಜು ತಡೆಯಬೇಕೆಂದು ಆದೇಶಿಸಿದನು. ಜೋಸೆಫ್ ಪೆರೀರಾ ಡಿಬ್ರಿಟ್ಟೋ ನೇತೃತ್ವದಲ್ಲಿ ೧೭೧೩ರ ಜನವರಿ ೧೫ರಂದು ೩೫೦ ಸೈನಿಕರು ಕುಮಟಾ, ಬಸ್ರೂರು, ಕಲ್ಯಾಣಪುರ, ಕಟಪಾಡಿಗಳಲ್ಲಿ ತೀವ್ರ ಸ್ವರೂಪದ ದಾಂಧಲೆ ಮಾಡಿದರು. ಅನಂತರ ಮೂಲ್ಕಿ ಹಾಗೂ ಮಂಗಳೂರನ್ನು ಬಂದು ತಲುಪಿದರು. ಕೋಟೆಯ ರಕ್ಷಣೆಗೆ ४೦೦೦ ಕಾಲಾಳು, ೧೫೦೦ ಇತರೆ ಸೈನಿಕರನ್ನೊಳಗೊಂಡು ಪೋರ್ಚುಗೀಸರೊಂದಿಗೆ ಯುದ್ಧ ನಡೆದು ಎರಡು ದಿನಗಳ ನಂತರ ವೈಸ್‌ರಾಯ್‌ಯು ಕ್ಯಾಪ್ಟನ್ ಮೇಜರ್‌ರೊಂದಿಗೆ ಹಿಂತಿರುಗಿ ಅಂಜುದೀವ್ ದ್ವೀಪಕ್ಕೆ ಬರಲು ಆದೇಶಿಸಿದನು. ಹಿಂತಿರುಗಿ ಹೋಗುವಾಗ, ಮಿರ್ಜಾನ, ಕುಮಟಾ, ಗೋಕರ್ಣಗಳ ಮೇಲೆ ದಾಂಧಲೆ ನಡೆಸಿದರು. ಈ ರೀತಿ ನಾಲ್ಕು ಕೋಟೆಗಳನ್ನು ಧ್ವಂಸ ಮಾಡಲಾಯಿತು. ೮೨ ಹಡಗುಗಳನ್ನು ಪೋರ್ಚುಗೀಸರು ಸುಟ್ಟರು. ವಸತಿ ಪ್ರದೇಶಕ್ಕೆ ಬೆಂಕಿ ಹಚ್ಚಿದರು. ೬೦೦ಕ್ಕೂ ಜಾಸ್ತಿ ಕೆನರಾ ಸೈನಿಕರು ಹತರಾದರು. ಪೋರ್ಚುಗೀಸರ ಕಡೆಯಿಂದ ಕೇವಲ ೧೨ ಜನ ಸೈನಿಕರು ಸತ್ತರು. ೩೦ ಜನ ಗಾಯಗೊಂಡರು, ಕ್ಯಾಪ್ಟನ್ ಮೇಜರ್ ಸಮುದ್ರ ಮಧ್ಯದಲ್ಲಿ ಅಸೌಖ್ಯದಿಂದ ತೀರಿದನು. ಈ ದಾಂಧಲೆಯಿಂದ ನಷ್ಟಕ್ಕೆ ಒಳಗಾದ ಬಸವಪ್ಪ ನಾಯಕ ೧೭೧೩ರ ಡಿಸೆಂಬರ್ ೨೦ರಂದು ಶಾಂತಿ ಮಾತುಕತೆಗೆ ವೈಸ್‌ರಾಯಿ ಬಳಿಗೆ ಪ್ರತಿನಿಧಿ ಕಳುಹಿಸಿದನು. ಆ ಪ್ರಕಾರ ೧೭೧४ರ ಫೆಬ್ರವರಿ ೧೯ರಂದು ಶಾಂತಿ ಒಪ್ಪಂದಕ್ಕೆ ಬರಲಾಯಿತು. ಇದರಲ್ಲಿ ಎರಡು ಭಾಗಗಳಿದ್ದವು. ಒಂದನೆಯ ಭಾಗ ಪೋರ್ಚುಗೀಸರ ಪರವಾದ ಷರತ್ತುಗಳಾಗಿದ್ದವು. ಎರಡನೇಯ ಭಾಗ ಬಸವಪ್ಪ ನಾಯಕನ ಮೇಲೆ ಅನ್ವಯಿಸುವ ಷರತ್ತುಗಳಾಗಿದ್ದವು.

ಆದರೆ ಈ ಶಾಂತಿ ಒಪ್ಪಂದ ಅನುಷ್ಠಾನದ ಒಂದು ವರ್ಷದ ಒಳಗೆ ಸೋಮಶೇಖರ ನಾಯಕನ ಹಡಗಿನ ಲೈಸನ್ಸ್ ಅವಧಿ ಮುಗಿದಿರುವ ಹಿನ್ನೆಲ್ಲೆಯಲ್ಲಿ ಅದನ್ನು ಅಪ್ಪರ್ ಗೋವಾದಲ್ಲಿ ೧೭೧४ರಲ್ಲಿ ಪೋರ್ಚುಗೀಸರು ಮುಟ್ಟುಗೋಲು ಹಾಕಿದರು. ಅನಂತರ ೧೭೨೨ರಲ್ಲಿ ಕುದುರೆಗಳನ್ನು ಹೊಂದಿದ್ದ ದೋಣಿಯನ್ನು ರಹದಾರಿ ಇಲ್ಲ ಎಂಬ ಕಾರಣಕ್ಕೆ ಪೋರ್ಚುಗೀಸರು ಮುಟ್ಟುಗೋಲು ಹಾಕಿ ಅನಂತರ

ಬಿಡುಗಡೆ ಮಾಡಿದರು. ಶಾಂತಿ ಒಪ್ಪಂದ ಇದ್ದರೂ ಈ ರೀತಿ ನಿರಂತರ ಉಲ್ಲಂಘನೆಯ ಪ್ರಕರಣಗಳು ನಡೆಯಿತು.

ಏತನ್ಮಧ್ಯೆ ಧಾರ್ಮಿಕ ಧರ್ಮಗುರುಗಳ ಬಂಧನಗಳು ನಡೆದು ಅಂತಿಮವಾಗಿ ವ್ಯಾಪಾರ ವ್ಯವಹಾರದ ಮೇಲೆ ಅದರ ಪ್ರತಿಬಿಂಬ ಬಿದ್ದ ಘಟನೆಗಳೂ ೧೬೨೮ರಿಂದ ನಿರಂತರವಾಗಿ ನಡೆಯಿತು. ಈ ಎಲ್ಲಾ ಹಿನ್ನೆಲೆಗಳಲ್ಲಿ ಫಾದರ್ ಮಚಾದೋ ಒಂದು ಹೊಸ ಒಪ್ಪಂದ ಮಾಡಲು ನಿಯುಕ್ತಿಗೊಂಡರು. ಹೊಸ ಒಪ್ಪಂದದಲ್ಲಿ ಪ್ರತೀ ವರ್ಷ ನಿರ್ದಿಷ್ಟಪಡಿಸಿದ ದರದಲ್ಲಿ ಅಕ್ಕಿಯನ್ನು ಬ್ರಿಟಿಷರಿಗೆ ಸರಬರಾಜು ಮಾಡುವುದನ್ನು ಸೇರಿಸಲಾಗಿತ್ತು. ಇದಕ್ಕೆ ಪ್ರತಿಯಾಗಿ ಇಕ್ಕೇರಿಗೆ ಬಹಳಷ್ಟು ಉದಾರವಾದ ನೆಲೆಯಲ್ಲಿ ಪಾಸ್‌ಪೋರ್ಟ್‌ನ್ನು ಪೋರ್ಚುಗೀಸರು ವಿತರಿಸುವುದು; ಮತ್ತು ನಿರ್ದಿಷ್ಟಪಡಿಸಿದ ದರದಲ್ಲಿ ಉಪ್ಪನ್ನು ತಯಾರಾಗುವ ಸ್ಥಳದಿಂದ ಇಕ್ಕೇರಿಗೆ ಸರಬರಾಜು ಮಾಡಲು ಒಪ್ಪಲಾಯಿತು(ಶಾಸ್ತ್ರಿ ೨೦೦೦:೨೩೭). ಆ ಪ್ರಕಾರ ಎಪ್ರಿಲ್ ೫ರಲ್ಲಿ ವೈಸ್‌ರಾಯ್ ಮೂರು ನಿರ್ದಿಷ್ಟ ಪ್ರಸ್ತಾಪಗಳನ್ನು ಸೋಮಶೇಖರ್‌ಗೆ ಕಳುಹಿಸಿದ್ದು ಅವುಗಳೆಂದರೆ:–

ಅ. ಪೋರ್ಚುಗೀಸರು ೭೦,೦೦೦ ಚೀಲ ಅಕ್ಕಿಯನ್ನು ಪ್ರತೀ ವರ್ಷ ೧೨ ಅಥವಾ ೧೪ ಪಗೋಡಾಗಳ ಮಾರುಕಟ್ಟೆ ದರ ಯಾವುದು ಅಗ್ಗವಿದೆಯೋ ಅದರಲ್ಲಿ ಪಡೆಯುವುದು. ಒಂದು ವೇಳೆ ಜಾಸ್ತಿ ಅಕ್ಕಿ ಬೇಕಿದ್ದರೆ ಆಗ ಮಾರ್ಕೆಟ್‌ನಲ್ಲಿರುವ ದರವನ್ನು ಹೆಚ್ಚುವರಿ ಚೀಲಕ್ಕೆ ಪಾವತಿಸುವುದು. ಇದಕ್ಕೆ ಪರ್ಯಾಯವಾಗಿ ಪ್ರತೀವರ್ಷ ಪೋರ್ಚುಗೀಸರು ೬೦,೦೦೦ ಚೀಲ ಉಪ್ಪನ್ನು ನಿರ್ದಿಷ್ಟವಾಗಿ ಅಕ್ಕಿಗೆ ಸಂಬಂಧಿಸಿದ ವಿನಿಮಯ ದರದಲ್ಲಿ ನೀಡುವುದು.

ಬ. ಸೋಮಶೇಖರ ಪ್ರತೀ ವರ್ಷ ೫೦೦೦ ಚೀಲಕ್ಕಿಂತ ಹೆಚ್ಚು ಅಕ್ಕಿಯನ್ನು ಕಪ್ಪ ಕಾಣಿಕೆಯಾಗಿ ನೀಡಿದ್ದಲ್ಲಿ ಪೋರ್ಚುಗೀಸರು, ರಾಜನ ಮತ್ತು ಇತರ ವ್ಯಾಪಾರಿ ಹಡಗುಗಳಿಗೆ ಶುಲ್ಕರಹಿತ ಪಾಸುಪೋರ್ಟ್ ನೀಡುವುದು. ಒಂದು ವೇಳೆ ಪಾಸ್‌ಪೋರ್ಟ್ ಇಲ್ಲದೆ ಹಡಗು ಸಂಚರಿಸಿದ್ದೇ ಆದಲ್ಲಿ ಅದನ್ನು ಮುಟ್ಟುಗೋಲು ಹಾಕುವುದು. ಕುದುರೆಗಳನ್ನು ತರುವ ಹಡಗುಗಳಲ್ಲಿ ಎರಡು ಕುದುರೆಗಳನ್ನು ಪೋರ್ಚುಗೀಸರಿಗೆ ಉಚಿತವಾಗಿ ನೀಡುವುದು.

ಕ. ಸೋಮಶೇಖರನು ಮೆಲೋಡಿನ್ ಪ್ರಾಂತ್ಯದ ವರ್ತಕರನ್ನು ಕೆನರಾ ಪ್ರಾಂತ್ಯಕ್ಕೆ ಬರಲು ಅವಕಾಶ ನೀಡದಿರುವುದು. ಒಂದು ವೇಳೆ ಅವರುಗಳ ಹಡಗು ಕಂಡು ಬಂದರೆ ಪೋರ್ಚುಗೀಸರು ಅವುಗಳ ಮೇಲೆ ದಾಳಿ ನಡೆಸಿ ನಾಶ ಮಾಡಲು ಹಕ್ಕುಳ್ಳವರಾಗಿರುತ್ತಾರೆ. ಇಂತಹ ಸಂದರ್ಭದಲ್ಲಿ ಸೋಮಶೇಖರನು ಪೋರ್ಚುಗೀಸರಿಗೆ ಸಹಾಯ ಮಾಡಬೇಕು(ಶಾಸ್ತ್ರಿ ೨೦೦೦:೨೩೭). ಈ ಬಗ್ಗೆ ಅಕ್ಟೋಬರ್ ಮಧ್ಯದ ವರೆಗೆ ಯಾವುದೇ ಒಪ್ಪಂದಕ್ಕೆ ಬರಲು ಆಗಲಿಲ್ಲ. ೧೬೩೨ರಿಂದ ೧೬೩೩ರ ವರೆಗಿನ ಅವಧಿಯಲ್ಲಿ ಇಕ್ಕೇರಿಯು ಮಲಬಾರಿನೊಂದಿಗೆ ಸಂಘರ್ಷಕ್ಕೆ ಇಳಿದ ಸಮಯವಾಗಿತ್ತು. ಪೋರ್ಚುಗೀಸರು ಈ ಅವಕಾಶವನ್ನು ಉಪಯೋಗಿಸಿ ತಮ್ಮ ಅಕ್ಕಿಯ ದರವನ್ನು ನಿಗದಿ ಪಡಿಸುವಲ್ಲಿ ತಂತ್ರಗಾರಿಕೆ ಉಪಯೋಗಿಸಿಕೊಂಡರು. ಈ ನಿಟ್ಟಿನಲ್ಲಿ ೧೬೩೪ರ ಮಾರ್ಚ್ ೨೨ರಂದು ಮಂಗಳೂರಿನ ಪೋರ್ಚುಗೀಸ್ ಫ್ಯಾಕ್ಟರ್‌ರವರು ಸೋಮಶೇಖರನೊಂದಿಗೆ ಒಂದು ಒಪ್ಪಂದವನ್ನು ಅಕ್ಕಿಯ ಸರಬರಾಜಿಗೆ ಸಂಬಂಧಿಸಿ ಮಾಡಿಕೊಂಡರು. ೧೬೪೭–೪೮ರಲ್ಲಿ ಮಂಗಳೂರು ಮತ್ತು ಹೊನ್ನಾವರದ

ಮೇಲೆ ಮರಾಠರ ತುಳಜಾ ಅಂಗ್ರೀಯನು[೧೧] ದಾಳಿ ನಡೆಸಿ ಬೆಲೆಬಾಳುವ ಆಹಾರ ವಸ್ತುಗಳನ್ನು ವಶಪಡಿಸಿಕೊಂಡನು. ಈ ಸಮಯದಲ್ಲಿ ಬಸವಪ್ಪ ನಾಯಕನು ಪೋರ್ಚುಗೀಸರ ಸಹಾಯವನ್ನು ತುಳಜಾ ಅಂಗ್ರೀಯನ ವಿರುದ್ಧ ಅಪೇಕ್ಷಿಸಿದನು. ಆದರೆ ಪೋರ್ಚುಗೀಸರ ಎಲ್ಲಾ ಸೈನ್ಯವು ಭೋಸ್ಲೆ ವಿರುದ್ಧ ಕಾರ್ಯಾಚರಣೆಗೆ ಇಳಿದಿರುವ ಕಾರಣ ಸಹಾಯ ನೀಡುವ ಪರಿಸ್ಥಿತಿಯಲ್ಲಿ ಇರಲಿಲ್ಲ. ಬದಲಾಗಿ ತುಳಜಾ ಅಂಗ್ರೀಯನೇ ಪೋರ್ಚುಗೀಸರೊಂದಿಗೆ ಶಾಂತಿ ಒಪ್ಪಂದಕ್ಕೆ ಮುಂದಾದನು. ೧೭೫೦ರಲ್ಲಿ ತುಳಜಾ ಅಂಗ್ರೀಯನು ಹೊನ್ನಾವರದ ಮೇಲೆ ದಾಳಿ ನಡೆಸಿ ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಅದನ್ನು ಮುಂದೆ ಕೆಲವೇ ಸಮಯದಲ್ಲಿ ತ್ಯಜಿಸಿದನು. ಅಲ್ಲಿಂದ ಅಗಾಧ ಪ್ರಮಾಣದಲ್ಲಿ ಕಪ್ಪಕಾಣಿಕೆ ಪಡೆದುಕೊಂಡನು. ದೃಢಕಾಯದ ೧೫೦೦ ರಷ್ಟು ಯುವಕರನ್ನು ಬಂಧಿಸಿ ಕೊಂಡೊಯ್ದು ಅವರ ಬಂಧಮುಕ್ತಿಗಾಗಿ ಅಪಾರ ಮೊತ್ತದ ಬೇಡಿಕೆ ಇಟ್ಟನು(ಶಾಸ್ತ್ರಿ ೨೦೦೦:೨೪೪).

ಬಸವಪ್ಪ ನಾಯಕನ ನಂತರ ಚೆನ್ನ ಬಸವಪ್ಪ ನಾಯಕನು (೧೭೫೫-೫೭) ಇಕ್ಕೇರಿಯ ಅಧಿಕಾರ ವಹಿಸಿಕೊಂಡನು. ಅದಾದ ನಂತರ ಇಕ್ಕೇರಿಯ ಕೊನೆಯ ಆಳ್ವಿಕೆಯನ್ನು ರಾಣಿ ವೀರಮ್ಮಾಜಿ (೧೭೫೭-೬೩) ನಡೆಸಿದಳು. ಈ ಎರಡೂ ರಾಜರುಗಳ ಸಂದರ್ಭದಲ್ಲಿ ಕೆಲವೊಂದು ಪರಸ್ಪರ ಸಂಘರ್ಷದ ಸಣ್ಣಪುಟ್ಟ ಘಟನೆಗಳನ್ನು ಹೊರತುಪಡಿಸಿದರೆ ಉಳಿದಂತೆ ಸೌಹಾರ್ದಯುತವಾಗಿತ್ತು. ಕಾರಣವಿಲ್ಲದೆ ಪೋರ್ಚುಗೀಸರು ಹಡಗುಗಳ ಮೇಲೆ ದಾಳಿ ನಡೆಸಿದಾಗ ಇಕ್ಕೇರಿ ಪ್ರತಿಭಟಿಸಿ ದೂರು ಸಲ್ಲಿಸಿದಾಗ ಅವುಗಳ ವಿಚಾರಣೆ ನಡೆದು ನ್ಯಾಯ ದೊರೆಯುತ್ತಿತ್ತು

೧೭೬೩ರಲ್ಲಿ ಹೈದರಾಲಿಯು ಬಿದನೂರಿನ ಮೇಲೆ ದಾಳಿ ನಡೆಸಿ ವೀರ ಚೆನ್ನಮಾಜಿಯನ್ನು ಸೋಲಿಸಿ ಸಾರ್ವಭೌಮ ಅಧಿಕಾರ ಪ್ರಾರಂಭಿಸಿದನು.

ಪೋಚುಗೀಸರ ನಿರ್ಣಾಯಕವಾದ ಉಚ್ಛ್ರಾಯ ಸ್ಥಿತಿಯ ಕಾಲಾವಧಿಯಾದ ೧೬ನೇ ಶತಮಾನದ ಎರಡನೇ ದಶಕದಿಂದ ಪ್ರಾರಂಭಗೊಂಡು ೧೮ನೇ ಶತಮಾನದ ಕೊನೆಯಾರ್ಧದ ವರೆಗಿನ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಸನ್ನಿವೇಶಗಳಿಗೆ ವಿಶೇಷ ಮಹತ್ವ ನೀಡಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಖಡ್ಗ, ತಕ್ಕಡಿ ಮತ್ತು ಶಿಲುಬೆಗಳೊಂದಿಗೆ ಪ್ರವೇಶಗೈದು ಈ ಮೂರೂ ಸಂಕೇತಗಳು ವಿಜೃಂಭಿಸಿ ಕೊನೆಯ ಅವಧಿಗೆ ಶಿಲುಬೆ ಮಾತ್ರ ಈ ಪ್ರದೇಶದಲ್ಲಿ ಶಾಶ್ವತವಾಗಿ ನೆಲೆಯೂರುವಂತಾಯಿತು. ಆದರೆ ಈ ಪ್ರಕ್ರಿಯೆ ಬಹಳ ಸರಳವಾಗಿ ಸಾಂಕೇತಿಕವಾಗಿ ನಡೆದಿರುವುದಿಲ್ಲ. ಪೋರ್ಚುಗೀಸರು ತಮ್ಮ ಪ್ರಾಣವನ್ನು ಪಣವಿಟ್ಟು ಸಮುದ್ರಯಾನ ಮಾಡಿದ್ದಾರೆಂದು ಆರ್ ಎಸ್ ವೈಟ್‌ವೇಯವರು ಉಲ್ಲೇಖಿಸುತ್ತಾರೆ. ಅವರು ಪೋರ್ಚುಗಲ್‌ನಿಂದ ಹೊರಟ ಹಡಗುಗಳ ಸಂಖ್ಯೆ ಮತ್ತು ಹಿಂದಿರುಗಿ ಪೋರ್ಚುಗಲ್‌ಗೆ ಹೋದ ಹಡಗುಗಳ ಸಂಖ್ಯೆಯನ್ನು ಆಧಾರಿಸಿ ಈ ನಿರ್ಣಯಕ್ಕೆ ಬರುತ್ತಾರೆ. ಅವರು ೧೪೯೭ ರಿಂದ ೧೫೭೯ ರವರೆಗೆ ೬೨೦ ಹಡಗುಗಳು ಭಾರತಕ್ಕೆ ಹೊರಟಿದ್ದು ಅದರಲ್ಲಿ ಕೇವಲ ೩೨೫ ಮಾತ್ರ ಹಿಂತಿರುಗಿದೆ. ಉಳಿದ ೨೯೫ ಹಡಗುಗಳು ಸಮುದ್ರದಲ್ಲಿ ವಿವಿಧ ಕಾರಣಗಳಿಗಾಗಿ ನಾಶವಾಗಿದೆ. ಮುಂದೆ ೧೫೮೦ರಿಂದ ೧೬೧೨ ರ ಅವಧಿಯ ವರೆಗೆ ಒಟ್ಟು ೧೮೬ ಹಡಗುಗಳು ಭಾರತಕ್ಕೆ ಹೊರಟಿದ್ದು

ಅದರಲ್ಲಿ ನೂರು ಹಡಗುಗಳು ಮಾತ್ರ ಹಿಂತಿರುಗಿ ಪೋರ್ಚುಗಲ್‌ನ ಲಿಸ್ಬನ್ ಬಂದರಿಗೆ ತಲುಪಿದೆ. ಉಳಿದ ೮೬ ಹಡಗುಗಳು ನಾಶವಾಗಿವೆ (ವೈಟ್‌ವೇ ೧೯೬೯:೪೨). ಆದುದರಿಂದ ಹಡಗುಗಳ ನಾಶ ಎಂದರೆ ಅದರಲ್ಲಿದ್ದ ನಾವಿಕ ಸಿಬ್ಬಂದಿಗಳು, ಅಧಿಕಾರಿಗಳು, ಸೈನಿಕರು ಸಮುದ್ರ ಪಾಲಾಗಿ ನಾಶವಾಗುವುದು ಎಂದು ಅರ್ಥ. ಸರಿಸುಮಾರು ೩೭% ಹಡಗುಗಳು ನಾಶವಾಗಿದೆ. ನಿರಂತರ ಯುದ್ಧ, ಸೈನಿಕರ, ಜನರ ಹತ್ಯೆ, ಬೆಂಕಿಯ ಕೆನ್ನಾಲಗೆ ಹಾಗೂ ಮದ್ದುಗುಂಡಿನ ಆರ್ಭಟಗಳೊಂದಿಗೆ ವಾಣಿಜ್ಯ – ವ್ಯವಹಾರದ ಸಂಘರ್ಷಗಳ ಮುಖಾಮುಖಿಯ ಚರಿತ್ರೆಯೇ ಆಗಿದೆ. ಈ ಅವಧಿಯ ಉದ್ದಗಲಕ್ಕೂ ಕರಿಮೆಣಸು, ಅಕ್ಕಿ ಮತ್ತಿತರೆ ಸಾಂಬಾರು ಪದಾರ್ಥಗಳು ರಾಜಕೀಯದ ಅಧಿಕಾರವನ್ನು ನಿರ್ಣಯಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ ಎಂದು ತಿಳಿದು ಬರುತ್ತಿದೆ.

ಪೋರ್ಚುಗೀಸರು ಕರಿಮೆಣಸಿನ ಸರಬರಾಜಿಗೆ ಸಂಬಂಧಿಸಿ ಅದು ಉತ್ಪಾದನೆ ಆಗುತ್ತಿದ್ದ ಪ್ರಾಂತ್ಯದ ಸಣ್ಣಪುಟ್ಟ ಸಾಮಂತರಾಜರನ್ನು ಆಶ್ರಯಿಸಿದ್ದರು. ಕರಿಮೆಣಸನ್ನು ಬೆಳೆಸುವವರು ಮತ್ತು ಸಂಗ್ರಹಿಸುವವರು ಬಹಳ ಮುಖ್ಯವಾಗಿ ಹಿಂದೂಗಳಾಗಿದ್ದರು. ಇದನ್ನು ಮಲಬಾರ್ ಪ್ರಾಂತ್ಯದಲ್ಲಿ ಸಂತ ಥೋಮೆ ಕ್ರೈಸ್ತ ಸಮುದಾಯದ ಜನರು ಖರೀದಿಸುತ್ತಿದ್ದರು. ಆದರೆ ಅದನ್ನು ಕರಾವಳಿ ತೀರಕ್ಕೆ ತಂದು ಮಾರಾಟ ಮಾಡುವರೇ ಪೋರ್ಚುಗೀಸರ ದಬ್ಬಾಳಿಕೆ ಮತ್ತು ಷಾಷಂಡಿ ವಿಚಾರಣೆಯ ಹೆದರಿಕೆಯಿಂದ ಸಾಂಪ್ರದಾಯಿಕ ಮುಸ್ಲಿಂ ವರ್ತಕರಿಗೆ ಮಾರುತಿದ್ದರು(ಪಿಯರ್‌ಸನ್ ೨೦೦೪:೨೯). ಇವರುಗಳು ಉತ್ಪಾದಕರು ಮತ್ತು ರಫ್ತುದಾರರ ಮಧ್ಯೆ ಕಾರ್ಯಾಚರಿಸಿದರು. ಇವರನ್ನು ಬೇರೆ ಬೇರೆ ವಿಧಾನಗಳ ಮೂಲಕ ತಮ್ಮ ಹಿತಾಸಕ್ತಿಯ ಪರವಾಗಿ ಒಲಿಸಿಕೊಂಡರು(ಪಿಯರ್‌ಸನ್ ೨೦೦೪:೨೯) ಅಂದರೆ ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ಕರಿಮೆಣಸನ್ನು ಪಡೆಯಲು ಸೈನಿಕ ಕಾರ್ಯಾಚರಣೆ ಮಾತ್ರವಲ್ಲದೆ ಇತರ ಎಲ್ಲಾ ತಂತ್ರಗಳನ್ನು ಯೋಜನಾಬದ್ಧವಾಗಿ ಉಪಯೋಗಿಸಿಕೊಂಡರು.

ಪೋರ್ಚುಗೀಸರ ಮೇಲ್ಮಟ್ಟದ ಆ ಕಾಲದ ಆಧುನಿಕ ತಂತ್ರಜ್ಞಾನವು ದೇಶೀಯ ಸಾಮಂತ ರಾಜರುಗಳ ಸಾಂಪ್ರದಾಯಿಕ ಯುದ್ಧಸಿದ್ಧತೆ ಮತ್ತು ಉಪಕರಣಗಳೊಂದಿಗೆ ಅವರುಗಳ ಮಧ್ಯೆ ಸಹಜವಾಗಿಯೇ ಇದ್ದಂತಹ ಅನೈಕ್ಯತೆ ಮತ್ತು ಪರಸ್ಪರ ದ್ವೇಷದ ಮನೋಭಾವಗಳು ಅತ್ಯಂತ ಉತ್ತಮವಾದ ಅವಕಾಶವನ್ನು ಪೋರ್ಚುಗೀಸರಿಗೆ ಕಲ್ಪಿಸಿಕೊಟ್ಟಿದೆ. ಅತ್ಯಂತ ಉತ್ತಮವಾದ ಮತ್ತು ಫಲವತ್ತಾದಂತಹ ಆದಾಯದ ಕಣಜವಾಗಿರುವ ಕರಾವಳಿ ಕರ್ನಾಟಕವನ್ನು ಹೆಚ್ಚು ಕಡಿಮೆ ೧೫೭೬ರಲ್ಲಿ ಪೋರ್ಚುಗೀಸರು ತಮ್ಮ ವಶಕ್ಕೆ ಒಳಪಡಿಸಿಕೊಂಡರು. ಇಲ್ಲಿಯ ಜನರ ಮೇಲೆ ತೆರಿಗೆಯ ಭಾರ ಅಥವಾ ಇತರ ಕಂದಾಯಗಳನ್ನು ಹೆಚ್ಚಿಸದೆ ಯಥಾ ಸ್ಥಿತಿಯಲ್ಲಿ ಅಧಿಕಾರ ಚಲಾಯಿಸಲು ಸಾಮಂತರಾಜರಿಗೆ ಅವಕಾಶ ಕಲ್ಪಿಸಿಕೊಟ್ಟರು. ಆಹಾರ ಧಾನ್ಯಗಳ ಮತ್ತು ಕರಿಮೆಣಸು ಹಾಗೂ ಇತರೆ ಸಾಂಬಾರು ಪದಾರ್ಥಗಳ ಬೆಲೆ ನಿರ್ಧಾರದಿಂದ ಪ್ರಾರಂಭಗೊಂಡು ಹಡಗಿಗೆ ತುಂಬಿಸಿಕೊಳ್ಳುವ ತನಕ ವಿವಿಧ ರೀತಿಯ ಶೋಷಣೆ, ವಂಚನೆ ನಡೆಯುತ್ತಿತ್ತು. ಪೋರ್ಚುಗೀಸರು ವ್ಯಾಪಾರ ವ್ಯವಹಾರದ ನಿಘಂಟಿಗೆ ಮಧ್ಯವರ್ತಿ ಏಜೆಂಟರೆಂಬ ಹೊಸ ಪದ್ಧತಿಯನ್ನು ಜಾರಿಗೆ ತಂದು ವ್ಯಾಪಕ ಪ್ರಮಾಣದಲ್ಲಿ ಮಧ್ಯವರ್ತಿ ಶೋಷಣೆಗೆ ಹೇತುವಾದರು.

ಈ ಅವಧಿಯಲ್ಲಿ ಭಟ್ಕಳ ಮತ್ತು ಬಸ್ರೂರುಗಳಲ್ಲಿ ಪೋರ್ಚುಗೀಸರ ವಿರುದ್ಧ ವ್ಯಾಪಾರಿ ಸಮುದಾಯ ಮತ್ತು ಜನತೆ ವಿವಿಧ ಸಂದರ್ಭದಲ್ಲಿ ನಡೆಸಿದ ಸಂಘರ್ಷ – ಪ್ರತಿರೋಧ ಗಮನಾರ್ಹವಾಗಿದೆ. ಈ ಮುಖಾಮುಖಿಯಲ್ಲಿ ಅಪಾರ ಸಾವು ನೋವು ಸಂಭವಿಸಿದರೂ ದೇಶೀಯ ವ್ಯಾಪಾರಿಗಳ ಮತ್ತು ಜನರ ಕಾರ್ಯಾಚರಣೆ ಎದೆಗುಂದಲಿಲ್ಲ.

ಪೋರ್ಚುಗೀಸರೊಂದಿಗೆ ಮಂಗಳೂರು ಪ್ರಾಂತ್ಯದಲ್ಲಿ ನಡೆದ ನಾಲ್ಕು ಸಂಘರ್ಷಗಳು ಗಮನಾರ್ಹ ವಾಗಿದೆ. ಈ ಎಲ್ಲಾ ಸಂಘರ್ಷಗಳ ಹಿಂದೆ ವಾಣಿಜ್ಯದ ದೃಷ್ಟಿಕೋನ ಪ್ರಮುಖ ಪಾತ್ರ ವಹಿಸಿದೆ. ಕಲ್ಲಿಕೋಟೆಯ ಜಾಮೋರಿನ್‌ಗಳನ್ನು ಸದೆಬಡಿಯಬೇಕಿದ್ದರೆ ಮಂಗಳೂರಿನಲ್ಲಿ ನಿಯಂತ್ರಣ ಸಾಧಿಸಿ ಕೋಟೆ ಕಟ್ಟಿ ಕಲ್ಲಿಕೋಟೆಯ ವ್ಯಾಪಾರಿ ಹಡಗುಗಳನ್ನು ನಾಶ ಮಾಡುವ ನಿರಂತರ ಪ್ರಕ್ರಿಯೆ ನಡೆಯಿತು. ಮತ್ತೊಂದೆಡೆಯಲ್ಲಿ ಮಂಗಳೂರಿನ ಬಂದರಿನಲ್ಲಿ ಕಲ್ಲಿಕೋಟೆಯ ಹಡಗುಗಳಿಗೆ ಅವಕಾಶ ಇಲ್ಲದಂತೆ ಮಾಡಿದರು. ಈ ಅನ್ಯಾಯದ ಘಟನೆಗಳನ್ನು ಮಂಗಳೂರಿನ ಜನತೆ ಕೂಡ ವಿರೋಧಿಸಿ ಪೋರ್ಚುಗೀಸರ ವಿರುದ್ಧ ಹೋರಾಡಿದ್ದಾರೆ. ಮತ್ತೊಂದೆಡೆಯಲ್ಲಿ ಉಳ್ಳಾಲದ ರಾಣಿಯೂ ಪೋರ್ಚುಗೀಸರನ್ನು ಹೊಡೆದೋಡಿಸಲು ಪ್ರಾರಂಭದ ದಿನಗಳಲ್ಲಿ ಧೀರೋದಾತ್ತ ಹೋರಾಟಗಳನ್ನು ನಡೆಸಿರುತ್ತಾಳೆ. ಆದರೆ ಉಳ್ಳಾಲದ ರಾಣಿಗೆ ಪ್ರಥಮ ಸ್ವಾತಂತ್ರ್ಯ ಹೋರಾಟಗಾರ್ತಿ ಎಂಬ ವಿಶ್ಲೇಷಣೆ ಉತ್ಪ್ರೇಕ್ಷೆಯಾಗಿದೆ. ವೀರಭದ್ರ ನಾಯಕ, ವೆಂಕಟಪ್ಪ ನಾಯಕ ಮತ್ತು ಶಿವಪ್ಪ ನಾಯಕರ ಇಕ್ಕೇರಿಯ ಕಾಲಘಟ್ಟದಲ್ಲಿ ಸಂಭವಿಸಿದ ವಿವಿಧ ಒಪ್ಪಂದಗಳು ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿದ್ದಾಗಿದೆ. ಕರಿಮೆಣಸು ನಿರ್ಣಾಯಕ ಪಾತ್ರವಹಿಸಿರುವುದನ್ನು ಇಲ್ಲಿ ಸ್ಪಷ್ಟವಾಗಿ ವಿಶ್ಲೇಷಿಸಲಾಗಿದೆ.

ಇಕ್ಕೇರಿಯು ಕರಾವಳಿ ಕರ್ನಾಟಕದಲ್ಲಿ ಒಂದು ಪ್ರಬಲ ಸಾರ್ವಭೌಮ ಸಾಮ್ರಾಜ್ಯವಾಗಿ ಮೂಡಿಬರಲು ವೆಂಕಟಪ್ಪ ನಾಯಕ ೧೬೦೨ರಿಂದ ೧೬೨೯ರವರೆಗೆ ಕೈಕೊಂಡ ಹಂತಹಂತದ ಸೈನಿಕ ಕಾರ್ಯಾಚರಣೆ ಕಾರಣವಾಗಿದೆ ಎಂದು ಡಿಸ್ನಿ ಹೇಳುತ್ತಾರೆ (ಡಿಸ್ನಿ ೨೦೧೦:೨). ಇದೇ ಹಂತದಲ್ಲಿ ಆತ ನಡೆಸಿದ ವಾಣಿಜ್ಯಾತ್ಮಕವಾದ ತಂತ್ರಗಳು, ಒತ್ತಡಗಳು ಮತ್ತು ಬಲವಂತದ ಹೇರಿಕೆಗಳೂ ಕಾರಣವಾಗಿದೆ. ಇಕ್ಕೆಲಗಳಿಂದ ಪೋರ್ಚುಗೀಸರಿಗೆ ಬಿದ್ದ ಹೊಡೆತ ಅವರ ಬಲವನ್ನು ಕುಂದಿಸಿತು.

ಸಮಸ್ತ ಏಷ್ಯಾದ ವ್ಯಾಪಾರಕ್ಕೆ ಹೋಲಿಸಿದಾಗ ಪೋರ್ಚುಗೀಸರು ಕರಾವಳಿ ಕರ್ನಾಟಕದಿಂದ ಮಾಡುತ್ತಿದ್ದ ಕರಿಮೆಣಸಿನ ರಫ್ತು ಕಂಪೆನಿಯ ಆರ್ಥಿಕತೆಯ ಅತೀ ಮುಖ್ಯ ಆಧಾರವಾಗಿತ್ತು. ೧೬೩೦ರಲ್ಲಿ ಕರಿಮೆಣಸಿನ ಪ್ರಮಾಣ ಸರಿಸುಮಾರು ೮೧%ರಷ್ಟು ಒಳಗೊಂಡಿತ್ತು. ಮುಂದಿನ ವರ್ಷ ಅಂದರೆ ೧೬೩೧ರಲ್ಲಿ ಇದರ ಪ್ರಮಾಣ ೯೬%ಕ್ಕೆ ಏರಿತು (ಡಿಸ್ನಿ ೨೦೧೦:೨೦೮). ಈ ಪ್ರಮಾಣವನ್ನು ವಿಶ್ಲೇಷಿಸಿದಾಗ ಕಂಪೆನಿಯ ಭವಿಷ್ಯ ಸಂಪೂರ್ಣವಾಗಿ ಕರಿಮೆಣಸಿನ ಮೇಲೆ ನಿರ್ಧರಿಸಲ್ಪಟ್ಟಿತ್ತು. ಇಕ್ಕೇರಿ ವೀರಭದ್ರ ನಾಯಕ ಮತ್ತು ಶಿವಪ್ಪ ನಾಯಕರು ಪ್ರಬಲರಾಗಿ ಕರಿಮೆಣಸಿನ ವಾಣಿಜ್ಯೋದ್ಯಮದ ಮಹತ್ವವನ್ನು ಸರಿಯಾಗಿ ಗ್ರಹಿಸಿ ಸಮಸ್ತ ಕರಾವಳಿ ಕರ್ನಾಟಕದ ನಿಯಂತ್ರಣವನ್ನು ಪಡೆದುಕೊಂಡು ಪೋರ್ಚುಗೀಸರ ಮೇಲೆ ವಾಣಿಜ್ಯೋದ್ಯಮದ ಒಪ್ಪಂದಗಳನ್ನು ಬಲವಂತವಾಗಿ ಹೊರಿಸುವ ಮಟ್ಟಕ್ಕೆ ಬೆಳೆದರು. ಪೋರ್ಚುಗೀಸರು ಆ ಸಮಕಾಲೀನ ಸಂದರ್ಭದಲ್ಲಿ ಪ್ರಬಲವಾದ ಆರ್ಥಿಕ ಹಿಂಜರಿತ ಮತ್ತು ದಿವಾಳಿ ಹಂತವನ್ನು ತಲಪಿಸಿದ್ದರು.

ಮಲಬಾರ್ ಪ್ರಾಂತ್ಯದಲ್ಲಿ ಕರಿಮೆಣಸಿನ ಬೆಲೆ ಕರಾವಳಿ ಕರ್ನಾಟಕದಲ್ಲಿ ಇದ್ದ ದರಕ್ಕಿಂತ ಕಡಿಮೆಯಾಗಿದ್ದರೂ ಪೋರ್ಚುಗೀಸರು ರಾಜಕೀಯ ಒತ್ತಡದಿಂದಾಗಿ ಅನಿವಾರ್ಯವಾಗಿ ಕರಾವಳಿ ಕರ್ನಾಟಕ ಪ್ರಾಂತ್ಯದಿಂದಲೇ ಕರಿಮೆಣಸನ್ನು ಪಡೆಯಬೇಕಾಯಿತು.

ಶಿವಪ್ಪ ನಾಯಕನ ಅಧಿಕಾರದ ಅವಧಿಯಲ್ಲಿ ಪೋರ್ಚುಗೀಸ್ ಸಾಮ್ರಾಜ್ಯವನ್ನು ವಾಣಿಜ್ಯೋದ್ಯಮದ ನೆಲೆಗಟ್ಟಿನಲ್ಲಿ ವಿವಿಧ ಒಪ್ಪಂದಗಳನ್ನು ಹೇರಿ ಆರ್ಥಿಕವಾಗಿ ಅವರನ್ನು ದುರ್ಬಲಗೊಳಿಸುವಂತಹ ಪ್ರಕ್ರಿಯೆಯು ತೀವ್ರ ಪ್ರಮಾಣದಲ್ಲಿ ನಡೆಯಿತು. ಇದೇ ರೀತಿಯಲ್ಲಿ ಅಂತಿಮವಾಗಿ ಇಕ್ಕೇರಿ ಸಾಮ್ರಾಜ್ಯವು ೧೭೬೩ರಲ್ಲಿ ಕರಾವಳಿ ಕರ್ನಾಟಕದ ರಾಜಕೀಯದಿಂದ ತೆರೆಮರೆಗೆ ಸರಿಯಿತು.

ಒಟ್ಟಿನಲ್ಲಿ ಈ ಕಾಲಘಟ್ಟದ ಬೆಳವಣಿಗೆಯು ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ವಸಾಹತುಶಾಹಿ ಆಡಳಿತವನ್ನು ವಿಸ್ತರಿಸಿ ಬೆಳೆಸಲು ಪ್ರಯತ್ನಗಳನ್ನು ಮಾಡಲಿಲ್ಲ. ಇದಕ್ಕೆ ಇಕ್ಕೇರಿಯ ರಾಜರುಗಳು ಅಡೆತಡೆಯಾದರು. ಕರಿಮೆಣಸಿನ ವಿಕ್ರಯವೂ ಕೂಡ ಸಮಸ್ಯೆಯಾಗಿಯೇ ಕಾಡಿತ್ತು. ಆದರೆ ಬಂಡವಾಳಶಾಹಿ ಪೂರ್ವ ಸಂಚಯವಾದ ಕೃಷಿಯಿಂದ ವಾಣಿಜ್ಯೋದ್ಯಮದತ್ತ ಪರಿವರ್ತನೆಯು ಯಾವುದೇ ಅಡೆತಡೆ ಇಲ್ಲದೆ ಮುಂದುವರಿಯಿತು. ಈ ಅವಧಿಯಲ್ಲಿ ವಾಣಿಜ್ಯೋದ್ಯಮವೇ ರಾಜ್ಯದ ಆರ್ಥಿಕತೆಯ ಪ್ರಮುಖ ಮೂಲವಾಯಿತು.

## ಟಿಪ್ಪಣಿಗಳು

೧. ಕ್ರೈಸ್ತ ಧರ್ಮಗುರುಗಳು ಶಾಂತಿ ಮತ್ತು ಅಹಿಂಸೆಯ ಪ್ರತಿರೂಪ ಎಂಬ ತಿಳುವಳಿಕೆ ಸಾಮಾನ್ಯವಾಗಿ ಪ್ರಚಲಿತದಲ್ಲಿದೆ. ಆದರೆ ಪೋರ್ಚುಗಲ್‌ನಿಂದ ಭಾರತಕ್ಕೆ ಬಂದ ನೌಕಾಯಾನಗಳಲ್ಲಿ ಇದ್ದ ಕ್ರೈಸ್ತ ಮಿಶನರಿಗಳು ವ್ಯಾಪಾರಿಗಳಾಗಿ, ಏಜೆಂಟರಾಗಿ, ಸರಕಾರದ ರಾಯಭಾರಿಗಳಾಗಿ ಮಾತ್ರವಲ್ಲದೆ ಯುದ್ದ ರಂಗದಲ್ಲೂ ಪಾತ್ರವಹಿಸಿದ್ದಾರೆ. ಉಳ್ಳಾಲದ ಅಬ್ಬಕ್ಕ ರಾಣಿ ವಿರುದ್ಧ ಪೋರ್ಚುಗೀಸರು ನಡೆಸಿದ ಯುದ್ಧದಲ್ಲಿ ಒರ್ವ ಫಾದರ್‌ರವರು ಪ್ರಮುಖ ಪಾತ್ರ ವಹಿಸಿದ್ದಾರೆ. ಕ್ರೈಸ್ತ ಧರ್ಮ ಸಾರುವ ಶಾಂತಿಯ ಸಂದೇಶದ ಹಿಂದೆ ಇರುವ ಹಿಂಸೆಯ ಕರಾಳ ಮುಖಗಳನ್ನು ಕಾರ್ಲ್ ಮಾರ್ಕ್ಸ್‌ರವರ ಲೇಖನಗಳ ಸಂಗ್ರಹ, 'ಮತಧರ್ಮಗಳ ಕುರಿತು' ಎಂಬ ಗ್ರಂಥದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

೨. ದೂರ್ತೆ ಬಾರ್ಬೋಸಾನು ೧೪೮೦ರಲ್ಲಿ ಪೋರ್ಚುಗಲ್‌ನ ಲಿಸ್ಬನ್‌ನಲ್ಲಿ ಜನಿಸಿದನು. ಈತನು ೧೫೦೦ರಲ್ಲಿ ಭಾರತಕ್ಕೆ ಬಂದು ಪೋರ್ಚುಗೀಸ್ ಕಂಪೆನಿಯಲ್ಲಿ ಅಧಿಕಾರಿಯಾಗಿ ೧೫೦೩ರಿಂದ ೧೫೧೭ರವರೆಗೆ ಕೊಚ್ಚಿನ್ ಮತ್ತು ಕಣ್ಣನೂರಿನ ಫ್ಯಾಕ್ಟರ್ ಆಗಿದ್ದನು. ಈತನು ಅಲ್ಬುಕರ್ಕ್ , ವಾಸ್ಕೋಡಗಾಮ ಮೊದಲಾದವರಿಗೆ ದ್ವಿಭಾಷಿಯಾಗಿ ಕಾರ್ಯ ನಿರ್ವಹಿಸಿದನು. ಆತನ ಪುಸ್ತಕ 'ಎ ಡಿಸ್ಕ್ರಿಪ್ಷನ್ಸ್ ಆಫ್ ದ ಕೋಸ್ಟ್ ಆಫ್ ಈಸ್ಟ್ ಆಫ್ರಿಕಾ ಆ್ಯಂಡ್ ಮಲಬಾರ್' ಎಂಬುದು ಪ್ರಸಿದ್ಧ ಪುಸ್ತಕವಾಗಿದೆ. ಇದರಲ್ಲಿ ಉಳ್ಳಾಲದ ಬಗ್ಗೆ ಮಂಗಳೂರಿನ ಕದ್ರಿಯ ಬಗ್ಗೆ ಮತ್ತು ಇತರೆ ವ್ಯಾಪಾರಿ ವ್ಯವಹಾರಗಳ ಬಗ್ಗೆ ವಿಸ್ತೃತವಾದ ವಿವರಗಳಿವೆ.

೩. ದಿ ಗ್ರೇಟ್ ವೆಸ್ಟರ್ನ್ ರೋಡ್ ಎಂಬುದು ಮಧ್ಯಯುಗದಲ್ಲಿ ಇದ್ದ ಏಕೈಕ ಕರ್ನಾಟಕದ ಸಂಪರ್ಕ ಮಾರ್ಗವಾಗಿದೆ. ಇದು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪೆಯನ್ನು ಭಟ್ಕಳದೊಂದಿಗೆ ಸಂಪರ್ಕ ಕಲ್ಪಿಸುತ್ತಿತ್ತು. ಒಳನಾಡಿನ ಆಹಾರ ವಸ್ತುಗಳು ಮತ್ತು ಹತ್ತಿಯ ಬಟ್ಟೆಗಳು ಎತ್ತಿನ ಗಾಡಿಯ ಮುಖಾಂತರ ಭಟ್ಕಳ ಬಂದರಿಗೆ ಬರುತ್ತಿತ್ತು. ಅದು ಅಲ್ಲಿಂದ ಕೊಲ್ಲಿ ರಾಷ್ಟ್ರಗಳಿಗೆ ರಫ್ತು ಆಗುತ್ತಿತ್ತು. ಅದೇ ರೀತಿ ಪರ್ಷಿಯಾ ಮತ್ತು ಅರೇಬಿಯನ್ ದೇಶಗಳ ಕುದುರೆಗಳು ಭಟ್ಕಳ ಬಂದರಿನಲ್ಲಿ ಬಂದು ಇಳಿದು ಅನಂತರ ವಿಜಯನಗರ ಸಾಮ್ರಾಜ್ಯಕ್ಕೆ ರವಾನೆಯಾಗುತ್ತಿತ್ತು.

೪. ವ್ಯಾಪಾರಿ ಸಮುದಾಯವಾಗಿರುವ ನವಾಯತ್ ಸಮುದಾಯ ಇರಾನ್ ಮೂಲದವರಾಗಿರುತ್ತಾರೆ. ಇವರು ಸರಿಸುಮಾರು ೧೨ನೇ ಶತಮಾನದಲ್ಲಿ ಭಟ್ಕಳ ಮತ್ತಿತರೆ ಕಡೆಗಳಲ್ಲಿ ವ್ಯಾಪಾರಕ್ಕಾಗಿಯೇ ಬಂದು ಅಲ್ಲಿಯೇ ನೆಲೆ ನಿಂತು ಸ್ಥಳೀಯ ಹಿಂದೂ ಮತ್ತು ಜೈನ ಸಮುದಾಯದ ಮಹಿಳೆಯರನ್ನು ಮದುವೆಯಾಗಿ ಸ್ಥಳೀಯ ಸಂಸ್ಕೃತಿಯೊಂದಿಗೆ ಬೆರೆತಿರುತ್ತಾರೆ. ಇವರ ಮಾತೃಭಾಷೆ ಕೊಂಕಣಿಯಾಗಿದೆ. ನವಾಯತ್ ಅಂದರೆ ಹೊಸತಾಗಿ ಬಂದವರು ಎಂದರ್ಥ.

೫. ಪೋರ್ಚುಗೀಸರು ಮಂಗಳೂರಿನಲ್ಲಿ ಕೋಟೆಯನ್ನು ಕಟ್ಟುವುದಕ್ಕಾಗಿ ಮೊದಲಿಗೆ ಗುರುಪುರ ನದಿ ಮತ್ತು ಸಮುದ್ರ ಸಂಗಮದ ದಕ್ಷಿಣ ಭಾಗವನ್ನು ಗುರುತಿಸಿಕೊಂಡರು. ಆ ಸ್ಥಳ ಸಮುದ್ರ ಕೊರೆತಕ್ಕೆ

ಒಳಗಾಗುವ ಸ್ಥಳವಾದ ಕಾರಣ ಅದರ ಬದಲಾಗಿ ಉತ್ತರದ ದಿಕ್ಕಿನಲ್ಲಿ ಕೋಟೆಗಾಗಿ ಸ್ಥಳವನ್ನು ನಿಗದಿಪಡಿಸಿದರು. ಬಂಗರಸನ ಆಳ್ವಿಕೆಗೆ ಒಳಪಟ್ಟ ಮುಸ್ಲಿಂ ಜನಸಂಖ್ಯೆ ಜಾಸ್ತಿಯಿದ್ದ ಮತ್ತು ಮಾರುಕಟ್ಟೆ ಪ್ರದೇಶಗಳೆಂದು ದಾಖಲೆಗಳು ಗುರುತಿಸುತ್ತದೆ. ಪೋರ್ಚುಗೀಸ್ ದಾಖಲೆಗಳ ಆಧಾರದಲ್ಲಿ ಗಮನಿಸಿದಾಗ ಸಮಕಾಲೀನ ಎರಡು ಸ್ಥಳಗಳಾದ ಕುದ್ರೋಳಿ ಮತ್ತು ಉರ್ವಾ ಪ್ರದೇಶಗಳ ಬಗ್ಗೆ ಅಂದಾಜಿಸಬಹುದು.

೬. ಮಂಗಳೂರಿನಲ್ಲಿ ಪೋರ್ಚುಗೀಸರು ಕೋಟೆ ಕಟ್ಟಿರುವ ಪ್ರದೇಶವು ಮುಸ್ಲಿಂ ಜನಸಂಖ್ಯೆಯು ಹೆಚ್ಚಾಗಿದ್ದ ಮಾರುಕಟ್ಟೆ ಪ್ರದೇಶವೆಂದು ಆ ಕಾಲದ ದಾಖಲೆಗಳು ತಿಳಿಸುತ್ತವೆ. ಈ ಪ್ರದೇಶದ ಮುಸ್ಲಿಂ ಜನರು ಬಂಗರಸನು ನಗರ ಸಂಚಾರಗೈಯುವಾಗ ಪಲ್ಲಕ್ಕಿಯನ್ನು ತ್ಯಜಿಸಿ ಈ ಭಾಗದಲ್ಲಿ ನಡೆದುಕೊಂಡು ಹೋಗಬೇಕಾಗಿತ್ತು ಎಂಬ ವಿವರಗಳನ್ನು ಕೆಲ ಚರಿತ್ರೆಗಾರರು ತಿಳಿಸುತ್ತಾರೆ. ಇದರಿಂದಾಗಿ ಮುಖಭಂಗಕ್ಕೆ ಒಳಗಾಗಿದ್ದ ಬಂಗರಸನು ಆ ಜಾಗವನ್ನೇ ಪೋರ್ಚುಗೀಸರ ಕೋಟೆ ನಿರ್ಮಾಣಕ್ಕೆ ಬಿಟ್ಟು ಕೊಟ್ಟಿದ್ದಾನೆಂದು ತಿಳಿಸುತ್ತವೆ. ಆದರೆ ಇದು ನಂಬಲು ಅಸಾಧ್ಯವಾದ ಸಂಗತಿ ಆಗಿದೆ. ಏಕೆಂದರೆ ಮುಸ್ಲಿಂ ವ್ಯಾಪಾರಿ ಸಮುದಾಯದ ವಿರುದ್ಧ ಪೋರ್ಚುಗೀಸರು ಕರಾವಳಿ ಕರ್ನಾಟಕದ ಉದ್ದಗಲಕ್ಕೂ ದಬ್ಬಾಳಿಕೆ ನಡೆಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಬಂಗರಸನನ್ನೂ ಎದುರಿಸಿ ಮುಖಭಂಗಗೊಳಿಸುವ ರಾಜಕೀಯ ಮತ್ತು ಆರ್ಥಿಕ ಬಲವನ್ನು ಮುಸ್ಲಿಂ ಸಮುದಾಯ ಹೊಂದಿರಲಿಲ್ಲ.

೭. ಅಪ್ಪರ್ ಬಸ್ರೂರಿನಲ್ಲಿ ಗಣತಂತ್ರ ಪದ್ಧತಿ ಇತ್ತು. ಇಲ್ಲಿ ಆಡಳಿತವನ್ನು ಮುನ್ಸಿಪಾಲಿಟಿಯಂತೆ ಜನರು, ವ್ಯಾಪಾರಿಗಳು ಮತ್ತು ಸಾಮಂತರಾಜನ ಪ್ರತಿನಿಧಿಗಳು ಜಂಟಿಯಾಗಿ ಆಡಳಿತ ನಿರ್ವಹಿಸುತ್ತಿದ್ದರು.

೮. ಬಂಗರಸನ ಕೋಟೆಯು ಕೊಡಿಯಾಲ್ ಬೈಲಿನಲ್ಲಿ ಇತ್ತು ಎಂದು ದಾಖಲೆಗಳು ತಿಳಿಸುತ್ತವೆ. ಆದರೆ ಪ್ರಸ್ತುತ ಕೊಡಿಯಾಲ್‌ಬೈಲ್ ಎಂದು ಗುರುತಿಸಲ್ಪಡುವ ಪ್ರದೇಶದಲ್ಲಿ ಕೋಟೆ ಇರುವ ಸಾಧ್ಯತೆಗಳಿಲ್ಲ. ಬದಲಾಗಿ ಉರ್ವ ಪ್ರದೇಶದ ಸುತ್ತಮುತ್ತ ಕೋಟೆಯ ಕುರುಹುಗಳು ಇಪ್ಪತ್ತನೇ ಶತಮಾನದಲ್ಲಿ ಇದ್ದ ಬಗ್ಗೆ ಕೆಲವು ದಾಖಲೆಗಳು ತಿಳಿಸುತ್ತವೆ.

೯. ಝೆರಾಫಿನ್ ಎಂಬುದು ಇಂಡೋ ಪೋರ್ಚುಗೀಸ್ ಬೆಳ್ಳಿಯ ನಾಣ್ಯ. ಇದು ಪರ್ಷಿಯನ್ ಮೂಲದ ಶಬ್ದವಾಗಿದ್ದು ಮುನ್ನೂರು ರಿಯಾಸ್ (ನಾಣ್ಯ) ಬೆಲೆಯನ್ನು ಹೊಂದಿತ್ತು.

೧೦. ಕಂಡಿ ಎಂಬುದು ಭಾರ ಮಾಪಕವಾಗಿದೆ. ಇದು ದಕ್ಷಿಣ ಏಷ್ಯಾದ ವಿವಿಧ ಪ್ರಾಂತ್ಯಗಳಲ್ಲಿ ವಿವಿಧ ವಸ್ತುಗಳಿಗೆ ಸಂಬಂಧಪಟ್ಟು ಬೇರೆಬೇರೆ ಮಾಪನವನ್ನು ಹೊಂದಿದೆ. ಕರಾವಳಿ ಕರ್ನಾಟಕದಲ್ಲಿ ಕರಿಮೆಣಸು ಮತ್ತು ಅಕ್ಕಿಯನ್ನು ಕಂಡಿಯ ರೂಪದಲ್ಲಿ ಅಳೆಯುತ್ತಿದ್ದರು. ಒಂದು ಕಂಡಿ ಅಂದರೆ ೩ ಕ್ವಿಂಟಾಲ್‌ಗೆ ಸಮ.

೧೧. ತುಲಜಾ ಅಂಗ್ರಿ ಮರಾಠ ಒಕ್ಕೂಟಕ್ಕೆ ಒಳಪಟ್ಟ ಕೊಲಬಾ ಮತ್ತು ರತ್ನಗಿರಿ ಭಾಗದ ಒಬ್ಬ ರಾಜನಾಗಿದ್ದಾನೆ. ಈ ರಾಜ್ಯವಂಶದ ಆಳ್ವಿಕೆಯು ೧೬೯೦ರಲ್ಲಿ ಪ್ರಾರಂಭವಾಯಿತು. ಅಂಗ್ರೀ ಎಂದರೆ

ಮರಾಠಿ ಭಾಷೆಯಲ್ಲಿ ನೌಕಾಧಿಪತಿ ಎಂದರ್ಥ. ಇವರು ಮೂಲತಃ ನೀಗ್ರೋ ಜನಾಂಗೀಯರಾಗಿದ್ದರು. ಶಿವಾಜಿಯ ಸಂದರ್ಭದಲ್ಲಿ ಔರಂಗಜೇಬನ ವಿರುದ್ಧದ ಯುದ್ಧದಲ್ಲಿ ಶಿವಾಜಿಯ ಪರವಾಗಿ ನಿರ್ಣಾಯಕ ಪಾತ್ರ ವಹಿಸಿದ್ದಾರೆ. ಇವರನ್ನು ಇಂಗ್ಲೀಷರು ಎಲ್ಲಾ ದಾಖಲೆಗಳಲ್ಲಿ ಕಡಲುಗಳ್ಳರೆಂದು ಕರೆದಿದ್ದಾರೆ. ಇವರ ನೌಕಾ ಸೈನ್ಯದಲ್ಲಿ ೪೦೦ ಟನ್ ಭಾರದ ಒಟ್ಟು ಎಂಟು ಹಡಗುಗಳಿದ್ದವು. ತುಲಜಾ ಅಂಗ್ರೀ ೧೭೪೮ರಿಂದ ೧೭೫೮ರವರೆಗೆ ಈ ವಂಶದ ಪ್ರಖ್ಯಾತ ಸೇನಾಧಿಪತಿಯಾಗಿದ್ದನು. ಈತನು ಹಲವಾರು ಬಾರಿ ಮಂಗಳೂರು ಮತ್ತಿತರೆ ಕರಾವಳಿ ಕರ್ನಾಟಕದ ಬಂದರುಗಳಿಗೆ ದಾಳಿ ಮಾಡಿ ಕಪ್ಪಕಾಣಿಕೆ ಮತ್ತು ಇತರೆ ಸಂಪತ್ತುಗಳನ್ನು ಸಂಗ್ರಹಿಸಿ ಕೊಂಡೊಯ್ದಿದ್ದಾನೆ.

## ಅಧ್ಯಾಯ ೪

# ಕರಿಮೆಣಸು: ಬಂಧೂಕು–ವಾಣಿಜ್ಯ ವ್ಯವಹಾರ

ಹೈದರಾಲಿಯ ಕಾಲಘಟ್ಟದಲ್ಲಿ ವಾಣಿಜ್ಯೋದ್ಯಮ ಪಡೆದುಕೊಂಡಿರುವ ತಿರುವು ಒಂದು ಮಹತ್ವ ಪೂರ್ಣ ಮೈಲಿಗಲ್ಲಾಗಿದೆ. 'ಗನ್ ಫಾರ್ ಪೆಪ್ಪರ್' ಅಂದರೆ ಕರಿಮೆಣಸಿಗೆ ಬಂಧೂಕು ಎಂಬ ವಾಣಿಜ್ಯ ಸಿದ್ಧಾಂತವು ಹೈದರಾಲಿಯ ಕಾಲದ ಸಾರ್ವಭೌಮತೆಯ ಅತ್ಯಂತ ಪ್ರಮುಖ ಆಯುಧವಾಗಿತ್ತು. ಆ ಮೂಲಕ ವಾಣಿಜ್ಯೋದ್ಯಮವನ್ನು ರಾಜಕೀಯ ಉದ್ದೇಶ ಈಡೇರಿಕೆಗಾಗಿ, ಒಂದು ಆಯುಧವನ್ನಾಗಿ ಉಪಯೋಗಿಸಿರುವುದನ್ನು ಈ ಅಧ್ಯಾಯದಲ್ಲಿ ವಿಮರ್ಶಿಸಲಾಗಿದೆ. ಹೈದರಾಲಿಯ ನಂತರ ಟಿಪ್ಪು ಸುಲ್ತಾನನ ಆಡಳಿತದ ಅವಧಿಯಲ್ಲಿಯೂ ಕೂಡ ವಾಣಿಜ್ಯೋದ್ಯಮ ಅವಕಾಶಗಳನ್ನು ಸಮರ್ಥವಾಗಿ ಉಪಯೋಗಿಸಿ ಕೊಂಡು ಬ್ರಿಟಿಷರೊಂದಿಗೆ ನಿರಂತರವಾಗಿ ನಡೆಸಿದ ಸಂಘರ್ಷವೂ ಮಹತ್ವಪೂರ್ಣ ಘಟನೆಯಾಗಿದೆ. ಈ ಸಂದರ್ಭದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮಿಗಳು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಅನುಭವಿಸುತ್ತಿದ್ದ ಆರ್ಥಿಕ ಸಮಸ್ಯೆಯನ್ನು ದುರುಪಯೋಗಪಡಿಸಿಕೊಂಡು ಟಿಪ್ಪು ಸುಲ್ತಾನನೊಂದಿಗೆ ನಿರಂತರ ಯುದ್ಧವನ್ನು ಮಾಡಲು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಒತ್ತಡ ಹೇರಿರುವ ಬಗ್ಗೆಯೂ ವಿಶ್ಲೇಷಣೆಯನ್ನು ಮಾಡಲಾಗಿದೆ. ವಾಣಿಜ್ಯೋದ್ಯಮಿಗಳಿಗೆ 'ಯುದ್ಧವು ಕೂಡ ಒಂದು ವ್ಯಾಪಾರ' ಎಂಬುದು ಈ ಅಧ್ಯಾಯದ ವಿಶ್ಲೇಷಣೆಯಲ್ಲಿ ಅಭಿವ್ಯಕ್ತವಾಗುತ್ತದೆ. ಕರಾವಳಿ ಕರ್ನಾಟಕವು ಹೈದರಾಲಿಯ ಆಡಳಿತಕ್ಕೆ ಒಳಪಟ್ಟ ನಂತರ ಸುಮಾರು ೩೬ ವರ್ಷಗಳ ಆಳ್ವಿಕೆಯಲ್ಲಿ ಅಂದರೆ ೧೭೬೩ರಿಂದ ಟಿಪ್ಪುವಿನ ಮರಣದವರೆಗೆ ಸಂಭವಿಸಿದ ವಾಣಿಜ್ಯೋದ್ಯಮ ಮತ್ತು ಅದಕ್ಕನುಗುಣವಾದ ಸಂಘರ್ಷವು ಈ ಪ್ರಾಂತ್ಯದಲ್ಲಿ ವಸಾಹತುಶಾಹಿ ಆಳ್ವಿಕೆಯನ್ನು ಕ್ರೋಡೀಕರಿಸಿದ ಘಟ್ಟವಾಗಿದೆ. ಈ ಎಲ್ಲಾ ಅಂಶಗಳನ್ನು ವಿಶ್ಲೇಷಿಸುವ ಪ್ರಯತ್ನಗಳನ್ನು ಮಾಡಲಾಗಿದೆ.

ಹೈದರಾಲಿಯು ತನ್ನ ಪ್ರಾಂತ್ಯದ ಕರಿಮೆಣಸಿನ ಮಾರಾಟ ಮಾಡುವರೇ ಪ್ರತಿಯಾಗಿ ಬಂಧೂಕನ್ನು ನೀಡಬೇಕೆಂಬ ಷರತ್ತುಗಳ ಹಿನ್ನೆಲೆಯಲ್ಲಿ ನಡೆದ ಒಪ್ಪಂದಗಳು, ಚರ್ಚೆಗಳನ್ನು ವಿಸ್ತೃತವಾಗಿ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಹೈದರಾಲಿಗೆ ಮರಾಠರು, ನಿಜಾಮರು, ನವಾಬರು ಮತ್ತು ಕೇರಳದ ಸಾಮಂತ ರಾಜರುಗಳು

ಶತ್ರುಗಳಾಗಿ ಒಗ್ಗಟ್ಟಾಗುತ್ತಿರುವ ಸನ್ನಿವೇಶವನ್ನು ಎದುರಿಸಲು ಪ್ರಬಲ ಸೈನ್ಯವನ್ನು ಕಟ್ಟುವ ಅನಿವಾರ್ಯತೆ ಬಂದಿತು. ಈ ಸೈನ್ಯದ ಯಶಸ್ವಿ ನಿರ್ವಹಣೆಗೆ ಸಾಕಷ್ಟು ಪ್ರಮಾಣದಲ್ಲಿ ಮದ್ದು ಗುಂಡುಗಳು ಮತ್ತು ಇತರೆ ಯುದ್ಧೋಪಕರಣಗಳ ಅಗತ್ಯವಿದ್ದು ಅದನ್ನು ಪಡೆಯಲು ಇಂಗ್ಲೀಷರಿಗೆ ಬೇಡಿಕೆಯನ್ನು ಮಂಡಿಸಿದಾಗ ಅದನ್ನು ಪರಿಗಣಿಸಬೇಕಿದ್ದರೆ ಮೂರು ಪ್ರತಿ ಷರತ್ತುಗಳಿಗೆ ಹೈದರಾಲಿಯು ಬದ್ಧನಾಗಿರಬೇಕೆಂದು ಬ್ರಿಟಿಷರು ತಾಕೀತು ಮಾಡಿದರು. ಈ ಷರತ್ತುಗಳ ಬಗ್ಗೆ ಹಾಗೂ ಹೈದರಾಲಿಯ ಪ್ರತಿ ತಂತ್ರದ ಬಗ್ಗೆ ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

'ಗನ್ ಫಾರ್ ಪೆಪ್ಪರ್' ಸಿದ್ಧಾಂತ ಗಂಭೀರ ಸಮಸ್ಯೆಯಾಗಿ ಬ್ರಿಟಿಷರನ್ನು ಕಾಡುತ್ತಿತ್ತು. ಈತನ್ಮಧ್ಯೆ ಹೈದರಾಲಿ ಮತ್ತು ಮುಂಬಯಿ ಪ್ರಾಂತೀಯ ಸರಕಾರದ ಮಧ್ಯೆ ಬಿಗುವಿನ ಪರಿಸ್ಥಿತಿ ಉಂಟಾಯಿತು. ಹೊನ್ನಾವರದಲ್ಲಿ ಬಂದಿಳಿದ ಬ್ರಿಟಿಷರ ಸೈನ್ಯ ಫೆಬ್ರವರಿ ೧೭, ೧೭೬೮ರಲ್ಲಿ ಮಂಗಳೂರನ್ನು ಮೊದಲ ಬಾರಿಗೆ ಜಯಿಸಿದ ಬಗ್ಗೆ ಚರ್ಚಿಸಲಾಗಿದೆ. ಈ ವಿಜಯದ ವಾಣಿಜ್ಯ ಮಹತ್ವವನ್ನು ವಿಶ್ಲೇಷಿಸಲಾಗಿದೆ. ಹೈದರಾಲಿಯು ಇಂಗ್ಲೀಷರೊಂದಿಗೆ ಹೊಂದಿದ್ದ ವಾಣಿಜ್ಯ ಸಂಬಂಧಗಳು ಮತ್ತು ರಾಜಕೀಯ ಸಂಬಂಧಗಳು ಬಹಳಷ್ಟು ಸಂದರ್ಭಗಳಲ್ಲಿ ಚೌಕಾಸಿಯ ಸ್ವರೂಪದ್ದಾಗಿತ್ತು. ಈ ರೀತಿಯ ಸಂಬಂಧಗಳಿಂದ ಆತನಿಗೆ ಹೆಚ್ಚಿನ ಲಾಭ ದೊರೆಯುತ್ತಿತ್ತು. ಆದರೆ ಇಂಗ್ಲೀಷರು ಕರಾವಳಿ ಕರ್ನಾಟಕದಲ್ಲಿ ಕರಿಮೆಣಸು ಮತ್ತಿತರೆ ವಸ್ತುಗಳ ಏಕಸ್ವಾಮ್ಯವನ್ನು ಪಡೆಯಲು ಹೈದರಾಲಿಯ ಮೇಲೆ ಒತ್ತಡವನ್ನು ಹೇರುತ್ತಿದ್ದರು. ಪೋರ್ಚುಗೀಸರು, ಡಚ್ಚರು ಮತ್ತು ಇತರೆ ವ್ಯಾಪಾರಿ ಕಂಪನಿಗಳು ಕರಾವಳಿ ಕರ್ನಾಟಕದಲ್ಲಿ ಹೈದರಾಲಿಯ ಸಮ್ಮತಿಯೊಂದಿಗೆ ವಾಣಿಜ್ಯೋದ್ಯಮದಲ್ಲಿ ನಿರತರಾಗಿದ್ದರು. ಇಂಗ್ಲೀಷರು ಇವರ ವಿರುದ್ಧ ಸೈನಿಕ ಕಾರ್ಯಾಚರಣೆಗೆ ಒತ್ತಡ ಹೇರಿದರೂ ಅದಕ್ಕೆ ಸೊಪ್ಪು ಹಾಕದ ಹೈದರಾಲಿಯ ಧೋರಣೆಗಳ ವಿವಿಧ ಆಯಾಮಗಳನ್ನು ವಿಮರ್ಶಿಸಲಾಗಿದೆ.

ಹೈದರಾಲಿ ನಿರ್ವಹಿಸಿದ ತಂತ್ರಗಾರಿಕೆಯ ಪರಿಣಾಮವಾಗಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಮಾತ್ರವಲ್ಲದೆ ಇತರ ಹಲವಾರು ವಿದೇಶಿ ಕಂಪನಿಗಳೂ ಕರಾವಳಿ ಕರ್ನಾಟಕದಲ್ಲಿ ಕಾರ್ಯನಿರ್ವಹಿಸಲು ಅವಕಾಶ ನೀಡಲಾಗಿತ್ತು. ಈ ಕಂಪನಿಗಳೊಂದಿಗೆ ಹೈದರಾಲಿ – ಟಿಪ್ಪು ಸುಲ್ತಾನರ ವ್ಯಾಪಾರ ವ್ಯವಹಾರಗಳ ವಿವಿಧ ಆಯಾಮಗಳನ್ನು ಇಲ್ಲಿ ಚರ್ಚಿಸಲಾಗಿದೆ. ೧೭೮೩ರಿಂದ ೧೭೯೯ರ ಅವಧಿಯಲ್ಲಿ ಟಿಪ್ಪು ಸುಲ್ತಾನ್‌ನು ಬ್ರಿಟಿಷರೊಂದಿಗೆ ಹಲವಾರು ಯುದ್ಧಗಳನ್ನು ಮಾಡಿಕೊಂಡಂತೆಯೇ ವ್ಯಾಪಾರ ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಜೊತೆ ಜೊತೆಯಲ್ಲೇ ವಿವಿಧ ಒಪ್ಪಂದಗಳನ್ನೂ ಮಾಡಿಕೊಂಡನು. ಹೈದರಾಲಿಯು ವ್ಯಾಪಾರ ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ವಿದೇಶಗಳೊಂದಿಗೆ ಯಾವುದೇ ನಿರ್ದಿಷ್ಟ ನಿಯೋಗಗಳನ್ನು ಕಳುಹಿಸದಿದ್ದರೂ ಟಿಪ್ಪು ಸುಲ್ತಾನ್ ಇದಕ್ಕೆ ವ್ಯತಿರಿಕ್ತವಾಗಿ ಮೂರು ನಿಯೋಗಗಳನ್ನು ವಿವಿಧ ದೇಶಗಳಿಗೆ ಕಳುಹಿಸಿಕೊಟ್ಟು ವ್ಯಾಪಾರ ವ್ಯವಹಾರ ಕುದುರಿಸಿದ ಘಟನೆಗಳನ್ನು ಚರ್ಚಿಸಲಾಗಿದೆ. ವಿದೇಶಗಳಲ್ಲಿ ಮಾರಾಟ ಕೇಂದ್ರ ಮತ್ತು ಹೊಸ ವಾಣಿಜ್ಯಾತ್ಮಕ ಅನ್ವೇಷಣೆಗಳನ್ನು ಈ ನಿಯೋಗದ ಕಾರ್ಯಭಾರವನ್ನಾಗಿ ಮಾಡಿಕೊಂಡಿರುವ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

೧೭೮೮ರಿಂದ ೧೭೯೯ರವರೆಗೆ ದೇಶೀಯ ಮತ್ತು ವಿದೇಶದ ವಾಣಿಜ್ಯೋದ್ಯಮಿಗಳು ಟಿಪ್ಪು ಸುಲ್ತಾನ್‌ನೊಂದಿಗೆ ನಿರಂತರ ಯುದ್ಧವನ್ನು ಬಯಸಿದ ಘಟನೆಗಳನ್ನು ವಿಶ್ಲೇಷಿಸಲಾಗಿದೆ. ಮುಂಬಯಿ ಪ್ರಾಂತೀಯ ಸರಕಾರಕ್ಕೆ ಯುದ್ಧ ಅನಿವಾರ್ಯವಾಗಿರಲಿಲ್ಲ. ಆದರೆ ಸರಕಾರ ಹಣಕಾಸು, ಸಾಲ ಮತ್ತಿತರ ಕಾರಣಗಳಿಗಾಗಿ ವಾಣಿಜ್ಯೋದ್ಯಮಿಗಳ ಹಂಗಿಗೆ ಒಳಗಾಗಿದ್ದ ಕಾರಣ ಅನಿವಾರ್ಯವಾಗಿ ಯುದ್ಧದ ಪರವಾದ ಮನೋಭಾವಕ್ಕೆ ಸಮ್ಮತಿಸಬೇಕಾಯಿತು. ಯುದ್ಧದ ಸಂದರ್ಭದಲ್ಲೂ ವ್ಯಾಪಾರ ವ್ಯವಹಾರಕ್ಕಿದ್ದ ರಕ್ಷಣೆಯ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹೈದರಾಲಿ ಮತ್ತು ಟಿಪ್ಪುವಿನ ಬಗ್ಗೆ ಎರಡು ಪ್ರಾಂತೀಯ ಸರಕಾರಗಳು ವಿಭಿನ್ನ ಧೋರಣೆಗಳನ್ನು ಅನುಸರಿಸಿದೆ. ಹೈದರಾಲಿಯು ತಂತ್ರಬದ್ಧವಾಗಿ ವ್ಯಾಪಾರ ಮತ್ತು ವಾಣಿಜ್ಯೋದ್ಯಮವನ್ನು ತನ್ನ ಸೈನಿಕ ವ್ಯವಸ್ಥೆಯ ನಿರ್ವಹಣೆಗೆ ಉಪಯೋಗಿಸಿದ್ದನ್ನೂ ಪರೋಕ್ಷವಾಗಿ ಮುಂಬಯಿ ಸರಕಾರ ಬೆಂಬಲಿಸಿದರೆ ಮದ್ರಾಸ್ ಸರಕಾರ ಇದನ್ನು ವಿರೋಧಿಸಿರುವುದನ್ನು ಗಮನಿಸಬಹುದು. ಈ ರೀತಿಯ ವಿವಿಧ ಸ್ವರೂಪದ ಭಿನ್ನಾಭಿಪ್ರಾಯದ ಧೋರಣೆಗಳನ್ನು ವಿಶ್ಲೇಷಿಸುವ ಮೂಲಕ ಈ ಅಧ್ಯಾಯವು ಗಮನ ಸೆಳೆಯುತ್ತದೆ.

ಹೈದರಾಲಿ ಮತ್ತು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗಳ ಮಧ್ಯೆ ಬೆಳೆದು ಬಂದ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಸಮಕಾಲೀನ ಭಾರತದ ಚಾರಿತ್ರಿಕ ಸಂದರ್ಭದಲ್ಲಿ ಒಂದು ಹೊಸ ಪ್ರಯೋಗವಾಗಿದೆ. ಬ್ರಿಟಿಷರು ಕರಿಮೆಣಸು ಪಡೆಯಬೇಕಾದರೆ ಬಂಧೂಕು ನೀಡಬೇಕೆಂಬ ಹೊಸ ರಾಜಕೀಯ ತಂತ್ರ ಆಧಾರಿತ ಸಿದ್ಧಾಂತವಾಗಿರುವ "ಗನ್ ಫಾರ್ ಪೆಪ್ಪರ್" ಹೈದರಾಲಿಯ ಕೈಯಲ್ಲಿ ಒಂದು ಪ್ರಬಲ ಆಯುಧ ಆಗಿತ್ತು. ೧೫ ಮತ್ತು ೧೬ನೇ ಶತಮಾನದಲ್ಲಿ ಪೋರ್ಚುಗೀಸರು ಕರಿಮೆಣಸಿಗಾಗಿ ಯುದ್ಧವನ್ನು ಸಂಘಟಿಸಿದರೆ ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಕರಿಮೆಣಸು ಒಂದು ಆಯುಧವಾಯಿತು. ಈ ಮೂಲಕ ಪಡೆದ ಬಂಧೂಕುಗಳು ಪುನಃ ಹಿಂದಿರುಗಿ ಬ್ರಿಟಿಷರ ವಿರುದ್ಧವೇ ಪ್ರಯೋಗಿಸಲ್ಪಡುತ್ತದೆ ಎಂಬ ತಿಳುವಳಿಕೆಯಿದ್ದರೂ ಅನಿವಾರ್ಯವಾಗಿ ಏನನ್ನೂ ಮಾಡಲು ಆಗದ ಅಸಹಾಯಕ ಪರಿಸ್ಥಿತಿ ಬ್ರಿಟಿಷರದ್ದಾಗಿದೆ. ಬ್ರಿಟಿಷರು ಬಂಧೂಕು ಮಾತ್ರವಲ್ಲ ನೌಕಾಸೇನೆಯ ಹಡಗು ರಿಪೇರಿಯ ತಂತ್ರಜ್ಞಾನ ಇವೇ ಮೊದಲಾದವುಗಳನ್ನು ನೀಡಬೇಕಾದ ಸನ್ನಿವೇಶಕ್ಕೂ ಒಳಗಾಗಿದ್ದರು. ಬ್ರಿಟಿಷರು ಹೈದರಾಲಿಯೊಂದಿಗೆ ಕರಿಮೆಣಸಿನ ಏಕಸ್ವಾಮ್ಯದ ಹಕ್ಕು ಹೊಂದಿದ್ದರೂ ಇತರ ದೇಶಗಳ ವ್ಯಾಪಾರಿ ಸಂಸ್ಥೆಗಳು ಕರಾವಳಿ ಕರ್ನಾಟಕದಲ್ಲಿ ವ್ಯಾಪಾರ ನಿರತರಾಗಿರುವುದನ್ನು ತಡೆಯಲು ಹೈದರಾಲಿಯು ನಿರಾಕರಿಸುತ್ತಾನೆ. ಈ ರೀತಿ ಹಂತ ಹಂತವಾಗಿ ಹೈದರಾಲಿಯೇ ಬ್ರಿಟಿಷರ ವಿರುದ್ಧ ವಾಣಿಜ್ಯಾತ್ಮಕವಾಗಿ ಮೇಲುಗೈ ಸಾಧಿಸಿರುವುದನ್ನು ವಿಶ್ಲೇಷಿಸಲಾಗಿದೆ. ಟಿಪ್ಪು ಸುಲ್ತಾನನ ಕಾಲಘಟ್ಟದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಮತ್ತಷ್ಟು ಹೊಸ ತಿರುವನ್ನು ಪಡೆಯಿತು. ಆದರೆ ಹೈದರಾಲಿಗೆ ದೊರೆತ ರೀತಿಯಲ್ಲಿ ಬಂಧೂಕುಗಳು ಕರಿಮೆಣಸಿಗೆ ಪರ್ಯಾಯವಾಗಿ ಟಿಪ್ಪು ಸುಲ್ತಾನನಿಗೆ ದೊರೆಯಲಿಲ್ಲ.

ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವ್ಯಾಪಾರೋದ್ಯಮಿಗಳು ಯುದ್ಧ ಪಿಪಾಸುಗಳಾಗಿ ನಿರಂತರ ಯುದ್ಧದಿಂದ ಲಾಭಪಡೆಯುವ ಪ್ರಯತ್ನಗಳ ಬಗ್ಗೆ ಬೆಳಕು ಚೆಲ್ಲಲಾಗಿದೆ. ಅಂತಿಮವಾಗಿ ಟಿಪ್ಪುವಿನ ಮರಣದೊಂದಿಗೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯ ಕೊನೆಯ ಅಡೆತಡೆಯನ್ನು ನಾಶಗೈದು ವಸಾಹತುಶಾಹಿ ಶೋಷಣೆಗೆ ಭದ್ರ ಬುನಾದಿಯನ್ನು ಹಾಕಿತು.

ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಫ್ರಾನ್ಸಿಸ್ ಬುಕಾನನ್‌ರವರ ವರದಿಯ ಮೂರು ಸಂಪುಟಗಳು, ಎಂ.ಎಂ.ಡಿ.ಎಲ್.ಟಿಯವರ ಕೃತಿ, ಮೋರಸ್ ಎಂ ಜಾರ್ಜ್‌ರವರ ಕೃತಿ, ಸ್ಟರಕ್‌ರವರ ಗೆಜೆಟಿಯರ್ಸ್, ಸಿ.ಎಫ್ ಫೋರ್ಬಿಸ್‌ರವರ ಕೃತಿ, ಡಬ್ಲ್ಯೂ ಡಬ್ಲ್ಯೂ ವಿಲಿಯಂ ಹಂಟರ್‌ರವರ ಕೃತಿ, ಲೋಗನ್‌ರವರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗಳ ಒಪ್ಪಂದದ ಕೃತಿ, ಷೇಕ್ ಆಲಿಯವರ ಎಲ್ಲಾ ಪ್ರಮುಖ ಕೃತಿಗಳು, ಟಿ. ಡಬ್ಲ್ಯೂ. ವೆನ್‌ರವರ ಕೃತಿ, ಶ್ಯಾಮ್ ಭಟ್‌ರವರ ಕೃತಿ, ಕೆ.ಜಿ. ವಸಂತ್ ಮಾಧವರವರ ಕೃತಿಗಳನ್ನು ಪ್ರಮುಖ ಆಧಾರ ಗ್ರಂಥಗಳಾಗಿ ಉಪಯೋಗಿಸಿಕೊಳ್ಳಲಾಗಿದೆ. ಚೆನ್ನೈ ಪತ್ರಾಗಾರ, ಮುಂಬೈ ಪತ್ರಾಗಾರದ ದಾಖಲೆಗಳನ್ನು ಈ ಅಧ್ಯಾಯದಲ್ಲಿ ವ್ಯಾಪಕವಾಗಿ ಉಪಯೋಗಿಸಿಕೊಳ್ಳಲಾಗಿದೆ.

ಕರಿಮೆಣಸು ಮತ್ತು ಬಂಧೂಕು ಹಾಗೂ ವಾಣಿಜ್ಯ ವ್ಯವಹಾರಗಳ ಕಾಲಘಟ್ಟವನ್ನು ಹೈದರಾಲಿ ಮತ್ತು ಟಿಪ್ಪುವಿಗೆ ಸಂಬಂಧಿಸಿ ವಿಶ್ಲೇಷಿಸುವ ಈ ಅಧ್ಯಾಯದಲ್ಲಿ ಪ್ರಥಮ ಭಾಗವು ಬಿದನೂರು ಸಂಸ್ಥಾನ ಮತ್ತು ಹೈದರಾಲಿಯ ಮಧ್ಯೆ ನಡೆದ ಆರಂಭಿಕ ಸಂಘರ್ಷ, ಸಾರ್ವಭೌಮತೆ ಹಾಗೂ ವಾಣಿಜ್ಯ ಸ್ವರೂಪಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಇದೇ ರೀತಿ ಈ ಬೆಳವಣಿಗೆಗಳ ಒಟ್ಟಾರೆ ಫಲಿತಾಂಶವನ್ನು ವಿವರವಾಗಿ ವಿಮರ್ಶಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಹೈದರಾಲಿಯ ಕಾಲಘಟ್ಟದಲ್ಲಿ ಆತ ಅನುಸರಿಸಿದ ರಾಜಕೀಯ ಧೋರಣೆ, ಅದರ ಮಹತ್ವ, ಅಂತರಾಷ್ಟ್ರೀಯ ವ್ಯಾಪಾರ ವ್ಯವಹಾರಗಳ ಬಗ್ಗೆ ವಿಶ್ಲೇಷಣೆ ನಡೆಸಲಾಗಿದೆ. ಮೂರನೇ ಭಾಗದಲ್ಲಿ ಈಸ್ಟ್ ಇಂಡಿಯಾ ಕಂಪೆನಿ ಮತ್ತು ಹೈದರಾಲಿಯ ಮಧ್ಯೆ ನಡೆದ ವಾಣಿಜ್ಯ ವ್ಯವಹಾರಗಳು ಮತ್ತು ರಾಜಕೀಯ ಸಂಘರ್ಷಗಳ ಸಂಕಥನಗಳನ್ನು ವಾಣಿಜ್ಯ ಮತ್ತು ಸಂಘರ್ಷಗಳ ದೃಷ್ಟಿಕೋನದಿಂದ ವಿಮರ್ಶಿಸಲಾಗಿದೆ. ನಾಲ್ಕನೇ ಭಾಗದಲ್ಲಿ ಬ್ರಿಟಿಷ್ ಅಧಿಕಾರ ಕ್ರೋಡೀಕರಣ ಹಾಗೂ ಇದಕ್ಕೆ ಸಂಬಂಧಪಟ್ಟಂತೆ ಹೈದರಾಲಿ, ಟಿಪ್ಪು ಮತ್ತು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸಂಘರ್ಷದ ವಿಶ್ಲೇಷಣೆ ಮಾಡಲಾಗಿದೆ. ಐದನೇ ಭಾಗದಲ್ಲಿ ವ್ಯಾಪಾರೋದ್ಯಮಿಗಳು ಮತ್ತು ಅವರು ನಡೆಸುತ್ತಿದ್ದ ಯುದ್ಧದ ವ್ಯಾಪಾರದ ರಾಜಕಾರಣವನ್ನು ಚರ್ಚೆಗೆ ಕೈಗೆತ್ತಿಕೊಳ್ಳಲಾಗಿದೆ. ಅಂತಿಮ ಭಾಗದಲ್ಲಿ ಈ ಅಧ್ಯಾಯದ ಒಟ್ಟಾರೆ ವಿಮರ್ಶೆಯನ್ನು ಫಲಿತಗಳನ್ನು ಚರ್ಚಿಸಲಾಗಿದೆ.

ಕರಾವಳಿ ಕರ್ನಾಟಕವು ೧೭೬೩ ರಿಂದ ೧೭೯೯ ರವರೆಗಿನ ಸುಮಾರು ೩೬ ವರ್ಷಗಳ ಕಾಲಾವಧಿಯು ಹೈದರಾಲಿ–ಟಿಪ್ಪು ಇವರ ಆಡಳಿತಕ್ಕೆ ಒಳಪಟ್ಟಿತ್ತು. ಹೈದರಾಲಿಯು ಇಕ್ಕೇರಿ ಮನೆತನದ ಕೊನೆಯ ರಾಣಿಯನ್ನು ಅಧಿಕಾರದಿಂದ ಪದಚ್ಯುತಿಗೊಳಿಸಿದ ಮೇಲೆ ಕರಾವಳಿ ಕರ್ನಾಟಕದಲ್ಲಿ ನಿರ್ವಹಿಸಿದ ಆಡಳಿತಾತ್ಮಕ ಪಾತ್ರ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿಗೆ ಗಂಭೀರ ಅಡೆತಡೆಯಾಗಿ ಪರಿಣಮಿಸಿತು. ಹೊಸ ದೃಷ್ಟಿಕೋನದೊಂದಿಗೆ ಹೈದರಾಲಿಯು ವ್ಯಾಪಾರ ವ್ಯವಹಾರ ಮತ್ತು ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಇಟ್ಟ ಗಂಭೀರ ಹೆಜ್ಜೆ ಮತ್ತು ನಿರಂತರ ಪ್ರಯತ್ನ ಭಾರತದ ರಾಜಕೀಯ ಅರ್ಥಶಾಸ್ತ್ರದಲ್ಲಿ ಮಹತ್ತರವಾಗಿ ಪರಿಗಣಿಸಲ್ಪಡಬೇಕಾದ ಅಂಶವಾಗಿದೆ. "ಗನ್ ಫಾರ್ ಪೆಪ್ಪರ್" ಅಂದರೆ "ಕರಿಮೆಣಸಿಗೆ ಬಂಧೂಕು" ಎಂಬ ವಾಣಿಜ್ಯೋದ್ಯಮ ಮತ್ತು ರಾಜಕೀಯಕ್ಕೆ ಹೊಸ ಸಿದ್ಧಾಂತವನ್ನು ರೂಪಿಸಿದ ಕೀರ್ತಿ ಭಾರತದ ಚರಿತ್ರೆಯಲ್ಲಿ ಹೈದರಾಲಿ ಮತ್ತು ಟಿಪ್ಪುವಿಗೆ ಸಲ್ಲುತ್ತದೆ. ಈ ಸರಳ ಮತ್ತು ಅಡಕತ್ತರಿಯ ಸೂತ್ರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ನಿದ್ದೆಗೆಡಿಸಿದ ತಾರ್ಕಿಕತೆಯನ್ನು ಹೊಂದಿದೆ. ೧೭೮೪ರ ನಂತರ ಟಿಪ್ಪು

ಸುಲ್ತಾನನು ಪ್ರಬಲವಾಗಿ ಬೆಳೆಯುತ್ತಿದ್ದ ಸಂದರ್ಭದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮಿಗಳು ಈಸ್ಟ್ ಇಂಡಿಯಾ ಕಂಪೆನಿಯ ಆರ್ಥಿಕ ಬಿಕ್ಕಟ್ಟನ್ನು ಸಮರ್ಪಕವಾಗಿ ಯುದ್ಧಕ್ಕಾಗಿ ಪ್ರಚೋದಿಸಿರುವುದು ಹಾಗೂ ಒತ್ತಡ ಹೇರಿರುವುದನ್ನು ವಿವರಿಸಲಾಗಿದೆ. ಕೈಗಾರಿಕೋದ್ಯಮಿಗಳಿಗೆ ಮತ್ತು ವಾಣಿಜ್ಯೋದ್ಯಮಿಗಳಿಗೆ ಈ ಕಾಲಘಟ್ಟದಲ್ಲಿ ಯುದ್ಧ ಕೂಡ ಒಂದು ವ್ಯಾಪಾರವಾಗಿರುವುದನ್ನು ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ರೀತಿಯ ವಿಶ್ಲೇಷಣೆಯೊಂದಿಗೆ ವಿದೇಶಿ ವ್ಯಾಪಾರದ ಹೊಸ ಹೊಸ ಪ್ರಯತ್ನಗಳು, ಸೇರಿದಂತೆ ನಡೆದ ಸಂಘರ್ಷಗಳೂ ಈ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಪಟ್ಟಿದೆ. ಅಂತಿಮವಾಗಿ ಕರಾವಳಿ ಕರ್ನಾಟಕದಲ್ಲಿ ವಸಾಹತುಶಾಹಿ ಆಳ್ವಿಕೆ ಭದ್ರವಾಗಿ ನೆಲೆಯೂರಲು ಕಾರಣವಾದ ಪರಿಸ್ಥಿತಿಗಳನ್ನು ವಿಶ್ಲೇಷಿಸಲಾಗಿದೆ.

* * * *

**ಆರಂಭಿಕ ಬೆಳವಣಿಗೆ, ಸಾರ್ವಭೌಮತೆ ಮತ್ತು ಸಂಘರ್ಷದ ಸ್ವರೂಪ ಮತ್ತು ಫಲಿತಾಂಶ**

ಎಳೆಯ ಪ್ರಾಯದಲ್ಲೇ ಪ್ರಬಲ ದಂಡನಾಯಕನಾಗಿ ಪ್ರಖ್ಯಾತನಾಗಿದ್ದ ಹೈದರಾಲಿಯು ಭಾರೀ ಮಹತ್ವಾಕಾಂಕ್ಷೆಯನ್ನು ಹೊಂದಿದ್ದ ಸಮರನಾಯಕ[೧]. ಕೆನರಾ ಪ್ರಾಂತ್ಯ ಮತ್ತು ನಿರ್ದಿಷ್ಟವಾಗಿ ಪಶ್ಚಿಮ ಕರಾವಳಿಯ ಬಗ್ಗೆ ಹಾಗೂ ಇಲ್ಲಿನ ಸಂಪನ್ಮೂಲ, ಆದಾಯಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಹೈದರಾಲಿಗೆ ಇತ್ತು. ಏಕೆಂದರೆ ತನ್ನ ೨೦ನೇ ವಯಸ್ಸಿನಲ್ಲಿ ಹೈದರಾಲಿಯು ಪೂರ್ವ ಕರಾವಳಿಯಲ್ಲಿ ಮೈಸೂರು ಸಂಸ್ಥಾನದ ಪರವಾಗಿ ದಂಡಯಾತ್ರೆ ನಡೆಸಿ ವಿಜಯ ಪತಾಕೆಯನ್ನು ಹಾರಿಸಿದ ಸಂದರ್ಭದಲ್ಲಿ ಕರಾವಳಿ ತೀರಗಳ ವಾಣಿಜ್ಯಾತ್ಮಕ ಮಹತ್ವಗಳ ಬಗ್ಗೆ ಪೂರ್ಣ ಮಾಹಿತಿಯನ್ನು ಸಂಗ್ರಹಿಸಿದ್ದನು.

ಇಕ್ಕೇರಿ ಸಂಸ್ಥಾನವನ್ನು ಕೆಳದಿ ಅಥವಾ ಬಿದನೂರು ಸಂಸ್ಥಾನವೆಂದೂ ಕರೆಯುತ್ತಾರೆ. ೧೪೯೯ರಲ್ಲಿ ಚೌಡಗೌಡನಿಂದ ರೂಪಿಸಲ್ಪಟ್ಟ ಇಕ್ಕೇರಿ ಸಂಸ್ಥಾನವು ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರನ್ನು ರಾಜಕೀಯವಾಗಿ ನಿಯಂತ್ರಣಕ್ಕೆ ತಂದ ಸಂಸ್ಥಾನವಾಗಿದೆ. ಇಕ್ಕೇರಿ ಸಂಸ್ಥಾನದ ಕೊನೆಯ ರಾಣಿ ವೀರ ಚೆನ್ನಮ್ಮಾಜಿಯಾಗಿದ್ದಾಳೆ. ಈಕೆಯ ಪತಿ ಹಾಗೂ ರಾಜ ಮರಣವನ್ನಪ್ಪಿದ ಮೇಲೆ ಅಪ್ರಾಪ್ತ ವಯಸ್ಸಿನ ತನ್ನ ಮಗನ ಪರವಾಗಿ ಅಧಿಕಾರ ಸೂತ್ರವನ್ನು ಹಿಡಿದು ರಾಜ್ಯವಾಳುತ್ತಾಳೆ. ದರ್ಪದ ಮತ್ತು ನಿರಂಕುಶ ಮಾದರಿಯ ಆಡಳಿತ ನಡೆಸುತ್ತಾ ಎಲ್ಲರಿಂದಲೂ ವಿರೋಧವನ್ನು ಕಟ್ಟಿಕೊಂಡಿರುತ್ತಾಳೆ. ಟಿಪ್ಪು ಸುಲ್ತಾನನು ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಮಡಿದ ಮೇಲೆ ಮದ್ರಾಸ್ ಬ್ರಿಟಿಷ್ ಪ್ರೆಸಿಡೆನ್ಸಿ ಸರಕಾರವು ತನ್ನ ಅಧಿಕಾರಿಯಾದ ಫ್ರಾನ್ಸಿಸ್ ಬುಕಾನನ್‌ರವರನ್ನು ತನ್ನ ಅಧಿಕಾರ ವ್ಯಾಪ್ತಿಯ ಪ್ರಾಂತ್ಯದ ನೆಲ-ಜಲದ ಚರಿತ್ರೆ, ಆಚಾರ-ವಿಚಾರ, ವ್ಯಾಪಾರ-ವ್ಯವಹಾರಗಳ ಬಗ್ಗೆ ಅಧ್ಯಯನ ನಡೆಸಲು ನೇಮಕ ಮಾಡುತ್ತದೆ. ಆ ಪ್ರಕಾರ ಮದ್ರಾಸು, ಮಲಬಾರ್, ಕೆನರಾ, ಕೊಡಗು ಹಾಗೂ ಕರ್ನಾಟಕಗಳಲ್ಲಿ ಪ್ರವಾಸ ಮಾಡಿದ ಬುಕಾನನ್ ಇಕ್ಕೇರಿ ಪ್ರಾಂತ್ಯದ ಬಗ್ಗೆ ನೀಡುವ ಚಿತ್ರಣದಲ್ಲಿ ರಾಣಿ ವೀರ ಚೆನ್ನಮ್ಮಾಜಿಯನ್ನು 'ವೀರು ಮಾಗಿ' ಎಂಬುದಾಗಿ ಉಲ್ಲೇಖಿಸಿರುತ್ತಾನೆ. ಅದೇ ರೀತಿ ಚೆನ್ನಮ್ಮಾಜಿಯ ವ್ಯಕ್ತಿತ್ವ, ಆಡಳಿತದ ಬಗ್ಗೆ ಈ ಕೆಳಕಂಡ ವಿವರಣೆ ನೀಡುತ್ತಾನೆ.

ಕೀಳು ಮನೋಭಿಲಾಷೆಯ ನಿರ್ಭಯ ಹೆಂಗಸು, ಗಂಡಸರಂತೆ ಪೋಷಾಕುಗಳನ್ನು ಧರಿಸುತ್ತಿದ್ದಳು. ರಾಜ್ಯಾಡಳಿತಕ್ಕೆ ಸಂಬಂಧಿಸಿ ಪ್ರಮುಖರಲ್ಲಿ ಯಾವುದೇ ಚರ್ಚೆ ಮಾಡದೆ ತನಗಿಷ್ಟ ಬಂದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಳು. ಅರಮನೆಯ ಪರಿಚಾರಕ ಬ್ರಾಹ್ಮಣನೊಂದಿಗೆ ಅನೈತಿಕ ಸಂಬಂಧವನ್ನು ಹೊಂದಿದ್ದಳು. ಆಕೆಯ ನಿರ್ದಾಕ್ಷಿಣ್ಯ ಕ್ರಿಮಿನಲ್ ಮತ್ತು ಅಹಂಕಾರದ ವರ್ತನೆಯಿಂದಾಗಿ ಎಲ್ಲರಿಂದಲೂ ದೂರವಾಗಿದ್ದಳು (ಫ್ರಾನ್ಸಿಸ್ ಬುಕಾನನ್ (೩) ೧೯೯೧:೨೫೪).

ಮೇಲಿನ ವಿವರಗಳನ್ನು ಗಮನಿಸಿದಾಗ ೩೭ ವರ್ಷಗಳ ನಂತರ ವಿವರಗಳನ್ನು ಸಂಗ್ರಹಿಸಿದ ಬುಕನಿನ್‌ಗೆ ವಿವರಗಳನ್ನು ನೀಡಿರುವ ವ್ಯಕ್ತಿ ಆಸ್ಥಾನ ಚರಿತ್ರೆ ಬರಹಗಾರರ ಮುಖ್ಯಸ್ಥನಾದ ಓರ್ವ ಬ್ರಾಹ್ಮಣನಾಗಿದ್ದನು. ಆತ ನೀಡುವ ವಿವರಗಳು ಪೂರ್ವಾಗ್ರಹ ಪೀಡಿತವಾಗಿದೆ. ಏಕೆಂದರೆ ಈ ಯುದ್ಧದಲ್ಲಿ ಸೈನ್ಯಾಧಿಕಾರಿಯಾಗಿ ಭಾಗವಹಿಸಿರುವ ಎಂ.ಎಂ.ಡಿ.ಎಲ್.ಟಿ ಇವರ ವಿವರಗಳು ಸಮಕಾಲೀನ ವಿವರಗಳಾಗಿದ್ದು ಅದರಲ್ಲಿ ಈ ರೀತಿಯ ಪ್ರಸ್ತಾಪವಿಲ್ಲ. ಮುಂದುವರಿದು ರಾಣಿಯ ಮಗನ ಬಗ್ಗೆ ಗೊಂದಲ ಪೂರಿತ ವಿವರಗಳನ್ನು ನೀಡಲಾಗಿದೆ. ಆ ಪ್ರಕಾರ ರಾಣಿಯು ಮಗನನ್ನು ೨೪ನೇ ವಯಸ್ಸಿನಲ್ಲಿ ಕೊಲೆ ಮಾಡುತ್ತಾಳೆಂಬ ಉಲ್ಲೇಖವೂ ಇದೆ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ದಾಖಲೆಯ ಪ್ರಕಾರ ರಾಣಿಯ ಮಗ ಹಾಗೂ ಯುವರಾಜನನ್ನು ತಾಯಿಯೇ ಕೊಲೆ ಮಾಡಿಸಿದ್ದಾಳೆ ಎಂದು ದಾಖಲೆಗಳು ತಿಳಿಸುತ್ತವೆ (ಮುಂಬಯಿ ಬ್ರಿಟಿಷ್ ಡೈರಿ ಸಂಖ್ಯೆ ೩೦, I, II ಮತ್ತು III ೧೭೫೭) ಹೈದರಾಲಿಯ ದಂಡನಾಯಕ ಎಂ.ಎಂ.ಡಿ.ಎಲ್.ಟಿ.ಯವರ ಉಲ್ಲೇಖ ಕೆಳಕಂಡಂತೆ ಇದೆ.

ಕೆಳದಿಯ ಯುವರಾಜ ಪ್ರಾಪ್ತ ವಯಸ್ಕನಾದರೂ ಆತನ ತಾಯಿ ಆತನಿಗೆ ರಾಜ್ಯಪಟ್ಟಾಭಿಷೇಕ ಮಾಡಿ ರಾಜ್ಯದ ಅಧಿಕಾರವನ್ನು ಹಸ್ತಾಂತರಿಸುವುದಿಲ್ಲ. ಇದರಿಂದ ಆತ ಹತಾಶೆಗೆ ಒಳಗಾಗುತ್ತಾನೆ. ತನ್ನ ತಾಯಿಯ ಅಧಿಕಾರದ ವ್ಯಾಮೋಹವನ್ನು ಕೊನೆಗೊಳಿಸುವ ಉದ್ದೇಶದಿಂದ ೧೭೬೨ ರಲ್ಲಿ ಆತ ಬಿದನೂರಿನಿಂದ ತಪ್ಪಿಸಿಕೊಳ್ಳುತ್ತಾನೆ. ಬಿದನೂರಿನಿಂದ ತಪ್ಪಿಸಿಕೊಂಡ ಯುವರಾಜ ವಿಜಯನಗರ ಪ್ರಾಂತ್ಯದ ಸುಭಾವೊಂದರಲ್ಲಿ ಬೀಡು ಬಿಟ್ಟಿದ್ದ ದಂಡನಾಯಕ ಹೈದರಾಲಿಯನ್ನು ಸಂಪರ್ಕಿಸುತ್ತಾನೆ. ಬಿದನೂರಿನ ಅಧಿಕಾರಕ್ಕೆ ಕಾನೂನು ಬದ್ಧ ವಾರೀಸುದಾರನಾದ ಆತ ತನ್ನ ತಾಯಿ ರಾಣಿ ವೀರಚೆನ್ನಮಾಜಿ ಅಧಿಕಾರ ಹಸ್ತಾಂತರ ಮಾಡದೆ ಜನವಿರೋಧಿ ನಿರಂಕುಶ ಆಡಳಿತ ನಡೆಸುತ್ತಿರುವ ಬಗ್ಗೆ ವಿವರವಾಗಿ ತಿಳಿಸುತ್ತಾನೆ. ಬಿದನೂರಿನ ಅಧಿಕಾರವನ್ನು ಆತನಿಗೆ ದಕ್ಕಿಸಿಕೊಡಲು ಸಹಾಯಮಾಡಬೇಕೆಂಬ ಬೇಡಿಕೆ ಇಡುತ್ತಾನೆ (ಎಂ.ಎಂ.ಡಿ.ಎಲ್.ಟಿ ೧೯೮೮:೮೧). ಇದಕ್ಕೆ ಧನಾತ್ಮಕವಾಗಿ ಪ್ರತಿಕ್ರಿಯಿಸಿದ ಹೈದರಾಲಿ ಸರ್ವ ಸಹಕಾರ ಒದಗಿಸುವ ಭರವಸೆ ನೀಡುತ್ತಾನೆ.

ಹೈದರಾಲಿಯು ತಾನಾಗಿ ಅರಸಿಕೊಂಡು ಬಂದ ಅವಕಾಶವನ್ನು ಸಮರ್ಪಕವಾಗಿ ಬಳಸಿಕೊಳ್ಳಲು ನಿರ್ಧರಿಸಿದನು. ತನ್ನ ಆಶ್ರಯವನ್ನು ಯಾಚಿಸಿಕೊಂಡು ಬಂದ ಬಿದನೂರಿನ ಯುವರಾಜನನ್ನು ಹೈದರಾಲಿಯು ಬಿದನೂರಿನ ಪ್ರಾಂತ್ಯವೇ ಆಗಿದ್ದ ಸುಭಾ ಎಂಬ ಪ್ರಾಂತ್ಯಕ್ಕೆ ಸುಭೇದಾರನನ್ನಾಗಿ ಮಾಡಿದನು. ಆ ಬಳಿಕ ಹೈದರಾಲಿಯು ಬಿದನೂರಿನ ರಾಣಿ ಚೆನ್ನಮಾಜಿಗೆ ಒಂದು ಆಜ್ಞೆಯನ್ನು ಹೊರಡಿಸಿ ಆಕೆ ತನ್ನ ಸುಭಾದಲ್ಲಿ ಹಾಜರಾಗಬೇಕೆಂದು ನಿರ್ದೇಶನ ನೀಡಿದನು (ಮೋರಾಸ್ ೧೯೨೭:೪೦). ರಾಣಿ ಹೈದರಾಲಿಯ

ಆದೇಶವನ್ನು ಸ್ವೀಕರಿಸುತ್ತಾಳೆ. ಆದರೆ ಆಕೆ, ಆತನ ಬೇಡಿಕೆಯನ್ನು ತಿರಸ್ಕರಿಸುತ್ತಾಳೆ. ಆಕೆ ಪ್ರತ್ಯುತ್ತರವಾಗಿ "ಮೊಗಲ್ ದೊರೆಗಳ ಆದೇಶಕ್ಕೆ ಈ ರಾಣಿ ತಲೆ ಭಾಗಲಿಲ್ಲ. ಇಷ್ಟು ಮಾತ್ರವಲ್ಲದೆ ಈ ಬಿದನೂರು ಸಾಮ್ರಾಜ್ಯಕ್ಕೆ ನಾನೇ ರಾಣಿಯಾಗಿದ್ದೇನೆ; ನನಗಿಂತ ಯಾರೂ ದೊಡ್ಡವರಿಲ್ಲ" ಎಂದು ಖಾರವಾಗಿ ಆತನ ಆದೇಶವನ್ನು ಧಿಕ್ಕರಿಸುತ್ತಾಳೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ರಾಣಿಯು ರಾಜ್ಯದ ಸ್ವಾತಂತ್ರ್ಯ ಮತ್ತು ಸಾರ್ವಭೌಮತೆಯ ಪ್ರತೀಕವಾಗಿ ಸೆಟೆದು ನಿಲ್ಲುತ್ತಾಳೆ.

ರಾಣಿಯ ಸಹಜವಾದ ವರ್ತನೆಯಿಂದ ತೀವ್ರ ಮುಖಭಂಗಗೊಂಡ ಹೈದರಾಲಿಯು ಬಿದನೂರಿನ ವಿರುದ್ಧ ಯುದ್ಧ ಘೋಷಿಸುತ್ತಾನೆ. ಹೈದರಾಲಿಯು ಬಿದನೂರಿನ ಯುವರಾಜನಿಗೆ ಅಭಯಹಸ್ತ ನೀಡಿ, ರಾಣಿಯ ವಿರುದ್ಧ ಯುದ್ಧದಲ್ಲಿ ಪೂರ್ಣ ಪ್ರಮಾಣದ ಸಹಾಯ ಮಾಡಬೇಕೆಂದು ಕೇಳಿಕೊಂಡನು. ಈ ಸಂಬಂಧವಾಗಿ ಅವರುಗಳ ಮಧ್ಯೆ ನಡೆದ ಅನೌಪಚಾರಿಕ ಒಪ್ಪಂದದಲ್ಲಿ ಮಂಗಳೂರು ಪ್ರಾಂತ್ಯವನ್ನು ತನ್ನ ಆಡಳಿತಕ್ಕೆ ಇರಿಸುವುದಾಗಿ ಹೈದರಾಲಿಯು ತಿಳಿಸಿದನು. ಹೈದರಾಲಿಯ ಲೆಕ್ಕಾಚಾರವೆಂದರೆ ಮಂಗಳೂರಿನ ಮೂಲಕ ಮೈಸೂರು ಪ್ರಾಂತ್ಯಕ್ಕೆ ನೇರ ಸಂಪರ್ಕ ಕಲ್ಪಿಸಬಹುದು, ಮಾತ್ರವಲ್ಲದೆ ಅಕ್ಕಪಕ್ಕದ ರಾಜ್ಯಗಳ ಮೇಲೆ ಹತೋಟಿ ಹೊಂದಬಹುದೆಂದು ಅಂದಾಜಿಸಿದನು. ಈ ನಿಟ್ಟಿನಲ್ಲಿ ಸುಮಾರು ೬೦೦೦ದಷ್ಟು ಸೈನಿಕರೊಂದಿಗೆ ಹೈದರಾಲಿಯು 'ಬಿಸ್ ನಗರ' ಬಿಟ್ಟು ರಾಣಾ ಬಿದನೂರನ್ನು ತಲುಪಿದನು. ರಾಣಿ ವೀರ ಚೆನ್ನಮಾಜಿಗೆ ಹೈದರಾಲಿಯ ಸೈನಿಕ ದಾಳಿಯ ಬಗ್ಗೆ ಯಾವುದೇ ಮುನ್ಸೂಚನೆಗಳು ದೊರೆಯಲಿಲ್ಲ (ಮೋರಾಸ್ ೧೯೨೭:೪೦). ಬಿದನೂರಿನ ಸೈನ್ಯ ಯಾವುದೇ ರೀತಿಯಲ್ಲೂ ಯುದ್ಧದ ಸಿದ್ಧತೆಯಲ್ಲಿರಲಿಲ್ಲ. ಹೈದರಾಲಿಯ ದಾಳಿಯ ಬಗ್ಗೆ ರಾಣಿಗೆ ಯಾವುದೇ ಮುನ್ಸೂಚನೆಗಳಿಲ್ಲದೆ ಎರಗಿದ ಈ ಆಘಾತದಿಂದ ಚೇತರಿಸಿ ಲಭ್ಯವಿರುವ ಸೈನಿಕರ ದಂಡನ್ನು ತಕ್ಷಣವೇ ಯುದ್ಧ ರಂಗಕ್ಕೆ ಕಳುಹಿಸಿದಳು. ಪೂರ್ಣ ಪ್ರಮಾಣದ ಯುದ್ಧಕ್ಕೆ ತಯಾರಾಗಿದ್ದ ಹೈದರಾಲಿಯ ಸೈನ್ಯವನ್ನು ಎದುರಿಸಲು ಅಸಾಧ್ಯವಾದ ಬಿದನೂರಿನ ಸೈನವು ಚೆಲ್ಲಾಪಿಲ್ಲಿಯಾಗಿ ಯುದ್ಧರಂಗದಿಂದ ಪರಾರಿಯಾಯಿತು. ರಾಣಿಯೂ ಪರಾರಿಯಾಗಲು ಯತ್ನಿಸಿದಾಗ ಹೈದರಾಲಿಯ ಸೈನಿಕರು ಆಕೆಯನ್ನು ಬಂಧಿಸಿದರು. ಹೈದರಾಲಿಯ ಸೈನಿಕರು ರಾಣಿ ವೀರ ಚೆನ್ನಮಾಜಿಯನ್ನು ರಾಜನ ಎದುರು ಹಾಜರಿ ಪಡಿಸಿದರು (ಎಂ.ಎಂ.ಡಿ.ಎಲ್.ಟ ೧೯೮೮:೮೫). ಆದರೆ ಗೌರವಯುತವಾಗಿ ಆಕೆಯನ್ನು ನಡೆಸಿಕೊಂಡ ಹೈದರಾಲಿಯು ಆಕೆಯ ಮಗನೊಂದಿಗೆ ಅನುಸಂಧಾನ ಏರ್ಪಡಿಸಿ ಅಧಿಕಾರವನ್ನು ಯುವರಾಜನಿಗೆ ಹಸ್ತಾಂತರಿಸಲು ಏರ್ಪಾಟು ಮಾಡಿದನು. ರಾಣಿಗೆ ಯೋಗ್ಯ ಮಾಸಾಶನ ನೀಡಿ ಆಕೆಯ ಪ್ರಿಯಕರನೊಂದಿಗೆ ವಾಸಿಸಲು ಅವಕಾಶ ಕಲ್ಪಿಸಿಕೊಟ್ಟನು. ಜನರ ಬಯಕೆಯಂತೆ ಯುವರಾಜನಿಗೆ ಪಟ್ಟಾಭಿಷೇಕ ನಡೆಸಿ ಇಕ್ಕೇರಿಯ ರಾಜನನ್ನಾಗಿ ಘೋಷಿಸಿದನು. ಯುವರಾಜನು ರಾಜ್ಯದ ಜನತೆಗೆ, ತಾಯಿಗೆ ಹಾಗೂ ಆಸ್ಥಾನದ ಎಲ್ಲಾ ಪ್ರಮುಖರಿಗೆ ಗೌರವ ಸೂಚಿಸಿ ಒಪ್ಪಂದಕ್ಕೆ ಸಹಿ ಹಾಕಿದನು.

ನಿರಂಕುಶ ಆಡಳಿತ ನಡೆಸಿದ ರಾಣಿಯು ಹೈದರಾಲಿಯೊಂದಿಗೆ ನಡೆದ ಯುದ್ಧದಲ್ಲಿ ಸೋತು ಮುಖಭಂಗಕ್ಕೆ ಒಳಗಾಗಿ ಆನಂತರ ಅಧಿಕಾರ ಕೈ ತಪ್ಪಿದುದರಿಂದಾಗಿ ತೀವ್ರ ಆಘಾತಕ್ಕೊಳಗಾಗುತ್ತಾಳೆ. ಹೇಗಾದರೂ ಮಾಡಿ ಹೈದರಾಲಿಯ ವಿರುದ್ಧ ಪ್ರತಿಕಾರ ತೀರಿಸಬೇಕೆಂದು ಯೋಚಿಸಿ ಕಾರ್ಯ ಪ್ರವೃತ್ತಳಾಗುತ್ತಾಳೆ. ಹೈದರಾಲಿಯ ಹತ್ಯೆಗಾಗಿ ಪಿತೂರಿಯ ಸಂಚನ್ನು ರೂಪಿಸುತ್ತಾಳೆ. ಇದರ ಕಾರ್ಯ

ಸಾಧನೆಗಾಗಿ ತನ್ನ ಮಗನೊಂದಿಗೆ ಇದ್ದ ದ್ವೇಷ ಭಾವನೆಯನ್ನು ತೊರೆದು ಆತ್ಮೀಯತೆಯಿಂದ ಸಹಕಾರ ಮನೋಭಾವದಿಂದ ವರ್ತಿಸಿ ವಿಶ್ವಾಸವನ್ನು ಗಳಿಸುತ್ತಾಳೆ. ಆಕೆಯು ಹೈದರಾಲಿಯ ಬಗ್ಗೆ ಮಗನಲ್ಲಿ ಅಪನಂಬಿಕೆ, ಅವಿಶ್ವಾಸದ ಮನೋಭಾವವನ್ನು ಬಿತ್ತುತ್ತಾಳೆ. ಕೊನೆಗೆ ಆಕೆ ರೂಪಿಸಿರುವ ಹತ್ಯಾ ಪಿತೂರಿಯ ಯೋಜನೆಗೆ ಯುವ ರಾಜಕುಮಾರನನ್ನು ಒಪ್ಪಿಸುತ್ತಾಳೆ.

ಮಂಗಳೂರು ಪ್ರಾಂತ್ಯಕ್ಕೆ ದಂಡೆತ್ತಿ ಹೋಗಿರುವ ಹೈದರಾಲಿಯು ಪುನಃ ರಾಣಾಬಿದನೂರಿಗೆ ಹಿಂತಿರುಗಿ ಬರುವ ಸಂದರ್ಭವಿತ್ತು. ಬಿದನೂರಿನಲ್ಲಿ ಆತ ವಿಶ್ರಾಂತಿ ಪಡೆಯುವ ಅರಮನೆಯಿಂದ ಸುರಂಗಮಾರ್ಗ ವೊಂದು ಗುಪ್ತವಾಗಿ ದೇವಸ್ಥಾನಕ್ಕೆ ಸಂಪರ್ಕ ಕಲ್ಪಿಸುತ್ತಿತ್ತು. ಇದರ ತಿಳುವಳಿಕೆ ರಾಣಿ ಮತ್ತು ಕೆಲವೇ ಕೆಲವು ದೇವಸ್ಥಾನದ ಸಿಬ್ಬಂದಿಗಳಿಗೆ ಮಾತ್ರ ತಿಳಿದಿತ್ತು. ರಾಣಿಯು ಹೈದರಾಲಿ ತಂಗಿರುವ ಸಮಯದಲ್ಲಿ ಆ ಗುಪ್ತಮಾರ್ಗ ಬಳಸಿ ಸ್ಫೋಟಕಗಳನ್ನು ಸಿಡಿಸಿ ಹತ್ಯೆ ಮಾಡುವ ಪಿತೂರಿಯನ್ನು ಹೆಣೆಯುತ್ತಾಳೆ. ಆದರೆ ಈ ಪಿತೂರಿಯು ಆಸ್ಥಾನದ ಬ್ರಾಹ್ಮಣನೋರ್ವನು ಹೈದರಾಲಿಗೆ ತಿಳಿಸುವ ಮೂಲಕ ಬಹಿರಂಗ ವಾಗುತ್ತದೆ. ಹೈದರಾಲಿಯು ಪಿತೂರಿಕೋರರನ್ನು ಬಂಧಿಸಿ ಅವರೆಲ್ಲರನ್ನೂ ತನ್ನ ಸಮ್ಮುಖದಲ್ಲಿ ಬಹಿರಂಗ ವಿಚಾರಣೆ ನಡೆಸುತ್ತಾನೆ. ಅನಂತರ ರಾಣಿ, ಆಕೆಯ ಪ್ರಿಯಕರ ಮತ್ತು ಇತರ ಪಿತೂರಿಗಾರರಿಗೆ ಮರಣ ದಂಡನೆ ವಿಧಿಸುತ್ತಾನೆ. ಆದರೆ ರಾಜಕುಮಾರನಿಗೆ ಮರಣ ದಂಡನೆಯ ಬದಲು ಅಧಿಕಾರದಿಂದ ಪದಚ್ಯುತಗೊಳಿಸಿ 'ಶಿರಾ'ದ ಬಳಿ ಇರುವ ಮ್ಯಾಗೇರಿಗೆ ಬಂಧನದಲ್ಲಿ ಕಳುಹಿಸುತ್ತಾನೆ. ಹೈದರಾಲಿಯು ಬಿದನೂರು ರಾಜ್ಯವನ್ನು ತನ್ನ ಕೈವಶಪಡಿಸಿಕೊಳ್ಳುತ್ತಾನೆ.

ಫ್ರಾನ್ಸಿಸ್ ಬುಕಾನನ್ ಬಿದನೂರಿನ ಕೊನೆಯ ಘಟನೆಯನ್ನು ಬೇರೆಯೇ ಆದ ರೀತಿಯಲ್ಲಿ ವಿವರಿಸಿರು ತ್ತಾನೆ. ಮುಖ್ಯವಾಗಿ ಯುವರಾಜನ ಅಚ್ಚುಮೆಚ್ಚಿನ ಡ್ಯಾನ್ಸ್ ಹುಡುಗಿಯನ್ನು ಹೈದರಾಲಿಯು ತನ್ನ ಸೇವಕಿಯರ ತಂಡಕ್ಕೆ ಸೇರ್ಪಡೆಗೊಳಿಸಿ ಕರೆದುಕೊಂಡು ಹೋಗುತ್ತಾನೆ. ಈ ಘಟನೆಯನ್ನು ಯುವರಾಜ ಪ್ರತಿಭಟಿಸುತ್ತಾನೆ. ಅದು ಸಂಘರ್ಷಕ್ಕೆ ಕಾರಣವಾಯಿತು[೩]. ಅದರ ಮುಂದಿನ ಭಾಗವಾಗಿ ಹೈದರಾಲಿಯು ಆತನನ್ನು ಅಧಿಕಾರದಿಂದ ಇಳಿಸಿದನು. ಅಧಿಕಾರದಿಂದ ವಂಚಿತ ಯುವರಾಜ, ಆತನ ಮಗ, ರಾಣಿಯ ದತ್ತು ಪುತ್ರನನ್ನು ಮಧುಗಿರಿಗೆ ಕೊಂಡು ಹೋಗುತ್ತಾನೆ. ಇದೇ ಅವಧಿಯಲ್ಲಿ ಮರಾಠರು ಮುಂದೆ ಮಧುಗಿರಿಯ ಮೇಲೆ ದಾಳಿ ನಡೆಸಿ ಬಂಧನದಲ್ಲಿದ್ದ ಇವರನ್ನು ಬಿಡುಗಡೆಗೊಳಿಸಿ ಪೂನಾಕ್ಕೆ ಕೊಂಡೊಯ್ಯುತ್ತಾರೆ. ಪೂನಾಕ್ಕೆ ಹೋಗುವ ಮಾರ್ಗದಲ್ಲಿ ಯುವರಾಜನಿಗೆ ಹೊಟ್ಟೆ ನೋವು ಸಂಭವಿಸಿ ಮರಣವನ್ನಪ್ಪುತ್ತಾನೆ ಎಂದು ವಿವರಿಸಿದ್ದಾರೆ(ಬುಕಾನನ್ (೩) ೧೯೮೮:೨೫೫). ಆದರೆ ಈ ವಿವರಣೆಯ ಬಗ್ಗೆ ಸಾಕಷ್ಟು ಸಂದೇಹಗಳು ಇವೆ.

ಹೈದರಾಲಿಯು ರಾಣಾಬಿದನೂರಿನ ಹೆಸರನ್ನು 'ಹೈದರ್ ನಗರ'ವೆಂದೂ, ಮಂಗಳೂರಿನ ಹೆಸರನ್ನು 'ಕೋರಿಯಾಲ್' ಅಥವಾ 'ಪೋರ್ಟ್ ರಾಯಲ್' ಎಂದೂ ಹೊಸ ನಾಮಕರಣ ಮಾಡಿದನು(ಮೋರಾಸ್ ೧೯೭೭:೪೦).

ಹೈದರಾಲಿಯು ಬಿದನೂರನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಕೆನರಾ ಪ್ರಾಂತ್ಯದ ವ್ಯಾಪಾರ ವ್ಯವಹಾರ, ಪ್ರಾಕೃತಿಕ ಸಂಪನ್ಮೂಲಗಳ ಬಗ್ಗೆ ಸಮಕಾಲೀನ ಬರಹಗಳ ವಿವರಗಳನ್ನು ಚರ್ಚಿಸುವುದು

ಅನುಚಿತವಾಗಲಾರದು. ಹೈದರಾಲಿಯ ಆಡಳಿತ ಕಾಲದಲ್ಲೂ "ಮಂಗಳೂರು ವ್ಯಾಪಾರ-ವ್ಯವಹಾರದ ಒಂದು ಪ್ರಮುಖ ಕೇಂದ್ರವಾಗಿ ಮುಂದುವರಿಯುತ್ತಿದೆ" ಎಂದು ಫೋರ್ಬಿಸ್ ಹೇಳುತ್ತಾರೆ (ಫೋರ್ಬಿಸ್ (೧) ೧೮೩೪:೩೦). 'ಹೈದರಾಲಿ ಎಂಡ್ ರೆವೆಲ್ಯೂಷನ್ ಇನ್ ಇಂಡಿಯಾ' ಎಂಬ ಕೃತಿಯನ್ನು ರಚಿಸಿರುವ ಎಂ.ಎಂ.ಡಿ.ಎಲ್.ಟಿ ಓರ್ವ ಯುರೋಪಿಯನ್ ಸಂಜಾತನಾಗಿರುತ್ತಾನೆ. ಈತ ಪ್ರಾರಂಭದಲ್ಲಿ ಮೊಗಲ್ ದಂಡನಾಯಕನಾಗಿ ನಂತರ ಹೈದರಾಲಿ ಸೈನ್ಯಾಧಿಕಾರಿಯಾಗಿ ಬಿದನೂರು ದಾಳಿಯಲ್ಲಿ ಪ್ರಮುಖಪಾತ್ರ ವಹಿಸಿದ್ದಾನೆ. ಆ ಗ್ರಂಥದಲ್ಲಿ ಕೆನರಾ ಪ್ರಾಂತ್ಯ ಮತ್ತು ರಾಣಾಬಿದನೂರಿನ ನೈಸರ್ಗಿಕ ಸಂಪನ್ಮೂಲ, ಆಯಕಟ್ಟಿನ ಪ್ರದೇಶ ಮತ್ತು ವ್ಯಾಪಾರ ವ್ಯವಹಾರಗಳ ಬಗ್ಗೆ ವಿಶೇಷ ಒತ್ತು ಕೊಟ್ಟು ಹೀಗೆ ವಿವರಿಸಿದ್ದಾನೆ.

> ಇಲ್ಲಿ ಎಲ್ಲಾ ರೀತಿಯ ಉತ್ಪಾದನೆಗಳೂ ಯಥೇಚ್ಛವಾಗಿ ನಡೆಯುತ್ತದೆ. ಅತ್ಯಂತ ಮಹತ್ವದ ಸಮುದ್ರತೀರ ಮತ್ತು ಸಾಕಷ್ಟು ಉತ್ತಮ ಸಂಖ್ಯೆಯ ಬಂದರುಗಳೂ ಇವೆ. ಅಪಾರ ಪ್ರಮಾಣದಲ್ಲಿ ಅಕ್ಕಿ, ಕರಿಮೆಣಸು, ಲವಂಗ, ಏಲಕ್ಕಿ, ಶ್ರೀಗಂಧ, ದಂತ ಮತ್ತು ಹವಳಗಳು ಈ ರಾಜ್ಯದಲ್ಲಿ ವಿಪುಲವಾಗಿ ದೊರೆಯುತ್ತವೆ. ಆದುದರಿಂದ ಇದನ್ನು 'ಭಾರತದ ಆಹಾರದ ಕಣಜ' ಮತ್ತು 'ಭಾರತದ ಆಹಾರದ ಉಗ್ರಾಣ'ವೆಂದೂ ಪರಿಗಣಿಸಬಹುದು. ಸಾಕಷ್ಟು ಪ್ರಮಾಣದಲ್ಲಿ ಆಹಾರ ವಸ್ತುಗಳ ದಾಸ್ತಾನು ಇದೆ. ಇಲ್ಲಿರುವ ಪರ್ವತಗಳಲ್ಲಿ, ಚಿನ್ನದ, ವಜ್ರದ ಮತ್ತು ಹರಳಿನ ಗಣಿಗಳಿವೆ. ಇವಿಷ್ಟು ಮಾತ್ರವಲ್ಲದೆ ಇಲ್ಲಿ ಇನ್ನೂ ಅನೇಕ ಬೆಲೆಬಾಳುವ ಆಭರಣದ ಕಲ್ಲುಗಳಿವೆ. ಇನ್ನೂ ಹೇಳಬೇಕೆಂದರೆ ಬಿದನೂರು ಕೋಟೆಯ ಹತ್ತಿರದಲ್ಲೇ ಅತ್ಯುತ್ತಮ ಗುಣಮಟ್ಟದ ಚಿನ್ನ ದೊರೆಯುವ ಚಿನ್ನದ ಗಣಿಗಳಿವೆ. ಹೈದರಾಲಿಯು ಕೋಟೆಯ ಅಧಿಕಾರವನ್ನು ವಶಕ್ಕೆ ಪಡೆದುಕೊಂಡ ಮೇಲೆ ಅಲ್ಲಿ ಬೃಹತ್ ಪ್ರಮಾಣದ ಬಂಗಾರದ ಒಡವೆಗಳು, ನಾಣ್ಯಗಳು, ಬೆಲೆಬಾಳುವ ಕಲ್ಲುಗಳು, ಚಿಕ್ಕ ಚಿಕ್ಕ ಇತರ ಒಡವೆಗಳೆಲ್ಲವು ಒಂದು ಕಬ್ಬಿಣದ ಪೆಟ್ಟಿಗೆಯಲ್ಲಿ ಪತ್ತೆಯಾದವು. ಇವೆಲ್ಲವುಗಳನ್ನು ಪತ್ತೆ ಹಚ್ಚಿದ ಕೀರ್ತಿ ಹೈದರಾಲಿಯ ಸೈನ್ಯದಲ್ಲಿದ್ದ ಫ್ರೆಂಚ್ ಸೈನಿಕರದ್ದಾಗಿದೆ (ಎಂ.ಎಂ.ಡಿ.ಎಲ್.ಟಿ ೧೯೮೮:೮೯).

ಈ ಮೇಲಿನ ವಿವರಣೆಗಳಲ್ಲಿ ಖನಿಜ ಸಂಪನ್ಮೂಲಗಳ ಲಭ್ಯತೆಗೆ ಸಂಬಂಧಿಸಿದಂತೆ ಎಂ.ಎಂ.ಡಿ.ಎಲ್.ಟಿ ನೀಡುವ ವಿವರಣೆ ಭಾಗಶಃ ಸತ್ಯವಾಗಿರಬಹುದು. ಏಕೆಂದರೆ ಬಿದನೂರಿನಲ್ಲಿ ಚಿನ್ನದ ಗಣಿಗಾರಿಕೆ ನಡೆಯುತ್ತಿದ್ದರೆ ಅನಂತರ ಯಾಕೆ ನಿಂತು ಹೋಯಿತು ಎಂಬುದು ಪ್ರಶ್ನಾರ್ಹವಾಗಿದೆ. ಆದರೆ ಈ ಭಾಗದಲ್ಲಿ ಬನವಾಸಿಯ ಸುತ್ತ ಮುತ್ತಲಿನ ಮಣ್ಣಿನಲ್ಲಿ ಚಿನ್ನದ ಅಂಶಗಳು ಇದ್ದು ಅದನ್ನು ಜನ ಈಗಲೂ ಸಂಗ್ರಹಿಸುವುದನ್ನು ಗಮನಿಸಬಹುದು[*].

ಶ್ರೇಷ್ಠ ದರ್ಜೆಯ ಕರಿಮೆಣಸಿನ ಕಣಜ 'ಸೋಂದಾ'ವನ್ನು ಕೂಡಾ ಹೈದರಾಲಿಯು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಆದುದರಿಂದ ಈ ನಿಟ್ಟಿನಲ್ಲಿ ಬಿದನೂರು ಪ್ರಾಂತ್ಯದ ಪ್ರಾಯೋಗಿಕ ಮಹತ್ವದ ಬಗ್ಗೆ ಹೈದರಾಲಿಗೆ ಪೂರ್ಣ ಪರಿಜ್ಞಾನವಿತ್ತೆಂದು ಸ್ಪಷ್ಟವಾಗುತ್ತಿದೆ.

ಕೆನರಾವನ್ನು ತನ್ನ ಸಾರ್ವಭೌಮತೆಯಡಿಯಲ್ಲಿ ಸೇರಿಸಿಕೊಂಡ ಹೈದರಾಲಿಯು ಆನಂತರ ಕರಾವಳಿ ಕರ್ನಾಟಕದ ವಿವಿಧ ಭಾಗಗಳಿಗೆ ಭೇಟಿ ನೀಡಿದನು. ಅದರಲ್ಲೂ ಪ್ರಮುಖವಾಗಿ ಕಾರವಾರದ ಕಡೆಗೆ

ತನ್ನ ಸೈನ್ಯದೊಂದಿಗೆ ಹೋಗಿ 'ಓಪಿಲ್' ಎಂಬ ಕೋಟೆಯನ್ನು ಪೋರ್ಚುಗೀಸರಿಂದ ವಶಪಡಿಸಿದನು. ಓಪಿಲ್ ಎಂಬ ಪ್ರದೇಶವು ಸೋಂದಾ ಪ್ರಾಂತ್ಯಕ್ಕೆ ಸೇರಿತ್ತು. ಅದು ಇದಕ್ಕಿಂತಲೂ ಮೊದಲು ಕೆನರಾ ಪ್ರಾಂತ್ಯದ ಭಾಗವಾಗಿ ಕ್ರಮೇಣ ಅದರಿಂದ ಪ್ರತ್ಯೇಕವಾಗಿತ್ತು. ಅನಂತರ ಕಾರವಾರದ ರಾಮಾಕೋಟೆಯನ್ನು ವಶಪಡಿಸುವ ಪ್ರಕ್ರಿಯೆಯಲ್ಲಿ ಹೈದರಾಲಿಯ ಸೈನ್ಯದಲ್ಲಿ ಇದ್ದ ಫ್ರೆಂಚ್ ಸೈನಿಕರು ಸಹಕರಿಸಲಿಲ್ಲ. ಹೈದರಾಲಿಯ ಸೈನ್ಯದಲ್ಲಿದ್ದ ಯುರೋಪಿಯನ್ನರು (ಫ್ರೆಂಚರು) ಮತ್ತೊಂದು ದೇಶದ ಯುರೋಪಿಯನ್ನರನ್ನು (ಪೋರ್ಚುಗೀಸರನ್ನು) ಎದುರಿಸುವ ಮುಖಾಮುಖಿಯ ಸಮಯ ಎದುರಾದಾಗ ಫ್ರೆಂಚರು ನಿಷ್ಕ್ರಿಯರಾದಾಗ ಹೈದರಾಲಿಯು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದನು. "ಯುರೋಪಿಯನ್ನರನ್ನು ಎಲ್ಲಾ ಕಾಲದಲ್ಲೂ ನಂಬಲು ಸಾಧ್ಯವಿಲ್ಲ. ಅವರು ಯಾವಾಗ ಬೇಕಾದರೂ ಕೈ ಕೊಡಬಹುದು". ಇದೇ ಎಚ್ಚರಿಕೆಯ ಮಾತುಗಳನ್ನು ಹೈದರಾಲಿಯು ಮರಣ ಶಯ್ಯೆಯಲ್ಲಿದ್ದಾಗ ಮಗ ಟಿಪ್ಪು ಸುಲ್ತಾನನಿಗೆ ಎಚ್ಚರಿಕೆಯ ಭಾಗವಾಗಿ ತನ್ನ ಅಂತಿಮ ಸಂದೇಶದಲ್ಲಿ ಹೇಳುತ್ತಾನೆ. ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಫ್ರೆಂಚ್ ಸೈನಿಕರು ಕೈಕೊಟ್ಟ ಹಿನ್ನೆಲೆಯಲ್ಲಿ ಹೈದರಾಲಿಯು ಪೋರ್ಚುಗೀಸರೊಂದಿಗೆ ಯುದ್ಧ ಮಾಡದೆ ಅವರೊಂದಿಗೆ ಶಾಂತಿ ಒಪ್ಪಂದವೇರ್ಪಡಿಸಿದನು.

ಹೈದರಾಲಿಯು ಎರಡನೇ ಬಾರಿಗೆ ಕಾರವಾರದಿಂದ ಮಂಗಳೂರಿಗೆ ಬಂದನು. ಈ ಭೇಟಿಯಲ್ಲಿ ಅರೇಬಿಯಾ ಮೂಲದ ಮಾಪಿಳ್ಳೆಗಳು ಕಣ್ಣಾನೂರಿನ ಆಲಿ ರಾಜನ ಪರವಾಗಿ ಹೈದರಾಲಿಯನ್ನು ಭೇಟಿಯಾಗುತ್ತಾರೆ. ಹೈದರಾಲಿಯು ಮಾಪಿಳ್ಳೆಗಳ ನಿಯೋಗವನ್ನು ಗೌರವಯುತವಾಗಿ ಸ್ವೀಕರಿಸುತ್ತಾನೆ. ಅವರು ನೀಡಿರುವ ಬೃಹತ್ ಪ್ರಮಾಣದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ಅವರ ಹಿತಾಸಕ್ತಿ, ಸ್ವಾಭಿಮಾನ ಮತ್ತು ಗೌರವವನ್ನು ಕಾಪಾಡುವುದಾಗಿ ಭರವಸೆ ನೀಡುತ್ತಾನೆ. ಪಶ್ಚಿಮ ಕರಾವಳಿಯಲ್ಲಿ ಈ ಮಾಪಿಳ್ಳೆಗಳು ನುರಿತ ನಾವಿಕರಾಗಿದ್ದರು. ಆಲಿರಾಜನಲ್ಲಿ ಬಹಳಷ್ಟು ಹಡಗುಗಳು ಇದ್ದು ಅದು ಕಣ್ಣಾನೂರು, ಮಂಗಳೂರು ಬಂದರುಗಳನ್ನು ಆಶ್ರಯಿಸಿ ವಿದೇಶಗಳೊಂದಿಗೆ ಆಹಾರ ವಸ್ತುಗಳು ಮತ್ತಿತರೆ ಬೆಲೆಬಾಳುವ ವಸ್ತುಗಳ ವ್ಯಾಪಾರ–ವ್ಯವಹಾರವನ್ನು ನಡೆಸುತ್ತಾ ಬರುತ್ತಿದ್ದರು. ಆಲಿ ರಾಜನ ಹಡಗುಗಳ ಮೇಲೆ ಮರಾಠರು ಆಗಾಗ ದಾಳಿ ನಡೆಸುತ್ತಿದ್ದರು. ಇದರಿಂದ ರಕ್ಷಣೆ ಪಡೆಯಲು ಹೈದರ್‌ನಿಂದ ಸಹಾಯವನ್ನು ಆಲಿರಾಜ ಬಯಸುತ್ತಾನೆ. ಹೈದರನೂ ಸಹ ಹಡಗುಗಳನ್ನು ಹೊಂದಲು ನಿರ್ಧರಿಸುತ್ತಾನೆ. ಈ ರೀತಿ ಹಡಗುಗಳನ್ನು ಹೊಂದುವುದರಿಂದ ಕರಾವಳಿ ಕರ್ನಾಟಕದ ಮೇಲೆ ನಡೆಯುತ್ತಿದ್ದ ಮರಾಠರ ಮತ್ತು ಇತರೆ ಕಡಲುಕಳ್ಳರ ದಾಳಿಯಿಂದ ಪಾರು ಮಾಡಲು ಸಾಧ್ಯವಿದೆ ಎಂಬ ನಿರ್ಧಾರಕ್ಕೆ ಹೈದರಾಲಿಯು ಬರುತ್ತಾನೆ. ಇಂತಹ ಜವಾಬ್ದಾರಿ ನಿರ್ವಹಿಸಲು ಆಲಿರಾಜನ ಸಹೋದರ ಶೇಕ್ ಆಲಿಯನ್ನು ಹೈದರಾಲಿಯು ನೂತನವಾಗಿ ರಚಿಸಲ್ಪಟ್ಟ ನೌಕಾ ಸೈನ್ಯದ ಆಡ್ಮಿರಲ್ ಆಗಿ ನೇಮಿಸುತ್ತಾನೆ. ತನ್ನ ಪ್ರಾಂತ್ಯದ ವಿದೇಶಿ ವ್ಯಾಪಾರ, ಬಂದರುಗಳ ನಿರ್ವಹಣೆಯ ಜವಾಬ್ದಾರಿಯನ್ನು ಆತನಿಗೆ ಕೊಡುತ್ತಾನೆ. ಅದಕ್ಕಾಗಿ ಸಾಕಷ್ಟು ಹಣಕಾಸು ಸಂಪನ್ಮೂಲಗಳನ್ನು ಒದಗಿಸುತ್ತಾನೆ. ಹೈದರಾಲಿಯು ಹೊಸ ಹಡಗುಗಳನ್ನು ನಿರ್ಮಿಸಲು ಮತ್ತು ಕ್ರಯಕ್ಕೆ ಪಡೆಯಲು ಹಣಕಾಸು ನೆರವನ್ನು ಯಥೇಚ್ಛವಾಗಿ ನೀಡುತ್ತಾನೆ(ಎಂ.ಎಂ.ಡಿ.ಎಲ್.ಟಿ ೧೯೮೮:೯೬).

ಶೇಕ್ ಆಲಿಯು ಹೈದರಾಲಿಯ ನಾವಿಕ ಪಡೆಯ ಜವಾಬ್ದಾರಿ ವಹಿಸಿ ಮರಾಠರ ದಾಳಿಯನ್ನು ನಿಭಾಯಿಸುವ ಬದಲು ಮಾಲ್ಡೀವ್ಸ್ ರಾಜನ ಮೇಲೆ ಪ್ರತಿಕಾರದ ದಾಳಿಗೆ ಸಿದ್ಧನಾಗುತ್ತಾನೆ. ಈ ರಾಜನಿಂದ

ಆಲಿರಾಜನು ವ್ಯಾಪಾರಕ್ಕೆ ಸಂಬಂಧಿಸಿ ಆಗಾಗ ಮೋಸ ಮತ್ತು ವಂಚನೆಗೆ ಒಳಗಾಗುತ್ತಿದ್ದನು. ಇದಕ್ಕೆ ತಕ್ಕ ಶಿಕ್ಷೆ ನೀಡುವ ಉದ್ದೇಶದಿಂದ ಮಾಲ್ದೀವ್ಸ್ ಮೇಲೆ ದಾಳಿ ನಡೆಸಿ ಅಲ್ಲಿಯ ರಾಜನನ್ನು ಬಂಧಿಸಿ ಕಣ್ಣುಗಳನ್ನು ಕಿತ್ತು ಹಡಗಿನಲ್ಲಿ ಮಂಗಳೂರಿಗೆ ಯುದ್ಧ ಖೈದಿಯನ್ನಾಗಿ ಕರೆ ತರುತ್ತಾನೆ. ಆಗ ಹೈದರಾಲಿಯು ರಾಣಾ ಬಿದನೂರಿನಲ್ಲಿ ಇರುತ್ತಾನೆ. ಅಲ್ಲಿಗೆ ಈ ಯುದ್ಧ ಖೈದಿಯನ್ನು ಕೊಂಡೊಯ್ದು ಶೇಖ್ ಆಲಿಯು ಹೈದರಾಲಿಯ ಎದುರು ಹಾಜರು ಪಡಿಸುತ್ತಾನೆ. ಮಾಲ್ದೀವ್ಸ್‌ನ ಮೇಲೆ ದಾಳಿ ಹೈದರಾಲಿಯ ಹೆಸರಿನಲ್ಲಿ ನಡೆಯುತ್ತದೆ. ಆದರೆ ಹೈದರಾಲಿಯು ಶೇಖ್ ಆಲಿಯ ಕ್ರೂರ ಕೃತ್ಯವನ್ನು ಖಂಡಿಸಿ ಶಿಕ್ಷೆಯ ರೂಪದಲ್ಲಿ ಆತನಿಗೆ ನೀಡಲಾದ ನಾವಿಕ ಸೈನ್ಯದ ಆಡ್ಮಿರಲ್ ಸ್ಥಾನದಿಂದ ಕಿತ್ತೆಸೆಯುತ್ತಾನೆ. ಇಂಗ್ಲೀಷ್ ವ್ಯಕ್ತಿ ಸ್ಯಾನೆಟನ್ನು ಈ ಹುದ್ದೆಗೆ ನೇಮಿಸುತ್ತಾನೆ (ಎಂ.ಎಂ.ಡಿ.ಎಲ್.ಟಿ ೧೯೮೮:೯೭). ಮಾಲ್ದೀವ್ಸ್ ರಾಜನಿಗೆ ರಾಣಾ ಬಿದನೂರಿನಲ್ಲಿ ಅಥವಾ ಹೈದರ್ ನಗರದಲ್ಲಿ ಅರಮನೆಯೊಂದನ್ನು ನೀಡಿ ಅಲ್ಲಿ ವಾಸಿಸಲು ವ್ಯವಸ್ಥೆ ಕಲ್ಪಿಸುತ್ತಾನೆ[೫].

ಬಿದನೂರನ್ನು ಜಯಿಸಿದ ಮೇಲೆ ಹೈದರಾಲಿಯು ಪಶ್ಚಿಮ ಕರಾವಳಿಯಲ್ಲಿ ಡಾಕ್‌ಯಾರ್ಡ್(ಹಡಗು ಕಟ್ಟೆ ನಿರ್ಮಾಣ, ನೌಕಾ ಶಸ್ತ್ರಾಗಾರ, ಹಡಗು ನಿರ್ಮಾಣ ಮತ್ತು ರಿಪೇರಿ ಇವುಗಳೆಲ್ಲವುಗಳ ಮೇಲುಸ್ತುವಾರಿಯನ್ನು ಆತನ ಮಿಲಿಟರಿ ಜನರಲ್ ಆಲಿಬೇಗ್ ನಿರ್ವಹಿಸಿದನು(ಶ್ಯಾಮ್ ರಾವ್ ೧೯೩೬:೫೨).

ವಾಣಿಜ್ಯದ ಬೆಳೆಗಳು ಮತ್ತು ಆಹಾರದ ಬೆಳೆಗಳ ಕಣಜವಾಗಿರುವ ಕರಾವಳಿ ಕರ್ನಾಟಕವು ವಿದೇಶಿ ವ್ಯಾಪಾರದಿಂದ ಅಪಾರ ಸಂಪತ್ತನ್ನು ಸೃಷ್ಟಿಸುತ್ತಿರುವುದನ್ನು ಗಮನಿಸಿದ ಹೈದರಾಲಿಯು ಈ ಪ್ರಾಂತ್ಯದಲ್ಲಿ ತಕ್ಷಣವೇ ಕಂದಾಯ ನೀತಿಯ ಸುಧಾರಣೆಗಾಗಿ ಮುಂದಡಿಯಿಡುತ್ತಾನೆ. ಆ ಪ್ರಕಾರ ತನ್ನ ಅಧಿಕಾರಿಗಳಿಗೆ ಪ್ರಾಂತ್ಯದ ಕಂದಾಯದ ಸ್ಥಿತಿ ಗತಿಯನ್ನು ಅಧ್ಯಯನ ಮಾಡಲು ಆದೇಶಿಸುತ್ತಾನೆ. ಬಂಜರು ಭೂಮಿಗೆ ಭೂಕಂದಾಯದಲ್ಲಿ ವಿನಾಯಿತಿಯನ್ನು ಘೋಷಿಸುತ್ತಾನೆ. ಪ್ರಾರಂಭದಲ್ಲಿ ಬಂಜರು ಭೂಮಿಗೆ ೩೦ ಸಾವಿರ ಪಗೋಡ ಕಂದಾಯವನ್ನು ಪಾವತಿಸಲು ಆದೇಶಿಸುತ್ತಾನೆ. ಆದರೆ ಯಾವಾಗ ಅದು ಫಲವತ್ತತೆ ಇಲ್ಲದ ಹಾಗೂ ಕೃಷಿಗೆ ಯೋಗ್ಯವಲ್ಲದ ಭೂಮಿ ಎಂದು ತಿಳಿಯಿತೋ ಕೂಡಲೇ ಅದಕ್ಕೆ ಬಾಡಿಗೆಯನ್ನು ಮಾತ್ರ ಪಾವತಿಸಬೇಕೆಂದು ಆದೇಶಿಸುತ್ತಾನೆ. ಪಟೇಲರುಗಳು ಹೊಂದಿರುವ ಭೂಮಿಗೆ ೧,೭೧೧ ಮೌಲ್ಯದ ಹೆಚ್ಚುವರಿ ತೆರಿಗೆಗೆ ಆದೇಶಿಸುತ್ತಾನೆ. ಅದೇ ರೀತಿ ಪ್ರಭಾವಿ ವಲಯದ ಭೂಮಾಲಿಕರಿಗೆ ೫೦%ದಷ್ಟು ಕಂದಾಯದಲ್ಲಿ ವಿನಾಯಿತಿಯನ್ನು ಘೋಷಿಸುತ್ತಾನೆ. ಆದರೆ ಪಾಳಯಗಾರರ ಭೂಮಿಗೆ ೧,೬೧೮ರಷ್ಟು ಹೆಚ್ಚುವರಿ ತೆರಿಗೆ ಪಾವತಿಸಲು ಆದೇಶಿಸುತ್ತಾನೆ(ಸ್ಟರಕ್ ೧೮೯೪:೯೮).

**ಹೈದರಾಲಿ- ರಾಜಕೀಯ ಮಹತ್ವ, ಅಂತರಾಷ್ಟ್ರೀಯ ವ್ಯಾಪಾರ ಹಾಗೂ ವಾಣಿಜ್ಯ ಸ್ವರೂಪದ ವಿಶ್ಲೇಷಣೆ.**

ಹೈದರಾಲಿಯು ಇಕ್ಕೇರಿಯನ್ನು ತನ್ನ ಕೈ ವಶಪಡಿಸಿಕೊಂಡ ಕೂಡಲೇ ೧೭೬೩ರ ಮೇ ತಿಂಗಳ ೨೭ರಂದು ವ್ಯಾಪಾರ ವ್ಯವಹಾರಕ್ಕೆ ಸಂಬಂಧಿಸಿ ಫರ್ಮಾನು ಹೊರಡಿಸಿದನು. ಅದರಲ್ಲಿ ಬ್ರಿಟಿಷ್ ಕಂಪೆನಿಯು ಮಂಗಳೂರಿನಿಂದ ಅಕ್ಕಿಯನ್ನು ರಫ್ತು ಮಾಡಲು ಪರವಾನಿಗೆ ನೀಡಿದನು. ಮುಂಬಯಿಗೆ ಅಕ್ಕಿಯನ್ನು ಮಂಗಳೂರಿನಿಂದ ಕಳುಹಿಸುವುದಾದರೆ ಅದಕ್ಕೆ 'ಅದಮಾಯಿ' ಎಂಬ ತೆರಿಗೆಯಿಂದ ವಿನಾಯಿತಿ ನೀಡಿದನು.

ಇದೇ ರೀತಿಯ ತೆರಿಗೆ ವಿನಾಯಿತಿ ತಲಶ್ಶೇರಿಗೆ ಅಕ್ಕಿಯನ್ನು ಕಳುಹಿಸಿಕೊಡುವುದಕ್ಕೂ ನೀಡಿದನು. ಆದರೆ ಇತರೆ ಖಾಸಗಿ ಇಂಗ್ಲಿಷ್ ವ್ಯಾಪಾರಿಗಳು ಅಕ್ಕಿಯನ್ನು ವಿಕ್ರಯಿಸುವಾಗ ಇತರ ವ್ಯಾಪಾರಿಗಳಂತೆ ಅವರೂ ತೆರಿಗೆಯನ್ನು ಪಾವತಿಸಬೇಕೆಂದು ಆ ಫರ್ಮಾನಿನಲ್ಲಿ ಘೋಷಿಸಲಾಗಿತ್ತು (ಲೋಗನ್ ೧೮೭೯:೧೮೯).

ಸಿ.ಸಿ.ಎಚ್ ಸಿಕ್ವೆರಾ ಇವರ "ತುಳುವ ಎ ಮಿನಿಯೆಚರ್ ಆಫ್ ಇಂಡಿಯಾ" ಎಂಬ ಕೃತಿಯಲ್ಲಿ ಹೈದರಾಲಿಯ ಬಗ್ಗೆ ವಿವರಿಸುತ್ತಾ, ಬಿದನೂರನ್ನು ಗೆದ್ದುಕೊಂಡ ಕೂಡಲೇ ಆತನು ವಿದೇಶದ ವರ್ತಕರುಗಳೊಂದಿಗಿನ ಸಂಬಂಧಗಳನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಿದನು ಎಂದು ತಿಳಿಸಿದ್ದಾರೆ (ಸಿಕ್ವೆರಾ ೧೯೮೦:೧೩೦).

ಹೈದರಾಲಿಯು ಕೆನರಾ ಪ್ರಾಂತ್ಯವನ್ನು ಜಯಿಸಿದಂದಿನಿಂದಲೇ ಮಂಗಳೂರು ಅಥವಾ ರೋಯಲ್ ಪೋರ್ಟನ್ನು ತನ್ನ ನೌಕಾ ಸೈನ್ಯದ ಕೇಂದ್ರವನ್ನಾಗಿ ಘೋಷಿಸಿದನು (ಹಂಟರ್ ೧೯೦೯:೩೦೭). ಹೈದರಾಲಿಯು ಅಧಿಕಾರ ಪಡೆದ ಮೇಲೆ ರಾಣಾಬಿದನೂರಿಗೆ ಸಂಬಂಧಿಸಿ ಆತ ರೂಪಿಸಿರುವ ವಾಣಿಜ್ಯ ಧೋರಣೆಗಳನ್ನು ಮತ್ತು ರಾಜಕೀಯ ಬೆಳವಣಿಗೆಗಳನ್ನು ಪೋರ್ಚುಗೀಸರು ಮತ್ತು ಇಂಗ್ಲೀಷರು ಗಂಭೀರವಾಗಿ ಪರಿಗಣಿಸಿದರು. ಈ ಬೆಳವಣಿಗೆಯಿಂದ ಅವರ ವಾಣಿಜ್ಯ ವ್ಯವಹಾರಗಳ ಮೇಲೆ ಬೀರುವ ಪರಿಣಾಮಗಳನ್ನು ಎದುರಿಸುವುದರ ಬಗ್ಗೆ ಚರ್ಚಿಸಿದರು. ಈಗಾಗಲೇ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಆರ್ಥಿಕ ಬಿಕ್ಕಟ್ಟಿಗೆ ಒಳಗಾಗಿದ್ದ ಪೋರ್ಚುಗೀಸರ ವಾಣಿಜ್ಯೋದ್ಯಮ ರಂಗವು ತೀವ್ರ ಆತಂಕಕ್ಕೆ ಒಳಗಾಯಿತು. ಅವರಿಗೆ ಈ ಬೆಳವಣಿಗೆ ನುಂಗಲಾರದ ತುತ್ತಾಯಿತು. ಆದರೆ ವಿಶೇಷವೆಂದರೆ ಹೈದರಾಲಿಯು ವ್ಯಾಪಾರ – ವ್ಯವಹಾರಕ್ಕೆ ಸಂಬಂಧಿಸಿ ಬಿದನೂರಿನೊಂದಿಗೆ ಪೋರ್ಚುಗೀಸರು ಮತ್ತು ಇಂಗ್ಲಿಷರು ಮಾಡಿಕೊಂಡಿರುವ ಒಪ್ಪಂದಗಳನ್ನು ಜಾರಿಗೊಳಿಸುವುದಾಗಿ ಘೋಷಿಸಿಕೊಂಡನು. ಈ ಮೂಲಕ ಪೋರ್ಚುಗೀಸರ ಮತ್ತು ಇಂಗ್ಲೀಷರ ಲೆಕ್ಕಾಚಾರ ತಲೆಕೆಳಗಾಯಿತು. ಸಂಘರ್ಷದ ಬದಲು ಸಾಮರಸ್ಯದ ಒಪ್ಪಂದಗಳು ಜಾರಿಯಾಯಿತು.

ಮದ್ರಾಸ್, ಕಲ್ಕತ್ತಾ ಮತ್ತು ಮುಂಬಯಿ ಈ ಮೂರು ಈಸ್ಟ್ ಇಂಡಿಯಾ ಕಂಪೆನಿಯ ಪ್ರಾಂತೀಯ ಸರಕಾರಗಳಲ್ಲಿ ಮುಂಬಯಿ ಸರಕಾರವು ವಾಣಿಜ್ಯೋದ್ಯಮವನ್ನು ತನ್ನ ಆದ್ಯತೆಯೆಂದು ಪರಿಗಣಿಸಿ ರಾಜಕೀಯ ತಂತ್ರ ಕುತಂತ್ರಗಳಲ್ಲಿ ಕನಿಷ್ಠ ಪಾತ್ರ ನಿರ್ವಹಿಸಿದ್ದನ್ನು ಹೈದರಾಲಿಯ ಕಾಲಘಟ್ಟಕ್ಕೆ ಸಂಬಂಧಿಸಿ ನಾವು ತೀರ್ಮಾನಕ್ಕೆ ಬರಬಹುದಾಗಿದೆ. ಆದಾಯ ಅಥವಾ ಸಂಪನ್ಮೂಲ ಕ್ರೋಢೀಕರಣದ ಬಗ್ಗೆ ವಿಶೇಷ ಗಮನ ಹರಿಸಿದ ಮುಂಬಯಿ ಪ್ರಾಂತೀಯ ಸರಕಾರ ಪಶ್ಚಿಮ ಕರಾವಳಿಯ ವ್ಯಾಪಾರ–ವ್ಯವಹಾರದ ಬಗ್ಗೆ ವಿಶೇಷ ಕಾಳಜಿ ವಹಿಸಿತ್ತು. ಈ ಕರಾವಳಿಯಲ್ಲಿ ತಮ್ಮ ವ್ಯಾಪಾರ–ವ್ಯವಹಾರ ಮತ್ತು ವಾಣಿಜ್ಯಾತ್ಮಕ ಸಂಬಂಧಗಳನ್ನು ಭದ್ರ ಬುನಾದಿಯ ಮೇಲೆ ನೆಲೆ ನಿಲ್ಲಿಸಲು ತೀರ್ಮಾನಿಸಿತ್ತು. ಇಲ್ಲಿಯ ತೀರ ಮತ್ತು ಘಟ್ಟಪ್ರದೇಶವು ಕರಿಮೆಣಸು, ಏಲಕ್ಕಿ, ಲವಂಗ ಮತ್ತಿತ್ತರೆ ಸಾಂಬಾರ ಪದಾರ್ಥಗಳು ಶ್ರೀಗಂಧದ ಮರ ಇವೇ ಮೊದಲಾದ ವಾಣಿಜ್ಯದ ಬೆಳೆಗಳೂ ಅಕ್ಕಿಯಂತಹ ಆಹಾರದ ಬೆಳೆಗಳೂ ಸಮೃದ್ಧವಾಗಿ ಉತ್ಪಾದಿಸಲ್ಪಡುತ್ತಿದ್ದ ಭೂಪ್ರದೇಶವಾಗಿತ್ತು. ೧೭೬೧ರಲ್ಲಿ ಹೊನ್ನಾವರದಲ್ಲಿ ಇದ್ದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ರೆಸಿಡೆಂಟ್ ಜೋನ್ ಸ್ಟ್ರಾಚ್‌ರವರು ಬಿದನೂರಿನ ರಾಣಿಯೊಂದಿಗೆ ಒಂದು ಒಪ್ಪಂದವನ್ನು ಮಾಡಿ ಕರಿಮೆಣಸಿನ ವ್ಯಾಪಾರದ ಏಕಸ್ವಾಮ್ಯತೆಯನ್ನು ಬ್ರಿಟಿಷರು ಹೊಂದುವ ನಿಟ್ಟಿನಲ್ಲಿ ಸತತವಾಗಿ

ಪ್ರಯತ್ನಿಸಿದನು. ಆದರೆ ಈ ಪ್ರಯತ್ನ ನಿರೀಕ್ಷಿತ ಫಲವನ್ನು ನೀಡದೆ ಕೊನೆಗೆ ರಾಣಿಯ ಅನುಮತಿಯಿಲ್ಲದೆ ಹಿಂತಿರುಗಿ ಬಂದನು (ಷೇಕ್ ಆಲಿ ೧೯೬೩:೩೪). ೧೭೬೩ರಲ್ಲಿ ಜನವರಿಯಲ್ಲಿ ಬಿದನೂರನ್ನು ಹೈದರಾಲಿಯು ವಶಪಡಿಸಿಕೊಂಡ ಮೇಲೆ ಹೊನ್ನಾವರಕ್ಕೂ ಬಂದನು. ಗೇರುಸೊಪ್ಪೆ ಅಥವಾ ಹೊನ್ನಾವರದ ಸಾಮಂತ ರಾಜರುಗಳು ಶರಣಾಗತರಾದರು. ಆ ಸಮಯದಲ್ಲಿ ಹೊನ್ನಾವರದಲ್ಲಿ ಇದ್ದ ಇಂಗ್ಲೀಷ್ ರೆಸಿಡೆಂಟ್ ಜೋನ್ ಸ್ಟ್ರಾಚ್ ಹೈದರಾಲಿಯ ಸೈನ್ಯದಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಇಂಗ್ಲೀಷರ ಕಡು ವೈರಿಗಳಾಗಿರುವ ಫ್ರೆಂಚರು ಸಾಕಷ್ಟು ಸಂಖ್ಯೆಯಲ್ಲಿ ಇರುವುದನ್ನು ಮನಗಂಡನು. ಆದುದರಿಂದ ಈ ಪ್ರಾಂತ್ಯದಲ್ಲಿ ಇಂಗ್ಲಿಷರಿಗೆ ವ್ಯಾಪಾರ ವ್ಯವಹಾರ ಮಾಡಲು ಅವಕಾಶ ದೊರೆಯಲಾರದೆಂದು ಅಂದಾಜಿಸಿ ಅಲ್ಲಿಂದ ಹಿಂತಿರುಗಿ ಹತ್ತಿರದ ಅಂಜುದೀವ್ ದ್ವೀಪಕ್ಕೆ ತೆರಳಿದನು. ಆದರೆ ಮಂಗಳೂರಿನಲ್ಲಿ ಹೈದರಾಲಿಯೊಂದಿಗೆ ಬ್ರಿಟಿಷರು ದ್ವಿಭಾಷಿಕರೊಡನೆ ನಡೆಸಿದ ಸಭೆಯಲ್ಲಿ ಒಂದು ಪ್ರಮುಖ ನಿರ್ಣಯಕ್ಕೆ ಷರತ್ತಿನ ಮೇಲೆ ಬರಲಾಯಿತು. ಆ ಷರತ್ತಿನ ಅಂಶಗಳು ಕೆಳಕಂಡಂತಿದೆ.

ಹೈದರಾಲಿಗೆ ಇಂಗ್ಲಿಷರು ೭೦೦೦ರಷ್ಟು ಬಂಧೂಕುಗಳನ್ನು ಒದಗಿಸಲು ಸಿದ್ಧರಿದ್ದಲ್ಲಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿಯೊಂದಿಗೆ ಕರಾವಳಿ ಕರ್ನಾಟಕ ಪ್ರಾಂತ್ಯದಲ್ಲಿ ಈ ಮೊದಲಿನ ರಾಜ ಪ್ರಭುತ್ವಗಳು ಮಾಡಿಕೊಂಡಿರುವ ಎಲ್ಲಾ ವ್ಯಾಪಾರ–ವ್ಯವಹಾರಗಳ ಒಪ್ಪಂದಗಳನ್ನು ಮುಂದುವರಿಸುವುದಾಗಿ ಭರವಸೆ ನೀಡಿದನು. ಹೈದರಾಲಿಯು ಘೋಷಿಸಿದ ಈ ವಾಣಿಜ್ಯಕ್ಕೆ ಸಂಬಂಧಿಸಿದ ಹೇಳಿಕೆಯಿಂದ ಹೊನ್ನಾವರದ ರೆಸಿಡೆಂಟ್ ಜೋನ್‌ಸ್ಟ್ರಾಚ್‌ನಲ್ಲಿ ಹೊಸ ಆಸೆ ಕುದುರಿಸಿತು. ಜೋನ್‌ಸ್ಟ್ರಾಚ್ ಮುಂದುವರಿದು ಕ್ರಮವಾಗಿ ಹೈದರಾಲಿಯನ್ನು ಭೇಟಿ ಮಾಡಲು ತೆರಳಿದಾಗ ಹೈದರಾಲಿಯು ಆತನನ್ನು ಗೌರವಯುತವಾಗಿ ಸ್ವೀಕರಿಸಿದನು. ಹೈದರಾಲಿಯು ಮತ್ತೆ ಈ ಮೊದಲಿನ ಷರತ್ತುಗಳನ್ನು ಪರಿಷ್ಕರಿಸಿ ಆತನಿಗೆ ಬ್ರಿಟಿಷರು ಸಣ್ಣಗಾತ್ರದ ಯುದ್ಧೋಪಕರಣಗಳನ್ನು ಒದಗಿಸುವುದಾದರೆ ಹೊನ್ನಾವರದಲ್ಲಿ ಕರಿಮೆಣಸಿನ ಏಕಸ್ವಾಮ್ಯದ ಹಕ್ಕನ್ನು ಇಂಗ್ಲಿಷರಿಗೆ ಪೂರ್ತಿ ನೀಡುವುದಾಗಿ ತಿಳಿಸಿದನು. ಇದಲ್ಲದೆ ಹೊನ್ನಾವರದಲ್ಲಿ ವ್ಯಾಪಾರದ ಮಳಿಗೆಯೊಂದನ್ನು ನಿರ್ಮಿಸಲು ಅವಕಾಶ ಕಲ್ಪಿಸಿ ಕೊಡುವುದಾಗಿಯೂ ಭರವಸೆ ನೀಡಿದನು. ಈ ಸಂದರ್ಭದಲ್ಲಿ ಜೋನ್‌ಸ್ಟ್ರಾಚನು ದೇಶೀಯ ರಾಜರುಗಳಿಗೆ ಯುದ್ಧೋಪಕರಣಗಳನ್ನು ಇಂಗ್ಲೀಷರು ನೀಡಿರುವ ದಾಖಲೆಗಳು ಇಲ್ಲ ಎಂದು ಹೈದರಾಲಿಗೆ ತಿಳಿಸುತ್ತಾ, ಆದರೂ ಸಹ ಮುಂಬಯಿ ಪ್ರೆಸಿಡೆನ್ಸಿ ಸರಕಾರಕ್ಕೆ ಪತ್ರ ಬರೆದು ಹೈದರಾಲಿಯ ಬೇಡಿಕೆಯನ್ನು ಪರಿಗಣಿಸಲು ಒತ್ತಾಯಿಸುವುದಾಗಿ ಹೇಳಿದನು. ಜೋನ್‌ಸ್ಟ್ರಾಚ್‌ನು ಮುಂಬಯಿ ಪ್ರೆಸಿಡೆನ್ಸಿಗೆ ಬರೆದ ಪತ್ರದಲ್ಲಿ ಹೈದರಾಲಿಯ ಬೇಡಿಕೆಯನ್ನು ಪರಿಗಣಿಸಬೇಕೆಂದೂ ಇದರಿಂದ ಇಂಗ್ಲೀಷರಿಗೆ ವಾಣಿಜ್ಯಾತ್ಮಕವಾಗಿ ಬಹಳಷ್ಟು ಪ್ರಯೋಜನ ಲಭಿಸಲಿದೆ ಎಂದೂ ಬರೆದನು. ಆತನ ಪತ್ರದಲ್ಲಿ ಮುಂದುವರಿದು, ಹೈದರಾಲಿಯ ಸೈನ್ಯದಲ್ಲಿ ಫ್ರೆಂಚ್ ಸೈನಿಕರು ಸಾಕಷ್ಟು ಸಂಖ್ಯೆಯಲ್ಲಿ ಇದ್ದಾರೆ ಎಂದೂ, ಭವಿಷ್ಯದಲ್ಲಿ ಅದು ಇನ್ನೂ ಹೆಚ್ಚಾಗಬಹುದೆಂದೂ ತಿಳಿಸಿದನು. ಇದೇ ಸಮಯದಲ್ಲಿ ಸ್ವತಃ ಹೈದರಾಲಿಯು ಮುಂಬಯಿ ಪ್ರೆಸಿಡೆನ್ಸಿ ಸರಕಾರಕ್ಕೆ ಪತ್ರ ಬರೆದು ೩೦೦೦ದಿಂದ ೪೦೦೦ದಷ್ಟು ಬಂಧೂಕುಗಳನ್ನು ಸರಬರಾಜು ಮಾಡಬೇಕೆಂದು ವಿನಂತಿ ಮಾಡಿದನು. ಆದರೆ ಮುಂಬಯಿ ಪ್ರೆಸಿಡೆನ್ಸಿ ಸರಕಾರದ ಆಡಳಿತ ಬೋರ್ಡು ೫೦೦ ಬಂಧೂಕುಗಳನ್ನು ಮಾತ್ರ ನೀಡಲು ಅನುಮತಿ ಕೊಟ್ಟಿತ್ತು (ಷೇಕ್ ಆಲಿ ೧೯೬೩:೩೪). ಈ ಬಗ್ಗೆ

ಬೋರ್ಡ್ ನೀಡಿದ ವಿವರಣೆಯು ಕೆಳಕಂಡಂತೆ ಇದೆ. ವಿಶೇಷವಾಗಿ ಒಂದು ವೇಳೆ ನಾವು ಹೈದರಾಲಿ ಇಂಗ್ಲೀಷರ ಪರವಾಗಿರುವ ಗೆಳೆತನದ ಮನೋಭಾವವನ್ನು ಉಪೇಕ್ಷಿಸಿದ್ದೇ ಆದಲ್ಲಿ ಆತನನ್ನು ಬಹುಶಃ ನಾವೇ ಈ ತನಕ ಗುರುತಿಸಿಕೊಂಡಿರುವ ಫ್ರೆಂಚರೊಂದಿಗೆ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಳ್ಳುವಂತೆ ಪ್ರೇರೇಪಿಸಿದಂತಾಗುತ್ತದೆ. ಈಗಾಗಲೇ ಕೆನರಾದ ಎಲ್ಲಾ ಪ್ರಾಂತ್ಯಗಳನ್ನು ಜಯಿಸಿಕೊಂಡ ಹೈದರಾಲಿಯು ಸಾರ್ವಭೌಮನಾಗಿದ್ದಾನೆ ಎಂದು ಬೋರ್ಡ್ ಮರು ಉತ್ತರಿಸುತ್ತದೆ. ಮುಂದುವರಿದು, ಬ್ರಿಟಿಷ್ ಕೋರ್ಟು ದೇಶೀಯ ರಾಜರುಗಳಿಗೆ ಶಸ್ತ್ರಾಸ್ತ್ರ ರೂಪದಲ್ಲಿ ಯಾವುದೇ ಸಹಾಯ ಹಾಗೂ ಮಾರಾಟ ಮಾಡುವುದನ್ನು ನಿಷೇಧಿಸಿದೆಯಾದರೂ, ಹೈದರಾಲಿಗೆ ಸ್ವಲ್ಪ ರಿಯಾಯಿತಿ ನೀಡುವ ಬಗ್ಗೆ ತನ್ನ ಪೂರ್ವ ನಿಗದಿತ ಧೋರಣೆಗೆ ಸ್ವಲ್ಪ ಸಡಿಲಿಕೆ ಮಾಡಿ ತಾತ್ವಿಕ ರೂಪ ನೀಡಿತ್ತು. ಈ ಬಗ್ಗೆ ನೀಡಿದ ಸ್ಪಷ್ಟೀಕರಣದಲ್ಲಿ, "ಹೈದರಾಲಿಯು ತಾನು ನೀಡುವ ವ್ಯಾಪಾರದ ಏಕಸ್ವಾಮ್ಯತೆಗೆ ಪ್ರತಿಫಲವನ್ನು ಬಯಸಿಯೇ ಬಯಸುತ್ತಾನೆ. ಅದು ಸಹಜ ನ್ಯಾಯವಾಗಿದೆ. ಈ ದೃಷ್ಟಿಯಿಂದ ಆತನಿಗೆ ಕರಿಮೆಣಸಿಗೆ ಪರ್ಯಾಯವಾಗಿ ಶಸ್ತ್ರಾಸ್ತ್ರಗಳ ಸರಬರಾಜು ಅನಿವಾರ್ಯ. ಇದನ್ನು ನಾವು ನೀಡದಿದ್ದಲ್ಲಿ ಆತ ತನ್ನ ಎಲ್ಲಾ ಶಕ್ತಿ ಸಾಮರ್ಥ್ಯ ಉಪಯೋಗಿಸಿ ನಮ್ಮನ್ನು ವಿರೋಧಿಸುತ್ತಾನೆ. ಅಷ್ಟು ಮಾತ್ರವಲ್ಲದೆ ಆತ ತನಗೆ ಬೇಕಾದ ಸರಬರಾಜುಗಳನ್ನು ಪೋರ್ಚುಗೀಸರಿಂದಲೋ, ಫ್ರೆಂಚರಿಂದಲೋ, ಡಚ್ಚರಿಂದಲೋ, ಡೇನ್ಸ್‌ರಿಂದಲೋ ಪಡೆಯುತ್ತಾನೆ. ಇದು ನಮ್ಮನ್ನು ಅಪಾಯದ ಇಕ್ಕಟ್ಟಿಗೆ ಸಿಲುಕಿಸುತ್ತದೆ. ಇಂತಹ ಸಂದಿಗ್ಧಮಯ ಸನ್ನಿವೇಶದಲ್ಲಿ ಯಾವುದೇ ಪೂರ್ವಗ್ರಹಗಳು ಇದ್ದರೂ ಅದನ್ನು ಬದಿಗೊತ್ತಿ ಹೈದರಾಲಿಯೊಂದಿಗೆ ಮಿತ್ರತ್ವ ಹೆಚ್ಚು ಅವಶ್ಯಕ" ಎಂದು ಮುಂಬಯಿ ಆಡಳಿತ ತೀರ್ಮಾನಿಸಿತು[೬].

ಹೈದರಾಲಿಯು ವ್ಯಾಪಾರವನ್ನು ತನ್ನ ಸಾಮ್ರಾಜ್ಯದ ಸಂರಕ್ಷಣೆಗಾಗಿ ಉಪಯೋಗಿಸುತ್ತಿದ್ದ ಧೋರಣೆಯನ್ನು ಮತ್ತಷ್ಟು ಪೂರ್ಣ ಪ್ರಮಾಣದಲ್ಲಿ ಜಾರಿಗೊಳಿಸಿದನು. ಹೈದರಾಲಿಯು ಎಲ್ಲಾ ಭಾಗಗಳಿಂದಲೂ ಅಪಾಯವನ್ನು ಎದುರಿಸುತ್ತಿದ್ದನು. ಆದುದರಿಂದ ಅಪಾರ ಪ್ರಮಾಣದಲ್ಲಿ ಶಸ್ತ್ರಾಸ್ತ್ರಗಳ ಅಗತ್ಯವಿತ್ತು. ಅದನ್ನು ಪಡೆಯಲು ಬ್ರಿಟಿಷರಿಗೆ ಮನವಿಯನ್ನು ಸಲ್ಲಿಸಿ ಹೆಚ್ಚಿನ ಪ್ರಮಾಣದಲ್ಲಿ ಶಸ್ತ್ರಾಸ್ತ್ರವನ್ನು ಸರಬರಾಜು ಮಾಡಲು ವಿನಂತಿಸಿದನು. ಆಗ ಇಂಗ್ಲೀಷರು ಹೈದರಾಲಿಗೆ ಮತ್ತಷ್ಟು ಶಸ್ತ್ರಾಸ್ತ್ರಗಳನ್ನು ನೀಡಬೇಕಿದ್ದಲ್ಲಿ ಕೆಳಗಿನ ಮೂರು ಷರತ್ತುಗಳನ್ನು ಪಾಲಿಸಲು ಆಗ್ರಹಿಸಿದರು.

ಅ. ಆತನ ಪ್ರಾಂತ್ಯದಲ್ಲಿ ಕರಿಮೆಣಸು ಸಂಗ್ರಹಿಸಲು ಎಲ್ಲಾ ಸಹಾಯವನ್ನು ನೀಡಿ ಸಹಕರಿಸಬೇಕು.

ಆ. ಯುರೋಪಿನ ಉಣ್ಣೆ ಬಟ್ಟೆ ಮತ್ತಿತರ ವಸ್ತುಗಳನ್ನು ತನ್ನ ಪ್ರಾಂತ್ಯದಲ್ಲಿ ಮಾರಾಟ ಮಾಡಲು ಅನುಕೂಲ ಕಲ್ಪಿಸಬೇಕು.

ಇ. ಇಂಗ್ಲೀಷ್ ಕಂಪೆನಿಗೆ ಬಾಕಿ ಇರುವ ಸುಸ್ತಿಗಾರರಿಂದ ಸಾಲವನ್ನು ಮರುಪಾವತಿಸಲು ಸಹಕರಿಸುವುದು (ಷೇಕ್ ಆಲಿ ೧೯೬೩:೩೪).

ಈ ಮೇಲಿನ ಷರತ್ತುಗಳೊಂದಿಗೆ ಮುಂಬಯಿ ಪ್ರಾಂತೀಯ ಸರಕಾರವು ತನ್ನ ವ್ಯಾಪಾರದ ಪ್ರತಿನಿಧಿ 'ಸ್ಟ್ರೇಷಿ'ಗೆ ನಿರ್ದೇಶನ ನೀಡಿ, ಹೈದರಾಲಿಗೆ ಆತನ ಕೇಳಿಕೆಯ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುವ

ಮೊದಲು ಆತನಿಗೆ ಫ್ರೆಂಚರೊಂದಿಗೆ ಯಾವುದೇ ಅತ್ಯುತ್ತಮ ರಾಜಕೀಯ ಸಂಬಂಧಗಳು ಇಲ್ಲದಿರುವುದನ್ನು ಖಾತ್ರಿಪಡಿಸಬೇಕೆಂದು ಆದೇಶಿಸಿತ್ತು. ಹೈದರಾಲಿಯ ಧೋರಣೆಗಳು ಸದ್ಯದ ಪರಿಸ್ಥಿತಿಯಲ್ಲಿ ಕಂಪೆನಿಯ ಹಿತಾಸಕ್ತಿಗಳಿಗೆ ವಿರೋಧವಾಗಿದೆಯೇ ಎಂಬುದನ್ನು ಖಾತ್ರಿ ಪಡಿಸಬೇಕೆಂದು ಆದೇಶಿಸಿತ್ತು(ಷೇಕ್ ಆಲಿ ೧೯೬೩:೩೪).

ಇಂಗ್ಲೀಷ್ ಅಧಿಕಾರಿ ಸ್ಟ್ರೇಷಿಯು ಏಪ್ರಿಲ್ ೮ರಂದು ಹೊನ್ನಾವರಕ್ಕೆ ಬಂದನು. ಹೈದರಾಲಿಗೂ ಫ್ರೆಂಚರಿಗೂ ಪರಸ್ಪರ ವಿಶ್ವಾಸಾರ್ಹ ವ್ಯಾಪಾರಿ ಸಂಬಂಧಗಳು ಇಲ್ಲವೆಂಬುದನ್ನು ಮುಂಬಯಿ ಸರಕಾರಕ್ಕೆ ಪತ್ರದ ಮೂಲಕ ವಿವರಣೆ ನೀಡಿದನು. ಹೈದರಾಲಿಯು ಈ ಸಮಯದಲ್ಲಿ ಬಿದನೂರಿನಲ್ಲಿ ಇರುವುದನ್ನು ತಿಳಿದುಕೊಂಡ ರೆಸಿಡೆಂಟ್ ಸ್ಟ್ರೇಷಿಯು ಅಲ್ಲಿಗೆ ತಲುಪಿ ಹೈದರಾಲಿಯನ್ನು ಭೇಟಿ ಮಾಡಿ ಮುಂಬಯಿ ಪ್ರೆಸಿಡೆನ್ಸಿಯ ನಿರ್ಧಾರವನ್ನು ತಿಳಿಸಿದನು. ಇದರ ಅಂತಿಮ ಫಲಶ್ರುತಿಯಾಗಿ ೧೭೬೩ ರ ಮೇ ೨೭ರಂದು, ಒಂದು ವಾಣಿಜ್ಯೋದ್ಯಮ ಒಪ್ಪಂದಕ್ಕೆ ಸಹಿ ಹಾಕಿದನು. ಇದು 'FIRMAUNO' (ಫರ್ಮಾನೋ) ಎಂದು ಕರೆಯಲ್ಪಟ್ಟಿದೆ. ಆ ಪ್ರಕಾರ ಇಂಗ್ಲೀಷರ ಫ್ಯಾಕ್ಟರಿಯ ಅಸ್ತಿತ್ವಕ್ಕೆ ಸಂಬಂಧಿಸಿ ನಿರ್ದಿಷ್ಟ ಜಾಗಕ್ಕೆ ಬದ್ಧವಾಗಿರುವುದು. ಯಾರಾದರೂ ತಮ್ಮ ಸಾಲ ಪಾವತಿಸಲು ವಿಫಲರಾದಲ್ಲಿ ಇಂಗ್ಲೀಷ್ ಶಸ್ತ್ರಸಜ್ಜಿತ ಹಡಗುಗಳು ಹೈದರಾಲಿಯ ಬಂದರಿನಲ್ಲಿ ಸನ್ನದ್ಧರಾಗಿರುವುದು. ಎರಡೂ ಪಕ್ಷಗಳು ತಮ್ಮ ಸಮಾನ ಶಕ್ತಿಗಳ ವಿರುದ್ಧ ಪರಸ್ಪರ ಸಹಕಾರ ಮಾಡಲು ಒಪ್ಪಿದರು(ಷೇಕ್ ಆಲಿ ೧೯೬೩:೩೫).

ಹೈದರಾಲಿಯು ಬ್ರಿಟಿಷ್ ಮುಂಬಯಿ ಸರಕಾರದೊಂದಿಗೆ ಈ ರೀತಿಯ ನಿಖರ ಕೊಡುಕೊಳ್ಳುವಿಕೆಯ ಒಪ್ಪಂದಗಳಿಗೆ ಬದ್ದವಾಗಿರುವ ಮುಖ್ಯ ಉದ್ದೇಶ ಕೆಳಕಂಡಂತಿದೆ.

೧. ಇಂಗ್ಲೀಷರಿಗೆ ಕರಿಮೆಣಸಿನ ಏಕಸ್ವಾಮ್ಯವನ್ನು ನೀಡುವ ಮೂಲಕ ಹೈದರಾಲಿಯು ತನ್ನ ಯುದ್ಧಪರ ನೀತಿಗೆ ಅನುಕೂಲವಾಗುವಂತೆ, ಶಸ್ತ್ರಾಸ್ತ್ರಗಳನ್ನು, ಮದ್ದುಗುಂಡುಗಳನ್ನು ಹಾಗೂ ಮತ್ತಿತರ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುವುದು.

೨. ನೂತನವಾಗಿ ಕರಾವಳಿ ಕರ್ನಾಟಕದಲ್ಲಿ ನಿರ್ಮಿಸಲಾಗುತ್ತಿರುವ ಮರೈನ್ ಯಾರ್ಡಿನಲ್ಲಿ ಯುದ್ಧ ನೌಕೆಗಳ ನಿರ್ಮಾಣಕ್ಕಾಗಿ ಅಗತ್ಯವಾದ ತಂತ್ರಜ್ಞಾನ ಸಹಾಯ ಸಹಕಾರಗಳನ್ನು ಬ್ರಿಟಿಷರಿಂದ ಪಡೆಯುವುದು. ಏಕೆಂದರೆ ಹೈದರಾಲಿಗೆ ಮರಾಠರ ನಿರಂತರ ದಾಳಿಯಿಂದ ಚೇತರಿಸಿಕೊಂಡು ತನ್ನ ಪ್ರಾಂತ್ಯದ ಹಿತಾಸಕ್ತಿಯನ್ನು ಸಂರಕ್ಷಿಸಿಕೊಳ್ಳುವುದು ಹಾಗೂ ಅವರ ದಾಳಿಗೆ ಪ್ರತಿದಾಳಿ ರೂಪಿಸುವುದು ಅನಿವಾರ್ಯವಾಗಿತ್ತು. ಬ್ರಿಟಿಷರಿಗೂ ಈ ವಿಷಯ ತುರ್ತಿನ ಅವಶ್ಯಕತೆಯಾಗಿತ್ತು. ಅವರ ವ್ಯಾಪಾರ ನೀತಿಗೆ ಇದು ಅನಿವಾರ್ಯವಾಗಿತ್ತು. ಈ ಉದ್ದೇಶವನ್ನು ಈಡೇರಿಸಲು ಹೈದರಾಲಿಯ ನೌಕಾ ಸೈನ್ಯಕ್ಕೆ ಸಹಕಾರ ನೀಡುವ ಮೂಲಕ ಈಡೇರಿಸಬಹುದೆಂಬುದು ಬ್ರಿಟಿಷರ ಲೆಕ್ಕಾಚಾರವಾಗಿತ್ತು. ಈ ಹಿನ್ನೆಲೆಯಲ್ಲಿ ಹೈದರಾಲಿಯ ಒತ್ತಡಗಳೊಂದಿಗೆ ಸಹಮತಕ್ಕೆ ಬಂದ ಬ್ರಿಟಿಷರು ಒಪ್ಪಂದವನ್ನು ಮಾಡಲು ಮೃದು ಧೋರಣೆ ತಳೆದರು.

೩. ಮುಂಬಯಿ ಪ್ರೆಸಿಡೆನ್ಸಿಯೊಂದಿಗೆ ಮಾಡಲಾದ ಸಹಕಾರ ಮತ್ತು ಒಪ್ಪಂದದಿಂದ ಪರೋಕ್ಷವಾಗಿ ಆರ್ಕಾಟಿನ ನವಾಬನೊಂದಿಗೆ ಹೈದರಾಲಿಗೆ ಇದ್ದ ಭಿನ್ನಾಭಿಪ್ರಾಯಗಳನ್ನು ಸರಿಪಡಿಸಿಕೊಳ್ಳಲು ಸಹಕರಿಸಬಹುದೆಂಬ ನಂಬಿಕೆಯನ್ನು ಹೈದರಾಲಿ ಹೊಂದಿದ್ದನು (ಷೇಕ್ ಆಲಿ ೧೯೬೩:೩೫).

ಆದರೆ ಮುಂಬಯಿನ ಆಡಳಿತ ಬೋರ್ಡು ಅಥವಾ ಕೋರ್ಟ್ ಆಫ್ ಡೈರೆಕ್ಟರ್ಸ್ ಈ ಒಪ್ಪಂದದ ಬಗ್ಗೆ ದೃಢವಾದ ವಿರೋಧಾಭಿಪ್ರಾಯದ ಧೋರಣೆಯನ್ನು ಹೊಂದಿತ್ತು. ಹೈದರಾಲಿಯು 'ಮಿತ್ರ ಅಲ್ಲ' ಬದಲಾಗಿ ಶಕ್ತಿವಂತನಾದ 'ಪ್ರಬಲ ಶತ್ರು' ಎಂಬುದಾಗಿ ಅವರ ಅಂದಾಜು. ಇಂತಹ ಪ್ರಬಲ ಶತ್ರುವಿಗೆ ಆಧುನಿಕ ಶಸ್ತ್ರಾಸ್ತ್ರಗಳನ್ನು ನೀಡುವುದು ಎಷ್ಟರ ಮಟ್ಟಿಗೆ ಸರಿ ಎಂಬುದು ಅವರ ಪ್ರಶ್ನೆಯಾಗಿತ್ತು. ಆದರೆ ಪ್ರಾಯೋಗಿಕ ನೆಲೆಯಲ್ಲಿ ಮತ್ತು ವಾಣಿಜ್ಯ ಹಿತಾಸಕ್ತಿಯ ನೆಲೆಯಲ್ಲಿ ಮುಂಬಯಿ ಸರಕಾರವು ಹೈದರಾಲಿಯ ಬಗ್ಗೆ ಸರಿಯಾದ ಮೌಲ್ಯಮಾಪನ ಮಾಡಿದೆ. ಈ ಬಗ್ಗೆ ನೀಡಿದ ಕೆಳಗಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ.

> ನವಾಬನು ನಮ್ಮನ್ನು(ಇಂಗ್ಲೀಷರು) ಕರಾವಳಿ ಕರ್ನಾಟಕದಲ್ಲಿ ಕರಿಮೆಣಸನ್ನು ಪಡೆಯುವ ಏಕೈಕ ಏಕಸ್ವಾಮ್ಯದಾರರನ್ನಾಗಿ ಮುಂದುವರಿಸಬೇಕಾದರೆ ಹೈದರಾಲಿಯೊಂದಿಗೆ ಖಂಡಿತವಾಗಿಯೂ ಉತ್ತಮ ಬಾಂಧವ್ಯದೊಂದಿಗೆ ಇರಲು ಎಲ್ಲಾ ರೀತಿಯ ಏರ್ಪಾಟುಗಳನ್ನು ಮಾಡಲು ಸತತ ಪ್ರಯತ್ನ ಮಾಡಲೇಬೇಕು(ಷೇಕ್ ಆಲಿ ೧೯೬೩:೩೬).

ಮೇಲಿನ ಉಲ್ಲೇಖದ ಪ್ರಕಾರ ಮುಂಬಯಿ ಸರಕಾರದ ವಾಣಿಜ್ಯ ಹಿತಾಸಕ್ತಿ, ಕೋರ್ಟ್ ಆಫ್ ಡೈರೆಕ್ಟರ್ಸ್ ಮತ್ತು ಹೈದರಾಲಿಯ ವ್ಯಾಪಾರಿ ಮತ್ತು ಯುದ್ಧ ತಂತ್ರಗಳು ಒಂದೆಡೆಯಾದರೆ ಮತ್ತೊಂದೆಡೆಯಲ್ಲಿ ಮದ್ರಾಸ್ ಪ್ರೆಸಿಡೆನ್ಸಿ ಸರಕಾರ ಪರಸ್ಪರ ವಿರೋಧಾಭಿಪ್ರಾಯಗಳನ್ನು ಹೊಂದಿದ್ದ ಸಂಕ್ರಮಣ ಕಾಲಘಟ್ಟವಾಗಿದೆ. ಮದ್ರಾಸ್ ಪ್ರಾಂತೀಯ ಸರಕಾರದ ಹೈದರಾಲಿ ವಿರೋಧಿ ಮನೋಭಾವ ೧೭೬೩ ರಿಂದ ೧೭೬೮ ರವರೆಗೆ ಮುಂದುವರಿಯಿತು. ಈ ಅವಧಿಯಲ್ಲಿ ಮುಂಬಯಿಯಿಂದ ಸಾಕಷ್ಟು ಬಂಧೂಕುಗಳು ಹೈದರಾಲಿಯ ಬತ್ತಳಿಕೆಗೆ ಕರಿಮೆಣಸಿಗೆ ಪಾವತಿಯ ರೂಪದಲ್ಲಿ ಬಂದು ಸೇರಿತ್ತು. ೧೪೯೮ ರಿಂದ ೧೭೬೩ ರವರೆಗಿನ ಅವಧಿಯಲ್ಲಿ ಯುರೋಪಿಯನ್ ವ್ಯಾಪಾರದಲ್ಲಿ 'ಕರಿಮೆಣಸು' ಯುದ್ಧಕ್ಕೆ ಕಾರಣವಾಯಿತೇ ವಿನಾಃ ಅದುವೇ ಒಂದು ಯುದ್ಧೋಪಕರಣ ವಿಕ್ರಯದ ವಸ್ತುವಾಗಿ ಯುದ್ಧದಲ್ಲಿ ಬಳಕೆಯಾಗಲಿಲ್ಲ. ಆದುದರಿಂದ ಈ ಅವಧಿಯು ಹೈದರಾಲಿಯು ವಾಣಿಜ್ಯೋದ್ಯಮವನ್ನು ಸಮರ್ಪಕವಾಗಿ ಯುದ್ಧದಲ್ಲಿ ಬಳಸಿಕೊಂಡ ಚರಿತ್ರಾರ್ಹ ಕಾಲಾವಧಿಯಾಗಿದೆ. ಅಂದಿನ ಸಮಕಾಲೀನ ಭಾರತದಲ್ಲಿ ಈ ರೀತಿಯ ಸನ್ನಿವೇಶ ಬೇರೆ ಯಾವ ಭಾಗದಲ್ಲೂ ಉಪಯೋಗವಾಗಲಿಲ್ಲ. ಆದರೆ ಆಗಾಗ ಮುಂಬಯಿ ಪ್ರೆಸಿಡೆನ್ಸಿಯು ಹೈದರಾಲಿಗೆ ಶಸ್ತ್ರಾಸ್ತ್ರಗಳ ಪೂರೈಕೆಯಲ್ಲಿ ನಿರಂತರತೆಯನ್ನು ಕಾಯ್ದುಕೊಂಡು ಬರಲಿಲ್ಲ. ಆ ಸಂದರ್ಭದಲ್ಲಿ ಹೈದರಾಲಿಯು ತನ್ನ ಇಬ್ಬರು ವಕೀಲರುಗಳಾದ ಅಬ್ದುಲ್‌ಗನಿ ಮತ್ತು ಮಂಕಾಜಿಯವರುಗಳನ್ನು ಮುಂಬಯಿಗೆ ರಾಯಭಾರಿಯನ್ನಾಗಿ ಕಳುಹಿಸಿ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡಬೇಕೆಂದು ಆಗ್ರಹಿಸಿದನು. ಇದಕ್ಕೆ ಪ್ರತಿಯಾಗಿ ಕರಿಮೆಣಸಿನ ವಿಕ್ರಯದ ಪ್ರಮಾಣದ ಬಗ್ಗೆ ಚರ್ಚೆಯಾಯಿತು. ಪರಿಣಾಮವಾಗಿ ಬಂಧೂಕುಗಳನ್ನು ಮತ್ತು ಇತರೆ ಯುದ್ಧೋಪಕರಣಗಳನ್ನು ಹೈದರಾಲಿಗೆ ಕಳುಹಿಸಿಕೊಟ್ಟರು. ಹೈದರಾಲಿಯು ಕರಾವಳಿ ಕರ್ನಾಟಕ ಪ್ರಾಂತ್ಯದಲ್ಲಿ ಕರಿಮೆಣಸಿನ ಏಕಸ್ವಾಮ್ಯದ ಹಕ್ಕು ನೀಡಿದ್ದರೂ ಡಚ್ಚರು, ಫ್ರೆಂಚರು, ಹಾನ್ಸ್ ಮೊದಲಾದ ವ್ಯಾಪಾರಿ ದೇಶಗಳು ಅಲ್ಲದೆ ಖಾಸಗಿ ವ್ಯಾಪಾರಿ ವ್ಯಕ್ತಿಗಳು ವ್ಯಾಪಾರ ವ್ಯವಹಾರ ನಡೆಸುತ್ತಿದ್ದರು. ಹೈದರಾಲಿಯು ಇವರ ಬಗ್ಗೆ ಕಟ್ಟುನಿಟ್ಟಿನ ಕ್ರಮವನ್ನೇನೂ ವಹಿಸುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ಮುಂಬಯಿ ಪ್ರೆಸಿಡೆನ್ಸಿಯು ತನ್ನ ರೆಸಿಡೆಂಟ್ ಸ್ಟ್ರೇಷಿಯನ್ನು ಹೈದರಾಲಿಯ ಬಳಿಗೆ ಕಳುಹಿಸಿ ಈ ಬೆಳವಣಿಗೆಯ ಬಗ್ಗೆ ಚರ್ಚಿಸಿತು. ಈತನು ಮಂಡಿಸಿರುವ ಬೇಡಿಕೆಯ ಸಾರಾಂಶ ಕೆಳಕಂಡಂತಿದೆ

ಹೈದರಾಲಿಯು ಪ್ರಾಂತ್ಯದಲ್ಲಿ ಉತ್ಪಾದಿಸಲ್ಪಟ್ಟ ಪ್ರತಿಯೊಂದು ಕರಿಮೆಣಸಿನ ಕಾಳಿನಲ್ಲಿ ವಿಶೇಷವಾದ ಹಕ್ಕನ್ನು ಕಂಪೆನಿಗೆ ಖಾತ್ರಿ ಪಡಿಸುವುದು ಮಾತ್ರವಲ್ಲದೆ ವ್ಯಾಪಾರ ವ್ಯವಹಾರದಲ್ಲಿ ಭಾಗಿಯಾಗಿರುವ ಇತರೆ ಎಲ್ಲಾ ವಸ್ತುಗಳಲ್ಲಿ ಇಂಗ್ಲೀಷ್ ಈಸ್ಟ್ ಕಂಪೆನಿಗೆ ಪ್ರಥಮ ಆದ್ಯತೆಯನ್ನು ನೀಡುವುದು (ಷೇಕ್ ಆಲಿ ೧೯೬೩:೩೮).

ಹೈದರಾಲಿಯು ತನ್ನನ್ನು ಭೇಟಿಯಾದ ಸ್ಪ್ರೇಸಿಗೆ "ಯಾವುದೇ ರೀತಿಯಲ್ಲೂ ಕರಿಮೆಣಸಿನ ವಿಶೇಷಾಧಿಕಾರದ ಹಕ್ಕನ್ನು ಸೈನ್ಯದ ಮೂಲಕ ಜಾರಿಗೊಳಿಸಲು ಅಸಾಧ್ಯವಾಗಿದೆ. ಒಂದು ವೇಳೆ ಎರಡು ಅಥವಾ ಮೂರು ಲಕ್ಷ ರೂಪಾಯಿಗಳನ್ನು ಸೆಕ್ಯೂರಿಟಿ ಡಿಪಾಸಿಟ್ ಆಗಿ ಇಟ್ಟರೆ ಕರಾವಳಿ ಕರ್ನಾಟಕ ಪ್ರಾಂತ್ಯದ ಕರಿಮೆಣಸು ವ್ಯಾಪಾರದ ಏಕಸ್ವಾಮ್ಯದ ವಿಶೇಷಾಧಿಕಾರವನ್ನು ಜಾರಿಗೊಳಿಸಲಾಗುವುದು" ಎಂದು ಹೇಳಿದನು.

ಹೈದರಾಲಿಯ ಈ ಧೋರಣೆ ಗಂಭೀರ ಇಕ್ಕಟ್ಟಿನ ಪರಿಸ್ಥಿತಿಯನ್ನು ನಿರ್ಮಿಸಿತು. ಇದು ಈ ಮೊದಲಿನ ಒಪ್ಪಂದದ ಆಶಯಕ್ಕೆ ಪ್ರತಿರೋಧವಾಗಿತ್ತು. ಸ್ಪ್ರೇಸಿಯು ಮುಂಬಯಿ ಸರಕಾರಕ್ಕೆ ವರದಿಯನ್ನು ಪತ್ರ ಮುಖೇನ ಸಲ್ಲಿಸುತ್ತಾ, ಹೈದರಾಲಿಯ ಆರ್ಥಿಕ ಪರಿಸ್ಥಿತಿ ಶೋಚನೀಯವಾಗಿದೆ. ಮರಾಠರೊಂದಿಗಿನ ಯುದ್ಧದಲ್ಲಿ ಆತನ ಆರ್ಥಿಕ ಪರಿಸ್ಥಿತಿ ತಳಮಟ್ಟಕ್ಕೆ ಕುಸಿದಿದೆ ಎಂದು ವರದಿ ಮಾಡುತ್ತಾನೆ. ಆದರೂ ಸಹ ಇಂಗ್ಲೀಷರು ಕರಿಮೆಣಸಿಗೆ ಪರ್ಯಾಯವಾಗಿ ಯುದ್ಧೋಪಕರಣಗಳನ್ನು ಸರಬರಾಜು ಮಾಡುವುದನ್ನು ನಿಲ್ಲಿಸಲಿಲ್ಲ. ಏಕೆಂದರೆ ಇದರಲ್ಲಿ ಮತ್ತೆ ಪ್ರಬಲವಾದ ವಾಣಿಜ್ಯ ಹಿತಾಸಕ್ತಿಯೇ ಮೇಲುಗೈ ಪಡೆಯಿತು. ನಿರಂತರವಾಗಿ ಮರಾಠರು ದಾಳಿ ನಡೆಸುತ್ತಿದ್ದು ಒಂದು ವೇಳೆ ಆಧುನಿಕ ಯುದ್ಧೋಪಕರಣಗಳ ಬೆಂಬಲ ಇಲ್ಲದೇ ಹೋದಲ್ಲಿ ಮರಾಠರು ಜಯಿಸುತ್ತಾರೆ ಎಂಬುದು ಇಂಗ್ಲೀಷರ ಲೆಕ್ಕಾಚಾರ. ಮರಾಠರು ಜಯಿಸಿದ್ದಲ್ಲಿ ಕರಾವಳಿ ಕರ್ನಾಟಕದಲ್ಲಿ ಕರಿಮೆಣಸು ಮತ್ತು ಇತರೆ ಆಹಾರ ಧಾನ್ಯಗಳ ಮೇಲೆ ಮರಾಠರು ಪ್ರಾಬಲ್ಯ ಸಾಧಿಸುತ್ತಾರೆ. ಇದರಿಂದ ಬ್ರಿಟಿಷರ ಹಿತಾಸಕ್ತಿಗೆ ತೀವ್ರ ಧಕ್ಕೆ ಒದಗುತ್ತದೆ. ಮಾತ್ರವಲ್ಲದೆ ಮರಾಠರು ತಮ್ಮ ಪ್ರಾಬಲ್ಯವನ್ನು ಮೆರೆದಲ್ಲಿ ಅಕ್ಕಿಯ ಕಣಜ ಕೆನರಾ ಪ್ರಾಂತ್ಯದಿಂದ ಮುಂಬಯಿಗೆ ಅಕ್ಕಿಯ ಸರಬರಾಜು ನಿಲ್ಲುತ್ತದೆ. ಮುಂಬಯಿಯಲ್ಲಿ ಆಹಾರದ ಅಭಾವವೂ ನಿರ್ಮಾಣವಾಗುತ್ತದೆ. ಆದುದರಿಂದ ಬಹುಮುಖ ಸ್ತರದಲ್ಲಿ ದುಷ್ಪರಿಣಾಮ ಬೀರುವುದರಿಂದ ಹೈದರಾಲಿಯೊಂದಿಗೆ ಅನಿವಾರ್ಯ ಪರಿಸ್ಥಿತಿಯಲ್ಲಿ ಯುದ್ಧೋಪಕರಣಗಳನ್ನು ಸರಬರಾಜು ಮುಂದುವರಿಸಿ ಶಾಂತಿಯುತ ಸನ್ನಿವೇಶವನ್ನು ನಿರ್ಮಾಣ ಮಾಡುವುದೇ ಸೂಕ್ತವೆಂದು ಬ್ರಿಟಿಷರು ನಿರ್ಧರಿಸಿದರು.

ಕರಿಮೆಣಸಿಗೆ ಪ್ರತಿಯಾಗಿ ಮದ್ದುಗುಂಡುಗಳನ್ನು ಮಾತ್ರ ಬಯಸುತ್ತಿದ್ದ ಹೈದರಾಲಿಗೆ, ಅದನ್ನು ಒದಗಿಸಲು ತೀವ್ರ ವಿರೋಧವನ್ನು ಹೊಂದಿದ್ದ ಮುಂಬಯಿ ಪ್ರೆಸಿಡೆನ್ಸಿಯು ಒಂದು ಆಶ್ಚರ್ಯಕರವಾದ ನಿರ್ಧಾರದಲ್ಲಿ ಹೈದರಾಲಿ ಮನವಿ ಮಾಡದಿದ್ದರೂ ಒಂದು ಚಿಕ್ಕ ಸೈನ್ಯದ ತುಕಡಿಯನ್ನು ಹೈದರಾಲಿಗೆ ಸಹಾಯ ಮಾಡಲು ಮುಂಬಯಿಯಿಂದ ಕಳುಹಿಸಿ ಕೊಟ್ಟಿತ್ತು. ಆ ಸೈನ್ಯದ ತುಕಡಿ ಹೊನ್ನಾವರಕ್ಕೆ ಬಂದಿಳಿಯಿತು. ವಾಣಿಜ್ಯೋದ್ಯಮದ ಹಿತಾಸಕ್ತಿ ಎಂತಹ ಪ್ರಬಲ ನಿರ್ಧಾರಕ್ಕೆ ಕಾರಣವಾಗುತ್ತದೆಂಬುದಕ್ಕೆ ಇದು ಸ್ಪಷ್ಟ ನಿದರ್ಶನವಾಗಿದೆ.

೧೭೬೫ ರಲ್ಲಿ ತಲಶ್ಶೇರಿಯಲ್ಲಿ ಬ್ರಿಟಿಷ್ ತಲಶ್ಶೇರಿ ಫ್ಯಾಕ್ಟರಿಯ ಚೀಫ್ ರೆಸಿಡೆಂಟ್‌ರವರು ಮಲಬಾರ್ ಉತ್ತರ ಪ್ರಾಂತ್ಯದ ಸಾಮಂತ ರಾಜರೊಂದಿಗೆ ಒಂದು ಒಪ್ಪಂದ ಮಾಡಿಕೊಂಡರು. ಆ ಒಪ್ಪಂದದ ಪ್ರಕಾರ ಈ ಭಾಗದ ಎಲ್ಲಾ ಸಾಮಂತ ರಾಜರುಗಳು ಬ್ರಿಟಿಷರಿಗೆ ನೀಡಿರುವ ವಾಣಿಜ್ಯದ ಎಲ್ಲಾ ವಿಶೇಷ ಅಧಿಕಾರ ಮತ್ತು ಸವಲತ್ತುಗಳನ್ನು ಹೆಚ್ಚಿನ ಮಹತ್ವಕೊಟ್ಟು ಜಾರಿಗೊಳಿಸಬೇಕೆಂದು ಒಪ್ಪಲಾಯಿತು. ಈ ಪ್ರಕ್ರಿಯೆಯಲ್ಲಿ 'ವಿಲಿಯಂ ಟೌನ್‌ಸೆಂಡ್' ಮತ್ತು 'ರಾಬರ್ಟ್ ಸ್ಪೇಕ್ಸ್' ಇಂಗ್ಲೀಷರ ಪರವಾಗಿ ಒಪ್ಪಂದಕ್ಕೆ ಸಹಿ ಹಾಕಿದರು. ಆದರೆ ಹೈದರಾಲಿಯು ಈ ಒಪ್ಪಂದವನ್ನು ವಿರೋಧಿಸಿ ಅಸಮಾಧಾನ ವ್ಯಕ್ತಪಡಿಸಿದನು. ಮುಂಬಯಿ ಪ್ರೆಸಿಡೆನ್ಸಿ ಸರಕಾರವು ಹೈದರಾಲಿಯೊಂದಿಗೆ ವಿರೋಧಿ ಮನೋಭಾವ ಮುಂದುವರಿಸದಿರಲು ತೀರ್ಮಾನಿಸಿತ್ತು. ಮಾತ್ರವಲ್ಲದೆ ಹೈದರಾಲಿಗೆ ಸಂಬಂಧಿಸಿದ ಹಡಗನ್ನು ಇಂಗ್ಲೀಷರ ಡಾಕ್‌ಯಾರ್ಡ್‌ನಲ್ಲಿ ರಿಪೇರಿ ಮಾಡಲು ಕೂಡಾ ಒಪ್ಪಿಕೊಂಡಿತ್ತು. ಈ ಎಲ್ಲಾ ಬೆಳವಣಿಗೆಗಳ ಹಿನ್ನೆಲ್ಲೆಯಲ್ಲಿ ಹೈದರಾಲಿಯು ಇಂಗ್ಲೀಷರೊಂದಿಗೆ ಒಂದು ಹೊಸ ವಾಣಿಜ್ಯ ಒಪ್ಪಂದವನ್ನು ಮಾಡಲು ನಿರ್ಧರಿಸಿದನು. ಅದಕ್ಕಾಗಿ ಮುಂಬಯಿಯಿಂದ ವಾಣಿಜ್ಯ ಪ್ರತಿನಿಧಿಗಳನ್ನು ಕೂಡಾ ಆಮಂತ್ರಿಸಿದನು. ಈ ಚರ್ಚೆಯಲ್ಲಿ ಆತನ ಮುಖ್ಯ ಬೇಡಿಕೆಯೆಂದರೆ ತಕ್ಷಣ ೩೦೦೦ ದಿಂದ ೪೦೦೦ ದಷ್ಟು ಬ್ರಿಟಿಷ್ ಬಂಧೂಕುಗಳನ್ನು ಸರಬರಾಜು ಮಾಡಲು ಆಗ್ರಹಿಸಿದನು. ಹೈದರಾಲಿ ಮತ್ತು ಬ್ರಿಟಿಷರು ಪರಸ್ಪರ ರಕ್ಷಣಾತ್ಮಕ ಒಪ್ಪಂದಗಳನ್ನು ಮಾಡುವುದು ಎಂಬುದು ಎರಡನೇ ಪ್ರಮುಖ ಬೇಡಿಕೆಯಾಗಿತ್ತು. ಈ ಒಪ್ಪಂದ ಆದ ಮೇಲೆ ಪ್ರಥಮ ಒಪ್ಪಂದದ ವಿಧಿ XIIನ್ನು ಬದಲಿಸಿದನು.

ಮೇಲಿನ ಒಪ್ಪಂದಗಳನ್ವಯ ಹೊಸದಾಗಿ ಹೈದರಾಲಿಯು ತನ್ನ ಹಡಗುಗಳನ್ನು ಇಂಗ್ಲೀಷರ ಡಾಕ್ ಯಾರ್ಡಿನಲ್ಲಿ ರಿಪೇರಿ ಮಾಡಲು ಯಶಸ್ವಿಯಾಗುತ್ತಾನೆ. ಇಂಗ್ಲೀಷರು ಕೂಡ ವಾಣಿಜ್ಯೋದ್ಯಮದ ಅನಿವಾರ್ಯತೆಯ ಅಂಗವಾಗಿ ಇಂತಹ ಧೋರಣೆಗಳನ್ನು ಒಪ್ಪಬೇಕಾಯಿತು. ಈ ರೀತಿ ಸರಿಸುಮಾರು ಹೈದರಾಲಿಯ ಎಲ್ಲಾ ಪ್ರಮುಖ ಬೇಡಿಕೆಗಳನ್ನು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಒಪ್ಪುತ್ತದೆ. ಆದರೆ ಇದಕ್ಕೆ ಪ್ರತಿಯಾಗಿ ಹೈದರಾಲಿಗೆ ಕೆಲವೇ ಕೆಲವು ನಿರ್ಣಯಗಳನ್ನು ಬ್ರಿಟಿಷರ ಪರವಾಗಿ ಜಾರಿಗೊಳಿಸುತ್ತಾನೆ. ಇಂಗ್ಲೀಷರ ಹೊರತುಪಡಿಸಿ ಇತರೆ ದೇಶಗಳ ವ್ಯಾಪಾರಿ ಕಂಪೆನಿಗಳನ್ನು ಹಾಗೂ ಅವರ ವ್ಯಾಪಾರ ವ್ಯವಹಾರಗಳನ್ನು ತಡೆಯೊಡ್ಡಲು ನಿರಾಕರಿಸುತ್ತಾನೆ. ಏಕಸ್ವಾಮ್ಯವನ್ನು ಜಾರಿಗೊಳಿಸಲು ಸೈನಿಕ ಕಾರ್ಯಾಚರಣೆ ನಡೆಸಲು ಕೂಡಾ ನಿರಾಕರಿಸುತ್ತಾನೆ. ಒಂದು ವೇಳೆ ವ್ಯಾಪಾರಿ ಏಕಸ್ವಾಮ್ಯವನ್ನು ಜಾರಿಗೊಳಿಸಬೇಕಾದರೆ ಸೆಕ್ಯೂರಿಟಿ ಡಿಪಾಸಿಟ್ ಇಡಬೇಕೆಂಬ ಬೇಡಿಕೆ ಇಡುತ್ತಾನೆ.[೭] ಈ ರೀತಿಯ ಬೇಡಿಕೆಯಿಡುವ ಸಂದರ್ಭದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಆರ್ಥಿಕ ಸಮಸ್ಯೆಯಿಂದ ನಲುಗುತ್ತಿದ್ದ ವಿಷಯ ಹೈದರಾಲಿಗೆ ಸ್ಪಷ್ಟವಾಗಿ ತಿಳಿದಿತ್ತು. ಈ ರೀತಿ ಹೈದರಾಲಿಯು ನಿರ್ಣಾಯಕವಾದ ರಾಜಕೀಯ ಉದ್ದೇಶ ಈಡೇರಿಸಿಕೊಳ್ಳಲು ವ್ಯಾಪಾರ ಮತ್ತು ವಾಣಿಜ್ಯೋದ್ಯಮವನ್ನು ಸಮರ್ಪಕವಾಗಿ ಉಪಯೋಗಿಸುತ್ತಾನೆ.

**ಹೈದರಾಲಿ– ಈಸ್ಟ್ ಇಂಡಿಯಾ ಕಂಪೆನಿಯ ರಾಜಕೀಯ ಮತ್ತು ವಾಣಿಜ್ಯ ಅನಿವಾರ್ಯತೆ**

ಹೈದರಾಲಿಯು ಒಂದೆಡೆ ಮರಾಠರ ದಾಳಿ ಎದುರಿಸಬೇಕಾಯಿತು. ಮತ್ತೊಂದೆಡೆಯಲ್ಲಿ ಮಲಬಾರ್ ಪ್ರಾಂತ್ಯದ ಸಾಮಂತರಾಜರುಗಳನ್ನು ತಲಶ್ಶೇರಿಯಲ್ಲಿ ಬ್ರಿಟಿಷರು ಅಣಿ ನೆರೆಸಿದ್ದು ಮದ್ರಾಸ್ ಪ್ರೆಸಿಡೆನ್ಸಿಯ

ಹೈದರಾಲಿ ವಿರೋಧಿ ಮನೋಭಾವದ ಪರಿಣಾಮವಾಗಿದೆ. ಈ ರೀತಿಯಲ್ಲಿ ಬೆಳೆದು ಬಂದ, ಪಶ್ಚಿಮ ಕರಾವಳಿಯ ಬೆಳವಣಿಗೆಗಳಿಂದ ಹೈದರಾಲಿಯು ತೀವ್ರ ಆತಂಕಕ್ಕೆ ಒಳಗಾಗಿದ್ದನು. ಇಂಗ್ಲೀಷರು ಬಿದನೂರಿನ ಮೇಲೆ ದಾಳಿ ನಡೆಸಿ ಅದನ್ನು ವಶಪಡಿಸಿಕೊಳ್ಳಲು ಅಪೇಕ್ಷಿಸಿದ್ದರು. ಏಕೆಂದರೆ ಈ ಪ್ರಾಂತ್ಯ ವಾಣಿಜ್ಯಾತ್ಮಕವಾಗಿ ಸಮೃದ್ಧವಾಗಿ ವಸ್ತುಗಳನ್ನು ಉತ್ಪಾದಿಸುತ್ತಿದ್ದ ಪ್ರಾಂತ್ಯವಾಗಿತ್ತು. ಈ ಪ್ರಾಂತ್ಯದಲ್ಲಿ ತಮ್ಮ ಸ್ವತಂತ್ರ ಆಳ್ವಿಕೆಯನ್ನು ಹೇರಲು ಅವರು ಅಪೇಕ್ಷಿಸಿದ್ದರು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಹೈದರಾಲಿಯು ೧೭೬೬ ರಲ್ಲಿ ಮುಂಬಯಿಯ ಗವರ್ನರ್ ಜನರಲ್ ಮಾರ್ಕ್ ಆ್ಯಂಟೋನಿ ಕ್ರೋಮ್‌ಲಿನ್‌ರವರಿಗೆ ಬರೆದ ಪತ್ರದಲ್ಲಿ ಈ ಕೆಳಕಂಡ ಅಂಶಗಳು ಉಲ್ಲೇಖನೀಯವಾಗಿದೆ.

> ನಾನು ಮಲಬಾರ್ ಪ್ರಾಂತ್ಯವನ್ನು ಆಕ್ರಮಿಸಿಕೊಳ್ಳಲು ಆದ್ಯತೆಯನ್ನು ನೀಡಿದ್ದೇನೆ. ಏಕೆಂದರೆ ಇದರಿಂದಾಗಿ ಗೌರವಾನ್ವಿತ ಕಂಪೆನಿಗೆ ಇಲ್ಲಿಂದ ಸಾಕಷ್ಟು ಸಂಖ್ಯೆಯಲ್ಲಿ ಕರಿಮೆಣಸು ಮತ್ತು ಗಂಧದ ಮರ ಸರಬರಾಜು ಮಾಡಲು ಸಾಧ್ಯವಾಗುತ್ತದೆ. ಆದುದರಿಂದ ದಿನೇ ದಿನೇ ನಮ್ಮ ಮಧ್ಯೆ ಗೆಳೆತನ ಜಾಸ್ತಿಯಾಗುತ್ತಿದೆ ಮತ್ತು ಸುಭದ್ರವಾಗಿ ಸಂರಕ್ಷಿಸಲ್ಪಡುತ್ತದೆ (ವೆನ್ ೧೯೪೫:೧೪).

ಕ್ರೋಮ್‌ಲಿನ್‌ರವರ ಪತ್ರದ ಮೂಲತತ್ತ್ವ ಮದ್ರಾಸ್ ಪ್ರೆಸಿಡೆನ್ಸಿ ಮಲಬಾರ್ ಪ್ರಾಂತ್ಯದ ಸಾಮಂತರಾಜರುಗಳನ್ನು ಒಟ್ಟುಗೂಡಿಸಿ ಹೈದರಾಲಿಯನ್ನು ಎದುರಿಸಲು ತಯಾರಿ ನಡೆಸಿದಾಗ ಅದಕ್ಕೆ ಪ್ರತಿಯಾಗಿ ಬ್ರಿಟಿಷರಿಗೆ ಎಚ್ಚರಿಕೆಯ ಭಾಗವಾಗಿ ಈ ಪತ್ರವನ್ನು ಬರೆಯಲಾಗಿದೆ. ಈ ಪತ್ರದಲ್ಲಿ ಹೈದರಾಲಿಯು ತಂತ್ರಬದ್ಧವಾಗಿ ಬ್ರಿಟಿಷರಿಗೆ ವಾಣಿಜ್ಯಾತ್ಮಕ ಲಾಭವನ್ನು ದೊರಕಿಸಿಕೊಡುವ ಇರಾದೆಯನ್ನು ವ್ಯಕ್ತಪಡಿಸಿದ್ದಾನೆ.

ಹೈದರಾಲಿಗೆ ಯುರೋಪಿಯನ್‌ನ ಇತರ ರಾಷ್ಟ್ರಗಳು ವಿನಿಮಯ ರೂಪದಲ್ಲಿ ಯುದ್ಧೋಪಕರಣಗಳನ್ನು ಸರಬರಾಜು ಮಾಡಲು ಹಾತೊರೆಯುತ್ತಿದ್ದರು. ಈ ಅವಕಾಶಗಳನ್ನು ಕೂಡಾ ಹೈದರಾಲಿ ಉಪಯೋಗಿಸಿಕೊಂಡನು.

ಹೊನ್ನಾವರದಲ್ಲಿ ಇಂಗ್ಲೀಷರ ವಾಣಿಜ್ಯ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸ್ಟೇಮೆಂಟನ್ನು ಇಂಗ್ಲೀಷ್ ಸೇವೆಯನ್ನು ತೊರೆದು ಹೈದರಾಲಿಯ ಸೇವೆಗೆ ಸೇರಿಕೊಂಡನು. ಇದರಿಂದಾಗಿ ಬ್ರಿಟಿಷರಿಗೆ ಹೊನ್ನಾವರ, ಸೋಂದಾ, ಬಿದನೂರಿನ ಕರಿಮೆಣಸು ಮತ್ತು ಇತರೆ ಸಾಂಬಾರು ಪದಾರ್ಥಗಳ ವ್ಯಾಪಾರ ವ್ಯವಹಾರಕ್ಕೆ ಧಕ್ಕೆಯೊದಗಿತ್ತು (ವೆನ್ ೧೯೪೫:೧೫). ಈ ಅಧಿಕಾರಿಯಿಂದ ಹೈದರಾಲಿಗೆ ಬ್ರಿಟಿಷ್ ಸೈನಿಕ ಕಾರ್ಯಾಚರಣೆಯ ವಿಧಿ ವಿಧಾನಗಳು, ಮಾಹಿತಿಗಳು ಮೊದಲಾದ ಮಹತ್ವಪೂರ್ಣ ಅಂಶ ದೊರೆಯಿತು. ಅದೇ ರೀತಿಯಲ್ಲಿ ಮಂಗಳೂರಿನ ಬಂದರನ್ನು ದುರಸ್ತಿ ಪಡಿಸಲು, ರಸ್ತೆ ಸಂಪರ್ಕ ಸುಗಮಗೊಳಿಸಲು ವಿವಿಧ ರೀತಿಯ ಅತ್ಯಗತ್ಯ ಸಹಾಯ ಸಹಕಾರಗಳು ತಂತ್ರಜ್ಞಾನಗಳು ಈ ಅಧಿಕಾರಿಯಿಂದಾಗಿ ಹೈದರಾಲಿಗೆ ದೊರೆಯಿತು.

ಈ ಬೆಳವಣಿಗೆಗಳ ಮಧ್ಯೆ ಹೈದರಾಲಿ ಮತ್ತು ಮುಂಬಯಿ ಪ್ರಾಂತೀಯ ಸರಕಾರದ ಮಧ್ಯದ ಸಂಬಂಧಗಳು ಬಿಗುವಿನಿಂದ ಮುಂದುವರಿಯಿತು. ಹಡಗು ಧಕ್ಕೆಯಲ್ಲಿ ರಿಪೇರಿಯಾದ ಹೈದರಾಲಿಯ ಹಡಗಿನ ಬಿಲ್ಲನ್ನು ಇಂಗ್ಲೀಷ್ ಅಧಿಕಾರಿ ಚಿಕನ್ ಡ್ಯಾಮ್‌ಗೆ ಪಾವತಿಸಲು ನಿರಾಕರಿಸಿದನು. ಇದರಿಂದಾಗಿ

ಯುದ್ಧ ಸ್ಫೋಟಿಸುವ ಹಂತ ನಿರ್ಮಾಣವಾಯಿತು. ಪರಿಣಾಮವಾಗಿ ಬ್ರಿಟಿಷರು ಹೈದರಾಲಿಗೆ ಮಾಡುತ್ತಿದ್ದ ಯುದ್ಧೋಪಕರಣಗಳ ಸರಬರಾಜು ನಿಲ್ಲಿಸಿದರು. ತನ್ಮೂಲಕ ಬ್ರಿಟಿಷರೊಂದಿಗಿನ ಗೆಳೆತನವೂ ಕಡಿದು ಹೋಯಿತು. ಆದರೆ ಬ್ರಿಟಿಷರೊಂದಿಗೆ ವ್ಯಾಪಾರ ವ್ಯವಹಾರಗಳಲ್ಲಿ ಬಳಸಲ್ಪಡುತ್ತಿದ್ದ ಅಕ್ಕಿ ವ್ಯತ್ಯಸ್ಥ ಪರಿಸ್ಥಿತಿಯಲ್ಲಿ ಇತರ ಯುರೋಪಿಯನ್ ದೇಶಗಳು ಖರೀದಿಸಿ ಸಂದಿಗ್ಧ ಪರಿಸ್ಥಿತಿಯನ್ನು ಸಮದೂಗಿಸಿತು (ವೆನ್ ೧೯೪೫:೧೫). ಪರಸ್ಪರ ಬಿಗಡಾಯಿಸಿದ ಸಂದರ್ಭದಲ್ಲಿ ೧೭೬೮ ರ ಜನವರಿಯಲ್ಲಿ ಬ್ರಿಟಿಷರ ಒಂದು ಸೈನ್ಯದ ತುಕಡಿ ಹೊನ್ನಾವರದಲ್ಲಿ ಬಂದಿಳಿಯಿತು. ಮುಂದಿನ ತಿಂಗಳು ೧೭೬೮ ರ ಫೆಬ್ರವರಿ ೧೭ ರಂದು ಜನರಲ್ ವಾಟ್ಸನ್‌ನ ನೇತೃತ್ವದಲ್ಲಿ ಮುಂಬಯಿಯಿಂದ ಇನ್ನೊಂದು ತಂಡ ಮಂಗಳೂರಿಗೆ ಬಂತು. ಈ ತಂಡ ನೇರವಾಗಿ ಹೈದರಾಲಿಯ ರಕ್ಷಣಾ ತಂಡದ ಮೇಲೆ ಎರಗಿತು. ಮಂಗಳೂರಿನ ರಕ್ಷಣೆಗೆ ಅತೀ ದುರ್ಬಲ ಸೈನಿಕ ತುಕಡಿಯನ್ನು ಹೈದರಾಲಿ ನಿಯೋಜಿಸಿದ್ದರಿಂದ ಅವರು ಇಂಗ್ಲೀಷರನ್ನು ಪ್ರಬಲವಾಗಿ ಎದುರಿಸದೆ ಶರಣಾಗತರಾದರು. ಪ್ರಪ್ರಥಮ ಬಾರಿಗೆ ಮಂಗಳೂರು ಬ್ರಿಟಿಷರ ಕೈವಶವಾಯಿತು.

ಬ್ರಿಟಿಷರ ವಿಜಯವನ್ನು ದೇಶದಾದ್ಯಂತ ಅವರ ಪ್ರಮುಖ ಕೇಂದ್ರಗಳಲ್ಲಿ ತುಪಾಕಿ ಹಾರಿಸಿ ಸಂಭ್ರಮಿಸಲಾಯಿತು. ಮಂಗಳೂರು ಕೇಂದ್ರೀಕೃತ ವಾಣಿಜ್ಯೋದ್ಯಮವು ಅವರ ತೆಕ್ಕೆಗೆ ಬಂದಿರುವುದರಿಂದ ದೇಶದಾದ್ಯಂತ ವಿಜಯೋತ್ಸವ ಆಚರಿಸಿ ಸಂಭ್ರಮಿಸಿದರು. ಬ್ರಿಟಿಷರ ಈ ಕಾರ್ಯಾಚರಣೆಯಲ್ಲಿ ಪಾಲ್ಗೊಂಡ "ಇಂಡಿಯಾಮೆನ್" ಎಂಬ ಹಡಗಿನ ಕ್ಯಾಪ್ಟನ್‌ರವರ ಪ್ರಕಾರ,

> ಒಂದು ಅತ್ಯಂತ ಕ್ಷಿಪ್ರ ಮುಖಾಮುಖಿ ನಡೆಯಿತು. ಅವರು (ಹೈದರಾಲಿ ಸೈನಿಕರು) ದೇಶದ ಒಂದು ಬಲಿಷ್ಠ ಕೋಟೆಯನ್ನು ತ್ಯಜಿಸಿ ಪಲಾಯನಗೈದರು ಮತ್ತು ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಆಹಾರ ಸಂಗ್ರಹ ಮತ್ತು ಯುದ್ಧ ಸಾಮಾಗ್ರಿಗಳ ಸಂಗ್ರಹ ಬ್ರಿಟಿಷರ ಪಾಲಾಯಿತು(ವೆನ್ ೧೯೪೫:೧೯).

ಈ ಯುದ್ಧದಲ್ಲಿ ಭಾಗವಹಿಸಿದ ಓರ್ವ ಕಮಾಂಡರ್‌ರವರ ಹೇಳಿಕೆ ಪ್ರಕಾರ ಈ ಕಾರ್ಯಾಚರಣೆಯಲ್ಲಿ ವಶಪಡಿಸಿಕೊಂಡ ಒಂದು ದೊಡ್ಡ ಹಡಗು ಪೂರ್ತಿ ಅಡಿಕೆಯನ್ನು ಮುಂಬಯಿಗೆ ಕಳುಹಿಸಿಕೊಡಲಾಯಿತು.

ಮಂಗಳೂರನ್ನು ಬ್ರಿಟಿಷರು ಜಯಿಸಿದ ಘಟನೆ ಹೈದರಾಲಿಯ ಮನಸ್ಸಿನಲ್ಲಿ ಬದ್ಧ ವೈರ ಸೃಷ್ಟಿಯಾಯಿತು ಮತ್ತು ಅಷ್ಟೇ ಆಘಾತ ಕೂಡಾ ಆಯಿತು. ಕೆಲವು ವಾರಗಳ ತನಕ ಈ ಸೋಲಿನ ಆಘಾತದಿಂದ ಹೊರಬರಲು ಆತನಿಗೆ ಅಸಾಧ್ಯವಾಯಿತು. ಮಂಗಳೂರು ಹೈದರಾಲಿಯ ರಾಜಕೀಯ ಮತ್ತು ವಾಣಿಜ್ಯೋದ್ಯಮದಲ್ಲಿ ಆಯಕಟ್ಟಿನ ಸ್ಥಾನವನ್ನು ಹೊಂದಿತ್ತು ಎಂದು ಇದರಿಂದ ಅರ್ಥವಾಗುತ್ತದೆ. ಆದುದರಿಂದ ಹೈದರಾಲಿಯು ಮತ್ತೆ ಬಲವಾದ ಸೈನ್ಯದೊಂದಿಗೆ ಮಂಗಳೂರಿಗೆ ಬಂದು ಬ್ರಿಟಿಷರಿಂದ ಮಂಗಳೂರನ್ನು ಮರುವಶಕ್ಕೆ ತೆಗೆದುಕೊಂಡನು. ಈ ವಿಜಯದ ನಂತರ ಮತ್ತೆ ಮುಂಬಯಿ ಪ್ರೆಸಿಡೆನ್ಸಿಯೊಂದಿಗೆ ಮತ್ತೊಂದು ಸುತ್ತಿನ ಹೊಸ ವಾಣಿಜ್ಯ ಒಪ್ಪಂದದ ಪ್ರಸ್ತಾಪವನ್ನು ಮುಂದಿಟ್ಟನು. ಆ ಪ್ರಸ್ತಾಪದಲ್ಲಿ ಇಂಗ್ಲೀಷರಿಗೆ ಮಾರಲ್ಪಡುವ ಎಲ್ಲಾ ಕರಿಮೆಣಸು, ಗಂಧದ ಮರಗಳ ಮರುಪಾವತಿಯನ್ನು ಗನ್ ಮತ್ತು ಇತರೆ ಯುದ್ಧೋಪಕರಣಗಳು ಮದ್ದು ಗುಂಡುಗಳ ಮೂಲಕ ಮಾತ್ರವೇ ಪಾವತಿಸಬೇಕೆಂದು ಆಗ್ರಹಿಸಿದನು. ಈ ಬಗೆಗಿನ ಮಾತುಕತೆಗಳು ಹೊನ್ನಾವರದಲ್ಲಿ ನಡೆಯಿತು. ಈ ಪ್ರಸ್ತಾಪವನ್ನು ಬ್ರಿಟಿಷರು ತಿರಸ್ಕರಿಸಿದರು (ವೆನ್ ೧೯೪೫:೫೦).

ಇದೇ ಸಮಯದಲ್ಲಿ ಇಂಗ್ಲೀಷರು ಹೊನ್ನಾವರದಲ್ಲಿ ಹೊಂದಿದ್ದ ಕಾವಲು ಸೈನವನ್ನು ಯಾವುದೇ ಪೂರ್ವಭಾವಿ ಸೂಚನೆ ನೀಡದೆ ಬರ್ಖಾಸ್ತುಗೊಳಿಸಿ ಅಲ್ಲಿದ್ದ ಪರಿಕರಗಳನ್ನು ಮುಂಬಯಿಗೆ ಸಾಗಿಸಿದರು. ಈ ರಕ್ಷಣಾ ದಂಡು ಮಂಗಳೂರಿನಂತೆಯೇ ಅಸಂಘಟಿತವಾಗಿತ್ತು. ಶಿಸ್ತು ಬದ್ಧವಾಗಿರಲಿಲ್ಲ. ಹೊನ್ನಾವರದ ಫ್ಯಾಕ್ಟರ್ಸ್‌ರವರು ಬ್ರಿಟಿಷರ ವ್ಯಾಪಾರ–ವ್ಯವಹಾರದ ಬಗ್ಗೆ ಗಮನ ನೀಡದೆ ಆಗಾಗ ರಾಜಕೀಯ ಕಾರಣಗಳಿಗಾಗಿ ಶ್ರೀರಂಗ ಪಟ್ಟಣಕ್ಕೆ ಓಡಾಡುವುದೇ ಜಾಸ್ತಿಯಾಗಿತ್ತು. ಇದರಿಂದ 'ಕೊಳ್ಳುವ' ಮತ್ತು 'ಮಾರುವ' ಪ್ರಕ್ರಿಯೆ ನಿಂತು ಹೋಗಿತ್ತು (ವೆನ್ ೧೯೪೫:೫೦). ಕರಾವಳಿ ಕರ್ನಾಟಕದಲ್ಲಿ ಮೂರು ಶತಮಾನಗಳಿಂದ ಪ್ರಮುಖ ವ್ಯಾಪಾರ ಕೇಂದ್ರವಾಗಿ ಪೋರ್ಚುಗೀಸರಿಂದ ಪ್ರಾರಂಭಗೊಂಡು ೧೭೬೮ರವರೆಗೆ ನಿರ್ಣಾಯಕವಾಗಿ ಪಾತ್ರ ವಹಿಸಿದ ಹೊನ್ನಾವರದ ಮಳಿಗೆಯನ್ನು ಮುಚ್ಚಲಾಯಿತು.

ಬ್ರಿಟಿಷ್ ದಂಡನಾಯಕನಾಗಿ ಮಂಗಳೂರಿಗೆ ಬಂದಿದ್ದ ಜೇಮ್ಸ್ ಸೀಬಲ್ಡ್ ಹೈದರಾಲಿಯ ಪ್ರಸ್ತುತ ಸಂದರ್ಭವನ್ನು ಸರಿದೂಗಿಸಲು ಗಂಭೀರ ಪ್ರಯತ್ನ ಮಾಡಿದನು. ಆತ ಮುಂಬಯಿ ಪ್ರಾಂತೀಯ ಸರಕಾರಕ್ಕೆ ಮನವಿ ಪತ್ರ ಸಲ್ಲಿಸಿ, ಹೈದರಾಲಿಗೆ ಆತನು ಬಯಸುವ ಗನ್‌ಗಳನ್ನು ನೀಡಿ ವ್ಯಾಪಾರ–ವ್ಯವಹಾರಗಳನ್ನು ಸುಗಮಗೊಳಿಸಬೇಕೆಂದೂ ಒಂದು ವೇಳೆ ಆ ರೀತಿ ಸೂಕ್ತವಾಗಿ ನಿರ್ದೇಶನ ನೀಡದಿದ್ದಲ್ಲಿ ಮುಂಬರುವ ಕರಿಮೆಣಸಿನ ಫಸಲು ಇಂಗ್ಲೀಷರಿಗೆ ದಕ್ಕದೆ ಇತರೆ ಯುರೋಪಿಯನ್ ರಾಷ್ಟ್ರಗಳ ಪಾಲಾಗುವುದರಿಂದ ಬ್ರಿಟಿಷ್ ಕಂಪನಿ ಸರಕಾರಕ್ಕೆ ಬಹಳ ನಷ್ಟವಾಗಲಿದೆ ಎಂದು ವಿವರಿಸಿದನು (ವೆನ್ ೧೯೪೫:೫೧).

ಆದರೆ ರಾಜಕೀಯ ವಿರೋಧಿಗಳಿಗೆ ಶಸ್ತ್ರಾಸ್ತ್ರಗಳನ್ನು ಪೂರೈಸಬಾರದೆಂಬುದು ಬ್ರಿಟಿಷ್ ಕಂಪೆನಿ ಸರಕಾರದ ಧೋರಣೆಯಾಗಿದೆ ಎಂಬುದನ್ನು ತಿಳಿಸುವ ಪತ್ರಗಳು ಮುಂಬಯಿಯಿಂದ ರವಾನೆಯಾದವು. ಈ ಪತ್ರದಲ್ಲಿ ಮತ್ತೂ ಕೆಲವು ಅಂಶಗಳನ್ನು ಉಲ್ಲೇಖಿಸಲಾಗಿತ್ತು. "ಈಗಾಗಲೇ ಒಂದು ಹಡಗಿನಲ್ಲಿ ಹೈದರಾಲಿಗೆ ಹಿತ್ತಾಳೆಯ ನಳಿಕೆಯ ೪೦೦೦ ಗ್ರೇನೇಡ್‌ಗಳನ್ನು ನೀಡಿರುವುದನ್ನು ನಮೂದಿಸಲಾಗಿತ್ತು. ಈಗ ಮತ್ತೆ ಹೈದರಾಲಿಯು ಆಡುವ ಭಯಾನಕ ಆಟದಲ್ಲಿ ಗನ್, ಶೆಲ್, ಮತ್ತಿತರೆ ಯುದ್ಧೋಪಕರಣಗಳನ್ನು ಒದಗಿಸಬೇಕೆಂದು ಬಯಸುವ ಬದಲು "ವೆಲ್‌ವೆಟ್" ಎಂಬ ಬಟ್ಟೆಯನ್ನು ಕರಿಮೆಣಸಿಗೆ ವಿನಿಮಯವಾಗಿ ಪಡೆದುಕೊಳ್ಳುವುದು ಉಚಿತ ಎಂಬ ಸಲಹೆಯನ್ನು ನೀಡಲಾಗಿತ್ತು. ಈ ಬಟ್ಟೆಯಿಂದ ಆತನ ಸೈನಿಕರಿಗೆ ಹಸಿರು, ನೇರಳೆ, ಗುಲಾಬಿ ಬಣ್ಣದ ಅಥವಾ ಇನ್ನಿತರೆ ಯಾವುದೇ ಬಣ್ಣದ ಯುನಿಫಾರಂಗಳನ್ನು ಮಾಡಬಹುದು. ಅಷ್ಟು ಮಾತ್ರವಲ್ಲದೆ ಹೆಚ್ಚೆಂದರೆ ಈಗ ಇಂಗ್ಲೀಷ್ ಸೈನ್ಯ ಉಪಯೋಗಿಸದಿರುವ ೨೪ ಪೌಂಡಿನ ಫ್ರೆಂಚ್ ನಿರ್ಮಿತ ಬಂಧೂಕುಗಳನ್ನು ಮಾತ್ರ ನೀಡಬಹುದೆಂದು ಆ ಪತ್ರದಲ್ಲಿ ತಿಳಿಸಲಾಗಿತ್ತು (ಷೇಕ್ ಆಲಿ ೧೯೬೩:೫೬).

ಹೈದರಾಲಿಯು ರಾಣಾಬಿದನೂರನ್ನು ತನ್ನ ವಶಕ್ಕೆ ತೆಗೆದುಕೊಂಡ ಮೇಲೆ ಕರಾವಳಿ ಕರ್ನಾಟಕದ ವಿವಿಧ ಬಂದರುಗಳಲ್ಲಿ ಹಾಗೂ ಅದರ ಸುತ್ತಮುತ್ತಲಿನ ಪ್ರಾಂತ್ಯಗಳಲ್ಲಿ ಪೋರ್ಚುಗೀಸರಿಗೆ ಹಲವಾರು ತೆರನಾದ ವಿಶೇಷಾಧಿಕಾರಗಳನ್ನು – ಸೌಕರ್ಯಗಳನ್ನು ನೀಡಿದ್ದನು. ಇಂಗ್ಲೀಷರು ೧೭೬೮ ರಲ್ಲಿ ಮಂಗಳೂರನ್ನು ಜಯಿಸಿದ ಕೂಡಲೇ ಪೋರ್ಚುಗೀಸರಿಗೆ ನೀಡಲಾಗಿರುವ ವಿನಾಯಿತಿ–ಸೌಲಭ್ಯಗಳನ್ನು

ರದ್ದು ಮಾಡಿ ಅವರ ವ್ಯಾಪಾರದ ಮಳಿಗೆಗಳನ್ನು ಆಕ್ರಮಿಸಿದರು. ಪೋರ್ಚುಗೀಸರ ಫ್ಯಾಕ್ಟರ್‌ರವರಿಗೆ ವ್ಯಾಪಾರ-ವ್ಯವಹಾರ ನಡೆಸಲು ಮುಂಬಯಿ ಸರಕಾರದಿಂದ ಅನುಮತಿ ಬರುವವರೆಗೆ ತಡೆ ಹಿಡಿದರು. ಬ್ರಿಟಿಷ್ ಧ್ವಜ ಹಾರಾಡುವ ಸಂದರ್ಭದಲ್ಲಿ ಅದರ ಅಡಿಯಲ್ಲಿ ಇತರೇ ದೇಶಗಳ ವ್ಯಾಪಾರಿ ಧ್ವಜಗಳನ್ನು ಹಾರಾಡಲು ಅವಕಾಶ ನೀಡಲಾಗುವುದಿಲ್ಲವೆಂದು ಪೋರ್ಚುಗೀಸರಿಗೆ ಬ್ರಿಟಿಷ್ ಅಧಿಕಾರಿಗಳು ಘೋಷಿಸಿದರು. ಈ ಕ್ಲಿಷ್ಟಕರ ಸನ್ನಿವೇಶದಲ್ಲಿ ಅನಿವಾರ್ಯವಾಗಿ ಪೋರ್ಚುಗೀಸರು ಗೋವಾಕ್ಕೆ ಹಿಂತಿರುಗಿದರು (ಮೋರಾಸ್ ೧೯೨೪:೪೩). ಇಂಗ್ಲೀಷರು ಮಂಗಳೂರನ್ನು ವಶಪಡಿಸುವ ಸಂದರ್ಭದಲ್ಲಿ ಪೋರ್ಚುಗೀಸರು ಹೈದರಾಲಿಗೆ ಸಹಾಯ ಮಾಡದೆ ಇಂಗ್ಲೀಷರನ್ನು ಬೆಂಬಲಿಸಿದರು. ಆದರೆ ಪೋರ್ಚುಗೀಸರಿಗೆ ಇಂಗ್ಲೀಷರು ಯಾವುದೇ ರೀತಿಯಲ್ಲಿ ಸಹಕರಿಸಲಿಲ್ಲ. ಇಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ವಸಾಹತುಶಾಹಿ ಧೋರಣೆಯು ಅಭಿವ್ಯಕ್ತವಾಗುತ್ತದೆ.

ಆದರೆ ಹೈದರಾಲಿ ಮಂಗಳೂರನ್ನು ಮರು ವಶಪಡಿಸಿಕೊಂಡ ಕೂಡಲೇ ಇಂಗ್ಲೀಷರಲ್ಲಿ ಒಪ್ಪಂದ ಮಾಡಿಕೊಂಡ ರೀತಿಯಲ್ಲೇ ಪೋರ್ಚುಗೀಸರೊಂದಿಗೆ ಮರು ಒಪ್ಪಂದವನ್ನು ಮಾಡಿ ಮಂಗಳೂರಲ್ಲಿ ವ್ಯಾಪಾರ-ವ್ಯವಹಾರ ನಡೆಸಲು ಮತ್ತು ಕೋಟೆಕಟ್ಟಲು ಅವಕಾಶವನ್ನು ನೀಡಿದನು. ಗೋವಾ ರಾಜ್ಯಕ್ಕೆ ಮಂಗಳೂರು ಬಂದರಿನ ಮೂಲಕ ಗಂಧದ ಮರ, ಕರಿಮೆಣಸು, ಅಕ್ಕಿ ಮತ್ತು ಇತರೆ ವಸ್ತುಗಳನ್ನು ನ್ಯಾಯಯುತವಾದ ದರದಲ್ಲಿ ನೀಡುವುದಾಗಿ ಘೋಷಿಸಿದನು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹೈದರಾಲಿಯ ವ್ಯಾಪಾರಿ ಸಿದ್ಧಾಂತವಾಗಿರುವ "ಗನ್ ಫಾರ್ ಪೆಪ್ಪರ್" ಎಂಬ ಘೋಷಣೆಯನ್ನು ಇಂಗ್ಲೀಷರ ವಿರುದ್ಧ ಬಹಳ ಕಟ್ಟುನಿಟ್ಟಿನಿಂದ ಜಾರಿಗೊಳಿಸಲು ಪ್ರಯತ್ನಿಸಿದರೇ ವಿನಃ ಪೋರ್ಚುಗೀಸರ ವಿರುದ್ಧ ಆ ಸಿದ್ಧಾಂತವನ್ನು ಪ್ರಯೋಗಿಸಲಿಲ್ಲ. ಇವರ ಬಗ್ಗೆ ಮೃದು ಧೋರಣೆಯನ್ನು ಅನುಸರಿಸಿದನು. ಹೈದರಾಲಿಯು ಬಿದನೂರನ್ನು ೧೭೬೩ ರಲ್ಲಿ ವಶಪಡಿಸಿಕೊಂಡಾಗ ಮಾಡಿರುವ ಮಾಮೂಲಿ ಷರತ್ತು ಆಗಿರುವ 'ಗೋವಾ ಸರಕಾರವು ಅವಶ್ಯಕತೆ ಬಿದ್ದಾಗ ತನ್ನ ನಾವಿಕ ದಂಡಿನೊಂದಿಗೆ ಹೈದರಾಲಿ ಸರಕಾರದ ಪರವಾಗಿ ಯುದ್ಧದಲ್ಲಿ ಭಾಗವಹಿಸುವುದು' ಎಂಬುದಕ್ಕೆ ಮತ್ತೆ ಬದ್ಧತೆಯನ್ನು ಮಾತ್ರ ತೋರಿಸಲಾಯಿತು. ಇದರ ಹೊರತಾಗಿ ಯಾವುದೇ ಹೆಚ್ಚುವರಿ ಅಂಶಗಳು ಸೇರ್ಪಡೆಯಾಗಲಿಲ್ಲ.

೧೭೭೧ ರ ಜೂನ್ ತಿಂಗಳ ೧೩ರಲ್ಲಿ, ಮತ್ತೊಂದು ಒಪ್ಪಂದ ಹೈದರಾಲಿ ಮತ್ತು ಪೋರ್ಚುಗೀಸರ ಮಧ್ಯೆ ನಡೆಯಿತು. ಅದರ ಪ್ರಕಾರ,

೧. ಹಾಲಿ ಪೋರ್ಚುಗೀಸರ ಫ್ಯಾಕ್ಟರಿ ಮುಂದುವರಿಸಲು ಅನುಮತಿ ನೀಡಲಾಯಿತು.

೨. "ಲಾಗಿಮಾಸ್" ಎಂಬ ತೆರಿಗೆ ಸಂಗ್ರಹಿಸಲು ಅನುಮತಿ ನೀಡಲಾಯಿತು.

೩. ಅಕ್ಕಿಯನ್ನು ಕಪ್ಪಕಾಣಿಕೆಯ ರೂಪದಲ್ಲಿ ಪಡೆಯಲು ಅವಕಾಶ ನೀಡಲಾಯಿತು.

೪. ಉತ್ಕೃಷ್ಟ ದರ್ಜೆಯ ಕರಿಮೆಣಸು ಬೆಳೆಯುವ ಸೋಂದಾ ಪ್ರಾಂತ್ಯ ಹಾಗೂ ಕಾನ್‌ಕೋನ್ ಜಿಲ್ಲೆಗೆ ಒಳಪಟ್ಟ ಕಾರ್ಬೊ ಡಿ ರಾಮಾ ಕೋಟೆ ಹೊಂದಿರುವ ಪ್ರಾಂತ್ಯಗಳನ್ನು ಪೋರ್ಚುಗೀಸರ ಸುಪರ್ದಿಗೆ ನೀಡುವ ಬಗ್ಗೆ ಸಹಮತಕ್ಕೆ ಬರಲಾಯಿತು(ಮೋರಾಸ್ ೧೯೨೭:೪೭).

ಹೈದರಾಲಿಯು ೧೭೭೪ ರಲ್ಲಿ ತನ್ನ ಇಂಜಿನಿಯರ್ ಎಂ. ಕ್ಯಾಲೆನಿಗೆ ಮಂಗಳೂರಿನಲ್ಲಿ ಕೋಟೆ ನಿರ್ಮಿಸಲು ಸೂಕ್ತ ಸ್ಥಳವನ್ನು ಆಯ್ಕೆ ಮಾಡುವ ಹೊಣೆಯನ್ನು ವಹಿಸಿಕೊಟ್ಟನು. ಇಂಜಿನಿಯರ್ ಎಂ. ಕ್ಯಾಲೆನಿಯು ಎಲ್ಲಾ ಪ್ರಮುಖ ಸ್ಥಳಗಳನ್ನು ಪರಿಶೀಲಿಸಿ ಕೊನೆಯದಾಗಿ ಅಂದು ಪೋರ್ಚುಗೀಸರ ಕೋಟೆ ಕಟ್ಟಿರುವ ಸ್ಥಳವೇ ಹೆಚ್ಚು ಸೂಕ್ತವೆಂದು ಹೈದರಾಲಿಗೆ ಸಲಹೆ ನೀಡಿದನು. ಆದುದರಿಂದ ಮುಂದೆ ಅನಿವಾರ್ಯವಾಗಿ ಪೋರ್ಚುಗೀಸರು ಮಂಗಳೂರಿನ ತನ್ನ ಫ್ಯಾಕ್ಟರಿಯನ್ನು ಬಿಟ್ಟುಕೊಡಬೇಕಾಗಿ ಬಂತು. ಇದರಿಂದಾಗಿ ಪೋರ್ಚುಗೀಸರು ಮಂಗಳೂರಿಗೆ ಅಂತಿಮ ವಿದಾಯ ಹೇಳಿದರು[೧೦] (ಮೋರಾಸ್ ೧೯೨೭, ೪೭). ಆದರೂ ಸಹ ಪೋರ್ಚುಗೀಸರು ಹೈದರಾಲಿಗೆ ಸಹಾಯ ನೀಡುವ ಪರಿಪಾಠವನ್ನು ಮುಂದುವರಿಸಿದರು. ೧೭೭೭ ರಲ್ಲಿ ಪೋರ್ಚುಗೀಸರು ಹೈದರಾಲಿಗೆ ಹಡಗು ನಿರ್ಮಾಣ ಕಾರ್ಯದಲ್ಲಿ ನೆರವಾಗಲು ನುರಿತ ಮರಕೆಲಸದವರನ್ನು ಹಾಗೂ ಕುಶಲಕರ್ಮಿಗಳನ್ನು ಒದಗಿಸುವಲ್ಲಿ ಸಹಾಯ ಮಾಡಿದರು. (ಶ್ಯಾಮ್ ಭಟ್ ೨೦೧೬:೧೭೪).

ಹೈದರಾಲಿ, ಮರಾಠರು ಮತ್ತು ಇಂಗ್ಲೀಷರ ನಡುವಿನ ಯುದ್ಧವು ದೇಶೀಯ ಸಮುದ್ರ ಮೀನುಗಾರ ವ್ಯಾಪಾರಿಗಳ ಕಡೆಗಣಿಸುವಿಕೆಗೆ ಕಾರಣವಾಯಿತು. ತೇಗದ ವ್ಯಾಪಾರದಲ್ಲಿ ಹೈದರಾಲಿಯು ಅಂದು ಚಾಲ್ತಿಯಿದ್ದ ನಿಯಮಗಳಿಗಿಂತ ವಿಭಿನ್ನವಾದ ನಿಯಮಗಳನ್ನು ತಂದನು. ಸಮುದ್ರ ತೀರದ ವ್ಯಾಪಾರಿಗಳು ಹಾಗೂ ದೇಶೀಯ ವ್ಯಾಪಾರಿಗಳು ಮರದ ದಿಮ್ಮಿಗಳನ್ನು ಸಂಗ್ರಹಿಸುವಲ್ಲಿ ಮತ್ತು ವರ್ಗಾವಣೆ ಮಾಡುವಲ್ಲಿ ಒಟ್ಟಿಗೆ ಕೆಲಸ ಮಾಡುತ್ತಿದ್ದರು. ಅದಕ್ಕೆ ಬದಲಾಗಿ ೧೭೭೬ ರಲ್ಲಿ ಹೈದರಾಲಿಯು ಈ ಕೆಲಸವನ್ನು ನಿರ್ವಹಿಸಲು ಏಕೈಕ ವ್ಯಾಪಾರಿಯೊಡನೆ ಮರ ಸಾಗಾಣಿಕೆಗೆ ಒಪ್ಪಂದ ಮಾಡಿಕೊಂಡನು. ೧೭೭೯ ರಲ್ಲಿ ಹೈದರಾಲಿಯು ಮರ್ದೋಕ್ ಬ್ರೌನ್ ಕಂಪನಿಗೆ ಮಂಗಳೂರು, ಕಾರವಾರ, ಒಡಕರ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಅವಕಾಶ ನೀಡಿದನು. ಟೆಕ್ಸೇರ, ಮೈಗೂಲ್, ವ್ಯಾಕ್ನರ್, ವ್ಯಾನ್ಸಿರ್ಬೆಕ್ ಮತ್ತು ವಾರ್ನೆಟ್ ಕಂಪೆನಿಗಳು ಕಾರವಾರ ಮತ್ತು ಮಂಗಳೂರಿನಿಂದ ಮಲಬಾರ್ ಮತ್ತು ಗೋವಾ ಬಂದರುಗಳಿಗೆ ನಿರಂತರವಾಗಿ ಅಕ್ಕಿಯನ್ನು ವಸಾಹತು ಹಡಗುಗಳ ಮೂಲಕ ಕೊಂಡೊಯ್ಯುತ್ತಿತ್ತು. ೧೭೮೧ ರಲ್ಲಿ ಅಕ್ಕಿ, ಕಾಳುಗಳು, ಹೊಗೆಸೊಪ್ಪು, ಮೆಣಸಿನ ಕಾಯಿಗಳನ್ನು ಉದ್ಯಾವರ, ಮಂಜೇಶ್ವರ ಮತ್ತು ಕಲ್ಲಿಕೋಟೆಗಳಿಂದ ಸಾಗಿಸುತ್ತಿದ್ದ ಪೋರ್ಚುಗೀಸರ ಏಳು ಗೋವಾ ಹಡಗುಗಳನ್ನು ವಶಪಡಿಸಿಕೊಳ್ಳಲಾಯಿತು. ಪೋರ್ಚುಗೀಸರು ಪ್ರತಿಭಟಿಸಿದ್ದರಾದರೂ ಏನೂ ಪ್ರಯೋಜನವಾಗಲಿಲ್ಲ. ೧೭೮೧ ರ ನಂತರ ಪರವಾನಿಗೆ ಇದ್ದರೂ ಪೋರ್ಚುಗೀಸರು ಕಾರವಾರದ ದಕ್ಷಿಣವನ್ನು ಸಮೀಪಿಸಲು ಹೆದರುತ್ತಿದ್ದರು. ಆದರೆ ೧೭೮೨ ರಲ್ಲಿ ಇವರಿಬ್ಬರ ನಡುವೆ ಮಾತುಕತೆಯಾಗಿ ಹೈದರ್ ಮತ್ತು ಪೋರ್ಚುಗೀಸರ ನಡುವೆ ಮರು ಮೈತ್ರಿ ಉಂಟಾಯಿತು (ಶ್ಯಾಮ್ ಭಟ್ ೨೦೧೬:೧೭೫).

ಫ್ರಾನ್ಸ್ ಮತ್ತು ಇಂಗ್ಲೆಂಡಿನ ಮಧ್ಯೆ ೧೭೭೮ ರಲ್ಲಿ ಯುದ್ಧ ಘೋಷಣೆಯಾದಾಗ ಅದರ ಪ್ರತಿಬಿಂಬಗಳು ಭಾರತದ ಪಶ್ಚಿಮ ಕರಾವಳಿಯಲ್ಲೂ ರೂಪುಗೊಂಡಿತ್ತು. ಹೈದರಾಲಿಯು ಈ ಸಂದರ್ಭದ ಸದುಪಯೋಗ ಪಡೆದು ಮಂಗಳೂರು ಬಂದರಿನ ಮೂಲಕ ಬಿರುಸಿನ ವ್ಯಾಪಾರ-ವ್ಯವಹಾರಕ್ಕೆ ಚಾಲನೆ ನೀಡಿದನು. ಈ ಸಮಯದಲ್ಲಿ ಹೈದರಾಲಿಯ ಕಡೆ ಇದ್ದ ವ್ಯಾಪಾರಿಗಳು ಮತ್ತು ರಾಷ್ಟ್ರಗಳು ಫ್ರಾನ್ಸ್‌ನ ಪರ ವಾಲಿದರು.

ವಿವಿಧೆಡೆಗಳಲ್ಲಿ ಇದ್ದ ಹೈದರಾಲಿಯ ಹಡಗುಗಳನ್ನು ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿ ದಾಳಿ ನಡೆಸಿ ಮುಟ್ಟುಗೋಲು ಹಾಕುವ ಹೊಸ ಪ್ರಯತ್ನವನ್ನು ನಡೆಸಿತು. ಇದರ ಬೆಳವಣಿಗೆಗಳ ಪರಿಣಾಮವೆಂದರೆ ಏಷ್ಯಾದ ವ್ಯಾಪಾರ-ವ್ಯವಹಾರದ ಸ್ಥಿತಿಗತಿಯು ಯುರೋಪಿಯನ್ ದೇಶಗಳ ರಾಜಕೀಯ ಸ್ಥಿತಿಗತಿಯ ಮೇಲೆ ನಿಂತಿದೆ ಎಂದು ಗೊತ್ತಾಗುತ್ತದೆ.

ಮೇಲಿನ ವಿಶ್ಲೇಷಣೆಯಿಂದ ಹೈದರಾಲಿ ಮತ್ತು ಈಸ್ಟ್ ಇಂಡಿಯಾ ಕಂಪೆನಿಯು ವಾಣಿಜ್ಯದ ಹಿನ್ನೆಲೆಯಿಂದ ಪರಸ್ಪರ ಸಹಕರಿಸುವ ಅನಿವಾರ್ಯತೆ ಉಂಟಾಯಿತು ಎಂದು ತಿಳಿದು ಬರುತ್ತದೆ. ಹೈದರಾಲಿಯು ಈಸ್ಟ್ ಇಂಡಿಯಾ ಕಂಪೆನಿಯ ಅನಿವಾರ್ಯತೆಯ ಸಂದರ್ಭವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡು ತನ್ನ ರಾಜಕೀಯ ಕರ್ತವ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸುತ್ತಾನೆ. ಮಂಗಳೂರನ್ನು ಬ್ರಿಟಿಷರು ಕೈವಶ ಪಡಿಸಿಕೊಂಡಾಗ ತೀವ್ರ ರೀತಿಯಲ್ಲಿ ಪ್ರತಿಕ್ರಿಯಿಸಿ ಮತ್ತೆ ತನ್ನ ವಶಕ್ಕೆ ಪಡೆದುಕೊಂಡನು. ಆದರೂ ಸಹ ಪುನಃ ಇಂಗ್ಲೀಷರೊಂದಿಗೆ ವಾಣಿಜ್ಯಾತ್ಮಕ ಒಪ್ಪಂದವನ್ನು ನಡೆಸಿರುವಂತಹದ್ದು ಒಂದು ಗಮನಾರ್ಹ ಸಂಗತಿಯಾಗಿದೆ. ಅದೇ ವೇಳೆಗೆ ಪೋರ್ಚುಗೀಸರೊಂದಿಗೆ ಹೈದರಾಲಿಯ ನಿರ್ವಹಣೆ ಸಾಮರಸ್ಯದಿಂದ ಕೂಡಿತ್ತು.

**ಬ್ರಿಟಿಷ್ ಅಧಿಕಾರದ ಕ್ರೋಡೀಕರಣ- ಹೈದರಾಲಿ ಮತ್ತು ಟಿಪ್ಪು ಸಂಬಂಧಗಳು**

ಮೈಸೂರು ಸಂಸ್ಥಾನದ ಮಹಾರಾಜನಾಗಿ ಟಿಪ್ಪು ಆಡಳಿತ ನಡೆಸುತ್ತಿದ್ದ ಸಂದರ್ಭದಲ್ಲಿ ಮಂಗಳೂರಿನ ರಾಜ ಪ್ರತಿನಿಧಿ ಹೈದರಾಲಿಯ ದತ್ತು ಪುತ್ರ ಇಯಾಜ್‌ಖಾನ್ ೧೭೮೩ ರಲ್ಲಿ ಇಂಗ್ಲೀಷ್ ದಂಡನಾಯಕ ಜನರಲ್ ಮ್ಯಾಥ್ಯೂನ ಲಂಚಕ್ಕೆ ಶರಣಾಗಿ ಮಂಗಳೂರನ್ನು ಬ್ರಿಟಿಷರಿಗೆ ಶರಣಾಗಿಸುವ ಮೂಲಕ ಎರಡನೇ ಬಾರಿಗೆ ಮಂಗಳೂರು ಬ್ರಿಟಿಷರ ಸುಪರ್ದಿಗೆ ಬಂತು. ಈ ವಿಜಯವನ್ನು ಕೂಡಾ ಭಾರತದ ಎಲ್ಲಾ ಇಂಗ್ಲೀಷ್ ಪ್ರಾಂತ್ಯಗಳಲ್ಲಿ ವಿಜಯ ತೋಪುಗಳನ್ನು ಹಾರಿಸಿ ಸಂಭ್ರಮಿಸಲಾಯಿತು. ಆದರೆ ಟಿಪ್ಪು ಸುಲ್ತಾನ್ ಎಪ್ರಿಲ್ ತಿಂಗಳು ೧೭೮೩ ರಲ್ಲಿ ಒಂದು ದೊಡ್ಡ ಸೈನ್ಯದೊಂದಿಗೆ ಮಂಗಳೂರಿಗೆ ಬಂದು ಮುತ್ತಿಗೆ ಹಾಕಿ ಧೀರೋದ್ದಾತ್ತ ಯುದ್ಧ ನಡೆಸಿ ಕೊನೆಗೆ ಜಯವನ್ನು ಪಡೆದು ಇಂಗ್ಲೀಷರೊಂದಿಗೆ ಒಂದು ಒಪ್ಪಂದಕ್ಕೆ ಬಂದನು. ೧೭೬೮ ಮತ್ತು ೧೭೮೩ ರ ಈ ಎರಡು ಇಂಗ್ಲೀಷರ ವಿಜಯ ಮತ್ತು ಸೋಲಿನ ಬಗ್ಗೆ ಡಬ್ಲ್ಯೂ ಡಬ್ಲ್ಯೂ ಹಂಟರ್‌ರವರು ಇಂಪೀರಿಯಲ್ ಗಜೆಟ್ಟಿನಲ್ಲಿ ಈ ರೀತಿ ಹೇಳಿರುತ್ತಾರೆ.

> ಮಂಗಳೂರನ್ನು ೧೭೬೮ರಲ್ಲಿ ಇಂಗ್ಲೀಷರು ಕೆಲವು ಸಮಯಗಳ ತನಕ ವಶಪಡಿಸಿಕೊಂಡಿದ್ದರು ಮತ್ತು ೧೭೮೩ ರಲ್ಲಿ ಟಿಪ್ಪುಸುಲ್ತಾನನು ಅಸಾಧಾರಣ ಯುದ್ಧ ಕೌಶಲ್ಯದಿಂದ ಇಂಗ್ಲೀಷ್‌ನವರ ಸೈನ್ಯದ ರಕ್ಷಣಾ ಗೋಡೆಯನ್ನು ಎಲ್ಲಾ ಅಡೆತಡೆಗಳ ಮಧ್ಯೆಯೂ ಭೇದಿಸಿ ಹೊಡೆದುರುಳಿಸಿದನು. ಕೊನೆಗೂ ಒಂಭತ್ತು ತಿಂಗಳು ಯುದ್ಧದ ನಂತರ ಮಂಗಳೂರು ಟಿಪ್ಪುವಿನ ವಶಕ್ಕೆ ಬಂತು (ಹಂಟರ್ (೩) ೧೮೮೧:೬).

ಆದರೆ ಟಿಪ್ಪು ಮತ್ತೆ ಮಂಗಳೂರನ್ನು ಪುನರ್ ಜಯಿಸಿದ ಮೇಲೆ ಇಂಗ್ಲೀಷರೊಂದಿಗೆ ಶಾಂತಿ ಒಪ್ಪಂದಕ್ಕೆ ಬಂದನು. ಆ ಪ್ರಕಾರ ೧೭೮೪ ರಲ್ಲಿ ತಲಶ್ಶೇರಿಯಲ್ಲಿ ಶಾಂತಿ ಒಪ್ಪಂದಕ್ಕೆ ಸಹಿ ಮಾಡಲಾಯಿತು. ವಾರನ್ ಹೇಸ್ಟಿಂಗ್ಸ್ ಮತ್ತು ಟಿಪ್ಪು ಸುಲ್ತಾನನ ಮಧ್ಯೆ ೧೭೮೪ರ ಮಾರ್ಚ್ ೧೧ ರಂದು ಒಪ್ಪಂದವಾಗಿ

ಮುಂದೆ ೧೭೮೪ ರ ಎಪ್ರಿಲ್ ೧ ರಂದು ಪರಸ್ಪರ ಸಹಿ ಹಾಕಲಾಯಿತು. ವಾರನ್ ಹೇಸ್ಟಿಂಗ್ಸ್ ಪರವಾಗಿ ಸರ್ ಜೋರ್ಜ್ ಸ್ಟ್ಯಾನ್‌ಟನ್ ಮತ್ತು ಇತರ ಇಬ್ಬರು ಅಧಿಕಾರಿಗಳು ಒಪ್ಪಂದಕ್ಕೆ ಸಹಿ ಮಾಡಿದರು. ಈ ಒಪ್ಪಂದದಲ್ಲಿ ಒಟ್ಟು ಹತ್ತು ಪರಿಚ್ಛೇದಗಳು ಇದ್ದವು. ಇದರಲ್ಲಿ ವ್ಯಾಪಾರ–ವ್ಯವಹಾರ ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ವಿಶೇಷ ವಿಧಿಗಳನ್ನು ಉಲ್ಲೇಖಿಸಲಾಗಿದೆ (ಗಂಗೂಲಿ ೧೯೫೮:೧೧೪, ೧೧೫).

ಇದೇ ರೀತಿಯಲ್ಲಿ ಮುಂದೆ ಹೈದರಾಬಾದಿನ ನಿಜಾಮ, ಪೇಶ್ವೆ ಹಾಗೂ ಈಸ್ಟ್ ಇಂಡಿಯಾ ಕಂಪೆನಿಗಳ ಐಕ್ಯಕೂಟ ಮತ್ತು ಟಿಪ್ಪುವಿನೊಂದಿಗೆ ನಡೆದ ಒಪ್ಪಂದದಲ್ಲೂ ಒಟ್ಟು ಹನ್ನೊಂದು ವಿಧಿಗಳಲ್ಲಿ ವ್ಯಾಪಾರ – ವ್ಯವಹಾರಕ್ಕೆ ಸಂಬಂಧಿಸಿ ಯಾವುದೇ ಉಲ್ಲೇಖಗಳು ಇಲ್ಲ.

ಇದಕ್ಕಿಂತ ಮೊದಲು ೧೭೭೦ ರಲ್ಲಿ ತಲಶ್ಶೇರಿ ಇಂಗ್ಲೀಷ್ ಫ್ಯಾಕ್ಟರಿಯ ಚೀಫ್ ಆಗಿದ್ದ ರೋಬರ್ಟ್ ಟೈಲರನು ಮುಂಬಯಿ ಪ್ರಾಂತ್ಯದ ಆದೇಶದನ್ವಯ ಕೊಡಗಿನ ರಾಜನನ್ನು ತಲಶ್ಶೇರಿಗೆ ಕರೆಯಿಸಿಕೊಂಡು ಒಂದು ಒಪ್ಪಂದಕ್ಕೆ ಸಹಿ ಹಾಕಿಸಿದನು. ಆ ಒಪ್ಪಂದದ ಪ್ರಕಾರ ಕೊಡಗಿನ ರಾಜನು ಟಿಪ್ಪು ಮತ್ತು ಆತನ ಸಹಾಯಕರನ್ನು ಶತ್ರುಗಳೆಂದು ಪರಿಗಣಿಸುವುದಾಗಿ ಘೋಷಿಸಲಾಯಿತು. ಇಂಗ್ಲೀಷರೊಂದಿಗೆ ಮಾತ್ರ ಕರಿಮೆಣಸು, ಇತರ ಸಾಂಬಾರು ಪದಾರ್ಥಗಳು ಮತ್ತು ಆಹಾರ ಪದಾರ್ಥಗಳನ್ನು ವಿಕ್ರಯಿಸುವುದಾಗಿ ಒಪ್ಪಂದದಲ್ಲಿ ಷರತ್ತು ವಿಧಿಸಲಾಗಿತ್ತು. ಫ್ರೆಂಚರೊಂದಿಗೆ ಯಾವುದೇ ರೀತಿಯ ವ್ಯಾಪಾರ ವ್ಯವಹಾರದ ಸಂಬಂಧಗಳನ್ನು ಇರಕೂಡದೆಂಬುದು ಸಹ ಈ ಒಪ್ಪಂದದ ಅಂಶವಾಗಿತ್ತು (ವಿಲ್ಕ್ಸ್ (೪) ೧೮೭೮:೧೬೦).

ಮಲಬಾರನ್ನು ೧೭೮೪ರ ನಂತರ ಈಸ್ಟ್ ಇಂಡಿಯಾ ಕಂಪೆನಿಗೆ ಸೇರಿಸಿಕೊಳ್ಳಲಾಯಿತು. ಕೆನರಾವನ್ನು ಒಳಗೊಂಡ ಕರಾವಳಿ ಕರ್ನಾಟಕ ಟಿಪ್ಪುವಿನ ವಶದಲ್ಲಿ ಇತ್ತು. ಈ ಬೆಳವಣಿಗೆಯ ನಂತರ ಬ್ರಿಟಿಷರು ಟಿಪ್ಪುವಿನೊಂದಿಗೆ ವಾಣಿಜ್ಯಾತ್ಮಕ ಒಪ್ಪಂದವನ್ನು ಪುನರ್ ಪರಿಷ್ಕರಿಸಲು ನಿರ್ಧರಿಸಿದರು. ಆ ಪ್ರಕಾರ ಟಿಪ್ಪು ಪ್ಯಾಟ್ರಿಕ್ ಎಂಬ ವ್ಯಕ್ತಿಯನ್ನು ಮುಂಬಯಿಗೆ ಕಳುಹಿಸಿ ಅಲ್ಲಿಯ ವ್ಯಾಪಾರಿ ಸಮುದಾಯವನ್ನು ಉದ್ದೇಶಿಸಿ "ಮಂಗಳೂರು ಎಲ್ಲಾ ರಾಷ್ಟ್ರದ ಜನರ ವ್ಯಾಪಾರಕ್ಕಾಗಿ ಮುಕ್ತವಾಗಿ ತೆರೆದಿರಿಸಲಾಗಿದೆ" ಎಂಬ ಸಂದೇಶವನ್ನು ಪ್ರಚಾರ ಪಡಿಸಲಾಯಿತು. ಇದಕ್ಕೆ ಸಂಬಂಧಿಸಿದ ಹಲವಾರು ಪ್ರಸ್ತಾಪಗಳಿರುವ ವಾಣಿಜ್ಯಾತ್ಮಕ ಅಂಶಗಳನ್ನು ಒಳಗೊಂಡಿರುವ ಒಡಂಬಡಿಕೆಯನ್ನು ಮುಂಬಯಿ ವ್ಯಾಪಾರಿ ಬಳಗಕ್ಕೆ ಸಲ್ಲಿಸಿದಾಗ ಅವರು ಸಹಮತಕ್ಕೆ ಬಂದು ಒಪ್ಪಂದಕ್ಕೆ ಸಹಿ ಮಾಡಿದರು. ಇದಕ್ಕೆ ಒಂದು ಪ್ರಮುಖ ಕಾರಣ ಈ ಮೊದಲು ಮುಂಬಯಿಯ ಪ್ರಮುಖ ವ್ಯಾಪಾರಿಗಳು ಮಂಗಳೂರಿನೊಂದಿಗೆ ನೇರ ವ್ಯಾಪಾರ ವ್ಯವಹಾರ ನಡೆಸುತ್ತಾ ಸಾಕಷ್ಟು ಪ್ರಯೋಜನ ಪಡೆಯುತ್ತಿದ್ದರು. ಆದರೆ ೧೭೮೦ರ ಯುದ್ಧಗಳ ನಂತರ ಟಿಪ್ಪು ಸುಲ್ತಾನ್ ಆಳ್ವಿಕೆಯ ಕಾಲದಲ್ಲಿ ವ್ಯಾಪಾರಿಗಳು ಯಾವುದೇ ಸ್ಥಳದಲ್ಲಿ ಜಾಗವನ್ನು ಬಾಡಿಗೆಗೆ ಪಡೆದು ವ್ಯಾಪಾರ ಚಟುವಟಿಕೆ ನಡೆಸುವುದನ್ನು ನಿರ್ಬಂಧಿಸಲಾಗಿತ್ತು (ಮೋರಾಸ್ ೧೯೨೭:೧೧೧).

ಟಿಪ್ಪು ಸುಲ್ತಾನ್ ವ್ಯಾಪಾರ ವ್ಯವಹಾರಗಳನ್ನು ಕುದುರಿಸುವ ನಿಟ್ಟಿನಲ್ಲಿ ದೇಶದ ವಿವಿಧ ಭಾಗಗಳಲ್ಲಿ ವಿವಿಧ ಸ್ತರಗಳಲ್ಲಿ ಪ್ರಯತ್ನಗಳನ್ನು ಮುಂದುವರಿಸಿರುವುದನ್ನು ಇದು ಸ್ಪಷ್ಟಪಡಿಸುತ್ತದೆ. ಸರಿಸುಮಾರು ಮೂರು ನಿಯೋಗಗಳನ್ನು ಮಂಗಳೂರಿನಿಂದ ಫ್ರಾನ್ಸ್, ಪರ್ಷಿಯಾ ಮೊದಲಾದ ದೇಶಗಳಿಗೆ ಟಿಪ್ಪು

ಸುಲ್ತಾನ್ ಕಳುಹಿಸಿಕೊಡುತ್ತಾನೆ. ಟಿಪ್ಪು ಸುಲ್ತಾನ್ ಈ ಕಾಲಾವಧಿಯಲ್ಲಿ ದೇಶೀಯ ವ್ಯಾಪಾರಿ ವಾಣಿಜ್ಯೋದ್ಯಮಿಗಳೊಂದಿಗೆ ಮಾತ್ರವಲ್ಲದೆ ವಿದೇಶಗಳ ರಾಜರುಗಳೊಂದಿಗೂ ವ್ಯಾಪಾರ ಸಂಬಂಧಗಳನ್ನು ಕುದುರಿಸಲು ಪ್ರಯತ್ನಿಸುತ್ತಾನೆ. ಈ ನಿಟ್ಟಿನಲ್ಲಿ ಆತನು ವ್ಯಾಪಾರಿ ತಂಡಗಳ ಮೂಲಕ ಮತ್ತು ರಾಜತಾಂತ್ರಿಕ ನಿಯೋಗಗಳ ಮೂಲಕ ಹೊರಪ್ರಪಂಚದೊಡನೆ ಸಂಪರ್ಕವನ್ನು ಇಟ್ಟುಕೊಳ್ಳಲು ಟಿಪ್ಪು ಪ್ರಾರಂಭಿಸಿದನು. ಮೂಲಭೂತವಾಗಿ ಭಾರತೀಯ ರಾಜ್ಯಗಳಲ್ಲಿದ್ದ ದೌರ್ಬಲ್ಯ ಮತ್ತು ಭಾರತೀಯರ ಅನೈತಿಕತೆ, ಟಿಪ್ಪುವನ್ನು ವಿದೇಶೀ ರಾಷ್ಟ್ರಗಳ ಸಹಾಯವನ್ನು ತೆಗೆದುಕೊಳ್ಳುವಂತೆ ಪ್ರಚೋದಿಸಿದವು (ಷೇಕ್ ಆಲಿ ೧೯೮೯:೨೪). ಇದಕ್ಕಾಗಿ ಅವನು ಫ್ರಾನ್ಸ್, ಟರ್ಕಿ, ಇರಾನ್ ಮತ್ತು ಅಫಘಾನಿಸ್ಥಾನಗಳೊಡನೆ ಸಂಪರ್ಕವನ್ನು ಬೆಳೆಸಿ ರಾಜಕೀಯ ಬೆಂಬಲವನ್ನು ಮತ್ತು ಕುಶಲಕರ್ಮಿಗಳನ್ನು ಪಡೆಯುವ ಹಾಗೂ ವ್ಯಾಪಾರ ವಾಣಿಜ್ಯಗಳನ್ನು ಅಭಿವೃದ್ಧಿಪಡಿಸುವ ಉದ್ದೇಶಗಳನ್ನು ಹೊಂದಿದ್ದನು. ವಾಣಿಜ್ಯ ವಸ್ತುಗಳಾದ ಮೆಣಸು, ಏಲಕ್ಕಿ, ಗಂಧ, ದಂತ, ರೇಷ್ಮೆ, ತೆಂಗಿನ ಕಾಯಿ, ಹೊಗೆಸೊಪ್ಪು ಮತ್ತು ಆನೆಗಳ ವ್ಯಾಪಾರದಲ್ಲಿ ಮೈಸೂರು ಪ್ರಾಂತ್ಯ ತನ್ನದೇ ಆದ ಏಕಸ್ವಾಮ್ಯವನ್ನು ಪಡೆದಿತ್ತು. ಈ ಎಲ್ಲಾ ವಸ್ತುಗಳಿಗೆ ವಿದೇಶಿ ಮಾರುಕಟ್ಟೆಗಳಲ್ಲಿ ಅಪಾರವಾದ ಬೇಡಿಕೆಯಿತ್ತು. ಆದುದರಿಂದ ಅಟ್ಟೋಮನ್ ಸಾಮ್ರಾಜ್ಯ, ಚೀನಾ, ಮಸ್ಕತ್, ಪೆಗು, ಅರ್ಮೇನಿಯಾ, ಜಿದ್ದಾ, ಆರ್ಮುಜ್ ಮೊದಲಾದ ವಿದೇಶೀ ರಾಷ್ಟ್ರಗಳೊಡನೆ ವಾಣಿಜ್ಯ ಸಂಬಂಧಗಳನ್ನು ಸ್ಥಾಪಿಸಿಕೊಂಡನು. ೧೭೮೪-೮೫ರಲ್ಲಿ ಟಿಪ್ಪು ಕಾನ್‌ಸ್ಟಂಟ್‌ನೋಪಾಲ್‌ಗೆ ರಾಯಭಾರಿಯನ್ನು ಕಳುಹಿಸಿಕೊಟ್ಟನು. ಟರ್ಕಿಯ ಸುಲ್ತಾನ ಅಬ್ದುಲ್ ಹಮೀದ್‌ಗೆ ಬರೆದ ಒಂದು ಪತ್ರದಲ್ಲಿ ಇಂಗ್ಲೀಷರು ಭಾರತವನ್ನು ಹೇಗೆ ಆಕ್ರಮಿಸಿ ಕೊಂಡರು ಎಂಬುದನ್ನು ಸವಿಸ್ತಾರವಾಗಿ ವಿವರಿಸಿದ್ದಾನೆ. ಮೈಸೂರು ಮತ್ತು ಟರ್ಕಿಯ ನಡುವೆ ಮಿಲಿಟರಿ ಸಹಕಾರಕ್ಕೆ ಸಂಬಂಧಪಟ್ಟಂತೆ ಒಪ್ಪಂದ ಏರ್ಪಡಿಸಬೇಕೆಂದು ಸೂಚಿಸಿದನು. ಒಪ್ಪಂದದ ಇನ್ನೊಂದು ಪ್ರಸ್ತಾಪದಲ್ಲಿ ತಂತ್ರಜ್ಞರು ಮತ್ತು ಕುಶಲಕರ್ಮಿಗಳಿಗೆ ಸಂಬಂಧಿಸಿದ್ದಾಗಿತ್ತು. ಆದರೆ ಟರ್ಕಿಯ ಸುಲ್ತಾನ ರಷ್ಯಾನರ ವಿರುದ್ಧ ನಡೆಯುತ್ತಿದ್ದ ಹೋರಾಟದಲ್ಲಿ ಬಿಡುವಿಲ್ಲದ ಕಾರಣ ಟಿಪ್ಪುವಿನೊಡನೆ ಒಪ್ಪಂದ ಮಾಡಿಕೊಳ್ಳಲು ನಿರಾಕರಿಸಿದನು. ಇದಲ್ಲದೆ ಟರ್ಕಿಯೊಂದಿಗೆ ಇಂಗ್ಲೀಷರೂ ಸ್ನೇಹದೊಂದಿಗೆ ಇದ್ದರು. ಈ ರಾಯಭಾರಿಗಳು ಭಾರತಕ್ಕೆ ನಾಲ್ಕು ವರ್ಷಗಳ ನಂತರ ೧೭೮೯ರಲ್ಲಿ ವಾಪಾಸ್ಸಾದರು.

ಟರ್ಕಿರಿಂದ ಸಹಾಯ ಪಡೆಯಲು ನಡೆಸಿದ ಪ್ರಯತ್ನ ಸಫಲವಾಗದೇ ಇದ್ದಾಗ ಟಿಪ್ಪು ಫ್ರೆಂಚರ ಕಡೆ ವಾಲಿದನು. ಅವನು ಫ್ರಾನ್ಸ್‌ನ ಚಕ್ರವರ್ತಿಯಾಗಿದ್ದ ೧೬ನೇ ಲೂಯಿಯ ಬಳಿಗೆ ನಿಯೋಗವೊಂದನ್ನು ಕಳುಹಿಸಿಕೊಟ್ಟು ಮಿಲಿಟರಿ ನೆರವು ಮತ್ತು ರಕ್ಷಣಾ ಒಪ್ಪಂದ ಇವುಗಳನ್ನು ಮಾಡಿಕೊಳ್ಳಲು ಪ್ರಯತ್ನಿಸಿದನು. ಮದ್ರಾಸ್, ಮುಂಬಯಿ ಮತ್ತು ಬಂಗಾಳಗಳಲ್ಲಿ ಇಂಗ್ಲೀಷರನ್ನು ಸದೆಬಡಿಯಲು ಹತ್ತು ಸಾವಿರ ಫ್ರೆಂಚ್ ಸೈನಿಕರ ಸಹಾಯವನ್ನು ಬೇಡಿದನು. ಈ ನಿಯೋಗ ಭಾರತವನ್ನು ೧೭೮೭ರಲ್ಲಿ ಬಿಟ್ಟು ೧೬ನೇ ಲೂಯಿಯನ್ನು ೧೭೮೮ರ ಆಗಸ್ಟ್ ೩ರಂದು ಭೇಟಿ ಮಾಡಿ, ೧೭೮೯ರಲ್ಲಿ ಭಾರತಕ್ಕೆ ಬರಿಗೈಯಿಂದ ಹಿಂದಿರುಗಿತು. ಫ್ರಾನ್ಸ್ ಆಗ ಕ್ರಾಂತಿ ಪಥದಲ್ಲಿ ಸಾಗಿತ್ತು. ಆದುದರಿಂದ ಟಿಪ್ಪುವಿನ ನೆರವಿಗೆ ಸ್ಪಂದಿಸುವ ವಿಷಯ ದೂರವೇ ಆಯಿತು. ಈ ರೀತಿ ರಾಜಕೀಯವಾಗಿ ವಿಫಲವಾದಾಗ್ಯೂ ಸಹ ಟಿಪ್ಪು ವಿದೇಶಗಳೊಡನೆ ವಾಣಿಜ್ಯ ಸಂಬಂಧಗಳನ್ನು ಬೆಳೆಸಿಕೊಳ್ಳುವುದರಲ್ಲಿ ಸಫಲನಾದನು (ಉದಯ ೨೦೦೩:೫೫).

ಅರ್ಥರ್ ವೆಲ್ಲೆಸ್ಲಿಯು ೧೭೯೨ರ ಮೂರನೇ ಮೈಸೂರು ಯುದ್ಧದಲ್ಲಿ ಭಾಗವಹಿಸಿದ ಟಿಪ್ಪುವಿನ ಅಶ್ವದಳವು ಜಗತ್ತಿನಲ್ಲೇ ಬಲಿಷ್ಠವಾದುದೆಂದು ಪರಿಗಣಿಸಿದನು. ಆದುದರಿಂದ ಕಾರ್ನ್ ವಾಲೀಸ್ ಸೈನ್ಯದ ಮೇಲೆ ಒತ್ತಡ ತಂದು ಈಗಾಗಲೇ ಅನುಭವಿಸಿರುವ ಜಯದೊಂದಿಗೆ ಸಮಾಧಾನಪಟ್ಟು ಟಿಪ್ಪುವಿನೊಂದಿಗೆ ಒಪ್ಪಂದ ಮಾಡುವುದನ್ನು ಸೂಚಿಸಿದನು. ಇದಾದ ಏಳು ವರ್ಷಗಳಲ್ಲಿ ಅರಬ್ಬಿ ಸಮುದ್ರ ಹಾಗೂ ಪಶ್ಚಿಮ ಕರಾವಳಿ ಕೇಂದ್ರಗಳಲ್ಲಿ ಮುಸ್ಲಿಂ ಅಧೀನದ ವಾಣಿಜ್ಯ ವಹಿವಾಟುಗಳು ದುರ್ಬಲವಾಗುತ್ತಿರುವುದನ್ನು ಟಿಪ್ಪು ಗಮನಿಸಿದನು. 'ಬ್ರಿಟಿಷ್ ವ್ಯಾಪಾರ ಆಸಕ್ತಿ'ಗಳ ವೃದ್ಧಿ ಭಾರತದ ರಾಜ್ಯಗಳ ಸ್ವಾತಂತ್ರ್ಯಕ್ಕೆ ಎಸಗುವ ಬೆದರಿಕೆ ಎಂದು ಆತ ಮನಗಂಡಿದ್ದನು. ಇದಕ್ಕುತ್ತರವಾಗಿ ಅರೇಬಿಯಾ ಮತ್ತು ಪರ್ಷಿಯಾ ದೇಶಗಳ ಬಂದರು ನಗರಗಳಲ್ಲಿ ಟಿಪ್ಪು ಸರಕಾರದ ಪ್ರೋತ್ಸಾಹದೊಂದಿಗೆ ಪ್ರತ್ಯೇಕ ವ್ಯಾಪಾರಿ ಸಂಸ್ಥೆಗಳನ್ನು ತೆರೆದನು. ಆದರೆ ಕೊನೆಯಲ್ಲಿ ಕೆಲವೊಂದು ಸಾಂಸ್ಥಿಕ ಬದಲಾವಣೆಗಳಿಂದಾಗಿ ಹಲವು ಘಟನೆಗಳು ಸಂಭವಿಸಿ ಅವೆಲ್ಲವು ಟಿಪ್ಪು ಪ್ರಭುತ್ವಕ್ಕೆ ವಿರೋಧಿಗಳಾಗಿ ಪರಿಣಮಿಸಿದವು(ಉದಯ ೨೦೦೩:೧೮).

ಟಿಪ್ಪು ಸುಲ್ತಾನನು ೧೭೯೨ರಲ್ಲಿ ಮಂಗಳೂರಿನ ವ್ಯಾಪಾರಿ ಹಡಗಿನ ಕಮಾಂಡರುಗಳಾದ ಮೋನೀಸ್ ಮತ್ತು ರಿಫಂಡ್‌ರವರು ಇದ್ದ ನಿಯೋಗವನ್ನು ಫ್ರಾನ್ಸ್‌ಗೆ ಕಳುಹಿಸಿದನು. ಈ ಇಬ್ಬರು ಟಿಪ್ಪು ಸುಲ್ತಾನನ ಅರಮನೆಯಲ್ಲಿ ಮಹತ್ವದ ವ್ಯಕ್ತಿಗಳಾಗಿದ್ದರು. ಆದರೆ ಈ ನಿಯೋಗ ಅತ್ಯಂತ ಕಳಪೆ ಮಟ್ಟದ ನಿರ್ವಹಣೆಯ ನಿಯೋಗ ಎಂದು ವೆನ್. ಟಿ. ಡಬ್ಲ್ಯೂರವರು ಅಭಿಪ್ರಾಯಪಟ್ಟಿದ್ದಾರೆ.

ಮೂರನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನ್ ಸೋತ ನಂತರ ಮಾರುಕಟ್ಟೆಯ ಅಂತರ್ಜಾಲ ಸಂಪರ್ಕಕ್ಕೆ ಸಂಬಂಧಿಸಿ ಪಾಲ್ಘಾಟ್, ಕೊಯಂಬತ್ತೂರಿನ ವ್ಯಾಪಾರ ವ್ಯವಹಾರಕ್ಕೆ ಅಡಚಣೆ ಉಂಟಾಯಿತು ಎಂದು ರುಚಿರ ಬ್ಯಾನರ್ಜಿಯವರು ಪ್ರಸ್ತಾಪಿಸುತ್ತಾರೆ.

ಬಹಳ ದೀರ್ಘವಾಗಿ ಮುಂದುವರಿದ ಎರಡನೇ ಆಂಗ್ಲೋ ಮೈಸೂರು ಯುದ್ಧ ಭಾರೀ ಮಹತ್ವದ ಬದಲಾವಣೆಗಳ ಪರಿಣಾಮ ಬೀರಿದೆ. ದೇಶೀಯ ವ್ಯಾಪಾರಸ್ಥರು ಸಾಲ ತಂದು ಹೂಡಲಾದ ಹಣಕಾಸು ವ್ಯವಸ್ಥೆಯು ಯುರೋಪಿಯನ್ನರ ವ್ಯಾಪಾರದ ಕಡೆಗೆ ವಾಲಿತು. ಬಹಳಷ್ಟು ಯುದ್ಧದ ಸಂದರ್ಭಗಳಲ್ಲಿ ಮಾಮೂಲಿ ವ್ಯಾಪಾರ ವ್ಯವಹಾರಗಳಿಗೆ ಅಡಚಣೆಯಾಗುತ್ತಿರಲಿಲ್ಲ. ಯುದ್ಧೋಪಕರಣಗಳ ವ್ಯಾಪಾರ ವ್ಯವಹಾರಗಳು ಬಿರುಸಿನಿಂದ ನಡೆಯುತ್ತಾ ಸಾವಿರಾರು ಸಂಖ್ಯೆಯ ಸೈನಿಕರ ದಂಡು ಯುದ್ಧದಲ್ಲಿ ನಿರತರಾಗಿರುವಾಗ ಅಲ್ಲಿ 'ಯುದ್ಧದ ಸಂತೆ ವ್ಯಾಪಾರ' ರೂಪಿತವಾಗುತ್ತಿದ್ದವು. ಹುಬ್ಬಳ್ಳಿಯಲ್ಲಿ ೧೭೯೦ರಲ್ಲಿ ಯುದ್ಧ ನಡೆಯುತ್ತಿರುವ ಸಮಯದಲ್ಲಿ ವ್ಯಾಪಾರಿ ಬಜಾರ್ ನಿರ್ಮಾಣವಾದುದನ್ನು ಗಮನಿಸಬಹುದು. ಸೈನಿಕ ಕ್ಯಾಂಪ್‌ಗಳು ಮಾರಾಟಗಾರರಿಗೆ ದೈಹಿಕ ರಕ್ಷಣೆಯನ್ನು ನೀಡುತ್ತಿದ್ದವು. ಇದು ಸೇವೆ ಮತ್ತು ವಿನಿಮಯಕ್ಕೆ ಅವಕಾಶ ಕಲ್ಪಿಸುತ್ತಿತ್ತು ಎಂದು ರುಚಿರ ಬ್ಯಾನರ್ಜಿಯವರು ವಿಶ್ಲೇಷಿಸುತ್ತಾರೆ. ದೀರ್ಘ ಸಮಯ ನಡೆದ ಕರ್ನಾಟಕ ಯುದ್ಧಗಳಲ್ಲಿ ಹೆಚ್ಚು ಕಡಿಮೆ ಎಲ್ಲಾ ವಿರೋಧಿ ಶಕ್ತಿಗಳು ಅದು ಬ್ರಿಟಿಷರಾಗಲಿ, ಫ್ರೆಂಚರಾಗಲಿ, ಹೈದರ್ ಆಗಲಿ, ಟಿಪ್ಪುವೇ ಆಗಲಿ ಇವರೆಲ್ಲರೂ ಶತ್ರು ಪ್ರದೇಶದಲ್ಲಿ ಇರುವ ವ್ಯಾಪಾರಿಗಳಿಗೆ ರಕ್ಷಣೆ ಕೊಡುವ ಬಗ್ಗೆ ಆತಂಕಿತರಾಗಿದ್ದರು. ಏಕೆಂದರೆ ಯುದ್ಧ ಮುಂದುವರಿಯ ಬೇಕಿದ್ದರೆ ವ್ಯಾಪಾರಿಗಳು ಬೇಕೇ ಬೇಕಿತ್ತು. ಅವರು ಎಲ್ಲಾ ರೀತಿಯ ಆಹಾರ ವಸ್ತುಗಳನ್ನು ಸರಬರಾಜು ಮಾಡಲೇ ಬೇಕಿತ್ತು.

ಉದಾ: ಹೈದರಾಲಿಯು ೧೭೮೦ರಲ್ಲಿ ಮದ್ರಾಸಿನ ಬ್ಲ್ಯಾಕ್ ಟೌನ್ (Black Town)ಗೆ ದಾಳಿ ಮಾಡುವುದರ ಬಗ್ಗೆ ಆತಂಕಿತರಾದ ವ್ಯಾಪಾರಿ ವರ್ಗ ಮದ್ರಾಸ್ ಕೌನ್ಸಿಲ್‌ಗೆ ಮನವಿ ಮಾಡಿ ರಕ್ಷಣೆ ಮಾತ್ರವಲ್ಲದೆ ಜನರ ಮನದಲ್ಲಿ ಇರುವ ಭಯವನ್ನು ದೂರ ಮಾಡಬೇಕೆಂದು ಮನವಿ ಮಾಡಿದರು (ರುಚಿರಾ ಬ್ಯಾನರ್ಜಿ (೩೮-೧,೨) ೨೦೦೧:೨೦೪).

ಈ ರೀತಿ ೧೭೮೩ರಿಂದ ೧೭೯೯ರ ಟಿಪ್ಪು ಸುಲ್ತಾನನ ಕಾಲಾವಧಿಯಲ್ಲಿ ಬ್ರಿಟಿಷರೊಂದಿಗೆ ಹಲವಾರು ಯುದ್ಧಗಳನ್ನು ಮಾಡಿಕೊಂಡನು. ವ್ಯಾಪಾರ ವಾಣಿಜ್ಯೋದ್ಯಮಿಗಳಿಗೆ ಸಂಬಂಧಿಸಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಸಂಬಂಧಗಳನ್ನು ಬೆಳೆಸಿದನು. ಇವೆಲ್ಲವುಗಳ ಮಧ್ಯೆ ವ್ಯಾಪಾರೋದ್ಯಮಿಗಳು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗಳ ಮೇಲೆ ಒತ್ತಡ ಹೇರಿ ಯುದ್ಧದ ಪರಿಸ್ಥಿತಿಯಿಂದ ಲಾಭ ಪಡೆದು ಕೊಳ್ಳಲು ಎಲ್ಲಾ ರೀತಿಯಿಂದಲೂ ಶ್ರಮಿಸಿದರು[೧೧].

**ಯುದ್ಧದ ವ್ಯಾಪಾರ- ವ್ಯಾಪಾರೋದ್ಯಮಿಗಳು ಮತ್ತು ಟಿಪ್ಪು**

ಯುದ್ಧವನ್ನೇ ಬಯಸುತ್ತಿದ್ದ ವಾಣಿಜ್ಯೋದ್ಯಮಿಗಳ ವರ್ಗ ಮುಂಬಯಿಯಲ್ಲಿ ಕಾರ್ಯಚರಿಸುತ್ತಿತ್ತು. ಇದರಲ್ಲಿ ದೇಶೀಯ ವ್ಯಾಪಾರಿಗಳು, ವಿದೇಶದ ವ್ಯಾಪಾರಿಗಳೂ ಇದ್ದರು. ಇವರು ಬ್ರಿಟಿಷ್ ಆಡಳಿತಗಾರರ ಮೇಲೆ ಮೂರನೇ ಆಂಗ್ಲೋ ಮೈಸೂರು ಯುದ್ಧದ ನಂತರ ಆದಷ್ಟು ಬೇಗ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧವನ್ನು ನಡೆಸಿ ಟಿಪ್ಪುವನ್ನು ಅಧಿಕಾರದಿಂದ ಕೆಳಗಿಳಿಸಬೇಕೆಂದು ಬಯಸುತ್ತಿದ್ದರು. ಈ ಅಂಶವನ್ನು ರುಚಿರ ಬ್ಯಾನರ್ಜಿಯವರು ಪ್ರಸ್ತಾಪಿಸುತ್ತಾ,

> ಯುದ್ಧದ ಮನೋಭಾವದ ಬಗ್ಗೆ ೧೭೬೭ರ ನಂತರ ಈಸ್ಟ್ ಇಂಡಿಯಾ ಕಂಪೆನಿಯು ನಡೆಸುವ ಯುದ್ಧವನ್ನು ಬೆಂಬಲಿಸಿ ಹಾಗೂ ಅದರ ಪರವಾಗಿ ಪ್ರಚಾರ ನಡೆಸಲು ದೇಶೀಯ ರಾಜರುಗಳ ನಿರಂಕುಶ ದರ್ಪದ ಆಡಳಿತವನ್ನು ಕೊನೆಗಾಣಿಸುವುದು ಸಹಜ ನ್ಯಾಯದ ಅನಿವಾರ್ಯ ಪರಿಸ್ಥಿತಿ ಎಂದು ಹೇಳುತ್ತಿದ್ದರು. ದೇಶೀಯ ರಾಜರುಗಳ ಬಗ್ಗೆ ಉತ್ಪ್ರೇಕ್ಷಿತ ವರದಿ ಮತ್ತು ಪ್ರಚಾರ ನಡೆಸುತ್ತಿದ್ದರು (ರುಚಿರಾ ಬ್ಯಾನರ್ಜಿ (೩೮-೧,೨) ೨೦೦೧:೨೦೪).

ಈ ಅವಧಿಯಲ್ಲಿ ಮುಂಬಯಿನ ಉದ್ಯಮಿಗಳು ಯುದ್ಧದ ಪರವಾಗಿ ನಡೆಸುತ್ತಿದ್ದ ಬಲವಾದ ಲಾಬಿ ಮತ್ತು ಪ್ರಚೋದನೆಯ ಬಗ್ಗೆ ಅವರು ಉಲ್ಲೇಖಿಸುತ್ತಾ,

> ಟಿಪ್ಪುವಿನ ನಿರಂಕುಶ ಪ್ರಭುತ್ವವನ್ನು ಕೊನೆಗಾಣಿಸಿ ಈಸ್ಟ್ ಇಂಡಿಯಾ ಕಂಪೆನಿಯ ಮಾನವೀಯ ಮೌಲ್ಯದ ಜೀವಪರ ಸರಕಾರವನ್ನು ಸ್ಥಾಪಿಸಬೇಕೆಂದು ಪ್ರತಿಪಾದಿಸುತ್ತಿದ್ದರು (ರುಚಿರಾ ಬ್ಯಾನರ್ಜಿ (೩೮-೧,೨) ೨೦೦೧:೨೦೪).

ನಿರಂತರವಾಗಿ ನಡೆಯುತ್ತಿದ್ದ ಆಂಗ್ಲೋ ಮೈಸೂರು ಯುದ್ಧದಿಂದಾಗಿ ಮುಂಬಯಿಯ ಪ್ರಾಂತೀಯ ಸರಕಾರವು ತನ್ನ ನೌಕರರಿಗೆ ಸಂಬಳ ಪಾವತಿಸದೆ ದಿವಾಳಿ ಅಂಚಿನಲ್ಲಿದ್ದು ವಾಣಿಜ್ಯೋದ್ಯಮಿ ಮತ್ತು ಏಜೆಂಟರುಗಳಿಂದ ಸಾಲದ ರೀತಿಯ ಸಹಕಾರವನ್ನು ಅಪೇಕ್ಷಿಸುತ್ತಿತ್ತು. ಇದಕ್ಕೆ ಪೂರಕವಾಗಿ ಇದೇ ಸಮಯದಲ್ಲಿ ಜಾರಿಗೆ ಬಂದ ಪಿಟ್ಸ್ ಇಂಡಿಯಾ ಆ್ಯಕ್ಟ್‌ನ ಪ್ರಕಾರ ಖಾಸಗಿ ಏಜೆಂಟರುಗಳಿಂದ

(ವಾಣಿಜ್ಯೋದ್ಯಮಿಗಳಿಂದ) ಸಾಲ ಪಡೆಯಲು ಅವಕಾಶ ಇದ್ದ ಕಾರಣ ಮುಂಬಯಿ ಪ್ರಾಂತೀಯ ಸರಕಾರವು ಮಹಾ ಆರ್ಥಿಕ ಬಿಕ್ಕಟ್ಟಿನಿಂದ ಪಾರಾಗಲು ಸಾಧ್ಯವಾಯಿತು. ಗವರ್ನರ್ ಜನರಲ್ ಕಾರ್ನ್‌ವಾಲೀಸ್ ಯುದ್ಧದಿಂದ ಆರ್ಥಿಕತೆ ಮತ್ತಷ್ಟೂ ಬಿಕ್ಕಟ್ಟಿಗೆ ಒಳಗಾಗುವುದೆಂದು ವಾದಿಸಿದನು. ಆದರೆ ವಾಣಿಜ್ಯೋದ್ಯಮಿಗಳ ಬಲವಾದ ಹಿತಾಸಕ್ತಿಯಿಂದ ಅನಿವಾರ್ಯವಾಗಿ ಕಾರ್ನ್‌ವಾಲೀಸ್ ಕೂಡ ಯುದ್ಧದ ಪರ ನಿಲ್ಲಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಒಟ್ಟಿನಲ್ಲಿ ೧೭೮೪ರಿಂದ ಮುಂದಿನ ೧೫ ವರ್ಷಗಳ ಕಾಲ ಹೆಚ್ಚು ಕಡಿಮೆ ಮುಂಬಯಿ ವಾಣಿಜ್ಯೋದ್ಯಮಿಗಳು ಕರಾವಳಿ ಕರ್ನಾಟಕದ ವಿಪುಲವಾದ ಸಂಪನ್ಮೂಲ – ಆದಾಯದ ಮೇಲೆ ಹೆಚ್ಚಿನ ಆಸಕ್ತಿವಹಿಸಿ ನಿರಂತರ ಯುದ್ಧಕ್ಕಾಗಿ ಹಾತೊರೆಯುತ್ತಿದ್ದರು. ಈ ರೀತಿಯ ಸಂಘರ್ಷದಿಂದ ವಾಣಿಜ್ಯೋದ್ಯಮಿಗಳಿಗೆ ಬಹುಸ್ತರೀಯ ಲಾಭ ಆಗುತ್ತಿತ್ತು. ಒಟ್ಟಿನಲ್ಲಿ ೧೭೮೪ರಿಂದ ೧೭೯೯ರವರೆಗೆ ಕರಾವಳಿ ಕರ್ನಾಟಕವು ಟಿಪ್ಪು ಸುಲ್ತಾನ್ – ಈಸ್ಟ್ ಇಂಡಿಯಾ ಕಂಪೆನಿ – ವಾಣಿಜ್ಯೋದ್ಯಮಿಗಳ ಹಿತಾಸಕ್ತಿಗಳ ಪರಸ್ಪರ ಸಂಘರ್ಷದ ಆಡುಂಬೊಲವಾಗಿತ್ತು.

ಹೈದರಾಲಿಯ ಬಗ್ಗೆ ಮುಂಬಯಿ ಮತ್ತು ಮದ್ರಾಸ್ ಪ್ರೆಸಿಡೆನ್ಸಿ ಸರಕಾರಗಳ ಧೋರಣೆ ವಿರೋಧಾಭಾಸಗಳಿಂದ ಕೂಡಿದೆ. ಮುಂಬಯಿ ಪ್ರಾಂತೀಯ ಸರಕಾರ ಸದಾ ವಾಣಿಜ್ಯದ ದೃಷ್ಟಿ ಕೋನಗಳಿಂದ ಸ್ಥಳೀಯ ರಾಜರೊಂದಿಗೆ ತನ್ನ ಧೋರಣೆಗಳನ್ನು ರೂಪಿಸುತ್ತಿತ್ತು. ಇದಕ್ಕೆ ಪೂರಕವಾಗಿ ಈಸ್ಟ್ ಇಂಡಿಯಾ ಕಂಪೆನಿಯ ಕಮರ್ಶಿಯಲ್ ಡಿಪಾರ್ಟ್‌ಮೆಂಟ್ ಕೆಲಸ ಮಾಡುತ್ತಿತ್ತು.[೧೨] ರಾಜಕೀಯ ಕಾರಣಗಳು ಅತೀ ಮುಖ್ಯವಾಗಿರಲಿಲ್ಲ. ಆದರೆ ಮದ್ರಾಸ್ ಪ್ರಾಂತೀಯ ಸರಕಾರವು ಸಾಮಾನ್ಯವಾಗಿ ವಾಣಿಜ್ಯೋದ್ಯಮದ ದೃಷ್ಟಿಯಿಂದ ಸಾಕಷ್ಟು ದೂರ ಇತ್ತು. ಅದು ಕಲ್ಕತ್ತಾ ಪ್ರಾಂತೀಯ ಸರಕಾರದಂತೆ ಅಧಿಕಾರದ ಸಾರ್ವಭೌಮತೆಗೆ ಹೆಚ್ಚಿನ ಗಮನ ನೀಡುತ್ತಿತ್ತು. ಈ ಹಿನ್ನೆಲೆಯಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಬಗ್ಗೆ ಎರಡು ಪ್ರಾಂತೀಯ ಧೋರಣೆಗಳು ವಿಭಿನ್ನ ದೃಷ್ಟಿಕೋನ ಹೊಂದಿತ್ತು. ಪ್ರಾರಂಭದ ಹಂತದಲ್ಲಿ ಮುಂಬಯಿ ಸರಕಾರವು ಹೈದರಾಲಿಯೊಂದಿಗೆ ಮಿತ್ರತ್ವವನ್ನು ಬಯಸಿತು. ಆದರೆ ಮದ್ರಾಸ್ ಪ್ರಾಂತೀಯ ಸರಕಾರವು ಇದರ ಬದಲಾಗಿ ಹೈದರಾಲಿಯನ್ನು ಸದೆ ಬಡಿಯಲು ಪ್ರಯತ್ನಿಸುತ್ತಿತ್ತು. ಈ ಹಿನ್ನೆಲೆಯಲ್ಲಿ ಅದು ಮಲಬಾರ್ ಪ್ರಾಂತ್ಯದ ಸಾಮಂತರಾಜರುಗಳ ಸಭೆ ಕರೆದು ಒಂದು ಐಕ್ಯಕೂಟಕ್ಕೆ ಪ್ರಯತ್ನಿಸಿತ್ತು. ಒಂದು ನಿರ್ದಿಷ್ಟ ಸಂದರ್ಭದಲ್ಲಿ ಮುಂಬಯಿ ಸರಕಾರವು ಮದ್ರಾಸ್ ಸರಕಾರಕ್ಕೆ ಪತ್ರ ಬರೆದು ಹೈದರಾಲಿಗೆ ಸಂಬಂಧಿಸಿದಂತೆ ಇರುವ ಭಿನ್ನಾಭಿಪ್ರಾಯಗಳನ್ನು ಬಗೆ ಹರಿಸಿಕೊಳ್ಳಲು ಸಲಹೆ ನೀಡಿತ್ತು (ಷೇಕ್ ಆಲಿ ೧೯೬೩:೩೯). ಮುಂಬಯಿ ಪ್ರಾಂತೀಯ ಸರಕಾರವು ಹೈದರಾಲಿಗೆ ಬಂಧೂಕುಗಳನ್ನು ಕರಿಮೆಣಸಿಗೆ ಪರ್ಯಾಯವಾಗಿ ನಿರಂತರವಾಗಿ ಸರಬರಾಜು ಮಾಡುತ್ತಿದ್ದುದನ್ನು ಮದ್ರಾಸ್ ಪ್ರಾಂತೀಯ ಸರಕಾರವು ಆಕ್ಷೇಪಿಸಿತ್ತು. ಇದೇ ರೀತಿ ಹಡಗುಗಳನ್ನು ರಿಪೇರಿ ಮಾಡುತ್ತಿರುವುದನ್ನು ಮತ್ತು ನೌಕಾ ಸೈನ್ಯದ ಧಕ್ಕೆಗಳನ್ನು ಉಪಯೋಗಿಸುತ್ತಿರುವುದನ್ನೂ ಆಕ್ಷೇಪಿಸಿತ್ತು. ಆದರೆ ಷೇಕ್ ಬಿ. ಆಲಿಯವರು ಮದ್ರಾಸ್ ಸರಕಾರದ ಧೋರಣೆಯು ಹೈದರಾಲಿಯ ಬಗ್ಗೆ ವೈರತ್ವವಾಗಲೀ, ಗೆಳೆತನವಾಗಲೀ ಆಗಿರದೆ ಆಸಕ್ತಿರಹಿತ ಮನೋಭಾವ ಎಂದು ವಿಶ್ಲೇಷಿಸಿದ್ದಾರೆ (ಷೇಕ್ ಆಲಿ ೧೯೬೩:೪೦). ವಾಸ್ತವಿಕವಾಗಿ ಹೈದರಾಲಿಯು ೧೭೬೮ರ ನಂತರ ಆಕ್ರಮಣಕಾರಿ ಧೋರಣೆಯನ್ನು ಹೊಂದಿದ್ದನು. ಇದು ಮುಂದೆ ಟಿಪ್ಪು ಸುಲ್ತಾನ್‌ನ ಕಾಲಘಟ್ಟದಲ್ಲಿ

ತೀವ್ರ ಸ್ವರೂಪದಲ್ಲಿ ನಡೆಯಿತು ಮತ್ತು ಟಿಪ್ಪುವಿನ ಕಾಲದಲ್ಲಿ ಮುಂಬಯಿ ಪ್ರಾಂತೀಯ ಸರಕಾರವು ಟಿಪ್ಪುವನ್ನು ಖಂಡ ತುಂಡವಾಗಿ ವಿರೋಧಿಸುವ ಧೋರಣೆಯನ್ನು ಅನುಸರಿಸಿತು.

ಬ್ರಿಟಿಷ್ ಚಕ್ರಾಧಿಪತ್ಯದ ನಿರ್ಣಾಯಕ ಹಂತದಲ್ಲಿ ಅವರಿಗೆ ಸಿಂಹಸ್ವಪ್ನವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಕಾಡುತ್ತಾರೆ. ಹೈದರಾಲಿಯು ನಿರ್ವಹಿಸಿದ ಧೋರಣೆ ಭಾರತದ ಚರಿತ್ರೆಯಲ್ಲೇ ಒಂದು ಮೈಲಿಗಲ್ಲಾಗಿದೆ. ಬ್ರಿಟಿಷರಿಂದಲೇ ಅಸ್ತ್ರ ಪಡೆದು ಅವರ ವಿರುದ್ಧವೇ ಪ್ರಯೋಗಿಸುವ ನೈಪುಣ್ಯತೆ ಭಾರತದಲ್ಲೇ ಮೊದಲನೆಯದ್ದಾಗಿದೆ. ಹೈದರಾಲಿಯ "ಗನ್ ಫಾರ್ ಪೆಪ್ಪರ್" ಸಿದ್ಧಾಂತ ಬ್ರಿಟಿಷರಿಗೆ ಅನಿವಾರ್ಯವಾಗಿತ್ತು. ಮುಂಬಯಿ ಪ್ರಾಂತೀಯ ಸರಕಾರ ತನ್ನ ವಾಣಿಜ್ಯದ ಅವಕಾಶಗಳನ್ನು ಸಮರ್ಥವಾಗಿ ಉಪಯೋಗಿಸಬೇಕಿದ್ದಲ್ಲಿ ಈ ಸಂಬಂಧವಾಗಿ ತನ್ನ ಪೂರ್ವ ನಿರ್ಧಾರಿತ ನಿಲುಮೆಗೆ ವ್ಯತಿರಿಕ್ತವಾಗಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ರಾಜಿ ಸೂತ್ರ ಅನುಸರಿಸುವುದು ಅನಿವಾರ್ಯವಾಯಿತು. ಆದರೆ ಟಿಪ್ಪುಸುಲ್ತಾನ್‌ನ ಕಾಲಾವಧಿಯು ಸಂಪೂರ್ಣವಾಗಿ ಯುದ್ಧಗಳ ಕಾಲಾವಧಿಯಾಗಿತ್ತು. ಷೇಕ್ ಬಿ. ಆಲಿಯವರು ಟಿಪ್ಪು ಸುಲ್ತಾನ್‌ನ ಬಗ್ಗೆ ಈ ರೀತಿ ವ್ಯಾಖ್ಯಾನಿಸಿದ್ದಾರೆ.

> ಟಿಪ್ಪು ಸುಲ್ತಾನ್‌ನ ಆಳ್ವಿಕೆಯ ಕಾಲಾವಧಿ ಅತ್ಯಲ್ಪವಾದರೂ ಅದು ಭೋರ್ಗರೆಯುತ್ತಾ ಸಾಗಿತ್ತು. ಅನೇಕ ದೃಷ್ಟಿಯಿಂದ ಅವನ ಆಳ್ವಿಕೆಯ ಕಾಲ ಮಹತ್ವಪೂರ್ಣವಾಗಿದೆ. ಭಾರತದಲ್ಲಿ ಬ್ರಿಟಿಷರ ವಿರುದ್ಧ ಉಗ್ರವಾದ ಪ್ರತಿಭಟನೆಯನ್ನು ತೋರಿಸಿದ್ದು ಅವನ ಜೀವನದ ಪ್ರಮುಖ ಅಂಶವಾಗಿದೆ. ಇಂಗ್ಲೀಷರು ಹಿಂದೆಂದೂ ಟಿಪ್ಪುವಿಗಿಂತ ಮಿಗಿಲಾದ ಅಸಾಮಾನ್ಯ ಶತ್ರುವನ್ನು ಎದುರಿಸಿರಲಿಲ್ಲ. ಬ್ರಿಟಿಷರನ್ನು ದೇಶದಿಂದ ಓಡಿಸುವುದೇ ಅವನ ಜೀವನದ ಪರಮ ಧ್ಯೇಯವಾಗಿತ್ತು. ಆ ಧ್ಯೇಯಕೋಸ್ಕರ ತನ್ನೆಲ್ಲಾ ಸಾಧನ ಸಂಪನ್ಮೂಲಗಳನ್ನು ಧಾರೆಯೆರೆದ. ಅಂತಿಮವಾಗಿ ತನ್ನ ಜೀವವನ್ನೇ ಪಣವಾಗಿಡಲು ಹಿಂದೆ ಮುಂದೆ ನೋಡಲಿಲ್ಲ (ಷೇಕ್ ಆಲಿ ೧೯೭೭:VII).

ಇಷ್ಟೆಲ್ಲ ಸಂದಿಗ್ಧತೆಗಳಿದ್ದರೂ ತನ್ನ ಪ್ರಜೆಗಳ ಕಲ್ಯಾಣವನ್ನು ವ್ಯಾಪಾರ, ಕೈಗಾರಿಕೆ ಮತ್ತು ಕೃಷಿಗಳ ಮೂಲಕ ಸಾಧಿಸುವ ಧ್ಯೇಯವನ್ನು ಟಿಪ್ಪು ಸದಾ ಪಾಲಿಸುತ್ತಾ ಬಂದನು. ಟಿಪ್ಪು ಸುಲ್ತಾನ್ ಪ್ರತ್ಯೇಕವಾಗಿ ವಾಣಿಜ್ಯ ಇಲಾಖೆಯನ್ನೇ ಸ್ಥಾಪಿಸಿ, ಈ ಬಗ್ಗೆ ವಿಶೇಷ ಗಮನವನ್ನು ನೀಡಿದನು.

ಮುಂದುವರಿದು ಷೇಕ್ ಬಿ. ಆಲಿಯವರು ಎರಡು ಅಂಶಗಳನ್ನು ಪ್ರಸ್ತಾಪಿಸುತ್ತಾರೆ.

೧. ಇಂಗ್ಲಿಷರ ವಿರುದ್ಧ ಒಂದು ಒಕ್ಕೂಟವನ್ನು ರಚಿಸುವುದು.

೨. ತನ್ನ ರಾಜ್ಯದ ವ್ಯಾಪಾರ ಹಿತಾಸಕ್ತಿಗಳನ್ನು ಅಭಿವೃದ್ಧಿಪಡಿಸುವುದು.

ಈ ಎರಡೂ ಧ್ಯೇಯಗಳನ್ನೂ ಸಾಧಿಸುವುದಕ್ಕೋಸ್ಕರ ದೇಶ ವಿದೇಶಿ ರಾಜ್ಯಗಳೊಡನೆ ಸೌಹಾರ್ದ ಯುತವಾದ ಸಂಬಂಧಗಳನ್ನು ಇಟ್ಟುಕೊಳ್ಳಲು ಇಚ್ಛೆಪಟ್ಟ. ತನ್ನ ರಾಜಕೀಯ ಧ್ಯೇಯಗಳನ್ನು ಪೂರ್ಣ ಗೊಳಿಸುವ ಹಾದಿಯಲ್ಲಿ ಟಿಪ್ಪು ವಿಫಲನಾದ. ರಾಜತಾಂತ್ರಿಕ ನೈಪುಣ್ಯತೆಯಲ್ಲಿ ಅವನನ್ನು ಮೀರಿಸಿದ ಶಕ್ತಿಯ ವಿರುದ್ಧ ಅವನು ಹೋರಾಟ ಮಾಡಿದ ಪ್ರಸಂಗ ಈ ವೈಫಲ್ಯತೆಗೆ ಒಂದು ಕಾರಣವಾಗಿದೆ. ಫ್ರಾನ್ಸ್ ಮತ್ತು ಟರ್ಕಿ ದೇಶಗಳು ಕಠಿಣ ಪರಿಸ್ಥಿತಿಯನ್ನು ಎದುರಿಸುತ್ತಿದ್ದುದು ಮತ್ತೊಂದು ಕಾರಣವಾಯಿತು.

ಮರಾಠರು ಮತ್ತು ನಿಜಾಮನು ತಮ್ಮ ಆಂತರಿಕ ವ್ಯವಹಾರಗಳಲ್ಲೇ ಮುಳುಗಿದ್ದರು. ಅವರು ಒಳಜಗಳ ಪ್ರತಿ ಸ್ಪರ್ಧೆಯಿಂದಾಗಿ ಟಿಪ್ಪುವಿನೊಡನೆ ಸಹಕರಿಸಿ ನಡೆಯಲಾಗಲಿಲ್ಲ. ಮೊಗಲರು ದುರ್ಬಲರಾಗಿದ್ದರಿಂದ ಅವರಿಂದ ಮೈಸೂರಿಗೆ ಯಾವ ಲಾಭವೂ ಇರಲಿಲ್ಲ. ಆದಾಗ್ಯೂ ಟಿಪ್ಪುವಿನ ವ್ಯಾಪಾರಿ ಉದ್ದೇಶಗಳೂ ಹೆಚ್ಚಿನ ಮಟ್ಟಿಗೆ ಕೈಗೂಡಿದವು. ಅನೇಕ ವಿದೇಶಿ ರಾಷ್ಟ್ರಗಳೊಡನೆ ಮೈಸೂರಿನ ವ್ಯಾಪಾರ ಹೆಚ್ಚಿತ್ತು. ಟಿಪ್ಪುವಿನ ರಾಜಕೀಯ ಉದ್ದೇಶ ನೆರವೇರದೆ ಇದ್ದಾಗ್ಯೂ ಸಹ ಪರಕೀಯರನ್ನು ಭಾರತದಿಂದ ಒದ್ದೋಡಿಸಲು ಅವನು ಮಾಡಿದ ನಿಷ್ಠಾಪೂರ್ವಕ ಪ್ರಯತ್ನವನ್ನು ನಾವು ಅಲ್ಲಗಳೆಯುವಂತಿಲ್ಲ (ಷೇಕ್ ಆಲಿ ೧೯೭೯:೩೩).

ಕಾರ್ಲ್ ಮಾರ್ಕ್ಸ್‌ರವರು ಟಿಪ್ಪು ಸುಲ್ತಾನನ ಕಾಲಾವಧಿಯಲ್ಲಿ ಭಾರತದ ಹಣಕಾಸು ಪರಿಸ್ಥಿತಿಯ ಬಗ್ಗೆ ಬರೆದ ಲೇಖನವೊಂದರಲ್ಲಿ ಈ ರೀತಿ ವಿವರಿಸುತ್ತಾರೆ.

> ೧೭೮೪ರಿಂದ ಇಂಡಿಯಾದ ಹಣಕಾಸು ಪರಿಸ್ಥಿತಿ ಹೆಚ್ಚು ಹೆಚ್ಚು ಗಹನವಾದ ತೊಂದರೆಗೆ ಒಳಗಾಗುತ್ತಿದೆ. ಈಗ ೫೦ ಮಿಲಿಯ ಪೌಂಡುಗಳ ರಾಷ್ಟ್ರೀಯ ಋಣವಿದೆ. ಆದಾಯದ ಮೂಲಗಳು ಸತತವಾಗಿ ಕಮ್ಮಿಯಾಗುತ್ತಿದೆ. ವೆಚ್ಚ ಅನುಕ್ರಮವಾಗಿ ಹೆಚ್ಚುತ್ತಿದೆ. ಇದನ್ನು ಅಫೀಮಿನ ಮೇಲೆ ಸುಂಕದ ಅನಿಶ್ಚಿತ ಆದಾಯದಿಂದ ಸಂಶಯಾಸ್ಪದ ರೀತಿಯಲ್ಲಿ ತಲೆದೂಗಲಾಗುತ್ತಿದೆ. ಚೀನೀಯರು ತಾವೇ ಅಫೀಮು, ಗಸಗಸೆ ಬೆಳೆಯಲು ತೊಡಗಿರುವುದರಿಂದ ಈ ಆದಾಯವೂ ಕೊನೆಗೊಳ್ಳುವ ಭೀತಿ ಉಂಟಾಗಿದೆ. ನಿರರ್ಥಕ ಬರ್ಮಾ ಯುದ್ಧಕ್ಕಾಗಿ ನಿರೀಕ್ಷಿತ ಖರ್ಚುಗಳು ಈ ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಿವೆ (ಮಾರ್ಕ್ಸ್ ೧೯೮೭:೩೮).

ಇಲ್ಲಿ ಗಮನಿಸಿರುವಂತೆ ಟಿಪ್ಪು ಸುಲ್ತಾನನ ಅವಧಿಯಲ್ಲಿ ಮುಂಬಯಿ ಮತ್ತು ಇತರ ಪ್ರಾಂತ್ಯಗಳ ಆರ್ಥಿಕ ಪರಿಸ್ಥಿತಿ ಕುಸಿತಗೊಂಡು ಖಾಸಗಿ ವಾಣಿಜ್ಯೋದ್ಯಮಿಗಳಿಂದ ಸಾಲವನ್ನು ಪಡೆಯುವ ಅನಿವಾರ್ಯತೆಗೆ ಒಳಗಾಗಿತ್ತು. ಆದುದರಿಂದ ಈಸ್ಟ್ ಇಂಡಿಯಾ ಕಂಪೆನಿ ಟಿಪ್ಪುವಿನೊಂದಿಗೆ ಯುದ್ಧವನ್ನು ಬಯಸದಿದ್ದರೂ ವಾಣಿಜ್ಯೋದ್ಯಮಿಗಳು ಯುದ್ಧದಿಂದ ಲಾಭ ಪಡೆಯಲು ಹಾತೊರೆಯುತ್ತಿದ್ದರು.

ಈ ಕಾಲಘಟ್ಟದಲ್ಲಿ ಬಿಪನ್ ಚಂದ್ರರವರು ವಿಶ್ಲೇಷಿಸಿದಂತೆ ಭಾರತವನ್ನು ಈಸ್ಟ್ ಇಂಡಿಯಾ ಕಂಪೆನಿ ಸ್ವಾಧೀನ ಪಡಿಸಿಕೊಂಡುದುದು ಬ್ರಿಟನಿನಲ್ಲಿ ಬಾರೀ ವಾಣಿಜ್ಯ ಮಂಡಳಿಗಳ ಯುಗವು ಮುಗಿದು ಹೋಗಿದ್ದ ಕಾಲದಲ್ಲಿ ಎಂಬುದನ್ನು ನೆನಪಿಡಬೇಕು. ಬ್ರಿಟಿಷ್ ಸಮಾಜದೊಳಗಾದರೋ ಕಂಪೆನಿಯು ಆಗಲೇ ಅಳಿಯುತ್ತಿದ್ದ ಸಾಮಾಜಿಕ ಶಕ್ತಿಗಳನ್ನು ಪ್ರತಿನಿಧಿಸುತ್ತಿತ್ತೇ ಹೊರತು ಉದಯೋನ್ಮುಖವಾದುದಲ್ಲ (ಬಿಪನ್ ಚಂದ್ರ ೨೦೧೩:೬).

ಈ ಹಿನ್ನೆಲೆಯಲ್ಲಿ ಟಿಪ್ಪು ಸುಲ್ತಾನ್ ಮಡಿಯುವ ಮುಖಾಂತರ ಭಾರತದಲ್ಲಿ ಬ್ರಿಟಿಷ್ ವಸಾಹತುಶಾಹಿ ಶೋಷಣೆಯ ಯುಗವು ನಿರ್ಣಾಯಕ ಹಂತಕ್ಕೆ ಬೆಳೆದು ಬಂತು. ಅದೇ ರೀತಿ ಹೈದರಾಲಿ– ಟಿಪ್ಪು ಕಾಲಘಟ್ಟದಲ್ಲಿ ವ್ಯಾಪಾರ ಮತ್ತು ವಾಣಿಜ್ಯೋದ್ಯಮ ನಿರ್ಣಾಯಕ ಹಂತದಲ್ಲಿ ಬೆಳೆದು ಬಂದು ಹಲವಾರು ಸ್ವರೂಪದ ಸಂಘರ್ಷಗಳು ನಿರಂತರವಾಗಿ ನಡೆದು ಅಂತಿಮವಾಗಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ವ್ಯಾಪಾರೋದ್ಯಮಿಗಳು ಮೇಲುಗೈ ಸಾಧಿಸಿ ಭಾರತದ ಶೋಷಣೆಗೆ ಹೊಸ ಭಾಷ್ಯವನ್ನು ಬರೆದರು. ಕರಾವಳಿ ಕರ್ನಾಟಕವು ಬಂಡವಾಳಶಾಹಿ ಬೆಳವಣಿಗೆಯ ನಿರ್ಣಾಯಕ ಹಂತವನ್ನು ಪ್ರವೇಶಿಸಿತು.

# ಟಿಪ್ಪಣಿಗಳು

೧. ಹೈದರಾಲಿಯು ೧೭೨೧ರಲ್ಲಿ ಜನಿಸಿದ್ದು, ಆತ ಮೈಸೂರು ರಾಜ್ಯದ ಸೈನ್ಯದಲ್ಲಿ ಒಬ್ಬ ಕಿರಿಯ ಅಧಿಕಾರಿಯಾಗಿ ತನ್ನ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಅವಿದ್ಯಾವಂತನಾದರೂ ಅವನಲ್ಲಿ ತೀಕ್ಷ್ಣವಾದ ಬುದ್ಧಿಶಾಲಿ, ಧೈರ್ಯ ಮತ್ತು ಅಚಲ ನಿರ್ಧಾರಕ್ಕೆ ಬರುವ ಮನೋಭಾವವಿತ್ತು. ಬ್ರಿಟಿಷರು ಹೈದರಾಲಿಯ ವಿರುದ್ಧ ಹಲವಾರು ಸುಳ್ಳುಗಳನ್ನು ವ್ಯವಸ್ಥಿತವಾಗಿ ಹೆಣೆದು ಪ್ರಚಾರ ನಡೆಸುತ್ತಿದ್ದರು ಎಂದು ಡಚ್ ಅಧಿಕಾರಿಯಾಗಿದ್ದ ಮೋನಿಸ್ 'ಡಚ್ ಇನ್ ಮಲಬಾರ್' ಎಂಬ ಕೃತಿಯಲ್ಲಿ ಹೈದರಾಲಿಯ ಬದುಕು ಮತ್ತು ಸೈನಿಕನಾಗಿ ಯಶಸ್ವಿಯಾದ ಬಗ್ಗೆ ವಿವರಗಳಿವೆ. ಡಚ್ ಅಧಿಕಾರಿ ಮೋನಿಸ್‌ರವರು ಆ ಕೃತಿಯಲ್ಲಿ ಆತನು ಹೈದರಾಲಿಯ ಬಗೆಗೆ ಇರುವಂತಹ ಆರೋಪಗಳನ್ನು ವ್ಯಕ್ತಿಗತವಾಗಿ ವಿವರಗಳನ್ನು ಪಡೆದು ಸತ್ಯಾಸತ್ಯತೆಯ ಬಗ್ಗೆ ಪರಿಶೀಲಿಸಿದ್ದೇನೆಂದು ಹೇಳಿಕೊಂಡಿದ್ದಾನೆ. ಆತನ ವಂಶದ ಬಗ್ಗೆ ಇರುವ ಪ್ರಚಾರವು ಅವಾಸ್ತವಿಕವಾದುದು ಎಂದು ಹೇಳಿ ಆತನ ತಂದೆ ಮೈಸೂರು ಸೈನ್ಯದ ಸೇವೆಯಲ್ಲಿದ್ದು ಆತನ ಕೈ ಕೆಳಗೆ ಸಿಪಾಯಿಗಳ ಒಂದು ದಂಡು ಇತ್ತು ಎಂದು ಹೇಳಿದ್ದಾನೆ. ಅದೇ ಪ್ರಕಾರ ಹೈದರಾಲಿಯು ೨೦ನೇ ವಯಸ್ಸಿನಲ್ಲಿ ಸೈನಿಕ ಅಧಿಕಾರಿಯಾಗಿ ನಿಯುಕ್ತಿಗೊಂಡು ಅನಂತರ ೫೦೦ ಸಿಪಾಯಿಗಳ ಪಡೆಗೆ ಕ್ಯಾಪ್ಟನ್ ಆಗಿ ಭಡ್ತಿ ಹೊಂದುತ್ತಾನೆ. ಅನಂತರ ಫ್ರೆಂಚ್ ಸೈನ್ಯದಲ್ಲಿ ೧೭೫೧ರಲ್ಲಿ ಸೇರ್ಪಡೆಗೊಂಡು ಯುದ್ಧಕ್ಕೆ ಸಂಬಂಧಪಟ್ಟಂತಹ ಕರಾರುವಕ್ಕಾದ ವೈಜ್ಞಾನಿಕ ಲೆಕ್ಕಾಚಾರಗಳನ್ನು ಬಹಳ ಗಂಭೀರವಾಗಿ ಅಭ್ಯಸಿಸಿದನು. ಕೆಲವೇ ಕೆಲವು ಸಮಯದ ನಂತರ ಫ್ರೆಂಚ್ ಸೈನ್ಯವನ್ನು ತ್ಯಜಿಸಿ ಇಂಗ್ಲೀಷರ ಸೈನ್ಯಕ್ಕೆ ಸೇರುತ್ತಾನೆ. ಅಲ್ಲಿ ಆತನ ಸೈನಿಕರ ಸಂಖ್ಯೆ ೩೦೦೦ ಆಗಿರುತ್ತದೆ ಮತ್ತು ಅವರಿಗೆ ಆಧುನಿಕ ಸಶಸ್ತ್ರಗಳನ್ನು ನೀಡುತ್ತಾನೆ. ಇಲ್ಲಿಯೂ ಕೂಡ ಯುರೋಪಿಯನ್ನರ ಯುದ್ಧ ತಂತ್ರಗಳ ಬಗ್ಗೆ ತಿಳಿದುಕೊಂಡು ಅನಂತರ ಇಂಗ್ಲೀಷ್ ಸೈನ್ಯವನ್ನು ತ್ಯಜಿಸಿ ಸಮರ್ಥ ದಂಡನಾಯಕನಾಗಿ ಮೂಡಿ ಬರುತ್ತಾನೆಂದು ಮೋನಿಸ್ ವಿವರಿಸುತ್ತಾನೆ.

೨. ಎಂ.ಎಂ.ಡಿ.ಎಲ್.ಟಿ ಈತನು ಹೈದರಾಲಿಯ ಸೈನ್ಯದಲ್ಲಿ ದಂಡಾನಾಯಕನಾಗಿ ಪ್ರಪ್ರಥಮ ಬಾರಿಗೆ ಬಿದನೂರಿನ ಮೇಲೆ ದಾಳಿ ನಡೆಸುತ್ತಾನೆ. ಈತ ಪ್ರಾರಂಭದಲ್ಲಿ ಹತ್ತು ಸಾವಿರ ಸೈನಿಕರ ಮೊಗಲ್ ಸೈನ್ಯದಲ್ಲಿ ಹಲವಾರು ವರ್ಷಗಳ ಸೇವೆ ಸಲ್ಲಿಸಿರುತ್ತಾನೆ. ಯುರೋಪಿಯನ್ ಸಂಜಾತ ಆಗಿದ್ದ ಎಂ.ಎಂ.ಡಿ.ಎಲ್.ಟಿ ಈತ ಹೈದರಾಲಿಯೊಂದಿಗೆ ಹೆಚ್ಚಿನ ಎಲ್ಲಾ ಯುದ್ಧಗಳಲ್ಲಿ ಭಾಗವಹಿಸುತ್ತಾ, ಯುರೋಪಿಯನ್ ಮತ್ತು ಮೊಗಲ್ ಸೈನಿಕ ವ್ಯವಸ್ಥೆಯ ಯುದ್ಧ ತಂತ್ರಗಳನ್ನು ಅಳವಡಿಸಿಕೊಳ್ಳಲು ಕಾರಣಕರ್ತನಾಗುತ್ತಾನೆ. ಈತನು 'ಹೈದರಾಲಿ ಆ್ಯಂಡ್ ಈಸ್ ರೆವೆಲ್ಯೂಷನ್ ಇನ್ ಇಂಡಿಯಾ' ಎಂಬ ಗ್ರಂಥವನ್ನು ೧೮೪೦ರಲ್ಲಿ ರಚಿಸುತ್ತಾನೆ. ಇದರಲ್ಲಿ ಹೈದರಾಲಿಯ ಬಗ್ಗೆ ಸರಿಸುಮಾರು ನಂಬಲರ್ಹವಾದ ವಿವರಗಳನ್ನು ಬರೆದಿರುತ್ತಾರೆ. ಸಮಕಾಲೀನ ಸಂದರ್ಭದಲ್ಲಿ ಬ್ರಿಟಿಷ್ ಅಧಿಕಾರಿಗಳು ಮತ್ತು ಚರಿತ್ರೆಕಾರರಿಂದ ಹೈದರಾಲಿಯ ಬಗ್ಗೆ ನೀಡಿರುವ ವಿವರಗಳನ್ನು ಈ ಕೃತಿಯ ಪಡಿಯಚ್ಚಿನಲ್ಲಿ ವಿಮರ್ಶಿಸಿ ಸತ್ಯಾಂಶವನ್ನು ಕಂಡುಹಿಡಿಯಲು ಸಹಾಯಕವಾಗುತ್ತದೆ.

೩. ಹೈದರಾಲಿಯು ೧೮೬೩ರಲ್ಲಿ ಬಿದನೂರಿನ ಮೇಲೆ ದಾಳಿ ನಡೆಸಿ ವೀರ ಚೆನ್ನಮಾಜಿಯನ್ನು ಸೋಲಿಸಿ ಆಕೆಯ ಮಗ ಮತ್ತು ಹೈದರಾಲಿಯೊಂದಿಗೆ ಸಹಾಯವನ್ನು ಯಾಚಿಸಿದ ಯುವರಾಜನಿಗೆ ಪಟ್ಟ ಕಟ್ಟುತ್ತಾನೆ. ಯುವರಾಜನಿಗೂ ಮತ್ತು ಹೈದರಾಲಿಗೂ ನಡುವೆ ಅಪನಂಬಿಕೆ ಮತ್ತು ಅವಿಶ್ವಾಸ ಬೆಳೆದು ಬರಲು ಕಾರಣವಾಗಿರುವ ಘಟನೆಯನ್ನು ಫ್ರಾನ್ಸಿಸ್ ಬುಕಾನನ್ ನೀಡುವ ಚಿತ್ರಣಕ್ಕೂ ಎಂ.ಎಂ.ಡಿ.ಎಲ್.ಟಿ ನೀಡುವ ಚಿತ್ರಣಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಫ್ರಾನ್ಸಿಸ್ ಬುಕಾನನ್ ಆಸ್ಥಾನದ ಬ್ರಾಹ್ಮಣ ವ್ಯಕ್ತಿಯೊಬ್ಬರ ಮಾಹಿತಿಗಳ ಆಧಾರದ ಮೇಲೆ ಸುಮಾರು ೩೭ ವರ್ಷಗಳ ನಂತರ ಸಂಗ್ರಹಿಸಿದ ವಿವರದ ಪ್ರಕಾರ ಯುವರಾಜನ ಅಚ್ಚು ಮೆಚ್ಚಿನ ಡ್ಯಾನ್ಸ್ ಹುಡುಗಿಯನ್ನು ಹೈದರಾಲಿಯು ತನ್ನೊಂದಿಗೆ ಕೊಂಡೊಯ್ಯಲು ನಿರ್ಧರಿಸಿದನು. ಈ ಘಟನೆಯನ್ನು ಆಕ್ಷೇಪಿಸಿದ ಯುವರಾಜನನ್ನು ಹೈದರಾಲಿಯು ಅಧಿಕಾರದಿಂದ ವಜಾಗೊಳಿಸಿ ಗೃಹ ಬಂಧನಕ್ಕೆ ಒಳಪಡಿಸಿ ಕೊಳ್ಳಲಾಗಿದೆ ಎಂದು ಹೇಳಲಾಗಿದೆ. ಆದರೆ ಹೈದರಾಲಿ ದಂಡಾನಾಯಕ ಎಂ.ಎಂ.ಡಿ.ಎಲ್.ಟಿಯ ಪ್ರಕಾರ ಯುವರಾಜ ಮತ್ತು ಚೆನ್ನಮಾಜಿಯು ಹೈದರಾಲಿ ಹತ್ಯೆಗೆ ಪಿತೂರಿ ನಡೆಸಿರುವ ಕಾರಣ ಬಹಿರಂಗ ವಿಚಾರಣೆ ನಡೆಸಿ ಬಿದನೂರನ್ನು ವಶಪಡಿಸಿಕೊಂಡನು ಎಂಬ ವಿವರಣೆ ಒಪ್ಪಬಹುದಾಗಿದೆ. ಓರ್ವ ಡ್ಯಾನ್ಸ್ ಹುಡುಗಿಗಾಗಿ ಯುವರಾಜ ರಾಜ್ಯವನ್ನು ಕಳೆದುಕೊಳ್ಳುತ್ತಾನೆ ಎಂಬುದು ನಂಬಲು ಅಸಾಧ್ಯ.

೪. ಬಿದನೂರಿನ ಬಗ್ಗೆ ಎಂ.ಎಂ.ಡಿ.ಎಲ್.ಟಿಯ 'ಹೈದರಲಿ ಆ್ಯಂಡ್ ಈಸ್ ರೆವೆಲ್ಯೂಷನ್ ಇನ್ ಇಂಡಿಯಾ' ಎಂಬ ಕೃತಿಯಲ್ಲಿ ನೀಡುವ ಸಾಮಾಜಿಕ ಮತ್ತು ಪ್ರಾಕೃತಿಕ ಸಂಪನ್ಮೂಲಗಳ ವಿವರಣೆಯು ಪ್ರಶ್ನಾರ್ಹವಾಗಿದೆ. ಆತನ ಪ್ರಕಾರ ಅಲ್ಲಿ ಚಿನ್ನದ ಗಣಿಗಾರಿಕೆ ನಡೆಯುತ್ತಿತ್ತು ಹಾಗೂ ವಜ್ರಗಳ ತಯಾರಿಯೂ ನಡೆಯುತ್ತಿತ್ತು ಎಂದು ಹೇಳಲಾಗಿದೆ. ಆದರೆ ಸದ್ರಿ ಪ್ರದೇಶದಲ್ಲಿ ಗಣಿಗಾರಿಕೆ ನಡೆಸುತ್ತಿರುವ ಬಗ್ಗೆ ಬ್ರಿಟಿಷ್ ದಾಖಲೆಗಳಲ್ಲಿ ಮತ್ತು ಅನಂತರದ ಸರ್ವೆ ವರದಿಗಳಲ್ಲಿ ವಿವರಗಳಿಲ್ಲ. ಅದೇ ರೀತಿ ಆ ಗಣಿಗಾರಿಕೆ ನಡೆಸಿದ ಕುರುಹುಗಳೂ ಕಾಣಬರುತ್ತಿಲ್ಲ. ಆದರೆ ಈ ಪ್ರದೇಶಕ್ಕೆ ಹತ್ತಿರವಿರುವ ಬನವಾಸಿಯ ನದಿ ತೀರದ ಮಣ್ಣಿನಲ್ಲಿ ಚಿನ್ನದ ಅಂಶಗಳು ಇರುವುದನ್ನು ಮತ್ತು ಇದನ್ನು ಸಾಂಪ್ರದಾಯಿಕವಾಗಿ ಅಲೆಮಾರಿಗಳಾಗಿರುವ ಕುಟುಂಬಗಳು ಸೋಸಿ ಪ್ರತ್ಯೇಕಿಸುವುದನ್ನು ಗಮನಿಸಬಹುದು. ಈ ಬಗ್ಗೆ ಇತ್ತೀಚೆಗೆ ಕ್ಷೇತ್ರಾಧ್ಯಯನಕ್ಕೆ ಭೇಟಿ ನೀಡುವಾಗ ತೆಗೆದ ಭಾವಚಿತ್ರವನ್ನು ಲಗತ್ತಿಸಲಾಗಿದೆ. ಆದುದರಿಂದ ಎಂ.ಎಂ.ಡಿ.ಎಲ್.ಟಿ ಹೇಳುವ ಪ್ರಕಾರ ಕೆಜಿಎಫ್ ಮತ್ತು ಹಟ್ಟಿಯಂತಹ ಚಿನ್ನದ ಗಣಿಗಾರಿಕೆಗಳು ಬಿದನೂರಿನಲ್ಲಿ ನಡೆದಿರುವ ಸಾಧ್ಯತೆಗಳಿಲ್ಲ.

೫. ಹೈದರಾಲಿಯು ಬಿದನೂರನ್ನು ವಶಪಡಿಸಿದ ಮೇಲೆ ಮಂಗಳೂರಿಗೆ ಬಂದು ಮಲಬಾರಿಗೆ ಮುಂದುವರಿಯುತ್ತಾನೆ. ಆ ಸಂದರ್ಭದಲ್ಲಿ ಕಣ್ಣನೂರಿನ ಆಲಿ ರಾಜನ ಸಹೋದರ ಸೇರಿದಂತೆ ಉಳಿದ ಮಾಪಿಳ್ಳೆಗಳು ಹೈದರಾಲಿಗೆ ಕಪ್ಪಕಾಣಿಕೆ ನೀಡಿ ಬರಮಾಡಿಕೊಂಡು ಸ್ವಾಗತಿಸುತ್ತಾರೆ. ಅವರುಗಳು ಹೈದರಾಲಿಯಿಂದ ಸಹಾಯ ಸಹಕಾರವನ್ನು ಅಪೇಕ್ಷಿಸುತ್ತಾರೆ. ಈ ಸಂದರ್ಭದಲ್ಲಿ ಹೈದರಾಲಿಯವರಿಗೆ ಭರವಸೆ ನೀಡುತ್ತಾನೆ. ಹೈದರಾಲಿಯು ಕಣ್ಣೂರಿನ ಆಲಿ ರಾಜನ ಸಹೋದರನಾದ ಶೇಕ್ ಆಲಿಯನ್ನು

ತನ್ನ ನೌಕಾ ಸೈನ್ಯದ ಅಡ್ಮಿರಲ್ ಆಗಿ ನೇಮಿಸುತ್ತಾನೆ. ಅನಂತರ ಶೇಕ್ ಆಲಿಯು ಮಾಲ್ಡೀವ್ಸ್ ರಾಜನ ಮೇಲೆ ದಾಳಿ ನಡೆಸಿ ಆತನನ್ನು ಬಂಧಿಸಿ ಆತನ ಕಣ್ಣುಗಳನ್ನು ಕಿತ್ತು ಹಡಗಿನಲ್ಲಿ ಮಂಗಳೂರಿಗೆ ತರುತ್ತಾನೆ. ಹೈದರಾಲಿಯು ಅಡ್ಮಿರಲ್ ಆಲಿ ಶೇಕ್‌ನ ಅಮಾನುಷ, ಅನಗತ್ಯ ಕೃತ್ಯವನ್ನು ಖಂಡಿಸಿ ಆತನನ್ನು ಅಡ್ಮಿರಲ್ ಹುದ್ದೆಯಿಂದ ವಜಾಗೊಳಿಸುತ್ತಾನೆ. ಅದೇ ರೀತಿ ಮಾಲ್ಡೀವ್ಸ್ ರಾಜನಿಗೆ ಬಿದನೂರಿನಲ್ಲಿ ಅರಮನೆಯನ್ನು ನೀಡುತ್ತಾನೆ. ಆದರೆ ಬ್ರಿಟಿಷ್ ದಾಖಲೆಗಳಲ್ಲಿ ಮಾಲ್ಡೀವ್ಸ್ ರಾಜನ ಅನಂತರದ ದಿನಚರಿಗಳ ಬಗ್ಗೆ ಯಾವುದೇ ವಿವರಗಳು ದೊರೆಯುತ್ತಿಲ್ಲ.

೬. ಮುಂಬಯಿ ಪ್ರಾಂತೀಯ ಸರಕಾರವು ಹೈದರಾಲಿಗೆ ಸಂಬಂಧಪಟ್ಟಂತೆ ವಹಿಸಿದ ಧೋರಣೆಗೂ ಮತ್ತು ಕೋರ್ಟ್ ಆಫ್ ಡೈರೆಕ್ಟರ್ಸ್‌ರವರುಗಳ ಧೋರಣೆಗೂ ತೀರಾ ವಿರೋಧಾಭಾಸಗಳಿವೆ. ಮುಂಬಯಿ ಪ್ರಾಂತೀಯ ಸರಕಾರವು ವಾಣಿಜ್ಯ ದೃಷ್ಟಿಕೋನ ಮತ್ತು ಪ್ರಾಯೋಗಿಕ ನೆಲೆಯಲ್ಲಿ ಕಾರ್ಯಾಚರಿಸಿದರೆ ಕೋರ್ಟ್ ಆಫ್ ಡೈರೆಕ್ಟರ್ಸ್‌ಗಳು ಇದಕ್ಕೆ ವಿರುದ್ಧವಾದ ಧೋರಣೆಯನ್ನು ಹೊಂದಿದ್ದಾರೆ. ಅವರ ಪ್ರಕಾರ ಹೈದರಾಲಿಯು ಒಬ್ಬ ಪ್ರಬಲ ಶತ್ರು ಮಾತ್ರವಲ್ಲದೆ ಭಾರತದಲ್ಲಿ ಸಾಮಂತರಾಜರುಗಳಿಗೆ ಯಾವುದೇ ಸಂದರ್ಭದಲ್ಲೂ ಕೂಡ ಬ್ರಿಟಿಷರು ಸಹಾಯ ಸಹಕಾರ ಮಾಡಬಾರದೆಂಬ ಮೂಲಭೂತ ನಿಲುವಿಗೆ ಬದ್ಧತೆಯನ್ನು ಹೊಂದಿದ್ದರು. ಆದರೆ ಮುಂಬಯಿ ಪ್ರಾಂತೀಯ ಸರಕಾರದ ಧೋರಣೆಯೇ ಮೇಲುಗೈ ಪಡೆದಿರುವುದನ್ನು ನಾವು ಗಮನಿಸಬಹುದು. ಅವರ ಪ್ರಕಾರ ಹೈದರಾಲಿಯು ಮಿತ್ರ ಎಂದು ಪರಿಗಣಿಸಿದ್ದಾರೆ.

೭. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಹೈದರಾಲಿಯ ಬೇಡಿಕೆಗಳಿಗೆ ಸಂಪೂರ್ಣವಾಗಿ ಮನ್ನಣೆ ನೀಡಿ ಅವರಿಗೆ ಬಂಧೂಕುಗಳನ್ನು ಸರಬರಾಜು ಮಾಡುತ್ತಿತ್ತು. ಇದೇ ತರನಾಗಿ ಹೈದರಾಲಿಯು ಕರಾವಳಿ ಕರ್ನಾಟಕದಲ್ಲಿ ಕರಿಮೆಣಸಿನ ಏಕಸ್ವಾಮ್ಯದ ಹಕ್ಕನ್ನು ಬ್ರಿಟಿಷರು ಹೊಂದಿದ್ದರು. ಆದರೆ ಈ ಪ್ರಾಂತ್ಯದಲ್ಲಿ ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಡೇನ್ಸ್‌ರವರು ವ್ಯಾಪಾರ ವ್ಯವಹಾರವನ್ನು ಮಾಡುತ್ತಿದ್ದರು. ಇದನ್ನು ಸೈನಿಕ ಕಾರ್ಯಾಚರಣೆ ಮೂಲಕ ತಡೆದು ಬ್ರಿಟಿಷರೊಂದಿಗೆ ಮಾಡಿರುವ ಕರಿಮೆಣಸಿನ ಏಕಸ್ವಾಮ್ಯದ ಹಕ್ಕನ್ನು ಖಾತ್ರಿಪಡಿಸಬೇಕೆಂದು ಬ್ರಿಟಿಷರು ಆಗ್ರಹಿಸಿದರು. ಇದನ್ನು ಅಸಾಧ್ಯವೆಂದು ತಿರಸ್ಕರಿಸಿದ ಹೈದರಾಲಿ ಸುಮಾರು ಮೂರು ಲಕ್ಷ ರೂಪಾಯಿಗಳನ್ನು ಸೆಕ್ಯುರಿಟಿ ಡಿಫಾಸಿಟ್ ಆಗಿ ಪಾವತಿ ಮಾಡಿದ್ದಲ್ಲಿ ಸೈನಿಕ ಕಾರ್ಯಾಚರಣೆಯನ್ನು ಮಾಡುವುದಾಗಿ ಘೋಷಿಸಿದನು. ಹೈದರಾಲಿಗೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಆರ್ಥಿಕ ಪರಿಸ್ಥಿತಿಯು ತೀರಾ ಬಿಕ್ಕಟ್ಟಿನಲ್ಲಿರುವುದು ತಿಳಿದಿತ್ತು. ಆದುದರಿಂದ ಇಂತಹ ಸಂದಿಗ್ಧಮಯವಾದ ಪರಿಸ್ಥಿತಿಯಲ್ಲಿ ಇಷ್ಟೊಂದು ಅಗಾಧವಾದ ಮೊತ್ತವನ್ನು ಪಾವತಿಸಲು ಸಾಧ್ಯವಾಗುವುದಿಲ್ಲ ಎಂಬ ಅಂಶವನ್ನು ತಿಳಿದೇ ಇಂತಹ ಬೇಡಿಕೆಯನ್ನು ಮಂಡಿಸುತ್ತಾನೆ. ಇದೇ ರೀತಿ ಹೈದರಾಲಿಗೆ ಬ್ರಿಟಿಷರನ್ನು ಹೊರತು ಪಡಿಸಿದ ಇತರೆ ಎಲ್ಲಾ ವ್ಯಾಪಾರ ಸಂಸ್ಥೆಗಳ ಸಹಾಯ ಸಹಕಾರ ಅಗತ್ಯವಾಗಿ ಬೇಕಾಗಿದ್ದ ಕಾರಣ ಅರೆ ಮನಸ್ಸಿನಿಂದ ಉಪಾಯವಾಗಿ ಇಂತಹ ಡಿಫಾಸಿಟ್ ಇಡುವ ಬೇಡಿಕೆಯನ್ನು ಮಂಡಿಸುತ್ತಾನೆ.

೮. ಹೈದರಾಲಿ ಮತ್ತು ಮುಂಬಯಿ ಪ್ರಾಂತೀಯ ಸರಕಾರದೊಂದಿಗೆನ ಸಂಬಂಧಗಳು ೧೭೬೮ರಲ್ಲಿ ಬಿಗಡಾಯಿಸಿ ಯುದ್ಧ ಸ್ಫೋಟಗೊಳ್ಳುವ ಸಂದರ್ಭ ನಿರ್ಮಾಣವಾಯಿತು. ಬ್ರಿಟಿಷರೊಂದಿಗಿನ ವ್ಯವಹಾರಗಳಲ್ಲಿ ಬಳಸಲ್ಪಡುವ ಅಕ್ಕಿಯ ಸರಬರಾಜಿಗೆ ದೊಡ್ಡ ತಡೆಯಾಯಿತು. ಈ ಅವಧಿಯಲ್ಲಿ ಕೆನರಾ ಪ್ರಾಂತ್ಯದಿಂದ ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಮುಂಬಯಿ ಮತ್ತು ಇತರೆ ರಾಷ್ಟ್ರಗಳಿಗೆ ಅಕ್ಕಿಯ ಸರಬರಾಜು ಆಗುತ್ತಿದ್ದು ಹೈದರಾಲಿಯ ಖಜಾನೆಗೆ ಸಾಕಷ್ಟು ವರಮಾನ ಲಭಿಸುತ್ತಿತ್ತು. ಆದುದರಿಂದ ಅಕ್ಕಿಯ ಸರಬರಾಜು ನಿಲ್ಲುವ ಸಂದರ್ಭ ಎದುರಾದಾಗ ಹೈದರಾಲಿಯು ಚಾಣಾಕ್ಷತನದಿಂದ ವ್ಯಾವಹಾರಿಕ ದೃಷ್ಟಿಕೋನವನ್ನು ಉಪಯೋಗಿಸಿಕೊಂಡು ಇತರೆ ಯುರೋಪಿಯನ್ ದೇಶಗಳು ಅಕ್ಕಿಯನ್ನು ಖರೀದಿಸಲು ಏರ್ಪಾಡು ಮಾಡುತ್ತಾನೆ. ಇದರಿಂದಾಗಿ ಬ್ರಿಟಿಷರೊಂದಿಗಿನ ಅಕ್ಕಿಯ ವ್ಯಾಪಾರದ ಪ್ರಮಾಣವು ಮತ್ತು ಆದಾಯವು ಯುರೋಪಿಯನ್ ದೇಶಗಳಿಂದ ಅಷ್ಟೇ ಸಮಾನ ಪ್ರಮಾಣದಲ್ಲಿ ಹೈದರಾಲಿಯ ಖಜಾನೆಗೆ ಬಂತು.

೯. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಪಶ್ಚಿಮ ಭಾರತದಲ್ಲಿ ಮಾತ್ರವಲ್ಲದೆ ಇಡೀ ಭಾರತದಲ್ಲೇ ಪ್ರಪ್ರಥಮ ವ್ಯಾಪಾರದ ಕೇಂದ್ರವನ್ನು ಸೂರತ್‌ನಲ್ಲಿ ಪ್ರಾರಂಭಿಸುತ್ತಾರೆ. ಇದಾದ ನಂತರ ಪಶ್ಚಿಮ ಕರಾವಳಿಯ ಎರಡನೆಯ ಮುಖ್ಯ ಕೇಂದ್ರವಾಗಿ ಕಾರವಾರ ಬೆಳೆದು ಬರುತ್ತದೆ. ಕಾರವಾರಕ್ಕೆ ಸಾಂಬಾರು ಪದಾರ್ಥಗಳನ್ನು ಸಂಗ್ರಹಿಸುವ ಇನ್ನೊಂದು ಪ್ರಮುಖ ಉಪಕೇಂದ್ರವಾಗಿ ಹೊನ್ನಾವರ ಬೆಳೆದು ಬಂದಿರುತ್ತದೆ. ಇಲ್ಲಿದ್ದ ಬ್ರಿಟಿಷ್ ಫ್ಯಾಕ್ಟರ್ಸ್ ವ್ಯಾಪಾರ ವ್ಯವಹಾರದ ಪ್ರಕ್ರಿಯೆಯಲ್ಲಿ ಭಾಗವಹಿಸದೆ ರಾಜಕೀಯ ಕಾರ್ಯನಿರ್ವಹಣೆಯಲ್ಲೇ ತಲ್ಲೀನರಾಗಿರುತ್ತಾರೆ. ೧೭೬೮ರಲ್ಲಿ ಈ ಕೇಂದ್ರದಿಂದ ಮುಂಬಯಿ ಪ್ರಾಂತೀಯ ಸರಕ್ಕಾರಕ್ಕೆ ಯಾವುದೇ ಆದಾಯಗಳು ಬರದಿರುವ ಕಾರಣ ಇದನ್ನು ಮುಚ್ಚುತ್ತಾರೆ. ಇದರಿಂದ ಬ್ರಿಟಿಷ್ ಸರಕಾರಕ್ಕೆ ಹೊನ್ನಾವರ ಕೇಂದ್ರದಿಂದ ಕರಿಮೆಣಸು ಮತ್ತಿತರೆ ಸಾಂಬಾರು ಪದಾರ್ಥಗಳ ಸರಬರಾಜು ನಿಲ್ಲುತ್ತದೆ.

೧೦. ಕರಾವಳಿ ಕರ್ನಾಟಕದಲ್ಲಿ ಮಂಗಳೂರನ್ನು ಕೇಂದ್ರೀಕರಿಸಿಕೊಂಡು ಹೈದರಾಲಿಯು ಅಧಿಕಾರ ನಡೆಸುತ್ತಿರುವ ಸಂದರ್ಭದಲ್ಲಿ ಪೋರ್ಚುಗೀಸರು ೧೭೬೮ರಲ್ಲಿ ಬ್ರಿಟಿಷರಿಗೆ ಸಹಕರಿಸುತ್ತಾರೆ. ಆದರೆ ಮಂಗಳೂರನ್ನು ಜಯಿಸಿದ ಬ್ರಿಟಿಷರು ಪೋರ್ಚುಗೀಸರಿಗೆ ವ್ಯಾಪಾರ ವ್ಯವಹಾರ ನಡೆಸಲು ಅವಕಾಶ ನೀಡುವುದಿಲ್ಲ. ಹೈದರಾಲಿಯು ಮತ್ತೆ ಮಂಗಳೂರನ್ನು ಜಯಿಸಿದ ಮೇಲೆ ಪೋರ್ಚುಗೀಸರ ವಿರುದ್ಧ ಪ್ರತಿಕಾರ ಕ್ರಮ ಕೈಗೊಳ್ಳದೆ ಹೊಸ ವಾಣಿಜ್ಯ ಒಪ್ಪಂದ ಮಾಡುತ್ತಾರೆ. ಪೋರ್ಚುಗೀಸರು ಮತ್ತು ಹೈದರಾಲಿಯ ಮಧ್ಯೆ ಹೊಸ ಸಂಬಂಧಗಳು ಮತ್ತು ಒಪ್ಪಂದಗಳು ಸೌಹಾರ್ದಯುತವಾಗಿ ಮುಂದುವರಿಯುತ್ತದೆ. ಮಂಗಳೂರಲ್ಲಿ ಹೈದರಾಲಿಯು ಕೋಟೆ ನಿರ್ಮಿಸಲು ಸೂಕ್ತ ಸ್ಥಳ ಆಯ್ಕೆ ಮಾಡಲು ಫ್ರೆಂಚ್ ಇಂಜಿನಿಯರ್ ಎಂ. ಕ್ಯಾಲೆನಿಗೆ ವಹಿಸಿಕೊಟ್ಟಾಗ ಆತನು ಎಲ್ಲಾ ಸ್ಥಳಗಳನ್ನು ಪರಿಶೀಲಿಸಿ ಕೊನೆಗೆ ಪೋರ್ಚುಗೀಸರು ಕೋಟೆ ಕಟ್ಟಿರುವ ಸ್ಥಳವೇ ಸೂಕ್ತ ಎಂದು ಸಲಹೆ ನೀಡಿದನು. ಪೋರ್ಚುಗೀಸರು ಅನಿವಾರ್ಯವಾಗಿ ಈ ಸ್ಥಳವನ್ನು ಬಿಟ್ಟುಕೊಟ್ಟು ಮಂಗಳೂರಿನ ವ್ಯಾಪಾರ ಕೇಂದ್ರಕ್ಕೆ ವಿದಾಯ ಹೇಳಬೇಕಾಯಿತು. ವಿಶೇಷವೆಂದರೆ ಪೋರ್ಚುಗೀಸರು ಈ ಬಗ್ಗೆ

ಹೈದರಾಲಿಯೊಂದಿಗೆ ಯಾವುದೇ ರೀತಿಯ ಪ್ರತಿರೋಧವಾಗಲೀ, ಅಭಿಪ್ರಾಯವಾಗಲೀ ವ್ಯಕ್ತಪಡಿಸಲಿಲ್ಲ. ಇದರರ್ಥ ಹೈದರಾಲಿಯು ಬೃಹತ್ ಶಕ್ತಿಯಾಗಿದ್ದನು ಮತ್ತು ಪೋರ್ಚುಗೀಸರು ಈತನೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಲು ಸಿದ್ಧರಿರಲಿಲ್ಲ ಎಂದು ತಿಳಿದು ಬರುತ್ತದೆ.

೧೧. ಟಿಪ್ಪು ಸುಲ್ತಾನ್ ಕಾಲಾವಧಿಯಲ್ಲಿ ಮುಂಬಯಿಯನ್ನು ಕೇಂದ್ರೀಕರಿಸಿಕೊಂಡು ವ್ಯಾಪಾರ ವ್ಯವಹಾರಗಳಲ್ಲಿ ನಿರತರಾಗಿದ್ದ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮಿಗಳು ಕರಾವಳಿ ಕರ್ನಾಟಕದಲ್ಲಿ ನಿರಂತರ ಯುದ್ಧದ ಪರಿಸ್ಥಿತಿ ನಿರ್ಮಾಣವಾಗುವುದನ್ನು ಬಯಸಿದ್ದರು. ಏಕೆಂದರೆ ಪ್ರತಿಯೊಂದು ಯುದ್ಧಗಳಿಂದಲೂ ವ್ಯಾಪಾರೋದ್ಯಮಿಗಳಿಗೆ ಹೆಚ್ಚಿನ ವ್ಯಾಪಾರದ ಬೇಡಿಕೆ ಬರುತ್ತಿತ್ತು. ಆ ಮೂಲಕ ಹೆಚ್ಚಿನ ಲಾಭವೂ ದೊರೆಯುತ್ತಿತ್ತು. ಈ ಕಾಲಘಟ್ಟದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಆರ್ಥಿಕ ದಿವಾಳಿಯಾಗಿದ್ದು ವ್ಯಾಪಾರೋದ್ಯಮಿಗಳಿಂದ ಸಾಲ ಪಡೆಯುತ್ತಿತ್ತು. ಈ ಪರಿಸ್ಥಿತಿಯ ಲಾಭ ಪಡೆದು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಮೇಲೆ ಯುದ್ಧಗಳನ್ನು ಮಾಡಬೇಕೆಂದು ಆಗ್ರಹ ಪಡಿಸುತ್ತಿತ್ತು. ವಾರನ್ ಹೇಸ್ಟಿಂಗ್ಸ್‌ನಂತಹ ಗವರ್ನರ್ ಕೂಡಾ ಪ್ರಾರಂಭದಲ್ಲಿ ಯುದ್ಧ ನಡೆಸುವ ಬಗ್ಗೆ ವಿರೋಧವಿದ್ದರೂ ಅನಂತರ ಅನಿವಾರ್ಯವಾಗಿ ಸಮ್ಮತಿಸಬೇಕಾಯಿತು.

೧೨. ಈಸ್ಟ್ ಇಂಡಿಯಾ ಕಂಪೆನಿಯ ಕೋರ್ಟ್ ಆಫ್ ಡೈರೆಕ್ಟರ್ಸ್‌ಗಳ ೧೭೮೫ರ ಸಪ್ಟೆಂಬರ್ ೨೧ರ ಆದೇಶ ಪತ್ರದ ಪ್ರಕಾರ ಕಮರ್ಶಿಯಲ್ ಡಿಪಾರ್ಟ್‌ಮೆಂಟನ್ನು ಸ್ಥಾಪಿಸಲಾಯಿತು. ಇದು ೧೮೦೫ರವರೆಗೆ ಪಬ್ಲಿಕ್ ಡಿಪಾರ್ಟ್‌ಮೆಂಟಿನ ಒಂದು ಶಾಖೆಯಾಗಿತ್ತು. ೧೮೦೫ರಿಂದ ೧೮೧೩ರವರೆಗೆ ಕಮರ್ಶಿಯಲ್ ಡಿಪಾರ್ಟ್‌ಮೆಂಟ್ ಮತ್ತು ಮಿಲಿಟರಿ ಡಿಪಾರ್ಟ್‌ಮೆಂಟ್ ಒಂದಾಗಿ ಕಾರ್ಯ ನಿರ್ವಹಿಸುತ್ತಿತ್ತು. ಆದರೆ ೧೮೧೩ರ ನಂತರ ಇದು ಪ್ರತ್ಯೇಕವಾಯಿತು. ೧೮೩೩ರ ನಂತರ ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ವಾಣಿಜ್ಯ ವ್ಯವಹಾರಗಳು ನಿಷೇಧಿಸಲ್ಪಟ್ಟ ಕಾರಣಕ್ಕಾಗಿ ಕಮರ್ಶಿಯಲ್ ಡಿಪಾರ್ಟ್‌ಮೆಂಟ್ ಮುಚ್ಚಲ್ಪಟ್ಟಿತು.

## ಅಧ್ಯಾಯ ೫

# ಟಿಪ್ಪುವಿನ ಮರಣೋತ್ತರದ ಇಂಗ್ಲಿಷ್ ವ್ಯಾಪಾರ ವ್ಯವಹಾರಗಳ ಉತ್ಕರ್ಷ ಮತ್ತು ರೈತ ಬಂಡಾಯಗಳು

ಟಿಪ್ಪುವಿನ ಆಡಳಿತದ ಕೊನೆಯ ಹದಿನೈದು ವರ್ಷಗಳ ರಾಜ್ಯಾಡಳಿತದ ಕಾಲಾವಧಿಯು ನಿರಂತರ ಯುದ್ಧಗಳ ಅವಧಿಯಾಗಿದೆ. ಇದರಿಂದಾಗಿ ಯುದ್ಧದ ನಿರ್ವಹಣೆಗೆ ರಾಜ್ಯದ ಬೊಕ್ಕಸಕ್ಕೆ ಅಪಾರ ಪ್ರಮಾಣದ ಆರ್ಥಿಕ ಹೊರೆ ಬಿತ್ತು. ಇದನ್ನು ಎದುರಿಸಲು ಟಿಪ್ಪು ವಿವಿಧ ಸಂದರ್ಭಗಳಲ್ಲಿ ಹಲವಾರು ರೀತಿಯ ತೆರಿಗೆಗಳನ್ನು ಜಾರಿಗೊಳಿಸಿದನು. ಈ ತೆರಿಗೆಯನ್ನು ನಗದು ರೂಪದಲ್ಲಿ ಪಾವತಿಸಬೇಕಾದ ಹಿನ್ನೆಲೆಯಲ್ಲಿ ಕರಾವಳಿ ಕರ್ನಾಟಕದಲ್ಲಿ ಲೇವಾದೇವಿ ವ್ಯವಹಾರ ಮತ್ತು ಮಧ್ಯವರ್ತಿ ಪದ್ಧತಿ ಬೆಳೆದು ಬಂತು. ಆದುದರಿಂದ ಟಿಪ್ಪುವಿನ ಮರಣದ ಸಂದರ್ಭದಲ್ಲಿ ಕರಾವಳಿ ಕರ್ನಾಟಕದ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ವಾಣಿಜ್ಯೋದ್ಯಮದ ಸ್ಥಿತಿಗತಿಗಳನ್ನು ಮತ್ತು ಅದರ ಪರಿಣಾಮಗಳು ಬಂಡವಾಳಶಾಹಿ ಬೆಳವಣಿಗೆಯ ಘಟ್ಟವನ್ನು ಸ್ಪಷ್ಟವಾಗಿ ಪ್ರವೇಶಿಸಿರುವುದನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಕರಾವಳಿ ಕರ್ನಾಟಕದಲ್ಲಿ ಉತ್ಪಾದನೆಯಾಗುತ್ತಿದ್ದ ಆಹಾರ ವಸ್ತುಗಳ ಮತ್ತು ಬೆಳೆಬಾಳುವ ಸಾಂಬಾರು ಮತ್ತಿತರೆ ವಾಣಿಜ್ಯ ಉತ್ಪನ್ನಗಳ ಸಂಪೂರ್ಣ ಲಾಭಪಡೆಯಲು ವಿವಿಧ ರೀತಿಯ ಧೋರಣೆಗಳನ್ನು ಜಾರಿಗೊಳಿಸಿದರು. ಬ್ರಿಟಿಷರು ಈ ಭಾಗದಲ್ಲಿ ರೈತವಾರಿ ಪದ್ಧತಿಯನ್ನು ಹೊಸತಾಗಿ ಜಾರಿಗೊಳಿಸಿ ವಿಪರೀತ ತೆರಿಗೆಯನ್ನು ಸಂಗ್ರಹಿಸಿದರು. ಬ್ರಿಟಿಷ್ ಸರಕಾರವು ವಿವಿಧ ರೀತಿಯ ವಾಣಿಜ್ಯ ಬೆಳೆಗಳ ಮೇಲೆ ಏಕಸ್ವಾಮ್ಯವನ್ನು ಘೋಷಿಸಿತು. ಉದಾಹರಣೆಗೆ ತಂಬಾಕು ಏಕಸ್ವಾಮ್ಯ ನೀತಿಯಸ್ನು ಮಾತ್ರವಲ್ಲದೆ ಹೊಸ ಅಬಕಾರಿ ನೀತಿಯನ್ನು ಹಾಗೂ ಉಪ್ಪಿನ ಏಕಸ್ವಾಮ್ಯವನ್ನು ಜಾರಿಗೊಳಿಸಿತು. ಈ ರೀತಿಯ ನಿರ್ದಾಕ್ಷಿಣ್ಯ ಶೋಷಣೆಯುಕ್ತ ಧೋರಣೆಗಳಿಂದ ರೈತಾಪಿ ಸಮುದಾಯ ಅನುಭವಿಸಿದ ಸಂಕಷ್ಟಗಳ ವಿಶ್ಲೇಷಣೆ ಮಾಡಲಾಗಿದೆ. ಲೇವಾದೇವಿ ಮಧ್ಯವರ್ತಿಗಳ ಶೋಷಣೆ ಮತ್ತು ಪರಿಣಾಮಗಳನ್ನೂ ವಿಮರ್ಶಿಸಲಾಗಿದೆ

ಬ್ರಿಟಿಷರ ಮತ್ತು ವ್ಯಾಪಾರಿವರ್ಗದ ಸುಲಿಗೆಕೋರ ಧೋರಣೆಯಿಂದ ಕರಾವಳಿ ಕರ್ನಾಟಕದ ಜನತೆ ಅನುಭವಿಸಿದ ವಿವಿಧ ಸಂಕಷ್ಟಗಳ ಬಗ್ಗೆ ಚರ್ಚಿಸಲಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಜನತೆ ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ವಿವಿಧ ಹಂತಗಳಲ್ಲಿ ಪ್ರತಿರೋಧ ಒಡ್ಡಿರುವುದನ್ನು ವಿವರಿಸಲಾಗಿದೆ. ಬ್ರಿಟಿಷರು ಜಾರಿಗೊಳಿಸಿದ ಉತ್ಪಾದಕತೆಗೆ ಸಂಬಂಧಿಸಿದ ತೆರಿಗೆ ನೀತಿ ರೈತಾಪಿ ಜನ ಸಮುದಾಯದ ಮೇಲೆ ಇಬ್ಬಗೆಯ ಪರಿಣಾಮ ಬೀರಿತು. ಇದರಿಂದಾಗಿ ರೈತರ ಉತ್ಪನ್ನಗಳು ಬೆಲೆ ಕುಸಿತದ ಪರಿಣಾಮಗಳನ್ನು ಅನುಭವಿಸಬೇಕಾಯಿತು.

ಮತ್ತೊಂದೆಡೆಯಲ್ಲಿ ವಾಣಿಜ್ಯ ರಂಗದ ಬಿಕ್ಕಟ್ಟು ಮುಂದುವರಿಯುತ್ತಿದ್ದಂತೆ ಕೃಷಿ ಕ್ಷೇತ್ರದಲ್ಲಿ ಉತ್ಪಾದಕತೆ ಕುಸಿಯಿತು. ಇಂತಹ ಸಮಯದಲ್ಲಿ ಸಾರ್ವತ್ರಿಕ ಸರಬರಾಜು ನಿಯಮದಂತೆ ಬೆಲೆ ಹೆಚ್ಚಳವಾಗುವ ಬದಲು ಕುಸಿತ ಉಂಟಾಯಿತು. ಇದರಿಂದ ಜನರ ಆದಾಯಕ್ಕೆ ಸಂಚಕಾರ ಬಂದೊದಗಿತು. ಇವೆಲ್ಲವುಗಳ ಪರಿಣಾಮವಾಗಿ ಕರಾವಳಿ ಕರ್ನಾಟಕದಲ್ಲಿ ವಿವಿಧ ರಂಗಗಳಲ್ಲಿ ಬಿಕ್ಕಟ್ಟುಗಳು ಮತ್ತು ಆರ್ಥಿಕ ಸ್ಥಿತ್ಯಂತರಗಳು ಮೂಡಿ ಬಂದವು. ಅಂತರಾಷ್ಟ್ರೀಯ ಮಟ್ಟದ ಹತ್ತಿ ಬಿಕ್ಕಟ್ಟು ಎದುರಾದಾಗ ಕರಾವಳಿ ಕರ್ನಾಟಕವು ಇದಕ್ಕೆ ಬಲಿಪಶುವಾಗಬೇಕಾಯಿತು. ಕೆನರಾ ಪ್ರಾಂತ್ಯ ವಿಭಜನೆಗೊಳ್ಳುವ ಮೂಲಕ ವಾಣಿಜ್ಯೋದ್ಯಮದ ಹಿತಾಸಕ್ತಿ ಮೇಲುಗೈ ಪಡೆದಿರುವುದನ್ನು ವಿಶ್ಲೇಷಿಸಲಾಗಿದೆ.

ಬ್ರಿಟಿಷರ ವಿರುದ್ಧ ಪ್ರಾರಂಭದಲ್ಲಿ ಸಾಮಂತರಾಜರುಗಳು ರೈತಾಪಿ ಜನತೆಯನ್ನು ಉಪಯೋಗಿಸಿಕೊಂಡು ನಡೆಸಿದ ಸಂಘರ್ಷವನ್ನು ವಿವರಿಸಲಾಗಿದೆ. ಮುಂದೆ ೧೮೧೧ ರಿಂದ ೧೮೩೦ರ ವರೆಗೆ ವಿವಿಧ ಕಾಲಘಟ್ಟಗಳಲ್ಲಿ ಕರಾವಳಿ ಕರ್ನಾಟಕದ ರೈತಾಪಿ ಜನತೆ ಹಾಗೂ ಸಾಮಾನ್ಯ ದುಡಿಯುವ ಜನರು ಬ್ರಿಟಿಷರ ಧೋರಣೆಗಳ ಬಗ್ಗೆ ನಡೆಸಿದ ವಿವಿಧ ರೀತಿಯ ಪ್ರತಿರೋಧಗಳನ್ನು ವಿಶ್ಲೇಷಿಸಲಾಗಿದೆ. ೧೮೩೦ರ ಕೂಟ ಬಂಡಾಯದಂತಹ ಚಳುವಳಿಗಳ ಬಹುಸ್ತರೀಯ ಪರಿಣಾಮಗಳನ್ನು ವಿಶ್ಲೇಷಿಸಲಾಗಿದೆ. ಅಮರ ಸುಳ್ಯ ದಂಗೆಯ ಸ್ವರೂಪ ಹಾಗೂ ಅದರಲ್ಲಿ ಅಡಕವಾಗಿದ್ದ ವಾಣಿಜ್ಯ ಹಿತಾಸಕ್ತಿಯನ್ನು ವಿಮರ್ಶಿಸಲಾಗಿದೆ. ಇದರಲ್ಲಿ ಪದಚ್ಯುತಗೊಂಡ ಸಾಮಂತ ರಾಜರುಗಳು, ಧಾರ್ಮಿಕ ವ್ಯಕ್ತಿಗಳು, ರೈತಾಪಿ ಕೃಷಿಕೂಲಿಕಾರರು ದಂಗೆಯಲ್ಲಿ ಭಾಗವಹಿಸುವ ಮೂಲಕ ನಿರ್ವಹಿಸಿದ ಪಾತ್ರವನ್ನು ವಿವರಿಸಲಾಗಿದೆ. ಇದಕ್ಕೆ ಪ್ರತಿಯಾಗಿ ಬ್ರಿಟಿಷ್ ಪ್ರಭುತ್ವದೊಂದಿಗೆ ವ್ಯಾಪಾರಿ ಸಮುದಾಯ ಮತ್ತು ಮಿಶನರಿಗಳು ನಿರ್ವಹಿಸಿದ ಪಾತ್ರಗಳನ್ನು ವಿಶ್ಲೇಷಿಸಲಾಗಿದೆ.

ಈ ಅಧ್ಯಾಯದಲ್ಲಿ ವಿಶ್ಲೇಷಿಸಲ್ಪಡುವ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಹೊಸ ನೆಲೆಗಟ್ಟಿನ ಫಲಿತಾಂಶಗಳೆಂದರೆ ಬ್ರಿಟಿಷ್ ಅಧಿಕಾರದ ಕ್ರೋಢೀಕರಣ ಮತ್ತು ರೈತಾಪಿ ಸಮುದಾಯದ ಮೇಲೆ ನಡೆಸಿದ ನಿರ್ದಾಕ್ಷಿಣ್ಯ ಶೋಷಣೆಗಳ ಪರಿಣಾಮವಾಗಿ ವಾಣಿಜ್ಯೋದ್ಯಮ ತೀವ್ರಗತಿಯಲ್ಲಿ ಬೆಳವಣಿಗೆ ಗೊಂಡಿತ್ತು. ಇದರಿಂದಾಗಿ ಬಂಡವಾಳ ಕ್ರೋಢೀಕರಣವಾಯಿತು. ಮುಂದೆ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಶೋಷಣೆ ತೀವ್ರವಾಯಿತು. ಕರಾವಳಿ ಕರ್ನಾಟಕದಲ್ಲಿ ಎಲ್ಲಾ ರೀತಿಯ ಅನ್ಯಾಯ, ದೌರ್ಜನ್ಯ, ದಬ್ಬಾಳಿಕೆ ನಡೆದರೂ ೨೦ನೇ ಶತಮಾನದ ಗಾಂಧಿಯುಗದವರೆಗೆ ಯಾವುದೇ ಹಿಂಸಾತ್ಮಕ ಪ್ರತಿಭಟನೆಗಳು ಬೆಳೆದು ಬರಲಿಲ್ಲ.

ಈ ಅಧ್ಯಯನದಲ್ಲಿ ಬಿಪನ್ ಚಂದ್ರರವರ ಕೃತಿಗಳನ್ನು, ಕಾರ್ಲ್ ಮಾರ್ಕ್ಸ್‌ರವರ ಕೃತಿಗಳನ್ನು, ಫ್ರಾನ್ಸಿಸ್ ಬುಕಾನನ್‌ರವರ ಕೃತಿಗಳನ್ನು, ಶ್ಯಾಮ್ ಭಟ್‌ರವರ ಕೃತಿಗಳನ್ನು, ಡಬ್ಲ್ಯೂ ಡಬ್ಲ್ಯೂ ಹಂಟರ್‌ರವರ ಕೃತಿ, ಸೌತ್ ಕೆನರಾ ಗೆಜೆಟಿಯರ್, ವಿಜಯ್ ಪೂಣಚ್ಚ ತಂಬಂಡರವರ ಕೃತಿ, ಆಸಿಯಾ ಸಿದ್ದಿಕ್‌ರವರ ಕೃತಿ, ಮೋಹನ್ ಕೃಷ್ಣ ರೈರವರ ಕೃತಿಗಳನ್ನು ಅಲ್ಲದೆ ವಿವಿಧ ವೃತ್ತ ಪತ್ರಿಕೆಗಳು, ಸ್ಮರಣ ಸಂಚಿಕೆಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಚೆನ್ನೈ ಪತ್ರಾಗಾರ, ಮುಂಬಯಿ ಪತ್ರಾಗಾರ ಹಾಗೂ ಮಂಗಳೂರಿನ ಕೆಟಿಸಿ ಪತ್ರಾಗಾರಗಳಲ್ಲಿ ಈ ಕಾಲಘಟ್ಟಕ್ಕೆ ಸಂಬಂಧಿಸಿದಂತಹ ದಾಖಲೆಗಳನ್ನು ಪರಿಶೀಲಿಸಿ ಮಹಾ ಪ್ರಬಂಧಕ್ಕೆ ಉಪಯೋಗಿಸಿಕೊಳ್ಳಲಾಗಿದೆ.

ಈ ಅಧ್ಯಾಯದ ಪ್ರಥಮ ಭಾಗದಲ್ಲಿ ಟಿಪ್ಪುವಿನ ಮರಣೋತ್ತರ ಕರಾವಳಿ ಕರ್ನಾಟಕದ ರಾಜಕೀಯ ಆರ್ಥಿಕ ಸಾಮಾಜಿಕ ಮತ್ತು ವಾಣಿಜ್ಯೋದ್ಯಮದ ಸ್ಥಿತಿಗತಿಗಳ ಸಮೀಕ್ಷೆ ಮಾಡಲಾಗಿದೆ. ಎರಡನೇ ಭಾಗದಲ್ಲಿ ಬ್ರಿಟಿಷ್ ಕರಾವಳಿ ಕರ್ನಾಟಕದಲ್ಲಿ ಜಾರಿಗೊಳಿಸಿದ ಹೊಸ ಧೋರಣೆಗಳ ಸ್ವರೂಪ ವಿಶ್ಲೇಷಣೆ ಮತ್ತು ಅದು ಬೀರಿದ ಪರಿಣಾಮಗಳನ್ನು ವಿಮರ್ಶಿಸಲಾಗಿದೆ. ಮೂರನೇ ಭಾಗದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಜಾರಿಗೊಳಿಸಿದಂತಹ ಹೊಸ ಹೊಸ ಧೋರಣೆಗಳು ಮತ್ತು ರೈತಾಪಿ ಸಮುದಾಯ ಅನುಭವಿಸಿದ ಕೃಷಿ ಮತ್ತು ಆರ್ಥಿಕ ಬಿಕ್ಕಟ್ಟಿನ ಪರಿಸ್ಥಿತಿಗಳನ್ನು ವಿಮರ್ಶಿಸಲಾಗಿದೆ. ನಾಲ್ಕನೇ ಭಾಗದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸಾಮ್ರಾಜ್ಯಶಾಹಿ ಧೋರಣೆಯ ವಿರುದ್ಧ ಕರಾವಳಿ ಕರ್ನಾಟಕದಲ್ಲಿ ರೈತಾಪಿ ಜನತೆ ನಡೆಸಿದ ಪ್ರತಿರೋಧ ಮತ್ತು ದಂಗೆಗಳ ಸ್ವರೂಪ, ವಿನ್ಯಾಸ ಮತ್ತು ಪರಿಣಾಮಗಳನ್ನು ವಿಶ್ಲೇಷಿಸಲಾಗಿದೆ. ಅಂತಿಮ ಭಾಗದಲ್ಲಿ ಈ ಅಧ್ಯಾಯದ ಒಟ್ಟಾರೆ ಫಲಿತಾಂಶಗಳನ್ನು ಸಂಕ್ಷಿಪ್ತವಾಗಿ ವಿಮರ್ಶೆ ಮಾಡಲಾಗಿದೆ.

ಹೈದರಾಲಿ ಮತ್ತು ಟಿಪ್ಪು ಸುಲ್ತಾನ್‌ನ ರಾಜ್ಯಾಡಳಿತ ಬ್ರಿಟಿಷರಿಗೆ ಮಾತ್ರವಲ್ಲದೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮಗಳಿಗೆ ಸಿಂಹ ಸ್ವಪ್ನವಾಗಿತ್ತು. ಆದುದರಿಂದ ಇವರ ವಿರುದ್ಧ ಬ್ರಿಟಿಷರಿಂದ ಯೋಜನಾಬದ್ಧ ವ್ಯಾಪಾರ ಸಮರ, ಸೈನಿಕ ಸಮರ ಮತ್ತು ವ್ಯವಸ್ಥಿತ ಅಪಪ್ರಚಾರಗಳು ನಿರಂತರವಾಗಿ ನಡೆಯುತ್ತಿತ್ತು.[೧] ಕೊನೆಗೂ ಟಿಪ್ಪು ಶ್ರೀರಂಗಪಟ್ಟಣದಲ್ಲಿ ೧೭೯೯ರ ಮೇ ತಿಂಗಳ ೪ರಂದು ಮಡಿಯುವ ಮೂಲಕ ಯಶಸ್ಸನ್ನು ಕಂಡರು. ಹೈದರಾಲಿಯು ಕೆಳದಿಯ ಕೊನೆಯ ರಾಣಿ ವೀರ ಚೆನ್ನಮ್ಮಾಜಿಯನ್ನು ಸೋಲಿಸಿದ ನಂತರ ೧೭೬೩ರಿಂದ ೧೭೯೯ರ ವರೆಗೆ ವಿವಿಧ ಸಂದರ್ಭಗಳಲ್ಲಿ ಕರಾವಳಿ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯೋದ್ಯಮ ಹಿತಾಸಕ್ತಿಗಳು ರೂಪಿಸಿದ ಸಂಘರ್ಷಗಳು ಮತ್ತು ಅವುಗಳ ವಿವಿಧ ಆಯಾಮಗಳನ್ನು ಈಗಾಗಲೇ ಚರ್ಚಿಸಲಾಗಿದೆ. ೧೭೮೪ರಿಂದ ಸತತವಾಗಿ ಮುಂದಿನ ೧೫ ವರ್ಷಗಳ ಕಾಲ ನಿರ್ದಿಷ್ಟವಾಗಿ ಮುಂಬಯಿ ಮತ್ತು ಇತರೆ ಭಾಗದ ವ್ಯಾಪಾರಿಗಳು ಟಿಪ್ಪು ಸುಲ್ತಾನ್‌ನೊಂದಿಗೆ ಯುದ್ಧಕ್ಕಾಗಿ ಹಾತೊರೆಯುತ್ತಿದ್ದು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು 'ಯುದ್ಧ ಒಂದು ವ್ಯಾಪಾರ' ಎಂದು ಪರಿಗಣಿಸಿತು.

ಕರಾವಳಿ ಕರ್ನಾಟಕದ ಅಧಿಕಾರವನ್ನು ನೇರ ಹತೋಟಿಗೆ ೧೭೯೯ರಲ್ಲಿ ಪಡೆದ ಮದ್ರಾಸ್ ಪ್ರೆಸಿಡೆನ್ಸಿ ಸರಕಾರಕ್ಕೆ ಅನುಕೂಲವಾಗುವಂತಹ ಸ್ವರೂಪದಲ್ಲಿ ಇಲ್ಲಿಯ ಕೃಷಿ ಸಂಬಂಧಗಳು, ವ್ಯಾಪಾರ ವ್ಯವಹಾರ

ಮತ್ತು ಕಂದಾಯ ನೀತಿಗಳು ಜಾರಿಯಲ್ಲಿತ್ತು. ಇಂತಹ ಸಂದರ್ಭದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ವ್ಯವಸ್ಥಿತ ಆಡಳಿತಾತ್ಮಕ ಸ್ವರೂಪವನ್ನು ನೀಡಿ ಕಾನೂನು ಮತ್ತು ನಿಯಮಗಳನ್ನು ರೂಪಿಸಿ ಅಧಿಕಾರಶಾಹಿಯ ಮೂಲಕ ವಸಾಹತುಶಾಹಿ ಆಡಳಿತವನ್ನು ಕಟ್ಟುನಿಟ್ಟಿನಿಂದ ತೀವ್ರ ವೇಗದಿಂದ ಜಾರಿಗೊಳಿಸಿತು. ಇವರು ಅಧಿಕಾರ ವಹಿಸುವ ಸಂದರ್ಭದಲ್ಲಿ ತೆರಿಗೆಯ ನಿಯಮಗಳು ಮತ್ತು ಪಾವತಿಯ ವಿಧಾನವು ಮುಖ್ಯವಾಗಿ ನಗದು ರೂಪದಲ್ಲಿ ಇತ್ತು. ಈಗ ಅದು ಅಧಿಕೃತ ನೀತಿಯಾಯಿತು. ಈ ತೆರಿಗೆಯ ಸ್ವರೂಪ, ಪಾವತಿಯ ವಿಧಾನ, ಕೃಷಿ ಮತ್ತು ಅಬಕಾರಿ ಸುಂಕಗಳು, ಏಕಸ್ವಾಮ್ಯ ನೀತಿಗಳು, ಬೆಲೆ ಕುಸಿತ, ಆರ್ಥಿಕ ಬಿಕ್ಕಟ್ಟು ಇವೆಲ್ಲವುಗಳು ವಿವಿಧ ಹಂತಗಳಲ್ಲಿ ಜಾರಿಗೊಂಡಿತ್ತು. ಇದರ ವಿರುದ್ಧ ಜನರ ಪ್ರತಿಭಟನೆಗಳು ಬೆಳೆದು ಬರಲು ಕಾರಣವಾಯಿತು. ಈ ರೀತಿ ಸಾಮಾನ್ಯ ಜನರೂ, ರೈತರೂ ಭಾಗವಹಿಸಿದ ಪ್ರತಿಭಟನೆಗಳ ಹಿಂದೆ ವ್ಯಾಪಾರಿ ಮತ್ತು ವಾಣಿಜ್ಯದ ಹಿತಾಸಕ್ತಿಗಳಿಂದ ತೊಂದರೆಗೊಳಗಾದ ಜನರ ನೋವೂ ಇದ್ದವು. ಅಮರ ಸುಳ್ಯ ದಂಗೆಯಲ್ಲೂ ಬ್ರಿಟಿಷರ ಜನವಿರೋಧಿ ವಾಣಿಜ್ಯ ನೀತಿಯ ವಿರುದ್ಧದ ಪ್ರತಿಧ್ವನಿ ಒಳಗೊಂಡಿತ್ತು. ಮುಂದೆ ೧೮೬೨ರಲ್ಲಿ ಕೆನರಾದ ವಿಭಜನೆಯು ನಿರ್ದಿಷ್ಟವಾಗಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯ ಮತ್ತು ಆರ್ಥಿಕ ಹಿತಾಸಕ್ತಿಯ ಬಲಿಪಶು ಎಂಬುದರ ಬಗ್ಗೆಯೂ ವಿಶ್ಲೇಷಣೆಯನ್ನು ಒಳಗೊಂಡಿದೆ. ಪೋರ್ಚುಗೀಸರ ಆಗಮನದಿಂದ ಇಕ್ಕೇರಿಯ ಪತನ, ಹೈದರಾಲಿ, ಟಿಪ್ಪು ಕಾಲಘಟ್ಟದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಇವುಗಳ ಸ್ವರೂಪ ಬಗೆಗಿನ ಜಿಜ್ಞಾಸೆಗೂ ಪ್ರಸ್ತುತ ಬ್ರಿಟಿಷ್ ಕಾಲಘಟ್ಟದಲ್ಲಿ ಇದರ ಸ್ವರೂಪಕ್ಕೂ ವ್ಯತ್ಯಾಸವನ್ನು ಕಾಣಬಹುದಾಗಿದೆ.

* * * *

## ಟಿಪ್ಪು ಮರಣೋತ್ತರ ಕರಾವಳಿ ಕರ್ನಾಟಕದ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ವಾಣಿಜ್ಯೋದ್ಯಮದ ಸ್ಥಿತಿಗತಿಗಳು

ಟಿಪ್ಪು ಸುಲ್ತಾನನು ೧೮೮೪ ರಿಂದ ನಿರಂತರವಾಗಿ ಬ್ರಿಟಿಷರೊಂದಿಗೆ, ಮರಾಠರೊಂದಿಗೆ ಮತ್ತು ಹೈದರಾಬಾದ್ ನಿಜಾಮರೊಂದಿಗೆ ಯುದ್ಧದಲ್ಲೇ ಇರಬೇಕಾದ ಪರಿಸ್ಥಿತಿ ನಿರ್ಮಾಣಗೊಂಡಿತ್ತು.[೨] ಇದರಿಂದಾಗಿ ಟಿಪ್ಪುವಿನ ರಾಜ್ಯದ ಬೊಕ್ಕಸಕ್ಕೆ ಅಪಾರ ಪ್ರಮಾಣದ ಖರ್ಚು ವೆಚ್ಚವನ್ನು ನಿಭಾಯಿಸುವಂತಹ ಸಂದಿಗ್ಧತೆಯನ್ನು ತಂದೊಡ್ಡಿತ್ತು. ಹೆಚ್ಚುವರಿ ಖರ್ಚು ವೆಚ್ಚಕ್ಕಾಗಿ ಸಹಜವಾಗಿಯೇ ತೆರಿಗೆ ಹೆಚ್ಚಳದೊಂದಿಗೆ ವಾಣಿಜ್ಯ ಉತ್ಪನ್ನಗಳ ಮೇಲೆ ಏಕಸ್ವಾಮ್ಯತೆ ಜಾರಿಗೊಳಿಸಿ ಅಪಾರ ಮೊತ್ತದ ಸಂಪನ್ಮೂಲವನ್ನು ಸಂಗ್ರಹಿಸಬೇಕಾಯಿತು. ಪರಿಣಾಮವಾಗಿ ರಾಜ್ಯದ ಬೊಕ್ಕಸಕ್ಕೆ ಖರ್ಚು ವೆಚ್ಚ ಭರಿಸುವ ಉದ್ದೇಶದಿಂದ ರಾಜ್ಯದ ಅತೀ ಪ್ರಮುಖ ಆದಾಯದ ಮೂಲವಾಗಿದ್ದ ತೆರಿಗೆಯನ್ನು ಪರಿಷ್ಕರಿಸಿ ಹೆಚ್ಚಿಸಬೇಕಾಗಿ ಬಂತು. ಜಹಗೀರುಗಳನ್ನು ಕೊಡುವ ಪದ್ಧತಿಯನ್ನು ರದ್ದು ಮಾಡಿ ಆ ಮೂಲಕ ರಾಜ್ಯದ ಆದಾಯವನ್ನು ಹೆಚ್ಚಿಸುವ ಪ್ರಯತ್ನವನ್ನೂ ಮಾಡಿದನು. ಪಾಳೆಯಗಾರರ ವಂಶಪಾರಂಪರ್ಯವಾದ ಆಸ್ತಿಯನ್ನು ಕಡಿತಗೊಳಿಸುವ ಮತ್ತು ರಾಜ್ಯ ಮತ್ತು ಕೃಷಿಕರ ನಡುವಿನ ಮಧ್ಯವರ್ತಿಗಳನ್ನು ನಿವಾರಿಸುವ ಪ್ರಯತ್ನವನ್ನೂ ಸಹ ಅವನು ಮಾಡಿದ. ಅವನ ಭೂ ಕಂದಾಯವು ಇತರ ಸಮಕಾಲೀನ ರಾಜರ ಭೂಕಂದಾಯಕ್ಕಿಂತಲೂ ಹೆಚ್ಚೇ ಇತ್ತು. ಅದು ಒಟ್ಟು ಉತ್ಪನ್ನದ ಮೂರನೇ ಒಂದು ಭಾಗದಷ್ಟಿತ್ತು. ಆದರೆ ಅವನು ಅನ್ಯಾಯದ

ತೆರಿಗೆಗಳನ್ನು ವಸೂಲು ಮಾಡುವುದಕ್ಕೆ ತಡೆ ಹಾಕಿದ (ಬಿಪನ್ ಚಂದ್ರ ೨೦೧೭:೪೦). ತೆರಿಗೆಯನ್ನು ನಗದು ರೂಪದಲ್ಲೇ ಪಾವತಿಸಬೇಕೆಂದು ಆದೇಶಿಸಲಾಗಿತ್ತು. ಇತರೆ ಮೂಲಗಳಾದ ಸಾಯಿದ್ (ಕಸ್ಟಂ, ಟೋಲ್ ತೆರಿಗೆ, ಲೈಸನ್ಸ್ ಮತ್ತು ವ್ಯಾಪಾರಿ ವಸ್ತುಗಳ ಮೇಲಿನ ತೆರಿಗೆ) ತೆರಿಗೆಗಳನ್ನು ಸಂಗ್ರಹಿಸಲಾಗುತ್ತಿತ್ತು. ಇವುಗಳಲ್ಲದೆ ಅಬಕಾರಿ ತೆರಿಗೆಗಳಾದ ಪಂಚಬಾದ್ (ಶೇಂದಿ, ಶರಾಯಿ, ಗಾಂಜಾ, ಅಡಿಕೆ ಮತ್ತು ತಂಬಾಕು ಮೇಲಿನ ತೆರಿಗೆ) ತೆರಿಗೆ ಮತ್ತು ಬಾಜೆ ಬಾದ್ ತೆರಿಗೆಗಳು ಜಾರಿಯಲ್ಲಿತ್ತು. ಮೈಸೂರಿನ ಬೊಕ್ಕಸಕ್ಕೆ ಶ್ರೀಗಂಧದ ಮೇಲಿನ ಏಕಸ್ವಾಮ್ಯ, ಕರಿಮೆಣಸಿನ ಮೇಲಿನ ಏಕಸ್ವಾಮ್ಯ ಮತ್ತು ಏಲಕ್ಕಿಯ ಮೇಲಿನ ಏಕಸ್ವಾಮ್ಯದಿಂದಲೂ ಆದಾಯ ಬರುತ್ತಿತ್ತು. ಬಂಜರು ಭೂಮಿಗೆ ಕೃಷಿ ತೆರಿಗೆ ವಿಧಿಸಲಾಗುತ್ತಿತ್ತು. ಕರಾವಳಿ ಕರ್ನಾಟಕದಲ್ಲಿ ತೆರಿಗೆ ವಸೂಲಾತಿಯು ಈ ಮೊದಲಿಗಿಂತ ೧೫% ರಿಂದ ೨೦% ಜಾಸ್ತಿಯಾಗಿದ್ದು, ರೈತರು ಇದನ್ನು ಪಾವತಿಸಲಾಗದೆ ಬಾಕಿ ಇರಿಸುತ್ತಿದ್ದರು. ತೆರಿಗೆ ಹೆಚ್ಚಳ ಮತ್ತು ಬಾಕಿ ಹಾಗೂ ಅದನ್ನು ನಗದು ರೂಪದಲ್ಲಿ ಪಾವತಿಸಬೇಕಾದ ಸನ್ನಿವೇಶವು ವ್ಯಾಪಾರಿ ವರ್ಗದಿಂದ ಮತ್ತು ಶ್ರೀಮಂತ ಭೂಮಾಲಿಕ ವರ್ಗದಿಂದ ಹೊಸ ಹಣಕಾಸು ಲೇವಾದೇವಿ ಮಾಡುವ ಸಮುದಾಯ ಮೂಡಿ ಬರಲು ಕಾರಣವಾಯಿತು (ಶ್ಯಾಮ್ ಭಟ್ ೧೯೯೮:೩೬). ರೈತಾಪಿ ಸಮುದಾಯ ಕೃಷಿ ಭೂಮಿಯನ್ನು ಅಡವು ಇಟ್ಟು ಸಾಲ ಪಡೆದು ತೆರಿಗೆ ಪಾವತಿಸುವ ಹೊಸ ಉಪಕ್ರಮ ಚಾಲ್ತಿಗೆ ಬಂತು. ಸಾಲ ಮರುಪಾವತಿಸಲು ಅಸಾಧ್ಯವಾದರೆ ಸದ್ರಿ ಅಡವಿಟ್ಟ ಭೂಮಿಯನ್ನು ಈ ಲೇವಾದೇವಿಗಾರರು ಮುಟ್ಟುಗೋಲು ಹಾಕುತ್ತಿದ್ದರು. ಇದು ಕರಾವಳಿ ಕರ್ನಾಟಕದಲ್ಲಿ ರೈತಾಪಿ ಸಮುದಾಯಕ್ಕೆ ಹೊಸ ಸವಾಲಾಗಿ ಕಾಡುತ್ತಿತ್ತು.

ಹೊಸದಾಗಿ ಸಮಗ್ರ ಸಾರ್ವಭೌಮ ಅಧಿಕಾರ ಪಡೆದ ಬ್ರಿಟಿಷ್ ಮದ್ರಾಸ್ ಪ್ರೆಸಿಡೆನ್ಸಿಯು ತನ್ನ ವ್ಯಾಪ್ತಿಯ ಭೂ ಪ್ರದೇಶಗಳ ಚಾರಿತ್ರಿಕ, ಸಾಮಾಜಿಕ, ಆರ್ಥಿಕ ಮತ್ತು ಕೃಷಿ ಸಂಬಂಧಗಳನ್ನು ಸಮಗ್ರ ಅಧ್ಯಯನ ನಡೆಸಿ ವರದಿ ಪಡೆಯಲು ನಿರ್ಧರಿಸಿತು. ಈ ಹಿನ್ನೆಲೆಯಲ್ಲಿ ಸಮರ್ಥ ಬ್ರಿಟಿಷ್ ಅಧಿಕಾರಿಯಾಗಿದ್ದ ಫ್ರಾನ್ಸಿಸ್ ಬುಕಾನನ್‌ನನ್ನು ಅಧ್ಯಯನ ಮಾಡಿ ವರದಿ ನೀಡಲು ನೇಮಕ ಮಾಡಿತ್ತು. ಈ ಬ್ರಿಟಿಷ್ ಅಧಿಕಾರಿ ಕರಾವಳಿ ಕರ್ನಾಟಕದ ಬಂದರುಗಳ ವ್ಯಾಪಾರ–ವ್ಯವಹಾರ ಮತ್ತು ರಸ್ತೆ ಸಂಪರ್ಕದ ಬಗ್ಗೆ ಈ ರೀತಿ ದಾಖಲಿಸಿರುತ್ತಾನೆ.

> ಕರಾವಳಿ ಪ್ರದೇಶಕ್ಕೆ ಮೈಸೂರಿನ ಎಲ್ಲಾ ದಿಕ್ಕುಗಳಿಂದ ರಸ್ತೆ ಸಂಪರ್ಕವಿತ್ತು. ಪಶ್ಚಿಮ ದಿಕ್ಕಿನ ರಸ್ತೆ ನೇರವಾಗಿ ಮಂಗಳೂರು ಬಂದರಿಗೆ ಸಂಪರ್ಕ ಕಲ್ಪಿಸುತ್ತಿತ್ತು. ಬೆಂಗಳೂರಿನ ವ್ಯಾಪಾರಿಗಳು ಸಾಕಷ್ಟು ಪ್ರಮಾಣದಲ್ಲಿ ಬಿಳಿ ಮತ್ತು ಇತರೆ ಬಣ್ಣದ ಹತ್ತಿಯ ಬಟ್ಟೆಗಳನ್ನು ಮಂಗಳೂರಿಗೆ ತರುತ್ತಿದ್ದರು. ಮಂಗಳೂರಿನಿಂದ ಹಿಂತಿರುಗಿ ಹೋಗುವಾಗ ಕಚ್ಚಾ ರೇಷ್ಮೆ ಮತ್ತು ರೇಷ್ಮೆ ಬಟ್ಟೆಗಳನ್ನು ಕೊಂಡ್ಯೊಯ್ಯುತ್ತಿದ್ದರು (ಬುಕಾನನ್ (೧) ೧೯೮೮:೧೩೮). ಶಿಡ್ಲಘಟ್ಟದ ವ್ಯಾಪಾರಿಗಳು ತಮ್ಮ ಸುತ್ತಮುತ್ತಲಿನ ಪ್ರದೇಶಗಳಿಂದ ಬಟ್ಟೆ ಮತ್ತು ತಂಬಾಕುಗಳನ್ನು ಮಂಗಳೂರು ಮತ್ತು 'ನಗರ'ಗಳಲ್ಲಿ ಮಾರುತ್ತಿದ್ದರು. ಇದಕ್ಕೆ ವಿನಿಮಯ ರೂಪದಲ್ಲಿ ಕರಿಮೆಣಸು ಮತ್ತು ಅಡಿಕೆಯನ್ನು ಕೊಂಡೊಯ್ಯುತ್ತಿದ್ದರು (ಬುಕಾನನ್ (೩) ೧೯೮೮:೩೨೬).

ಈ ರೀತಿ ಕರಾವಳಿ ಕರ್ನಾಟಕವು ರಾಜ್ಯದ ಇತರೆ ಪ್ರದೇಶಗಳೊಂದಿಗೆ ವ್ಯಾಪಾರ–ವ್ಯವಹಾರ ನಡೆಸುತ್ತಿದ್ದುದು ಮಾತ್ರವಲ್ಲದೆ ಪೆಗು, ಚೈನಾ, ಮಸ್ಕತ್, ಯುರೋಪ್, ದೇಶಗಳೊಂದಿಗೆ ಅಂತರಾಷ್ಟ್ರೀಯ

ವ್ಯಾಪಾರ ವ್ಯವಹಾರ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಓಮನ್ ದೇಶದ ವ್ಯಾಪಾರಿಗಳು ಆ ರಾಷ್ಟ್ರದ ಜನರ ಆಹಾರಕ್ಕಾಗಿ ಮಂಗಳೂರಿನ ಅಕ್ಕಿಯನ್ನೇ ಅವಲಂಬಿಸಿದ್ದರು. ಕರಾವಳಿ ಕರ್ನಾಟಕದ ಬಂದರುಗಳಿಂದ ವಿದೇಶಗಳಿಗೆ ರಫ್ತಾಗುತ್ತಿದ್ದ ಇತರ ವಸ್ತುಗಳೆಂದರೆ ಮರದ ದಿಮ್ಮಿಗಳು, ಶ್ರೀಗಂಧದ ಮರ, ಏಲಕ್ಕಿ, ಕರಿಮೆಣಸು, ದಾಲ್ಚಿನಿ, ಆನೆಯ ದಂತ ಮತ್ತು ಬಟ್ಟೆಯ ವಸ್ತುಗಳು. ಇದೇ ರೀತಿ ಆ ರಾಷ್ಟ್ರಗಳಿಂದ ಕರಾವಳಿ ಕರ್ನಾಟಕದ ಬಂದರುಗಳಿಗೆ ಬಣ್ಣದ ಅರಗು ಹಾಗೂ ಬೀಜ, ರೇಷ್ಮೆ ಹುಳಗಳು, ಕುದುರೆಗಳು, ಮುತ್ತು, ಹವಳ, ಸಲ್ಫರ್, ತಾಮ್ರ, ಖರ್ಜೂರ ಮೊದಲಾದವುಗಳು ಆಮದಾಗುತ್ತಿತ್ತು. ೧೮ನೇ ಶತಮಾನದ ಟಿಪ್ಪುವಿನ ಕಾಲಾವಧಿಯಲ್ಲಿ ವಿದೇಶೀ ವ್ಯಾಪಾರಕ್ಕೆ ಹೊಸ ಹೊಸ ವಸ್ತಗಳು ಸೇರ್ಪಡೆಯಾದುವು. ವಿದೇಶಿ ವ್ಯಾಪಾರವನ್ನು ಆಕರ್ಷಿಸುವ ಉದ್ದೇಶದಿಂದ ಟಿಪ್ಪುಸುಲ್ತಾನ್ ವ್ಯಾಪಾರಿ ಸಮುದಾಯಗಳಿಗೆ ಕೆಲವು ವಿಶೇಷ ರಿಯಾಯಿತಿಗಳನ್ನು ನೀಡಿದ್ದನು. ಅವುಗಳೆಂದರೆ ಬಂದರಿನಲ್ಲಿ ಪಾವತಿಸಬೇಕಾದ ತೆರಿಗೆಗಳಲ್ಲಿ ಕೆಲವು ವಸ್ತುಗಳಿಗೆ ಪೂರ್ತಿ ವಿನಾಯಿತಿ ನೀಡಲಾಗಿತ್ತು. ವ್ಯಾಪಾರಿ ಸಮುದಾಯಗಳಿಗೆ ತಮ್ಮ ವ್ಯಾಪಾರದ ಕೇಂದ್ರ ತೆರೆಯಲು ಉಚಿತವಾಗಿ ಭೂಮಿಯನ್ನು ಮತ್ತು ವ್ಯಾಪಾರಕ್ಕೆ ಸಾಲ ಸೌಲಭ್ಯವನ್ನು ಒದಗಿಸಲಾಗುತ್ತಿತ್ತು. ವ್ಯಾಪಾರಿಗಳ ಲಾಭದ ಮೇಲೆ ತೆರಿಗೆಯಲ್ಲಿ ಕೆಲವು ನಿರ್ದಿಷ್ಟ ಸಮಯದ ವರೆಗೆ ವಿನಾಯಿತಿ ನೀಡಲಾಗುತ್ತಿತ್ತು ಎಂದು ಬುಕಾನನ್‌ರವರು ಟಿಪ್ಪುವಿನ ಮರಣದ ಸಂದರ್ಭದ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮದ ಸ್ಥಿತಿಗತಿಯನ್ನು ವಿವರಿಸಿದ್ದಾನೆ.

ಫ್ರಾನ್ಸಿಸ್ ಬುಕಾನನ್‌ರವರ ಪ್ರಕಾರ ೧೮೦೦ರಲ್ಲಿ ಬ್ರಿಟಿಷ್ ಸರಕಾರವು ಶ್ರೀಗಂಧದ ಮರವನ್ನು ಸರಕಾರದ ಅನುಮತಿ ಇಲ್ಲದೆ ಯಾರೂ ಕಡಿದು ಮಾರಲು ಅವಕಾಶ ನೀಡಲಿಲ್ಲ. ಇದಕ್ಕೆ ಸರಕಾರದ ಅಮೀಲ್‌ದಾರರ ಅನುಮತಿ ಅಗತ್ಯವಾಗಿ ಪಡೆಯಬೇಕಾಗಿತ್ತು. ಒಂದು ವೇಳೆ ಶ್ರೀಗಂಧದ ಮರಗಳನ್ನು ಕಡಿದು ಮಾರಿದರೆ ಅದರಿಂದ ಬರುವ ಹಣವನ್ನು ಸರಕಾರದ ಬೊಕ್ಕಸಕ್ಕೆ ಪಾವತಿಸಬೇಕಾಗುತ್ತಿತ್ತು. ಕರಾವಳಿ ಕರ್ನಾಟಕ ಮತ್ತು ಘಟ್ಟ ಭಾಗದಲ್ಲಿ ಬೆಳೆಸಲಾಗುತ್ತಿದ್ದ ಶ್ರೀಗಂಧದ ಮರ, ಕರಿಮೆಣಸು ಮತ್ತು ಏಲಕ್ಕಿಯು ಸಂಪೂರ್ಣವಾಗಿ ಬ್ರಿಟಿಷ್ ಸರಕಾರದ ಏಕಸ್ವಾಮ್ಯಕ್ಕೆ ಒಳಪಟ್ಟಿತ್ತು. ಕರಾವಳಿ ಕರ್ನಾಟಕದಲ್ಲಿ ಹೈದರಾಲಿಯ ಅಧಿಕಾರಾವಧಿಯ ದಿನಗಳಿಂದಲೇ ಇವುಗಳ ವ್ಯಾಪಾರ ವ್ಯವಹಾರಗಳು ಸರಕಾರದ ಅಧೀನಕ್ಕೆ ಒಳಪಟ್ಟಿತ್ತು(ಬುಕಾನನ್ ೧೯೮೮:೧,೨). ರಾಜ್ಯದ ಬಂದರುಗಳಲ್ಲಿ ಮಂಗಳೂರು ಒಂದನೆಯ ಮುಖ್ಯ ಬಂದರಾಗಿತ್ತು. ಅನಂತರ ಕುಂದಾಪುರ ಎರಡನೆಯ ಮುಖ್ಯ ಬಂದರಾಗಿತ್ತು. ಕರಾವಳಿ ಕರ್ನಾಟಕದಲ್ಲಿ ಮಂಗಳೂರು ಮಹತ್ವಪೂರ್ಣ ಹಾಗೂ ದೊಡ್ಡದಾದ ನೌಕಾ ಸೈನ್ಯದ ತುಕಡಿಯನ್ನು ಹೊಂದಿತ್ತು(ಶ್ಯಾಮ್ ಭಟ್ ೧೯೯೮:೩೯). ಈ ರೀತಿ ಟಿಪ್ಪುವಿನ ಮರಣೋತ್ತರ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕವು ವಾಣಿಜ್ಯರಂಗಕ್ಕೆ ಸಂಬಂಧಿಸಿ ಕೂಡ ಹಲವಾರು ಬಂಡವಾಳಶಾಹಿ ಪೂರ್ವ ಆರ್ಥಿಕ ಸಂಚಯದ ಘಟ್ಟವನ್ನು ಪ್ರತಿಬಿಂಬಿಸುತ್ತದೆ.

ರಾಜಕೀಯವಾಗಿ ಕರಾವಳಿ ಕರ್ನಾಟಕದಲ್ಲಿ ಟಿಪ್ಪುವಿನ ಮರಣೋತ್ತರ ಸಂದರ್ಭದಲ್ಲಿ ಸಾಮಂತ ರಾಜರುಗಳು ಬ್ರಿಟಿಷರ ವಿರುದ್ಧ ಸಂಘರ್ಷವನ್ನು ನಡೆಸಿದರು. ಹೈದರಾಲಿ ಮತ್ತು ಟಿಪ್ಪುವಿನ ಸಂದರ್ಭದಲ್ಲಿ ಕರಾವಳಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಮಂತರಾಜರುಗಳು ಬ್ರಿಟಿಷರೊಂದಿಗೆ ಜೊತೆಗೂಡಿ

ಹೈದರಾಲಿ ಮತ್ತು ಟಿಪ್ಪುವಿನ ವಿರುದ್ಧ ಎಲ್ಲಾ ರೀತಿಯ ಸಹಾಯ ಸಹಕಾರ ನೀಡಿದರು. ಕ್ರಮೇಣ ವಿಟ್ಲದ ಹೆಗ್ಗಡೆ, ಕುಂಬಳೆ ಮತ್ತು ನಿಲೇಶ್ವರದ ಸಾಮಂತ ರಾಜರುಗಳು ಅಧಿಕಾರದಿಂದ ಪದಚ್ಯುತರಾಗಿ ಬ್ರಿಟಿಷರಿಂದ ಪೆನ್ಶನ್ ಪಡೆಯುತ್ತಿದ್ದರು. ನಿರ್ಣಾಯಕ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲೂ ತಮ್ಮ ಇತಿಮಿತಿಯಲ್ಲಿ ಬ್ರಿಟಿಷರ ಪರವಾಗಿ ಭಾಗವಹಿಸಿದರು. ಶ್ರೀರಂಗ ಪಟ್ಟಣದಲ್ಲಿ ಟಿಪ್ಪು ಹತನಾದ ನಂತರ ೧೭೯೯ರ ಜೂನ್ ೨೨ರಂದು ಜಾರಿಗೊಂಡ ಒಪ್ಪಂದದಲ್ಲಿ ತಮ್ಮ ತಮ್ಮ ಪ್ರಾಂತ್ಯಗಳನ್ನು ಆಳ್ವಿಕೆ ನಡೆಸಲು ಬ್ರಿಟಿಷರು ಅವಕಾಶ ಕಲ್ಪಿಸಿ ಕೊಡಬಹುದೆಂಬ ನಂಬಿಕೆಯು ಇಲ್ಲದಿರುವಾಗ ಇವರುಗಳು ಹತಾಶರಾದರು. ಈ ಹಿನ್ನೆಲೆಯಲ್ಲಿ ಬ್ರಿಟಿಷರು ಅಧಿಕಾರವಹಿಸಿಕೊಂಡ ಪ್ರಾರಂಭದಿಂದಲೇ ಅವರ ವಿರುದ್ಧ ಸಾಮಂತರಾಜರುಗಳಲ್ಲಿ ಅಸಮಾಧಾನ ಹುಟ್ಟಿಕೊಂಡಿತ್ತು.

ಕರಾವಳಿ ಕರ್ನಾಟಕದಲ್ಲಿ ರಾಜ ಮನೆತನಗಳ ಆಡಳಿತ ಬದಲಾವಣೆ ಮತ್ತು ಪ್ರಸ್ತುತ ಬ್ರಿಟಿಷರ ಪರವಾದ ಸಾರ್ವಭೌಮ ಅಧಿಕಾರ ಬದಲಾವಣೆಗೆ ಸಂಬಂಧಿಸಿ ಚಾರಿತ್ರಿಕ ಘಟ್ಟಗಳ ಬಗ್ಗೆ ಶ್ಯಾಮ್ ಭಟ್‌ರವರು ಈ ರೀತಿ ವಿಶ್ಲೇಷಿಸುತ್ತಾರೆ. ಆಲೂಪರಿಂದ ವಿಜಯನಗರ ಸಾಮ್ರಾಜ್ಯ, ವಿಜಯನಗರದಿಂದ ಕೆಳದಿ ಸಾಮ್ರಾಜ್ಯದ ಬದಲಾವಣೆಗೊಂಡಾಗ ಸಮಾಜದ ಭೌತಿಕ ವ್ಯವಸ್ಥೆಯಲ್ಲಿ ಯಾವುದೇ ದೊಡ್ಡ ಬದಲಾವಣೆಗಳು ಆಗಲಿಲ್ಲ. ಆದರೆ ಮೈಸೂರು ಟಿಪ್ಪುವಿನ ಮರಣೋತ್ತರದ ರಾಜಕೀಯ ಬದಲಾವಣೆಯು ಕೆಲವು ಗಂಭೀರ ಬದಲಾವಣೆಗಳನ್ನು ತಂದೊಡ್ಡಿತ್ತು. ಪ್ರಮುಖವಾಗಿ ಅದು ಜಾರಿಗೊಳಿಸಿದ ತೆರಿಗೆ ಪದ್ಧತಿ, ಅದರ ಪರಿಣಾಮವಾಗಿ ರೈತಾಪಿ ವರ್ಗ, ಇತರೆ ಜನಸಮುದಾಯ, ಆರ್ಥಿಕ ಸಂಕಷ್ಟದಲ್ಲಿ ಮುಳುಗಿದರು. ಇಂತಹ ಪೂರ್ವಭಾವಿ ಸಾಮಾಜಿಕ, ಆರ್ಥಿಕ ಸನ್ನಿವೇಶದಲ್ಲಿ ಬ್ರಿಟಿಷರು ಈ ಪ್ರಾಂತ್ಯದಲ್ಲಿ ಅಧಿಕಾರ ಹಿಡಿದ ವಸಾಹತುಶಾಹಿ ಆಳ್ವಿಕೆಯನ್ನು ಪ್ರಾರಂಭಿಸಿದರು (ಶ್ಯಾಮ್ ಭಟ್ ೧೯೯೮:೪೦).

**ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಜಾರಿಗೊಳಿಸಿದ ಹೊಸ ಧೋರಣೆಗಳ ವಿಶ್ಲೇಷಣೆ ಮತ್ತು ಪರಿಣಾಮ**

ಕರಾವಳಿ ಕರ್ನಾಟಕದಲ್ಲಿ ಬ್ರಿಟಿಷರು ಪ್ರಪ್ರಥಮ ಬಾರಿಗೆ ೧೭೩೭ರಲ್ಲಿ ಕಾರವಾರದಲ್ಲಿ ವ್ಯಾಪಾರದ ಮಳಿಗೆ ಸ್ಥಾಪಿಸಿದರು. ಇದೇ ಅವಧಿಯಲ್ಲಿ ಮಂಗಳೂರಲ್ಲೂ ಬ್ರಿಟಿಷರು ವ್ಯವಹಾರ ಪ್ರಾರಂಭಿಸಿದರು. ಬ್ರಿಟಿಷರ ಪ್ರತಿನಿಧಿಗಳು ಕೆಳದಿ ಸಾಮ್ರಾಜ್ಯದ ಮಂಗಳೂರಿನ ಗವರ್ನರ್‌ರವರೊಂದಿಗೆ ೧೭೩೭ರಲ್ಲಿ ವ್ಯಾಪಾರಿ ಸಂಬಂಧದ ಒಪ್ಪಂದವನ್ನು ಮಾಡಲು ಬಂದಿದ್ದರು (ಅಭಿಶಂಕರ್ ೧೯೭೩:೬೧). ಬ್ರಿಟಿಷರ ಈ ಪ್ರಪ್ರಥಮ ಭೇಟಿಯ ನಂತರ ಸಾರ್ವಭೌಮ ರಾಜ್ಯ ಅಧಿಕಾರವನ್ನು ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನ್ ಮಡಿದ ಮೇಲೆ ೧೭೯೯ರ ಜೂನ್ ೨೨ರಂದು ಜಾರಿಗೆ ಬಂದ ಒಪ್ಪಂದದ ಪ್ರಕಾರ ಕೆನರಾ ಪ್ರಾಂತ್ಯ ಮತ್ತು ಸೊಂದಾ ಪ್ರಾಂತ್ಯದ ಮೇಲೆ ಚಲಾಯಿಸಿದರು. ತನ್ಮೂಲಕ ಬ್ರಿಟಿಷ್ ಅಧಿಪತ್ಯ ಭಾರತದ ಪೂರ್ವ ಕರಾವಳಿಯಲ್ಲಿ ಸಂಪೂರ್ಣಗೊಂಡು, ಪಶ್ಚಿಮ ಕರಾವಳಿಯಲ್ಲಿ ದಕ್ಷಿಣದಿಂದ ಉತ್ತರದ ಕಾರವಾರದವರೆಗೆ ಬ್ರಿಟಿಷರು ಯಾವುದೇ ಅಡೆತಡೆಯಿಲ್ಲದೆ ಅಧಿಕಾರದ ಸಾರ್ವಭೌಮತೆಯನ್ನು ಪಡೆದರು. ಗೋವಾ[೪] ಹೊರತುಪಡಿಸಿ ಭಾರತದ ಎಲ್ಲಾ ಪ್ರಮುಖ ಕರಾವಳಿಯ ಬಂದರುಗಳಲ್ಲಿ ಇವರು ಭದ್ರ ಬುನಾದಿಯನ್ನು ರೂಪಿಸಿ ವಿದೇಶೀ ವ್ಯಾಪಾರ ವ್ಯವಹಾರವನ್ನು ಪೂರ್ತಿಯಾಗಿ ತಮ್ಮ ತೆಕ್ಕೆಗೆ ತೆಗೆದುಕೊಂಡರು.

ಇದರಲ್ಲಿ ಕರಾವಳಿ ಕರ್ನಾಟಕ ಒಳಗೊಂಡಿದ್ದ ವ್ಯಾಪಕವಾದ ಅರಣ್ಯ ಸಂಪತ್ತು, ಯಥೇಚ್ಛವಾದ ವಾಣಿಜ್ಯ ಬೆಳೆಗಳ ಮತ್ತು ಆಹಾರದ ಬೆಳೆಗಳ 'ಕಣಜ' ಬ್ರಿಟಿಷರ ವಶವಾಯಿತು.

ಒಟ್ಟಿನಲ್ಲಿ ಕೆನರಾ ಪ್ರಾಂತ್ಯವು ಕೃಷ್ಯುತ್ಪನ್ನ ಬೆಳೆಗಳು, ತೋಟಗಾರಿಕಾ ವಾಣಿಜ್ಯ ಬೆಳೆಗಳ ಕಾರಣಕ್ಕಾಗಿ ಅತ್ಯಂತ ಆಯಕಟ್ಟಿನ ಪ್ರಾಂತ್ಯವಾಗಿತ್ತು. ಬ್ರಿಟಿಷರು ಅಧಿಕಾರ ವಹಿಸುವ ಸಮಯದಲ್ಲಿ ಫ್ರಾನ್ಸಿಸ್ ಬುಕಾನನ್ ಅಧ್ಯಯನ ಪ್ರವಾಸದ ವರದಿಯಲ್ಲಿ ವ್ಯಾಪಾರ ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಈ ರೀತಿ ವಿವರಿಸುತ್ತಾನೆ.

> ಕರಾವಳಿ ಕರ್ನಾಟಕದಿಂದ ರಫ್ತಾಗುತ್ತಿದ್ದ ವಸ್ತುಗಳಲ್ಲಿ ಅಕ್ಕಿಯ ರಫ್ತು ಅತ್ಯಂತ ದೊಡ್ಡ ಪ್ರಮಾಣದಲ್ಲಿತ್ತು. ಇದನ್ನು ಮಸ್ಕತ್, ಮುಂಬೈ, ಗೋವಾ ಮತ್ತು ಮಲಬಾರ್‌ಗೆ ರಫ್ತು ಮಾಡಲಾಗುತ್ತಿತ್ತು. ರಫ್ತಿನಲ್ಲಿ ಅಕ್ಕಿಯ ನಂತರ ಅಡಿಕೆ ಪ್ರಮುಖ ಸ್ಥಾನ ಹೊಂದಿತ್ತು. ಇದೇ ರೀತಿಯಲ್ಲಿ ಸಾಂಬಾರು ಪದಾರ್ಥಗಳಾದ ಕರಿಮೆಣಸು, ಏಲಕ್ಕಿ, ದಾಲ್ಚಿನಿಗಳೂ ದೊಡ್ಡ ಪ್ರಮಾಣದಲ್ಲಿ ರಫ್ತು ಆಗುತ್ತಿತ್ತು (ಬುಕಾನನ್ (೩) ೧೯೮೮:೨೪೩).

ಈ ಮೇಲಿನ ವಿಶ್ಲೇಷಣೆಯ ಪ್ರಕಾರ ಮರಣೋತ್ತರ ಟಿಪ್ಪುವಿನ ಕಾಲದಲ್ಲಿ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಪ್ರಮುಖವಾಗಿ ಆಹಾರದ ಬೆಳೆಗಳು ಮತ್ತು ವಾಣಿಜ್ಯದ ಬೆಳೆಗಳನ್ನು ಆದರಿಸಿತ್ತು ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಈ ಸ್ಥಾನಮಾನ ಮುಂದಿನ ದಶಕದಲ್ಲಿ ಕೂಡಾ ಮುಂದುವರಿದಿತ್ತು. ಇದಕ್ಕೆ ಪೂರಕವಾಗಿ ೧೮೮೯ರ ಪಿಎಂಬಿಆರ್ ವರದಿಯ ಪ್ರಕಾರ, ಬ್ರಿಟಿಷರ ಅವಧಿಯಲ್ಲೂ ಸಹ ಮಂಗಳೂರು ಸೌತ್ ಕೆನರಾದ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು ಎಂದು ಉಲ್ಲೇಖಿಸಲ್ಪಟ್ಟಿದೆ.

ಕಾರ್ಲ್ ಮಾರ್ಕ್ಸ್‌ರವರು ಬ್ರಿಟಿಷರು ಭಾರತವನ್ನು ಈಸ್ಟ್ ಇಂಡಿಯಾ ಕಂಪೆನಿ ಮುಖಾಂತರ ತಮ್ಮ ಸ್ವಾಧೀನಕ್ಕೆ ವಶಪಡಿಸಿಕೊಂಡ ಮೇಲೆ ಅವರು ಭಾರತದ ಭೂಸಂಬಂಧಗಳ ಮೇಲೆ ನಡೆಸಿದ ಪ್ರಯೋಗವನ್ನು ಈ ರೀತಿಯಾಗಿ ವಿಶ್ಲೇಷಿಸಿದ್ದಾರೆ.

> ಭೂಮಿಯ ಸಾಮುದಾಯಿಕ ಒಡೆತನವಿದ್ದ ಕುಲಪತಿ ಆಡಳಿತ ಸಮಾಜದ ಚೌಕಟ್ಟನ್ನು ವಸಾಹತುಶಾಹಿಗಳು ಮುರಿದು ಹಾಕಿದರು. ಆದರೆ ಅದೇ ಹೊತ್ತಿನಲ್ಲಿ ಒಂದಾದ ಮೇಲೊಂದರಂತೆ ಎರಡು ಭೂ ಕಂದಾಯ ಹಾಗೂ ಭೂ ಹಿಡುವಳಿ ಪದ್ಧತಿಗಳನ್ನು ಜಮೀನ್ದಾರಿ ಹಾಗೂ ರೈತವಾರಿ ಪದ್ಧತಿಗಳನ್ನು ಜಾರಿಗೆ ತರುವ ಮೂಲಕ ಅವರು ಭಾರತೀಯ ಸಾಮಾಜಿಕ ಪದ್ಧತಿಯಲ್ಲಿ ಅನೇಕ ಸಾಮಂತಶಾಹಿ ಅವಶೇಷಗಳನ್ನು ಉಳಿಯಗೊಟ್ಟರು. ಇವು ಆ ದೇಶದ ಪುರೋಭಿವೃದ್ಧಿಯನ್ನು ನಿಧಾನವಾಗಿಸಿದ್ದವು ಮತ್ತು ಭಾರತೀಯ ರೈತರ ಮೇಲೆ ಭಾರಿ ಹೊರೆ ಹೊರಿಸಿದವು (ಮಾರ್ಕ್ಸ್ ಮತ್ತು ಏಂಗೆಲ್ಸ್ ೧೯೮೭:೯).

ಮೇಲ್ಕಂಡ ಮಾರ್ಕ್ಸ್‌ರವರ ವಿಶ್ಲೇಷಣೆಯನ್ನು ಕರಾವಳಿ ಕರ್ನಾಟಕಕ್ಕೆ ಅನ್ವಯಿಸಿಕೊಂಡಾಗ ರೈತವಾರಿ ಪದ್ಧತಿಯ ಅನುಷ್ಠಾನ ಹಾಗೂ ಅದರೊಂದಿಗೆ ಭೂ ಕಂದಾಯದ ವಿಪರೀತ ಹೆಚ್ಚಳದ ಹೊರೆ ಜೊತೆಜೊತೆಯಲ್ಲೇ ಜಾರಿಗೊಂಡುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಬ್ರಿಟಿಷ್ ವಸಾಹತುಶಾಹಿಯ ಈ ಶೋಷಣಾಮಯ ಕಾರ್ಯಕ್ರಮವನ್ನು ಜಾರಿ ಮಾಡಲು ಸಮರ್ಥ ಅಧಿಕಾರಿಯಾಗಿ ಸರ್ ಥೋಮಸ್ ಮುನ್ರೋರವರನ್ನು ಕೆನರಾ ಪ್ರಾಂತ್ಯಕ್ಕೆ ನೇಮಕಗೊಳಿಸಿತು. ಅವರು ಜಾರಿಗೊಳಿಸಿದ ರೆವೆನ್ಯೂ ಸೆಟ್ಲ್‌ಮೆಂಟ್

ಎಂಬುದು ರೈತಾಪಿ ಸಮುದಾಯಕ್ಕೆ ಭೂಕಂದಾಯ ನಿಗದಿ ಮಾಡುವುದು, ಪರಿಷ್ಕರಣೆ ಮಾಡುವುದು, ರಿಯಾಯಿತಿಗಳನ್ನು ಘೋಷಿಸುವುದು," ಭೂ ತೆರಿಗೆ ಸಂಬಂಧಿಸಿ ಇನ್ನಿತರೆ ಅಹವಾಲುಗಳನ್ನು ಸಲ್ಲಿಸಲು ಅವಕಾಶವಿರುವ ಕಾರ್ಯಕ್ರಮವಾಗಿದೆ. ಮೇಲ್ನೋಟಕ್ಕೆ ಇದು ರೈತರಿಗೆ ಉಪಯೋಗವಾಗುವ ಸರಕಾರಿ ಕಾರ್ಯಕ್ರಮ ಎಂದು ಕಂಡು ಬಂದರೂ ಪ್ರಾಯೋಗಿಕವಾಗಿ ಬಡ ರೈತಾಪಿ ಜನತೆಗೆ ಪ್ರಯೋಜನವಾಗದೆ ಭೂಮಾಲೀಕರಿಗೆ ಪ್ರಯೋಜನವಾಗುವ ಕಾರ್ಯಕ್ರಮವಾಗಿದೆ. ಈ ಮೂಲಕ ಪ್ರಾರಂಭವಾದ ರೈತವಾರಿ ಪದ್ಧತಿಯ ಗುಣಲಕ್ಷಣಗಳನ್ನು ಚರಿತ್ರೆಕಾರರಾದ ಬಿಪನ್ ಚಂದ್ರರವರು ಈ ರೀತಿ ಕೆಳಕಂಡಂತೆ ವಿವರಿಸಿದ್ದಾರೆ.

> ಭಾರತದ ದಕ್ಷಿಣ ಮತ್ತು ನೈರುತ್ಯ ಪ್ರದೇಶಗಳಲ್ಲಿ ಬ್ರಿಟಿಷ್ ಆಳ್ವಿಕೆಯ ನೆಲೆಗಳ ಸ್ಥಾಪನೆಯು ಭೂ ಒಪ್ಪಂದದಲ್ಲಿ ಹೊಸ ಸಮಸ್ಯೆಗಳನ್ನು ಹುಟ್ಟು ಹಾಕಿತ್ತು. ಈ ಪ್ರದೇಶದಲ್ಲಿ ಭೂ ಕಂದಾಯದ ಒಪ್ಪಂದ ಮಾಡಿಕೊಳ್ಳಬಹುದಾದ ಹೆಚ್ಚು ಭೂಮಿಯನ್ನು ಹೊಂದಿದ್ದ ಜಮೀನ್ದಾರರು ಇಲ್ಲದಿರುವುದರಿಂದ ಜಮೀನ್ದಾರಿ ಪದ್ಧತಿಯನ್ನು ಜಾರಿಗೆ ತಂದರೆ ಹಾಲಿ ಇರುವ ಪರಿಸ್ಥಿತಿಯು ಹದಗೆಡುತ್ತದೆ ಎಂದು ಬ್ರಿಟಿಷ್ ಅಧಿಕಾರಿಗಳು ನಂಬಿದರು. ಆದ್ದರಿಂದ ರೀಡ್ ಮತ್ತು ಥಾಮಸ್ ಮುನ್ರೋನ ನೇತೃತ್ವದ ಮದ್ರಾಸ್ ಅಧಿಕಾರಿಗಳು ಒಪ್ಪಂದವನ್ನು ನೇರವಾಗಿ ವಾಸ್ತವ ಉಳುಮೆದಾರರೊಂದಿಗೇ ಮಾಡಿಕೊಳ್ಳಬಹುದೆಂದು ಶಿಫಾರಸ್ಸು ಮಾಡಿದರು. ಖಾಯಂ ಜಮೀನ್ದಾರಿ ಪದ್ಧತಿಯಿಂದ ಜಮೀನ್ದಾರ ಜೊತೆಗೆ ಕಂದಾಯವನ್ನು ಹಂಚಿಕೊಳ್ಳಬೇಕಾಗುತ್ತದೆ ಮತ್ತು ಭೂಮಿಯಿಂದ ಹೆಚ್ಚು ಆದಾಯದಲ್ಲಿ ಯಾವುದೇ ಪಾಲನ್ನು ಪಡೆಯುವಂತಿಲ್ಲವಾದ್ದರಿಂದ ಕಂಪೆನಿಯು ಆರ್ಥಿಕವಾಗಿ ನಷ್ಟವನ್ನೇ ಅನುಭವಿಸಬೇಕಾಗುತ್ತದೆ ಎಂದೂ ಸಹ ಅವರು ಸ್ಪಷ್ಟ ಪಡಿಸಿದರು. ಜೊತೆಗೆ ಉಳುಮೆದಾರನು ಜಮೀನ್ದಾರರ ಅನುಕಂಪದ ಮೇಲೆ ಬದುಕಬೇಕಾಗಿತ್ತು ಮತ್ತು ಅವನು ಯಾವಾಗ ಬೇಕಾದರೂ ಉಳುಮೆದಾರರನ್ನು ತನ್ನ ಇಷ್ಟಕ್ಕೆ ತಕ್ಕಂತೆ ಪೀಡಿಸಬಹುದಾಗಿತ್ತು. ಅವರು ಪ್ರಸ್ತಾವನೆ ಇಟ್ಟ ರೈತವಾರಿ ಪದ್ಧತಿ ಎಂದು ಕರೆಯಲಾದ ವ್ಯವಸ್ಥೆಯಲ್ಲಿ ಭೂ ಕಂದಾಯವನ್ನು ಪಾವತಿಸುವುದರ ಆಧಾರದ ಮೇಲೆ ಉಳುಮೆದಾರರನ್ನು ಅವನು ಹೊಂದಿದ್ದ ಭೂಮಿಯ ಮಾಲೀಕನನ್ನಾಗಿ ಗುರುತಿಸಲಾಗುತ್ತಿತ್ತು (ಬಿಪನ್ ಚಂದ್ರ ೨೦೧೭:೧೨೨).

ಮೇಲೆ ವಿವರಿಸಿದ ರೈತವಾರಿ ಪದ್ಧತಿಯು ರೈತ ಮಾಲಿಕತ್ವ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರದೆ ಹೆಚ್ಚು ಸಂಖ್ಯೆಯ ಜಮೀನ್ದಾರರು ಒಬ್ಬ ದೊಡ್ಡ ಜಮೀನ್ದಾರನಿಂದ ಸ್ಥಾನಪಲ್ಲಟಗೊಂಡಿದ್ದರು. ಅವರು ಕೇವಲ ರಾಜ್ಯದ ಗೇಣಿದಾರರಾಗಿದ್ದರು. ಕಾಲಕಾಲಕ್ಕೆ ಸರಿಯಾಗಿ ಕಂದಾಯವನ್ನು ಪಾವತಿಸಲು ವಿಫಲರಾದರೆ ಅವರ ಭೂಮಿಯನ್ನು ಮಾರಲಾಗುತ್ತಿತ್ತು. ಮೂಲಗೇಣಿ, ವಾಯಿದೆಗೇಣಿ, ಚಾಲ್‌ಗೇಣಿ ಎಂಬ ವಿವಿಧ ಪ್ರಕಾರದ ಗೇಣಿ ಪದ್ಧತಿ ಇತ್ತು. ಇಲ್ಲಿ ಸರಕಾರಕ್ಕೆ ಪಾವತಿಸುವ ಭೂ ಕಂದಾಯವು ಬಾಡಿಗೆಯೇ ಹೊರತು ತೆರಿಗೆಯಲ್ಲ ಎಂದು ಸರಕಾರ ಬಹಿರಂಗವಾಗಿ ಸ್ಪಷ್ಟಪಡಿಸಿತ್ತು.

ಆದುದರಿಂದ ಬಿಪನ್ ಚಂದ್ರರವರು ಉಲ್ಲೇಖಿಸಿರುವಂತೆ "ಬ್ರಿಟಿಷರು ಭೂಮಿಯನ್ನು ಒಂದು ಸರಕನ್ನಾಗಿ ಮಾಡಿ ಅದನ್ನು ಸುಲಭವಾಗಿ ಕೊಳ್ಳಬಲ್ಲ ಮತ್ತು ಮಾರಾಟ ಮಾಡಬಲ್ಲ ಅವಕಾಶ ಕಲ್ಪಿಸಿ ದೇಶದಲ್ಲಿ ಆಗ ಚಾಲ್ತಿಯಲ್ಲಿದ್ದ ಭೂ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಯನ್ನು ತಂದರು" (ಬಿಪನ್ ಚಂದ್ರ ೨೦೧೭:೧೨೩).

ಈ ಹಿನ್ನೆಲೆಯಲ್ಲಿ ವಿಮರ್ಶಿಸಿದಾಗ ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಕರಾವಳಿ ಕರ್ನಾಟಕವನ್ನು ಬ್ರಿಟಿಷ್ ವ್ಯವಸ್ಥೆಯ ರೈತವಾರಿ ಪದ್ಧತಿಯ ಪ್ರಯೋಗ ಶಾಲೆಯನ್ನಾಗಿ ಮಾಡಿದರು.

ವಸಾಹತುಶಾಹಿ ವ್ಯವಸ್ಥೆಯು ಭೂಕಂದಾಯದ ಮೂಲಕವೇ ಆಯಾಯ ದೇಶದ ಜನಸಮುದಾಯಗಳ ರಕ್ತ ಹೀರುವ ಕೆಲಸ ಪ್ರಾರಂಭ ಮಾಡುತ್ತದೆ. ಭಾರತವೂ ಇದಕ್ಕೆ ಹೊರತಲ್ಲ. ೧೮೫೭ರ ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಲಂಡನ್‌ನಲ್ಲಿದ್ದ ಕಾರ್ಲ್ಸ್ ಮಾರ್ಕ್ಸ್‌ರವರು ಬೇರೆ ಬೇರೆ ನಿಯತಕಾಲಿಕಗಳಿಗೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಶೋಷಣೆಯ ಆಡಳಿತದ ಬಗ್ಗೆ ಲೇಖನಗಳನ್ನು ಬರೆಯುತ್ತಿದ್ದರು. ಅವರು ತಮ್ಮ ಒಂದು ಲೇಖನದಲ್ಲಿ ಈ ರೀತಿ ವಿವರಿಸಿದ್ದಾರೆ.

> ಭಾರತದಲ್ಲಿ ಬ್ರಿಟಿಷ್ ಆಡಳಿತಗಾರರು ರೈತನ ಮೇಲೆ ಸಹಿಸಲಾಗದಷ್ಟು ತೆರಿಗೆ ಹೊರೆ ಹೊರಿಸಿದರು. ಅವನನ್ನು ಸ್ಥಳೀಯ ಸಾಮಂತಶಾಹಿ ಶ್ರೀಮಂತ ಪ್ರಭುತ್ವದ ಹಾಗೂ ವಸಾಹತು ರಾಜ್ಯದ ಇಬ್ಬಗೆಯ ನೊಗಕ್ಕೆ ಸಿಕ್ಕಿಸಿದರು. ಭಾರತೀಯ ರೈತನು ಅತ್ಯಂತ ಭಾರವಾದ ಕಂದಾಯದ ಹೊರೆ ಹೊರಬೇಕಾಗಿದ್ದಿತ್ತು. ವಸೂಲಿಗಾರನು ಎಲ್ಲೆಲ್ಲೂ ತೆರಿಗೆ ವಸೂಲು ಮಾಡಲು ಬಲಾತ್ಕಾರದ ಸುಲಿಗೆ, ಹಿಂಸಾ ಕೃತ್ಯ ಹಾಗೂ ಕ್ರೂರ ಹಿಂಸೆಯ ವಿಧಾನಗಳನ್ನು ಬಳಸುತ್ತಿದ್ದರು. ಹಿಂಸಾ ಕೃತ್ಯವು ಭಾರತದಲ್ಲಿ ಬ್ರಿಟನ್ನಿನ ಹಣಕಾಸು ನೀತಿಯ ಅಧಿಕೃತವಾಗಿ ಮನ್ನಿತವಾದ ಅವಿಭಾಜ್ಯ ಅಂಗವಾಗಿದ್ದಿತ್ತು (ಮಾರ್ಕ್ಸ್ ಮತ್ತು ಏಂಗೆಲ್ಸ್ ೧೯೮೭:೧೦).

ಇದೇ ಪ್ರಕಾರ ಮದ್ರಾಸ್ ಪ್ರಾಂತೀಯ ಸರಕಾರದ ಆಡಳಿತದ ಅತೀ ಮುಖ್ಯ ಕಾರ್ಯಭಾರ ಆದಾಯ ಸಂಗ್ರಹಣೆಯಾಗಿತ್ತು. ಆದಾಯವನ್ನು ಭೂಕಂದಾಯ ಮತ್ತು ಇತರೆ ವಿಭಾಗಗಳಿಂದ ಸಂಗ್ರಹಿಸುತ್ತಿದ್ದರು. ಉದಾಹರಣೆಗೆ ಉಪ್ಪು ಮತ್ತು ತಂಬಾಕಿನ ತೆರಿಗೆ, ಸಮುದ್ರ ವ್ಯಾಪಾರ ಮತ್ತು ಕಸ್ಟಂ ತೆರಿಗೆ, ಅಬಕಾರಿ ತೆರಿಗೆ, ಗ್ರಾಮ ತೆರಿಗೆ, ಸಣ್ಣ ಎಸ್ಟೇಟ್‌ಗಳ ಮೇಲಿನ ಪರವಾನಿಗೆಗಳಿಂದ ಸಂಗ್ರಹಿತ ತೆರಿಗೆ, ದೇವಸ್ಥಾನ ಮಠಗಳಿಂದ ತೆರಿಗೆಗಳನ್ನು ವಸೂಲು ಮಾಡಲಾಗುತ್ತಿತ್ತು. ಒಟ್ಟಿನಲ್ಲಿ ಕರಾವಳಿ ಕರ್ನಾಟಕದಲ್ಲಿ ಎಲ್ಲಾ ರೀತಿಯ ತೆರಿಗೆಗಳ ಭಾರವನ್ನು ಜನರ ಮೇಲೆ ಹೊರಿಸಲಾಗಿತ್ತು.

## ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಹೊಸ ಧೋರಣೆಗಳು ಮತ್ತು ರೈತಾಪಿ ಸಮುದಾಯ

ಭೂಕಂದಾಯ ಹೊರತು ಪಡಿಸಿದರೆ ಉಪ್ಪು ಮತ್ತು ತಂಬಾಕಿನ ಏಕಸ್ವಾಮ್ಯದಿಂದ ಸಂಗ್ರಹಿಸಲ್ಪಡುತ್ತಿದ್ದ ತೆರಿಗೆಯು ಅಧಿಕ ಪಾಲು ಹೊಂದಿತ್ತು (ಶ್ಯಾಮ್ ಭಟ್ ೧೯೯೮:೮೪). ಈಗಾಗಲೇ ವಿವರಿಸಿರುವಂತೆ ಹೈದರಾಲಿ – ಟಿಪ್ಪು ಸುಲ್ತಾನ್‌ನ ಆಡಳಿತಾವಧಿಯಿಂದಲೇ ಕರಾವಳಿ ಕರ್ನಾಟಕದಲ್ಲಿ ನಗದು ರೂಪದ ತೆರಿಗೆ ಸಂಗ್ರಹಣೆ ಚಾಲ್ತಿಯಲ್ಲಿತ್ತು. ನಗದು ರೂಪದಲ್ಲಿ ತೆರಿಗೆ ಪಾವತಿ ರೈತಾಪಿ ಜನರಿಗೆ ಸಮಸ್ಯೆಯಾಗಿಯೇ ಕಾಡುತ್ತಿತ್ತು. ಈ ಪ್ರಕ್ರಿಯೆಯಿಂದ 'ಮಧ್ಯವರ್ತಿ'ಗಳೆಂಬ ಸಮುದಾಯವನ್ನು ರೂಪೀಕರಿಸಿ ಹೊಸ ಶೋಷಣೆಗೆ ಕಾರಣವಾಯಿತು. ರೈತರ ಉತ್ಪನ್ನಗಳನ್ನು ಖರೀದಿಸಿ ಅವರಿಗೆ ಅದರ ಮೌಲ್ಯವನ್ನು ನಗದು ರೂಪದಲ್ಲಿ ನೀಡಲಾಗುತ್ತಿತ್ತು. ಈ ಪ್ರಕ್ರಿಯೆಯಲ್ಲಿ ರೈತರು ತಮ್ಮ ಬೆಳೆಗೆ ಯೋಗ್ಯ ಬೆಲೆ ಪಡೆಯುತ್ತಿರಲಿಲ್ಲ. ಹೊಸದಾಗಿ ಬೆಳೆದುಬಂದ ಮಧ್ಯವರ್ತಿ ಸಮುದಾಯ ಆಗಲೇ ಇದ್ದ ವ್ಯಾಪಾರಿ ವರ್ಗ ಮತ್ತು ಭೂಮಾಲೀಕರಾಗಿದ್ದರು.[೬] ತೆರಿಗೆ ಪಾವತಿಸಲು ಅಸಾಧ್ಯವಾದ ರೈತಾಪಿ ಜನತೆ ಈ ಮಧ್ಯವರ್ತಿ– ಲೇವಾದೇವಿಗಾರರಿಂದ ಸಾಲ

ಪಡೆದು ಸುಸ್ತಿದಾರರಾಗುತ್ತಿದ್ದ ಘಟನೆಗಳು ೧೮೦೦ ರ ನಂತರ ಹೊಸ ವೇಗ ಪಡೆಯಿತು. ಕರಾವಳಿ ಕರ್ನಾಟಕದಲ್ಲಿ ಈ ರೀತಿ ಹೊಸ ಶೋಷಣಾ ವ್ಯವಸ್ಥೆ ಪರಿಪಕ್ವಗೊಂಡಿದ್ದ ಸಂದರ್ಭದಲ್ಲಿ ಬ್ರಿಟಿಷರು ಮತ್ತಷ್ಟೂ ಕಟ್ಟುನಿಟ್ಟಿನ ತೆರಿಗೆ ಪಾವತಿ ವಿಧಾನವನ್ನು ಜಾರಿಗೊಳಿಸಿ ರೈತಾಪಿ ಜನರನ್ನು ಸಂಕಷ್ಟಗಳ ದವಡೆಗೆ ದೂಡಿದರು. ಅಂತಿಮವಾಗಿ ಪಡೆದ ಸಾಲ ಮರುಪಾವತಿ ಮಾಡಲು ಅಸಾಧ್ಯವಾದ ರೈತರು ಅಡವಿಟ್ಟ ತಮ್ಮ ಕೃಷಿ ಭೂಮಿಯನ್ನು ಕಳೆದುಕೊಳ್ಳುವ ಸನ್ನಿವೇಶ ಜಾಸ್ತಿಯಾಯಿತು. ಇಂತಹ ಸನ್ನಿವೇಶದಲ್ಲಿ ಥಾಮಸ್ ಮುನ್ರೋ ಪ್ರಾರಂಭಿಸಿದ ಸೆಟ್ಲ್‌ಮೆಂಟ್ ಪ್ರಕ್ರಿಯೆ ಸಣ್ಣ, ಅತೀ ಸಣ್ಣ ಮತ್ತು ಮಧ್ಯಮ ಗಾತ್ರದ ಸಾಲದ ದವಡೆಗೆ ಸಿಕ್ಕಿರುವ ರೈತರಿಗೆ ಲಾಭವಾಗದೆ ಕೇವಲ ಶ್ರೀಮಂತ ರೈತರಿಗೆ ಮಾತ್ರ ಲಾಭವಾಗುತ್ತಿತ್ತು. ಇದು ಸಹಜವಾಗಿ ರೈತಾಪಿ ಜನರ ಮಧ್ಯೆ ಬ್ರಿಟಿಷ್ ವ್ಯವಸ್ಥೆಯು ನಿರ್ಮಿಸುತ್ತಿರುವ ರೈತ ವಿರೋಧಿ ಧೋರಣೆಯ ಬಗ್ಗೆ ಅಸಹನೆ ಬೆಳೆಯಲು ಕಾರಣವಾಯಿತು.

ಬ್ರಿಟಿಷ್ ಸರಕಾರವು ಉಪ್ಪಿನ ತಯಾರಿಕೆಯನ್ನು ಸಂಪೂರ್ಣ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡು ಇದನ್ನು ಒಂದು ಪ್ರಮುಖ ಆದಾಯದ ಮೂಲವನ್ನಾಗಿ ಪರಿಗಣಿಸಿತು. ಇದು ೧೭೯೯ ರಿಂದಲೇ ಉಪ್ಪಿನ ಮೇಲೆ ನಿಯಂತ್ರಣವನ್ನು ಜಾರಿಗೊಳಿಸಲು ಅಂದಾಜಿಸಿತ್ತು. ನಂತರ ೧೮೦೩ ರಲ್ಲಿ ಉಪ್ಪಿನ ಮೇಲೆ ಏಕಸ್ವಾಮ್ಯವನ್ನು ಘೋಷಿಸಿತು. ಈ ಏಕಸ್ವಾಮ್ಯವನ್ನು ಮಲಬಾರ್ ಮತ್ತು ಕೆನರಾ ಪ್ರಾಂತ್ಯಕ್ಕೆ ಹಲವಾರು ತಿದ್ದುಪಡಿಯೊಂದಿಗೆ ೧೮೦೭ ರ ರೆಗ್ಯುಲೇಶನ್ ಸಂಖ್ಯೆ ಎರಡರಂತೆ ಅನ್ವಯಸಿತ್ತು (ಡಿ ಗುಣವತಿ ಎಂಫಿಲ್ ಪ್ರಬಂಧ ೨೦೦೭:೨೮). ಉಪ್ಪು ತಯಾರಿಕೆ ಕರಾವಳಿ ಕರ್ನಾಟಕದಲ್ಲಿ ಪ್ರಮುಖ ಕಾಯಕವಾಗಿತ್ತು. ಈಗ ಅದರ ತಯಾರಿಕೆ ಮತ್ತು ಮಾರಾಟಗಳ ಮೇಲೆ ಸರಕಾರವು ಕಟ್ಟುನಿಟ್ಟಿನ ಕ್ರಮವನ್ನು ಅನುಸರಿಸಿತು. ಸರಕಾರದಿಂದ ಅನುಮತಿಯನ್ನು ಪಡೆಯಬೇಕಿತ್ತು. ಅದಕ್ಕೆ ಅನುಮತಿ ಫೀ (ಲೈಸನ್ಸ್ ಫೀ) ಪಾವತಿಸಬೇಕಿತ್ತು. ಹಾಗೆ ಉತ್ಪಾದಿಸಲಾದ ಉಪ್ಪನ್ನು ಸರಕಾರದ ಡಿಪ್ಪೋಗಳಿಗೆ ಮಾತ್ರ ಮಾರಾಟ ಮಾಡಲು ಅವಕಾಶವಿತ್ತು. ಸರಕಾರವು ಇದನ್ನು ವಿವಿಧ ಪ್ರದೇಶಗಳಿಗೆ ಮತ್ತು ಮಲಬಾರ್ ಮೊದಲಾದ ಕಡೆ ಮಾರಾಟ ಮಾಡುತ್ತಿತ್ತು. ಈ ತನಕ ಉಪ್ಪಿನ ಮಾರಾಟದಿಂದ ಲಾಭ ಗಳಿಸುತ್ತಿದ್ದ ಸಾಮಾನ್ಯ ಜನತೆಯ ಆದಾಯಕ್ಕೆ ಸಂಚಕಾರ ಒದಗಿತ್ತು. ಮತ್ತೊಂದೆಡೆಯಲ್ಲಿ ಹೊಸತಾಗಿ ವಿಧಿಸಲಾದ ತೆರಿಗೆ ಬಾಬ್ತು ಉಪ್ಪಿನ ಬೆಲೆಯೂ ಏರಿಕೆಯಾಯಿತು. ಉಪ್ಪು ಆಹಾರದ ಪ್ರಮುಖ ವಸ್ತು. ಆದುದರಿಂದ ಈ ಪ್ರಶ್ನೆಯು ಕರಾವಳಿ ಕರ್ನಾಟಕದ ಎಲ್ಲಾ ಸಮುದಾಯಗಳಲ್ಲೂ ಬ್ರಿಟಿಷರ ವಿರುದ್ಧ ಕ್ರೋಧ ಜಾಸ್ತಿಯಾಗಲು ಕಾರಣವಾಯಿತು.

ಕರಾವಳಿ ಕರ್ನಾಟಕದ ಕಾಸರಗೋಡು, ಬೇಕಲ ಹಾಗೂ ಉತ್ತರ ಕರಾವಳಿ ಭಾಗಗಳಲ್ಲಿ ರೈತರು ತಂಬಾಕು ಬೆಳೆ ಬೆಳೆಸುತ್ತಿದ್ದರು.[೭] ಇದರ ಮೇಲೆ ಸರಕಾರ ೧೮೦೪ ರಲ್ಲಿ ಏಕಸ್ವಾಮ್ಯ ಹಕ್ಕನ್ನು ಘೋಷಿಸಿತು. ಆ ಪ್ರಕಾರ ತಂಬಾಕಿನ ಕೃಷಿ ಮಾಡಬೇಕಾದರೆ ಬ್ರಿಟಿಷ್ ಸರಕಾರದಿಂದ ಅನುಮತಿ ಪಡೆಯಬೇಕಿತ್ತು. ತಹಶೀಲ್ದಾರರಿಂದ ಅನುಮತಿ ಪಡೆದ ಸಸಿಗಳನ್ನು ಮಾತ್ರ ನಾಟಿ ಮಾಡಬಹುದಿತ್ತು. ಅದಕ್ಕಿಂತ ಜಾಸ್ತಿ ಸಸಿ ನಾಟಿ ಮಾಡಿದ್ದಲ್ಲಿ ದಂಡ ವಿಧಿಸಲಾಗುತ್ತಿತ್ತು. ತಂಬಾಕಿನ ಫಸಲನ್ನು ಸರಕಾರದಿಂದ ನೇಮಿಸಲ್ಪಟ್ಟ ಏಜೆಂಟರಿಗೆ ಅಥವಾ ಡಿಪ್ಪೋಗಳಿಗೆ ಮಾತ್ರ ಮಾರಾಟ ಮಾಡಬೇಕಿತ್ತು (ಪಿಎಂಬಿಆರ್ ೧೮೮೯:೪೧೫).

ಈ ಏಕಸ್ವಾಮ್ಯ ನಿಯಮ ಜಾರಿಯಾಗುವ ಮೊದಲು ತಂಬಾಕು ವ್ಯಾಪಾರದಿಂದ ಬರುವ ಆದಾಯ ಪೂರ್ತಿಯಾಗಿ ಬೆಳೆಗಾರರಿಗೆ ದೊರೆಯುತ್ತಿತ್ತು. ಈಗ ಅದರಲ್ಲಿ ಭಾಗಶಃ ಮಾತ್ರ ಬೆಳೆಗಾರರಿಗೆ ದೊರೆಯುತ್ತಿತ್ತು. ಸರಕಾರದಿಂದ ಅನುಮೋದಿಸಲ್ಪಟ್ಟ ಮಧ್ಯವರ್ತಿಯು ಅದರ ಬೆಲೆ ನಿಗದಿ ಮೇಲೆ ಸಂಪೂರ್ಣ ಹಿಡಿತ ಹೊಂದಿದ್ದು ಬೆಳೆಗಾರರು ತೀವ್ರ ಪ್ರಮಾಣದ ಶೋಷಣೆಗೆ ಒಳಗಾಗುತ್ತಿದ್ದರು.

ಕರಾವಳಿ ಕರ್ನಾಟಕದಲ್ಲಿ ನಾರಿನ ಉತ್ಪನ್ನಗಳ ತಯಾರಿಸುವ ಕೈಗಾರಿಕೆಯ ನಂತರದಲ್ಲಿ ಅತ್ಯಂತ ಹೆಚ್ಚಿನ ವಿಭಾಗದ ಜನರು ಅಬಕಾರಿ ಸಂಬಂಧದ ಕೆಲಸಗಳಲ್ಲಿ ನಿರತರಾಗಿದ್ದರು. ಕರಾವಳಿ ಕರ್ನಾಟಕದ ಈ ಪ್ರಾಂತ್ಯದಲ್ಲಿ ಬಿಲ್ಲವ ಸಮುದಾಯ ಮತ್ತು ಈಳವ ಸಮುದಾಯ ತೆಂಗಿನ ಮರ ಮತ್ತು ತಾಳೆ ಮರದಿಂದ ಶೇಂದಿಯನ್ನು ಉತ್ಪಾದಿಸುವ ಮೂರ್ತೆದಾರಿಕೆಯಲ್ಲಿ ತೊಡಗಿದ್ದರು. ಶೇಂದಿಯು ಕುಡಿಯುವುದಕ್ಕಾಗಿ ಮತ್ತು ಬೆಲ್ಲದ ತಯಾರಿಕೆಗಾಗಿ ಬಳಸಲ್ಪಡುತ್ತಿತ್ತು. ಸರಕಾರ ೧೮೦೩ರಲ್ಲಿ ಇದರ ಮೇಲೆ ಹೊಸ ತೆರಿಗೆ ನೀತಿಯನ್ನು ಜಾರಿಗೊಳಿಸಿತ್ತು. ಈ ನೀತಿಯಿಂದ ಮೂರ್ತೆದಾರಿಕೆಯಲ್ಲಿ ತೊಡಗಿರುವವರು ಸಹ ಲೈಸನ್ಸ್‌ನ್ನು ಸರಕಾರದಿಂದ ಪಡೆಯಬೇಕಿತ್ತು. ಮರ ಮತ್ತು ತೋಟಗಳ ಮೂರ್ತೆದಾರಿಕೆ ಮಾಡುವವರು ಏಲಂನಲ್ಲಿ ಭಾಗವಹಿಸಿ ಹೆಚ್ಚಾದ ದರಕ್ಕೆ ಮೂರ್ತೆದಾರಿಕೆಯ ಲೈಸನ್ಸ್‌ನ್ನು ಪಡೆಯಬೇಕಾಗಿತ್ತು. ಇದೇ ರೀತಿ ಶೇಂದಿ ಉತ್ಪಾದನೆಗೂ ಮತ್ತು ಅದರ ಮಾರಾಟಕ್ಕೂ ತೆರಿಗೆಯನ್ನು ವಿಧಿಸಲಾಗಿತ್ತು. ಇದರಿಂದ ಈ ಸಮುದಾಯದ ಬದುಕಿನ ಆದಾಯಕ್ಕೆ ದೊಡ್ಡ ಹೊಡೆತ ಬಿತ್ತು.[೮]

ಆದುದರಿಂದ ಅತ್ಯಂತ ತಳ ಸಮುದಾಯದ ಕೃಷಿ ಕೂಲಿ ಕಾರ್ಮಿಕವಾಗಿರುವ ಕರಾವಳಿ ಕರ್ನಾಟಕದ ಅತ್ಯಂತ ದೊಡ್ಡ ಜನಸಂಖ್ಯೆಯನ್ನು ಹೊಂದಿರುವ ಬಿಲ್ಲವ ಮತ್ತು ಈಳವ ಸಮುದಾಯಗಳು ಸರಕಾರದೊಂದಿಗೆ ಅಸಹನೆಯನ್ನು ಹೊಂದಿದ್ದರು.

೧೮೦೦ರ ನಂತರದ ಅವಧಿಯಲ್ಲಿ ಒಂದಾದ ಮೇಲೆ ಒಂದರಂತೆ ಸರಕಾರದಿಂದ ರೈತರ ಮೇಲೆ ಜಾರಿಯಾದ ನೀತಿಗಳಿಂದ ಕಂಗೆಟ್ಟ ರೈತಾಪಿ ಜನತೆ ಈ ದಶಕದ ಕೊನೆಯಲ್ಲಿ ಬೆಲೆ ಕುಸಿತದ ಸಮಸ್ಯೆಗೂ ಒಳಗಾದರು.

> ಸಾರ್ವತ್ರಿಕವಾದ ಆರ್ಥಿಕ ಹಿಂಜರಿತದ ಸನ್ನಿವೇಶವು ಅದಾಗಲೇ ತೀವ್ರ ಹೊಡೆತ ಅನುಭವಿಸುತ್ತಿದ್ದ ರೈತರ ಮೇಲೆ ಹೊರೆಯನ್ನು ಹೊರಿಸಿತು. ಮಾತ್ರವಲ್ಲದೆ ಸರಕಾರವು ನಿರ್ದಾಕ್ಷಿಣ್ಯವಾಗಿ ತೆರಿಗೆ ವಸೂಲಿಗೆ ಇಳಿದುದು ರೈತರನ್ನು ಮತ್ತಷ್ಟೂ ಸಂಕಷ್ಟಕ್ಕೆ ದೂಡಿತ್ತು. ಇದರೊಂದಿಗೆ ಬೆಲೆ ಕುಸಿತದಿಂದ ವ್ಯಾಪಾರ ವ್ಯವಹಾರ ಕೂಡ ಕುಸಿತಗೊಂಡು ರೈತಾಪಿ ಜನರನ್ನು ತೀವ್ರವಾಗಿ ಬಾಧಿಸಿತು (ಶ್ಯಾಮ್ ಭಟ್ ೧೯೯೮:೧೦೩).

೧೮೦೦ ರ ನಂತರದ ಅವಧಿಯಲ್ಲಿ ಪ್ರಪ್ರಥಮ ಬಾರಿಗೆ ೧೮೦೯-೧೦ರಲ್ಲಿ ಕೃಷಿ ಉತ್ಪಾದನೆಯೂ ಕುಂಠಿತವಾಯಿತು. ಉತ್ಪಾದನೆ ಕುಂಠಿತವಾದ ಸಂದರ್ಭದಲ್ಲಿ ಬೆಲೆ ಜಾಸ್ತಿಯಾಗಬೇಕಿತ್ತು. ಆದರೆ ಈ ಸಾಮಾನ್ಯ ನಿಯಮಕ್ಕೆ ವಿರುದ್ಧವಾಗಿ ಕೃಷಿ ಉತ್ಪನ್ನಗಳ ಬೆಲೆಗಳೂ ಕುಸಿತಕ್ಕೊಳಗಾಗುವ ಮೂಲಕ ಬಹುಸ್ತರೀಯ ಸಮಸ್ಯೆಗಳ ಸಮ್ಮುಖದಲ್ಲಿ ಕರಾವಳಿ ಕರ್ನಾಟಕದ ಜನತೆ ಬವಣೆ ಪಡೆಯಬೇಕಾಯಿತು. ಇಂತಹ ಸಮಯದಲ್ಲಿ ಸರಕಾರವು ಇವರ ನೆರವಿಗೆ ಬಂದು ತೆರಿಗೆ ಪರಿಷ್ಕರಣೆ ಇವೇ ಮೊದಲಾದ

ಹಲವಾರು ರಿಯಾಯಿತಿಗಳನ್ನು ಘೋಷಿಸಬೇಕಾಗಿತ್ತು. ಆದರೆ ಸರಕಾರ ಅದರ ಬದಲಾಗಿ ನಿಷ್ಕ್ರಿಯವಾಗಿದ್ದುಕೊಂಡು ತೆರಿಗೆ ಸಂಗ್ರಹದ ಬಗ್ಗೆ ಮಾತ್ರ ಸಕ್ರಿಯವಾಗಿ ತನ್ನ ಗಮನ ಕೇಂದ್ರೀಕರಿಸಿತು.

ಈ ಅವಧಿಯಲ್ಲಿ ರೈತರ ಉತ್ಪನ್ನಗಳಿಗೆ ಬೇಡಿಕೆಯಲ್ಲೂ ಇಳಿಮುಖ ಕಂಡು ಬಂತು. ಬೇಡಿಕೆ ಕುಂಠಿತಗೊಂಡಾಗ ಬೆಲೆಗಳೂ ಕುಸಿತವಾಗುವುದು ಮಾರುಕಟ್ಟೆಯ ನಿಯಮವಾಗಿದೆ. ಈ ವಿಷ ವರ್ತುಲದಲ್ಲಿ ರೈತಾಪಿ ಜನತೆ ಮತ್ತೆ ತೀವ್ರ ಸಂಕಷ್ಟಕ್ಕೆ, ಬಡತನಕ್ಕೆ ಬಲಿಯಾಗಬೇಕಾಯಿತು. ಸರಿಸುಮಾರು ಎರಡು ದಶಕಗಳ ಕಾಲ ನಿರಂತರವಾಗಿ ಮುಂದುವರಿದ ಈ ಪರಿಸ್ಥಿತಿಯಲ್ಲಿ ಸರಕಾರವು ತೆರಿಗೆಯಲ್ಲಿ ಆದ ಹೆಚ್ಚಳ ಕಡಿಮೆ ಮಾಡುವ ಬಗ್ಗೆಯಾಗಲೀ, ಉದಾರವಾಗಿ ತೆರಿಗೆ ನೀತಿ ಅನುಸರಿಸಿ ತೆರಿಗೆ ಪರಿಷ್ಕರಣೆ ಮಾಡುವ ಬಗ್ಗೆ ಸರಕಾರ ಸಿದ್ದರಿಲ್ಲದಿರುವುದು ಇವೆಲ್ಲವುಗಳು ಗಂಭೀರವಾದ ಆರ್ಥಿಕ ಬಿಕ್ಕಟ್ಟನ್ನು ಸೃಷ್ಟಿಸಿತು. ರೈತರ ಬಡತನ, ನಗದು ಇಲ್ಲದಿರುವುದು ಇವೆಲ್ಲವುಗಳು ರೈತರನ್ನು ಅನಿವಾರ್ಯವಾಗಿ ಹಣ ಲೇವಾದೇವಿಗಾರರ ಬಳಿ ಸಂಪರ್ಕಿಸುವಂತೆ ಮತ್ತು ಸರಕಾರದ ತೆರಿಗೆ ಪಾವತಿಸಲು ಹಾಗೂ ಇತರೆ ಅಗತ್ಯತೆಗಳಿಗಾಗಿ ಭೂಮಿ ಮತ್ತು ಉತ್ಪಾದನೆಯನ್ನು ಅವರಿಗೆ ಅಡವಿಟ್ಟು ಸಾಲ ಪಡೆಯುವ ಬಲವಂತದ ಸಂದರ್ಭಕ್ಕೆ ಸಿಲುಕಿದರು. ಕೆಲವರು ಭೂಮಿ ಮತ್ತು ಉತ್ಪಾದನೆಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ಅಡವಿಟ್ಟು ಸಾಲ ಪಡೆದರು.

ಈ ರೀತಿ ಟಿಪ್ಪುವಿನ ಮರಣಾ ನಂತರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಅಧಿಕಾರದ ಅವಧಿಯಲ್ಲಿ ಕರಾವಳಿ ಕರ್ನಾಟಕದ ಜನತೆ ಸಾಮಾಜಿಕ, ಆರ್ಥಿಕ, ವಾಣಿಜ್ಯ ಮತ್ತು ಕೃಷಿರಂಗದ ಸಾರ್ವತ್ರಿಕ ಸಮಸ್ಯೆಗಳ ಸುರಿಮಳೆಯಲ್ಲಿ ಸಿಲುಕಿದರು. ತಮ್ಮ ಬಳಿ ಇರುವ ಅಲ್ಪಸ್ವಲ್ಪ ಭೂಮಿಯನ್ನೂ ಕಳೆದುಕೊಂಡು ಕೃಷಿಕೂಲಿ ಕಾರ್ಮಿಕರಾಗಿ ಪರಿವರ್ತಿತರಾದರು. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಕರಾವಳಿ ಕರ್ನಾಟಕದಿಂದ ಅಗಾಧ ಪ್ರಮಾಣದ ಆದಾಯವನ್ನು ತನ್ನ ಬೊಕ್ಕಸಕ್ಕೆ ಸೇರಿಸಿಕೊಂಡಿತ್ತು. ಇದರ ವಿರುದ್ಧ ರೈತಾಪಿ ಜನರ ಸಂಘರ್ಷ ವಿವಿಧ ರೀತಿಗಳಲ್ಲಿ ಮುಂದಿನ ಹಂತದಲ್ಲಿ ಬೆಳೆದು ಬಂತು.

ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳು ವಸಾಹತು ಶಾಹಿ ಕಾಲಘಟ್ಟದಲ್ಲಿ ಬೆಳೆದು ಬಂದ ವಿವಿಧ ಆಯಾಮಗಳಲ್ಲಿ ಕೆನರಾ ವಿಭಜನೆಯನ್ನೂ ಪರಿಗಣಿಸಬೇಕಾಗುತ್ತದೆ. ಕೆನರಾ ವಿಭಜನೆಯು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮಿಗಳ ಹಿತಾಸಕ್ತಿಗಳ ಬಲಿಪಶುವಾಗಿದೆ.

ಕಾರ್ಲ್ ಮಾರ್ಕ್ಸ್‌ರವರು ೧೮೫೩ ರಲ್ಲಿ ಬರೆದ ಲೇಖನವೊಂದರಲ್ಲಿ ಹತ್ತಿ ಉದ್ಯಮದಲ್ಲಿ ತೊಡಗಿರುವ ಬಂಡವಾಳಶಾಹಿಗಳು ಭಾರತವನ್ನು ಹಾಗೂ ಇಂಗ್ಲೆಂಡನ್ನು ಪರೋಕ್ಷವಾಗಿ ಆಳುತ್ತಿದ್ದುದನ್ನು ಗಂಭೀರವಾಗಿ ವಿವರಿಸಿದ್ದಾರೆ. ಆ ವಿವರ ಹೀಗಿದೆ;

> ಅನಾದಿ ಕಾಲದಿಂದಲೂ ಜಗತ್ತಿನಲ್ಲೇ ಅತ್ಯಂತ ಭಾರೀ ಹತ್ತಿ ಬಟ್ಟೆ ತಯಾರಿಕೆಯ ಕರ್ಮಾಗಾರವಾಗಿದ್ದ ಇಂಡಿಯಾ ಈಗ ಇಂಗ್ಲೀಷ್ ಹೊಸೆದ ದಾರ ಹಾಗೂ ಹತ್ತಿ ಬಟ್ಟೆಗಳಿಂದ ತುಂಬಿ ಹೋಯಿತು. ಒಂದು ಕಡೆ ಇಂಡಿಯಾದ ಉತ್ಪನ್ನಗಳು ಇಂಗ್ಲೆಂಡಿಗೆ ಬಾರದಂತೆ ನಿಷೇಧಿಸಲಾಗಿದ್ದುದು ಹಾಗೂ ಬಂದ ಅಲ್ಪಸ್ವಲ್ಪ ಪ್ರಮಾಣಗಳನ್ನು ಅತ್ಯಂತ ನಿರ್ದಾಕ್ಷಿಣ್ಯ ಷರತ್ತುಗಳ ಮೇಲೆ ಬರಲು ಬಿಡಲಾಗಿದ್ದುದು, ಮತ್ತೊಂದು ಕಡೆ ಬ್ರಿಟಿಷ್ ತಯಾರಿಕೆಯ ವಸ್ತುಗಳನ್ನು ಅತ್ಯಲ್ಪ ಹಾಗೂ ನಾಮ ಮಾತ್ರ ಸುಂಕದ

ಮೇಲೆ ಇಂಡಿಯಾಕ್ಕೆ ತಂದು ತುಂಬುತಿದ್ದುದು ಇಂಡಿಯಾದ ಮೇಲೆ ಪ್ರತಿಕೂಲ ಪರಿಣಾಮವುಂಟು ಮಾಡಿತ್ತು. ಒಮ್ಮೆ ಸುವಿಖ್ಯಾತವಾಗಿದ್ದ ಇಂಡಿಯಾದ ಹತ್ತಿ ಬಟ್ಟೆ ತಯಾರಿಕೆಯು ನಾಶವಾಯಿತು (ಮಾರ್ಕ್ಸ್ ೧೯೮೭:೩೬).

ಇದರ ಅರ್ಥ ಭಾರತವು ಹತ್ತಿಬಟ್ಟೆ ತಯಾರಿಕೆಯ ಒಂದು ಪ್ರಮುಖ ದೇಶವಾಗಿದ್ದುದನ್ನು ಸ್ಪಷ್ಟಪಡಿಸಲಾಗಿದೆ. ಇಂತಹ ಉದ್ಯಮವನ್ನು ಬುಡ ಮೇಲು ಮಾಡಿದ ಇಂಗ್ಲೆಂಡಿನ ವಾಣಿಜ್ಯೋದ್ಯಮಿಗಳು ಇಂಗ್ಲೆಂಡಿನಲ್ಲಿ ವಹಿಸುತ್ತಿದ್ದ ಪ್ರಮುಖ ಪಾತ್ರವನ್ನು ಇದೇ ಲೇಖನದಲ್ಲಿ ಮುಂದುವರಿದು ಕೆಳಕಂಡಂತೆ ವಿವರಿಸಿದ್ದಾರೆ.

ಹತ್ತಿ ಕೈಗಾರಿಕೆಯೇ ಇಡೀ ರಾಷ್ಟ್ರೀಯ ವರಮಾನದಲ್ಲಿ ೧/೧೨ ಭಾಗವನ್ನು ಒದಗಿಸುತ್ತಿದ್ದಿತ್ತು. ಪ್ರತಿಯೊಂದು ವಾಣಿಜ್ಯ ಮುಗ್ಗಟ್ಟಿನ ನಂತರವೂ ಬ್ರಿಟಿಷ್ ಹತ್ತಿ ತಯಾರಿಕೆಗಾರರಿಗೆ ಈಸ್ಟ್ ಇಂಡಿಯಾ ವ್ಯಾಪಾರವು ಹೆಚ್ಚು ಹೆಚ್ಚು ಪ್ರಾಮುಖ್ಯತೆಯದ್ದಾಯಿತು. ಈಸ್ಟ್ ಇಂಡಿಯಾ ಭೂಖಂಡವು ವಾಸ್ತವವಾಗಿ ಅವರಿಗೆ ಅತ್ಯುತ್ತಮ ಮಾರುಕಟ್ಟೆಯಾಯಿತು. ಹತ್ತಿ ತಯಾರಿಕೆಗಾರರು ಗ್ರೇಟ್ ಬ್ರಿಟನಿನ ಇಡೀ ಸಾಮಾಜಿಕ ಚೌಕಟ್ಟಿಗೆ ಅತ್ಯಂತ ಹೆಚ್ಚಿನ ಹಿತಕಾರಿಗಳಾದ ಪ್ರಮಾಣದಲ್ಲೇ ಈಸ್ಟ್ ಇಂಡಿಯಾವು ಬ್ರಿಟಿಷ್ ಹತ್ತಿ ತಯಾರಿಕಾಗಾರರಿಗೆ ಅತ್ಯಂತ ಹೆಚ್ಚಿನ ಹಿತಕಾರಿಯಾಯಿತು (ಮಾರ್ಕ್ಸ್ ೧೯೮೭:೩೬).

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹತ್ತಿ ಕೈಗಾರಿಕೋದ್ಯಮಿಗಳು ಇಂಗ್ಲೆಂಡಿನ ಅತ್ಯಂತ ಮುಖ್ಯ ಆದಾಯದ ಮೂಲವನ್ನು ಒದಗಿಸುತ್ತಿದ್ದರು. ಪ್ರತಿಯೊಂದು ಆರ್ಥಿಕ ಮುಗ್ಗಟ್ಟನ್ನೂ ತಮ್ಮ ಅನುಕೂಲಕ್ಕಾಗಿ ಉಪಯೋಗಿಸುತ್ತಿದ್ದಂತಹ ಈ ವಾಣಿಜ್ಯೋದ್ಯಮಿಗಳು ಬ್ರಿಟನಿನ ಸಾಮಾಜಿಕ ಚೌಕಟ್ಟಿಗೂ ನಿರ್ಣಾಯಕರಾಗಿದ್ದರು. ಅದೇ ರೀತಿಯಲ್ಲಿ ಭಾರತವೂ ಇವರಿಗೆ ಅತ್ಯಂತ ಅನುಕೂಲಕರವಾದ ಭೂಪ್ರದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ಕರಾವಳಿ ಕರ್ನಾಟಕದ ಕೆನರಾ ವಿಭಜನೆಯ ಮಹತ್ವವನ್ನು ಅಂದಾಜಿಸಬಹುದು.

'ಕೆನರಾದ ವಿಭಜನೆ ಹತ್ತಿ ರಾಜಕೀಯದ ವಿಶ್ಲೇಷಣೆ' ಎಂಬ ಕೃತಿಯಲ್ಲಿ ಚರಿತ್ರೆಕಾರರಾದ ಮೋಹನ್ ಕೃಷ್ಣ ರೈರವರು ಈ ರೀತಿ ವ್ಯಾಖ್ಯಾನಿಸಿದ್ದಾರೆ.

ಬ್ರಿಟಿಷ್ ಆಳ್ವಿಕೆಯಲ್ಲಿ ಇಂದಿನ ಕರ್ನಾಟಕವು ಹಲವಾರು ಘಟಕಗಳಲ್ಲಿ ವಿಭಜನೆಗೊಂಡಿತ್ತು. ಕರಾವಳಿ ಕರ್ನಾಟಕವು ಬಾಂಬೆ ಮತ್ತು ಮದ್ರಾಸ್ ಪ್ರೆಸಿಡೆನ್ಸಿಗಳಲ್ಲಿ ಹಂಚಿ ಹೋಗಿತ್ತು. ೧೮೬೨ರಲ್ಲಿ ನಡೆದ ಕೆನರಾ ವಿಭಜನೆಯು ಬ್ರಿಟಿಷ್ ವಸಾಹತುಶಾಹಿ ಧೋರಣೆಗೆ ಕಾರಣವಾದ ಆಡಳಿತಾತ್ಮಕ, ವ್ಯಾಪಾರ ಹಾಗೂ ಸೈನಿಕ ಕಾರಣಗಳನ್ನು ಹಾಗೂ ವಿಭಜನೆಯಿಂದಾದ ಪರಿಣಾಮಗಳನ್ನು, ಕೃಷಿಯ ವಾಣಿಜ್ಯೀಕರಣ, ಸರಬರಾಜು ಬಂದರು ಅಭಿವೃದ್ಧಿ ಯೋಜನೆಗಳು, ಬ್ರಿಟನ್‌ನ ಹತ್ತಿ ರಾಜಕೀಯ, ಬಾಂಬೆ ಮತ್ತು ಮದ್ರಾಸ್ ಸರಕಾರಗಳ ಧೋರಣೆಗಳು ಮುಂತಾದ ವಿವರಣೆಗಳನ್ನು ಚರ್ಚಿಸಲಾಗಿದೆ (ರೈ ೨೦೧೦:೫).

ಈ ಅವಧಿಯಲ್ಲಿ ಬಂಡವಾಳ ಕೇಂದ್ರಿತ ಅರ್ಥ ನೀತಿ ಕೃಷಿಯನ್ನು ಹಾಗೆಯೇ ಇರಗೊಡುವ ಬದಲು ಲಾಭದಾಯಕ ಉದ್ದಿಮೆಯನ್ನಾಗಿ ಪರಿವರ್ತಿಸುವ ಪ್ರಯತ್ನ ಮಾಡಿ ಯಶಸ್ವಿಯಾಯಿತು.

ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹ ನೀಡಿ ಇಂಗ್ಲೆಂಡಿನ ಮಿಲ್‌ಗಳ ಕಚ್ಚಾ ಸಾಮಾಗ್ರಿಗಳ ಕೊರತೆಯನ್ನು ನೀಗಿಸಿಕೊಂಡರು. ಇಂಗ್ಲೆಂಡಿನ ಕೈಗಾರೀಕರಣಕ್ಕೆ ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿ ಉಳಿಯ ಬೇಕಾದುದು ಬ್ರಿಟನ್ ಸರಕಾರದ ಸ್ಪಷ್ಟ ಧೋರಣೆಯಾಗಿತ್ತು (ರೈ ೨೦೧೦:೪). ಈಗಾಗಲೇ ವಿವರಿಸಿದಂತೆ ಇದು ರೈತರ ಜೀವನಾವಶ್ಯಕ ಆಹಾರ ಬೆಳೆಗಳ ಕೃಷಿಯನ್ನು ಮೂಲೆಗುಂಪು ಮಾಡಿ ವಾಣಿಜ್ಯ ಬೆಳೆಗಳ ತೋಟಗಳೂ ಹೊಸಹೊಸ ಪ್ಲಾಂಟರ್‌ಗಳೂ ಈ ಅವಧಿಯಲ್ಲಿ ಬೆಳೆದು ಬಂದವು. ಈಗಾಗಲೇ ಬೆಳೆದು ಬಂದಿದ್ದ ಮಧ್ಯವರ್ತಿಗಳು ಮತ್ತು ವರ್ತಕರು ಅರ್ಥ ವ್ಯವಸ್ಥೆಯ ಮೇಲೆ ಹಿಡಿತವನ್ನು ಸಾಧಿಸಿದರು.

ಕಾರವಾರದಿಂದ ಕಾಸರಗೋಡಿನವರೆಗಿನ ಸಣ್ಣ ಹಾಗೂ ದೊಡ್ಡ ಗಾತ್ರದ ಬಂದರುಗಳು ಮತ್ತು ಪಟ್ಟಣಗಳು ಬ್ರಿಟಿಷರ ವಾಣಿಜ್ಯ ನೀತಿಗೆ ಒಂದಲ್ಲ ಒಂದು ರೀತಿಯಲ್ಲಿ ಬಳಕೆಯಾಗುತ್ತಿತ್ತು. ಸಮುದ್ರ ವ್ಯಾಪಾರ, ಹಡಗುಗಳ ನಿರ್ಮಾಣ ಹಾಗೂ ಬಂದರುಗಳ ಆಡಳಿತ ಬ್ರಿಟಿಷರ ಹಿಡಿತದಲ್ಲಿತ್ತು. ಮರದ ವ್ಯಾಪಾರದ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸಿಕೊಂಡಿದ್ದ ಬ್ರಿಟಿಷರು ಉತ್ತರ ಕನ್ನಡ ಜಿಲ್ಲೆಯ ದಟ್ಟ ಅರಣ್ಯಗಳನ್ನು ತಮ್ಮ ಹಡಗು ನಿರ್ಮಾಣದ ಉದ್ದೇಶಕ್ಕೆ ಹಾಗೂ ಮರದ ವ್ಯಾಪಾರಕ್ಕೆ ಬಳಸಿಕೊಂಡರು. ಸುಮಾರು ೮೫ ಭಾಗ ಅರಣ್ಯ ಪ್ರದೇಶವನ್ನು ಒಳಗೊಂಡಿದ್ದ ಉತ್ತರ ಕನ್ನಡ ಜಿಲ್ಲೆಯು ವಸಾಹತುಶಾಹಿ ಅರಣ್ಯ ನೀತಿಗೆ ಒಳಗಾಗಿ ಚೇತರಿಸಿಕೊಳ್ಳಲಾಗದಂತಹ ಅಘಾತಕ್ಕೆ ಒಳಗಾಗಿದ್ದಂತೂ ನಿಜ (ರೈ ೨೦೧೦:೯). ಬ್ರಿಟಿಷ್ ಸರಕಾರ ಕೆನರಾದ ವಿಭಜನೆಯನ್ನು ೨ ಪ್ರಮುಖ ಉದ್ದೇಶಗಳನ್ನು ಈಡೇರಿಸುವ ಉದ್ದೇಶದಿಂದ ಮಾಡಿತ್ತು. ಆಡಳಿತಾತ್ಮಕವಾಗಿ ಕೆನರಾವನ್ನು ನಿಯಂತ್ರಣಕ್ಕೆ ತಂದು ಬ್ರಿಟಿಷ್ ವಿರೋಧಿ ಹೋರಾಟಗಳನ್ನು ಹತ್ತಿಕ್ಕುವುದು ಮೊದಲನೆಯ ಉದ್ದೇಶವಾಗಿತ್ತು. ಎರಡನೇಯದಾಗಿ ಬಂದರು ಪಟ್ಟಣಗಳನ್ನು ಹಾಗೂ ಅವುಗಳ ಒಳನಾಡುಗಳನ್ನು ವ್ಯಾಪಾರದ ಉದ್ದೇಶಕ್ಕೆ ಗರಿಷ್ಟ ಪ್ರಮಾಣದಲ್ಲಿ ಬಳಸುವುದು. ಮದ್ರಾಸ್ ಪ್ರೆಸಿಡೆನ್ಸಿಯು ದಕ್ಷಿಣದ ಕೆನರಾದ ಮಂಗಳೂರಿಗೆ ಹೆಚ್ಚಿನ ಪ್ರಾಶಸ್ಯ ನೀಡಿದರೆ ಮುಂಬಯಿ ಪ್ರೆಸಿಡೆನ್ಸಿಯು ಉತ್ತರ ಕೆನರಾದ ಸದಾಶಿವ ಘಡ (ಕಾರವಾರ) ಬಂದರಿಗೆ ಹೆಚ್ಚಿನ ಪ್ರಾಶಸ್ಯ ನೀಡಿತ್ತು. ಎರಡೂ ಪ್ರೆಸಿಡೆನ್ಸಿಗಳು ತಮ್ಮ ಲಾಭ ನಷ್ಟದ ಲೆಕ್ಕಾಚಾರದಲ್ಲಿ ಕೆನರಾವನ್ನು ಹಂಚಿಕೊಂಡು ತಮ್ಮ ತಾಯಿನಾಡಿನ ಅವಶ್ಯತೆಗಳನ್ನು ಪೂರೈಸಿಕೊಂಡರು (ರೈ ೨೦೧೦:೮).

ಆದುದರಿಂದ ಕೆನರಾ ವಿಭಜನೆಗೆ ಅಂತರಾಷ್ಟ್ರೀಯ ಮಟ್ಟದಲ್ಲಿ ಹತ್ತಿ ಪೂರೈಕೆಯಲ್ಲಿ ಆದ ವ್ಯತ್ಯಯಗಳು ಮೂಲ ಕಾರಣಗಳಾಗಿವೆ. ಬ್ರಿಟನಿನ ಹತ್ತಿ ಕೈಗಾರಿಕೆಗಳು ಅಮೇರಿಕಾದ ಹತ್ತಿ ಪೂರೈಕೆಯನ್ನು ಅವಲಂಬಿಸಿಕೊಂಡಿತ್ತು. ಅಮೇರಿಕಾದ ಆಂತರಿಕ ಕಲಹದಿಂದ ಹತ್ತಿ ಪೂರೈಕೆಯಲ್ಲಿ ವ್ಯತ್ಯಯವಾಗಿ ಬ್ರಿಟನಿನ ಕೈಗಾರಿಕಾವರ್ಗ ತೀವ್ರ ಸಮಸ್ಯೆಗೆ ಒಳಗಾಯಿತು. ಭಾರತದಿಂದ ಹತ್ತಿ ಆಮದು ಮಾಡಿಕೊಳ್ಳುವ ನಿರ್ಧಾರಕ್ಕೆ ಬಂದರು. ಈ ಸಂದರ್ಭದಲ್ಲಿ ಹುಬ್ಬಳ್ಳಿ, ಧಾರವಾಡ ಮೊದಲಾದ ಹತ್ತಿ ಬೆಳೆಯುವ ಪ್ರದೇಶಗಳಲ್ಲಿ ಹತ್ತಿಗೆ ಬೇಡಿಕೆ ಹೆಚ್ಚಾಯಿತು. ಆದರೆ ಅದನ್ನು ಸಾಗಾಣಿಕೆ ಮಾಡಲು ದೊಡ್ಡ ಹಡಗುಗಳಿಗೆ ತುಂಬಿಸಲು ಮತ್ತು ಆ ಹಡಗುಗಳು ಲಂಗರು ಹಾಕಲು ಉತ್ತಮ ಬಂದರು ಇರಲಿಲ್ಲ. ಕಾರವಾರ ಬಂದರನ್ನು ಅಭಿವೃದ್ಧಿ ಪಡಿಸಲು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಮುಂಬಯಿ ಮತ್ತು ಮದ್ರಾಸ್ ಪ್ರೆಸಿಡೆನ್ಸಿ ಸರಕಾರಕ್ಕೆ ವಾಣಿಜ್ಯೋದ್ಯಮಿಗಳು ಮನವಿ ಸಲ್ಲಿಸಿದಾಗ ಯಾವ ಸರಕಾರ ಅಭಿವೃದ್ಧಿ ಪಡಿಸಬೇಕೆಂಬುದು ಗಂಭೀರ ಪ್ರಶ್ನೆಯಾಗಿ ಕಾಡಿತ್ತು.

ಬಂದರನ್ನು ಅಭಿವೃದ್ಧಿ ಪಡಿಸುವುದು ಅತ್ಯಂತ ತುರ್ತಿನ ಕೆಲಸವಾದ್ದರಿಂದ ಎರಡೂ ಪ್ರೆಸಿಡೆನ್ಸಿಗಳ ಮಧ್ಯೆ ಬಿರುಸಿನ ಮಾತುಕತೆ ಪತ್ರ ವ್ಯವಹಾರಗಳು ನಡೆದು ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡವು. ಇದರ ಮಧ್ಯೆಯೇ ಹಲವು ಬಗೆಯ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಯಿತು. ಕಾರವಾರ ಬಂದರಿನ ಸುತ್ತಮುತ್ತಲಿನ ಭೂಮಿಗೆ ಬೇಡಿಕೆ ಹೆಚ್ಚಾಗಿ ಅನೇಕ ಶ್ರೀಮಂತ ವರ್ತಕರು ಅಲ್ಲಿ ಭೂಮಿಯನ್ನು ಖರೀದಿಸುವ ಪ್ರಯತ್ನವನ್ನು ಮಾಡಿಕೊಂಡರು.[೯] ಕೊನೆಗೂ ಮದ್ರಾಸ್ ಆಡಳಿತವು ಈ ಯೋಜನೆಗೆ ಉತ್ಸಾಹ ತೋರದಿದ್ದಾಗ ಮುಂಬಯಿ ಆಡಳಿತ ಈ ಪ್ರದೇಶಗಳನ್ನು ತನ್ನ ಆಡಳಿತ ವ್ಯಾಪ್ತಿಗೆ ಸೇರಿಸಿಕೊಳ್ಳುವ ತೀರ್ಮಾನವನ್ನು ಮಾಡುತ್ತದೆ. ಈ ತೀರ್ಮಾನದ ಪ್ರಕಾರ ಕರಾವಳಿ ಪ್ರದೇಶ ವಿಭಜನೆಗೊಂಡು ಉತ್ತರ ಕನ್ನಡ ಜಿಲ್ಲೆ ಮುಂಬಯಿ ಪ್ರೆಸಿಡೆನ್ಸಿಗೂ, ದಕ್ಷಿಣ ಕನ್ನಡ ಮದ್ರಾಸ್ ಪ್ರೆಸಿಡೆನ್ಸಿಗೂ ಸೇರಿಕೊಂಡಿತ್ತು. ಬಾಂಬೆ ಪ್ರೆಸಿಡೆನ್ಸಿಯನ್ನು ಹತ್ತಿ ವಲಯವನ್ನಾಗಿ ಅಭಿವೃದ್ಧಿ ಪಡಿಸುವ ಯೋಜನೆಯನ್ನು ರೂಪಿಸಲಾಯಿತು (ರೈ ೨೦೧೦:೧೦).

ಬ್ರಿಟಿಷ್ ವಸಾಹತುಶಾಹಿಯ ವಾಣಿಜ್ಯೋದ್ಯಮದ ಹಿತಾಸಕ್ತಿಗಾಗಿ ಕರಾವಳಿ ಕರ್ನಾಟಕವನ್ನು ವಿಭಜನೆ ಮಾಡಲಾಯಿತು. ಬಂದರು ಅಭಿವೃದ್ಧಿಯಾಗುತ್ತದೆ ಎಂಬುದನ್ನು ಕಂಡುಕೊಂಡ ಕೂಡಲೇ ವ್ಯಾಪಾರಿ ಸಮುದಾಯ ತನ್ನ ಲಾಭದ ಹಿತಾಸಕ್ತಿಗಾಗಿ ಭೂಮಿಯ ಖರೀದಿ ವ್ಯವಹಾರಕ್ಕೆ ಇಳಿದಿರುವ ಪ್ರಕ್ರಿಯೆ ಕಾರವಾರದ ಸುತ್ತಮುತ್ತ ಬೆಳೆದುಬಂತು. ಬ್ರಿಟಿಷ್ ವರ್ತಕ ಸಮುದಾಯ ಅಮೇರಿಕಾದಲ್ಲಿ ಆಂತರಿಕ ಕಲಹ ಮುಗಿದಾಗ ಮತ್ತೆ ಹತ್ತಿಯ ಸರಬರಾಜು ಅಮೇರಿಕದಿಂದಲೇ ಪ್ರಾರಂಭವಾದಾಗ ವಾಣಿಜ್ಯೋದ್ಯಮಿಗಳಿಗೆ ಕಾರವಾರ ಬಂದರಿನ ಅವಶ್ಯಕತೆ ಬೇಡವಾಯಿತು. ವಿಶೇಷವೆಂದರೆ ಅಮೇರಿಕಾದ ಆಂತರಿಕ ಕಲಹದ ಸಂದರ್ಭದಲ್ಲಿ ಜಾಗತಿಕ ಮಟ್ಟದಲ್ಲಿ ಹತ್ತಿಯ ಬಿಕ್ಕಟ್ಟು ಎದುರಾದಾಗ ಮಂಗಳೂರು ಬಂದರಿನಿಂದಲೂ ಹತ್ತಿ ಸರಬರಾಜು ಆಗಿ ಬ್ರಿಟನ್ ಮತ್ತು ಮುಂಬಯಿ ನಡುವಿನ ಹತ್ತಿಯ ವ್ಯಾಪಾರವನ್ನು ಚುರುಕುಗೊಳಿಸುವಲ್ಲಿ, ನಿರಂತರಗೊಳಿಸುವಲ್ಲಿ ಮತ್ತು ಖಾತ್ರಿಪಡಿಸುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದೆ. ತನ್ಮೂಲಕ ಮಂಗಳೂರು ಸುತ್ತಮುತ್ತ ಹತ್ತಿಯ ಉತ್ಪಾದನೆ ಇಲ್ಲದಿದ್ದರೂ ಮುಂಬಯಿಯೊಂದಿಗೆ ನೇರ ಸಂಪರ್ಕವನ್ನು ಹೊಂದಿತ್ತು. ಹತ್ತಿ ಬಿಕ್ಕಟ್ಟು ಮುಂದಿನ ಅವಧಿಯಲ್ಲಿ ಕರಾವಳಿ ಕರ್ನಾಟಕದಲ್ಲಿ ಹತ್ತಿ ಆಧಾರಿತ ಹೊಸ ಆರ್ಥಿಕತೆಯೊಂದರ ಹುಟ್ಟಿಗೂ ಕಾರಣವಾಯಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಹತ್ತಿ ವ್ಯಾಪಾರಕ್ಕೆ ಹೆಚ್ಚಿನ ಮಹತ್ವವನ್ನು ಪಡೆದ ಎರಡನೇ ಪ್ರಮುಖ ಬಂದರು ಕುಮಟಾ ಆಗಿದೆ. ಈಗಾಗಲೇ ವಿವರಿಸಿದಂತೆ ಕಾರವಾರ ಮೊದಲಿನ ಸ್ಥಾನದಲ್ಲಿತ್ತು. ಯಾವಾಗ ಅಂತರಾಷ್ಟ್ರೀಯ ಮಟ್ಟದಲ್ಲಿ ಹತ್ತಿ ಬಿಕ್ಕಟ್ಟು ಸುಧಾರಿಸಿತ್ತೋ ಅಂದಿನಿಂದಲೇ ಈ ಬಂದರುಗಳು ತಮ್ಮ ಪ್ರಾಮುಖ್ಯತೆಗಳನ್ನು ಕಳೆದುಕೊಳ್ಳಬೇಕಾಯಿತು. ಆದುದರಿಂದ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮ ಹಿತಾಸಕ್ತಿಯು ಕರಾವಳಿ ಕರ್ನಾಟಕವನ್ನು ವಿಭಜನೆ ಮಾಡಿರುವುದಲ್ಲದೆ ಕೆಲವು ಹೊಸ ಬಂದರುಗಳನ್ನು ಇನ್ನಿಲ್ಲದ ಪ್ರಾಮುಖ್ಯತೆಗೆ ತಂದು ಕೆಲವೇ ಕೆಲವು ತಿಂಗಳುಗಳ ಅವಧಿಯಲ್ಲಿ ಅವುಗಳನ್ನು ನಗಣ್ಯ ಕೂಡಾ ಮಾಡಿತ್ತು.

ಆದುದರಿಂದ ಕೆನರಾ ವಿಭಜನೆಯೂ ಕೂಡ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಫಲವಾಗಿದೆ. ಟಿಪ್ಪುವಿನ ಮರಣೋತ್ತರದ ಕರಾವಳಿ ಕರ್ನಾಟಕದ ರಾಜಕೀಯ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ

ಕೆನರಾ ವಿಭಜನೆಯು ಕೇವಲ ಭೌಗೋಳಿಕ ವಿಭಜನೆಯೆಂದು ಪರಿಗಣಿಸುವಂತಿಲ್ಲ. ಇದಕ್ಕೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ಹಿನ್ನೆಲೆಯಿದೆ.

**ರೈತಾಪಿ ಸಮುದಾಯದ ಪ್ರತಿರೋಧಗಳು ಮತ್ತು ದಂಗೆ– ಸ್ವರೂಪ ಮತ್ತು ವಿನ್ಯಾಸ**

ಕಾರ್ಲ್ ಮಾರ್ಕ್ಸ್‌ರವರು ಭಾರತದಲ್ಲಿ ಹಿಂಸಾಕೃತ್ಯಗಳ ತನಿಖೆ ಎಂಬ ಲೇಖನವು ೧೮೫೭ರ ಆಗಸ್ಟ್ ೨೮ರಂದು ನ್ಯೂಯಾರ್ಕ್ ಡೈಲಿ ಟ್ರಿಬ್ಯೂನ್‌ನ ಪತ್ರಿಕೆಯ ಸಂಖ್ಯೆ ೧೫೩೦ ರಲ್ಲಿ ಪ್ರಕಟವಾಗಿದ್ದು ಅದು ಕೆಳಕಂಡ ಕಂದಾಯಕ್ಕೆ ಸಂಬಂಧಿಸಿದ ಬ್ರಿಟಿಷ್ ವ್ಯವಸ್ಥೆಯ ಹಿಂಸಾಕೃತ್ಯಗಳ ಬಗ್ಗೆ ಗಮನ ಸೆಳೆಯುತ್ತದೆ. ಅಲ್ಲಿ ಉಲ್ಲೇಖಿಸಿರುವ ಮದ್ರಾಸಿನಲ್ಲಿ ನಡೆದ ಹಿಂಸಾಕೃತ್ಯಗಳನ್ನು ತನಿಖೆ ಮಾಡಲು ನಿಯೋಜಿಸಲಾಗಿದ್ದ ಆಯೋಗದ ವರದಿಯು ಕೆಳಕಂಡಂತಿದೆ.

> ಕಂದಾಯ ವಸೂಲಿಗೆ ಸಂಬಂಧಿಸಿ ಚಿತ್ರ ಹಿಂಸೆ ನೀಡುವ ಪದ್ಧತಿ ಸಾಮಾನ್ಯವಾಗಿ ಅಸ್ತಿತ್ವದಲ್ಲಿದೆ ಎಂಬುದು ನನ್ನ ನಂಬಿಕೆ. ಕಂದಾಯ ನೀಡದ ತಪ್ಪಿಗಾಗಿ ಪ್ರತೀ ವರ್ಷವೂ ಶಿಕ್ಷೆಗೆ ಗುರಿಪಡಿಸುತ್ತಿದ್ದಷ್ಟೇ ಸಂಖ್ಯೆಯಲ್ಲಿ ವ್ಯಕ್ತಿಗಳನ್ನು ಕ್ರಿಮಿನಲ್ ಆಪಾದನೆಗಳ ಮೇರೆಗೆ ಚಿತ್ರಹಿಂಸೆಗೆ ಗುರಿಪಡಿಸಲಾಗುತ್ತಿದೆ (ಕಾರ್ಲ್ ಮಾರ್ಕ್ಸ್ ೧೯೮೭:೯೦).

ಅಂದರೆ ಇಲ್ಲಿ ವ್ಯಕ್ತವಾಗುವಂತೆ ಕಂದಾಯ ಪಾವತಿಸದ ರೈತಾಪಿ ಜನರನ್ನು ಬಂಧಿಸಿ ಶಿಕ್ಷೆಗೆ ಗುರಿಪಡಿಸಲಾಗುತ್ತಿದ್ದು ಅವರ ಸಂಖ್ಯೆ ಕ್ರಿಮಿನಲ್ ಅಪರಾಧಿಗಳಷ್ಟೇ ಇತ್ತು ಎಂದು ಅಭಿವ್ಯಕ್ತವಾಗುತ್ತದೆ.[೧೦] ಮತ್ತೊಂದು ಅಂಶ ಕಂದಾಯ ಪಾವತಿಗಾಗಿ ಚಿತ್ರಹಿಂಸೆಯ ವಿಧಾನ ಮದ್ರಾಸ್ ಪ್ರಾಂತ್ಯದಲ್ಲಿ ಅತೀ ಹೆಚ್ಚು ನಡೆಯುತ್ತಿತ್ತೆಂದು ಮೇಲಿನ ವರದಿಯಿಂದ ತಿಳಿದು ಬರುತ್ತದೆ. ಕಾರ್ಲ್ ಮಾರ್ಕ್ಸ್‌ರವರು ೧೮೫೭ ಸೆಪ್ಟೆಂಬರ್ ೪ರಂದು ಭಾರತದ ಪ್ರಥಮ ಸ್ವಾತಂತ್ರ್ಯವನ್ನು ಪ್ರಾರಂಭಿಸಿದ ಸೈನಿಕರ ಪಾತ್ರವನ್ನು ವಿಮರ್ಶಿಸುತ್ತಾ ಬ್ರಿಟಿಷ್ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿರುವ ಚಿತ್ರಹಿಂಸೆ ಮತ್ತು ಪ್ರತಿಕಾರದ ಅನಿವಾರ್ಯತೆಯನ್ನು ಈ ರೀತಿ ವಿವರಿಸಿದ್ದಾರೆ.

> ಚಿತ್ರಹಿಂಸೆಯು ಅದರ (ಬ್ರಿಟಿಷ್ ವ್ಯವಸ್ಥೆಯ) ಹಣಕಾಸು ನೀತಿಯ ಸಾವಯವ ಭಾಗವಾಗಿತ್ತು. ಮಾನವ ಇತಿಹಾಸದಲ್ಲಿ ಪ್ರತಿಕಾರ ಎನ್ನುವಂತಹದ್ದು ಒಂದಿದೆ; ಈ ಪ್ರತಿಕಾರದ ಸಾಧನವನ್ನು ಜುಲುಮೆಗೆ ಒಳಗಾದವರಲ್ಲ. ಆದರೆ ಜುಲುಮೆ ಮಾಡುವವರೇ ಸೃಷ್ಟಿಸುತ್ತಾರೆ ಎಂಬುದು ಚಾರಿತ್ರಿಕ ಪ್ರತಿಕಾರದ ನಿಯಮವಾಗಿದೆ (ಮಾರ್ಕ್ಸ್ ೧೯೮೭:೧೧೬).

ಇದರ ಅರ್ಥ ಹಿಂಸೆಗೆ ಪ್ರತಿಯಾಗಿ ಜನ ನಡೆಸುವ ಪ್ರತಿರೋಧಗಳು ಅನಿವಾರ್ಯ ಉಪಕ್ರಮ ಎಂಬುದಾಗಿದೆ. ಇದು ಚರಿತ್ರೆಯ ಸಾರ್ವತ್ರಿಕ ನಿಯಮವಾಗಿದೆ. ಈ ಹಿನ್ನೆಲೆಯಲ್ಲಿ ಕರಾವಳಿ ಕರ್ನಾಟಕದಲ್ಲಿ ಟಿಪ್ಪುವಿನ ಮರಣೋತ್ತರ ಕಾಲಘಟ್ಟದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಇಲ್ಲಿಯ ರೈತಾಪಿ ಸಮುದಾಯ ಹಾಗೂ ಜನ ಸಾಮಾನ್ಯರ ಮೇಲೆ ಎಲ್ಲಾ ರೀತಿಯ ದೌಜನ್ಯಗಳನ್ನು, ಶೋಷಣೆಗಳನ್ನು ನಡೆಸಿದ್ದಾರೆ. ಇದರ ವಿರುದ್ಧ ವಿವಿಧ ಹಂತಗಳಲ್ಲಿ ವಿವಿಧ ನೆಲೆಗಟ್ಟಿನಲ್ಲಿ ಸಂಘರ್ಷಗಳು ನಡೆದಿರುವುದನ್ನು ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

ಪ್ರಾರಂಭದಲ್ಲಿ ವಿಟ್ಲದ ಹೆಗ್ಗಡೆ, ಕುಂಬಳೆಯ ರಾಜ ಮತ್ತು ನೀಲೇಶ್ವರದ ಸಾಮಂತರಾಜರುಗಳು ಶ್ರೀರಂಗ ಪಟ್ಟಣದಲ್ಲಿ ನಡೆದ ಒಪ್ಪಂದದಲ್ಲಿ ಬ್ರಿಟಿಷರು ಇವರಿಗೆ ತಮ್ಮ ತಮ್ಮ ಪ್ರಾಂತ್ಯದ ಆಡಳಿತವನ್ನು ನಡೆಸಲು ಅವಕಾಶ ನೀಡದಿರುವುದರಿಂದ ಪ್ರತಿರೋಧವನ್ನು ಸಂಘಟಿಸಿದರು. ಇದಕ್ಕೆ ಆಯಾಯ ಪ್ರಾಂತ್ಯದ ರೈತಾಪಿ ಸಮುದಾಯಗಳನ್ನು ಹುರಿದುಂಬಿಸಿದರು. ಸಾಮಂತ ರಾಜರುಗಳ ಸೈನ್ಯದೊಂದಿಗೆ ರೈತಾಪಿ ಸಮುದಾಯಗಳು ಜತೆಜತೆಯಾಗಿ ಹೋರಾಡಿದರೂ ಬ್ರಿಟಿಷರು ನಿರ್ದಾಕ್ಷಿಣ್ಯವಾಗಿ ದಂಗೆಯನ್ನು ಹತ್ತಿಕ್ಕಿದರು. ಬ್ರಿಟಿಷ್ ಆಡಳಿತದ ಪ್ರಾರಂಭದ ದಿನಗಳಲ್ಲಿ ನಡೆದ ದೇಶೀಯ ರಾಜರುಗಳ ಚಳುವಳಿಯು ಬ್ರಿಟಿಷರ ಹೊಸ ಆಡಳಿತ ವ್ಯವಸ್ಥೆಗೆ ಸಾಕಷ್ಟು ಕಷ್ಟ ನಷ್ಟಗಳನ್ನು ಒಡ್ಡಿತೆಂಬುದನ್ನು ಹೊಸದಾಗಿ ನೇಮಕಗೊಂಡ ಜಿಲ್ಲಾಧಿಕಾರಿ ಥಾಮಸ್ ಮುನ್ರೋರವರು ತನ್ನ ವರದಿಯಲ್ಲಿ ಮದ್ರಾಸ್ ಪ್ರೆಸಿಡೆನ್ಸಿಗೆ ತಿಳಿಸುತ್ತಾರೆ. ಚತುರ ದಂಡನಾಯಕನೂ ಕ್ರಿಯಾಶೀಲ ಆಡಳಿತಗಾರನೂ ಆದ ಥಾಮಸ್ ಮುನ್ರೋ ತನ್ನ ತೆರಿಗೆ ನೀತಿಯನ್ನು ಜಾರಿಗೊಳಿಸುವಲ್ಲಿ ಅನುಭವಿಸಿದ ತೊಂದರೆಗಳಿಂದ ತಿಳಿದುಬರುತ್ತದೆ. ಥಾಮಸ್ ಮುನ್ರೋರವರು ಕರ್ನಲ್ ಅಲೆಗ್ಸಾಂಡರ್ ರೀಡ್‌ರವರಿಗೆ ಸಹಾಯಕ ಅಧಿಕಾರಿಯಾಗಿದ್ದು ಬಹಳಷ್ಟು ಆಡಳಿತಾತ್ಮಕ ವಿಷಯಗಳನ್ನು ಅವರಿಂದ ಕಲಿತುಕೊಂಡರು. ರೈತವಾರಿ ಪದ್ಧತಿ, ಸೆಟ್ಲ್‌ಮೆಂಟ್ ಪದ್ಧತಿ ಇವುಗಳ ಬಗ್ಗೆ ಮುನ್ರೋರವರಿಗೆ ತಾತ್ವಿಕ ಅಂಶಗಳು ಮಾತ್ರ ತಿಳಿದಿತ್ತು. ಆದರೆ ಅದರ ಪ್ರಾಯೋಗಿಕ ಅನ್ವಯ ಮತ್ತು ವಿಧಿವಿಧಾನಗಳ ಬಗ್ಗೆ ತಿಳಿದಿರಲಿಲ್ಲ. ಅವರು ಕೆನರಾದ ಕಮಿಷನರ್ ಆಗಿರುವಾಗ ಮತ್ತು ಮುಂದೆ ಗವರ್ನರ್ ಆಗಿದ್ದ ಸಮಯದಲ್ಲಿ ಇವುಗಳು ಪ್ರತ್ಯಕ್ಷ ಅನುಭವಕ್ಕೆ ಬಂತು (ವೆಂಕಟ ಸುಬ್ಬ ಶಾಸ್ತ್ರಿ ೧೯೩೭:XLIV).

ಮುನ್ರೋ ಕಾರ್ಯ ರೂಪಕ್ಕೆ ತಂದಿರುವ ರೆವೆನ್ಯೂ ಸೆಟ್ಲ್‌ಮೆಂಟ್(ಜಮಾ ಬಂಧಿ)ಗೆ ರೈತರು ಭಾಗವಹಿಸಲು ನಿರಾಕರಿಸುವುದರಿಂದಲೂ ಇದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಆತ ಎಲ್ಲೆಲ್ಲಿ ಸೆಟ್ಲ್‌ಮೆಂಟ್ ಪ್ರಕ್ರಿಯೆಯನ್ನು ಪ್ರಾರಂಭಿಸಿದನೋ ಅಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ರೈತಾಪಿ ಜನತೆ ಭಾಗವಹಿಸದೆ ನಿರಾಸಕ್ತಿ ತೋರಿಸಿದರು. ಇದು ರೈತಾಪಿ ಜನತೆಯ ಉದ್ದೇಶ ಪೂರ್ವಕ ಮೌನ ಪ್ರತಿಭಟನೆ ಮತ್ತು ಬಹಿಷ್ಕಾರವಾಗಿದೆ. ರೆವೆನ್ಯೂ ಸೆಟ್ಲ್‌ಮೆಂಟ್ ಮೂಲಕ ಸಾಕಷ್ಟು ಪ್ರಮಾಣದಲ್ಲಿ ಭೂಕಂದಾಯ ವಸೂಲಿ ಮಾಡಬೇಕೆಂಬ ಬ್ರಿಟಿಷರ ಉದ್ದೇಶ ಅಷ್ಟೊಂದು ಸುಲಭವಾಗಿ ಈಡೇರುವುದಿಲ್ಲ. ಒಟ್ಟಿನಲ್ಲಿ ಅಧಿಕಾರವಹಿಸಿದ ಪ್ರಾರಂಭದಿಂದಲೇ ಒಂದೆಡೆಯಲ್ಲಿ ರೈತರು ಸಾಮಂತಶಾಹಿ ರಾಜನ ಸೈನ್ಯದೊಂದಿಗೆ ಸೇರಿ ಪ್ರತಿರೋಧ ಒಡ್ಡುತ್ತಾರೆ. ಮತ್ತೊಂದೆಡೆಯಲ್ಲಿ ಬ್ರಿಟಿಷರ ಸೆಟ್ಲ್‌ಮೆಂಟ್ ಪ್ರಕ್ರಿಯೆಯಲ್ಲಿ ಭಾಗವಹಿಸದೆ ಪ್ರತಿರೋಧ ಒಡ್ಡುತ್ತಾರೆ. ಆದರೆ ಬ್ರಿಟಿಷರು ಈ ಎರಡೂ ಪ್ರತಿರೋಧಗಳನ್ನು ತಮ್ಮ ಸೈನಿಕರು ಹಾಗೂ ತಮ್ಮ ಅಧಿಕಾರಿಶಾಹಿಗಳೊಂದಿಗೆ ಮತ್ತು ವ್ಯಾಪಾರಿ ವರ್ಗದ ಸಹಕಾರದೊಂದಿಗೆ ವಿಫಲಗೊಳಿಸುತ್ತಾರೆ.

ಬ್ರಿಟಿಷ್ ಸರಕಾರ ಅಧಿಕಾರವಹಿಸಿದ ಮೇಲೆ ಜಾರಿಗೊಳಿಸಿದ ಕಂದಾಯ ನೀತಿ, ರೈತವಾರಿ ಪದ್ಧತಿ, ವಾಣಿಜ್ಯ ನೀತಿ, ವಿವಿಧ ಏಕಸ್ವಾಮ್ಯ ನೀತಿಗಳ ಕಟ್ಟುನಿಟ್ಟಿನ ಜಾರಿಯಿಂದ ಜನತೆ ತೀವ್ರವಾದ ತೊಂದರೆಗೆ ಒಳಗಾದರು. ಆಗ ಸಹಜವಾಗಿಯೇ ಜನರ ಅಸಹನೆಯ ಕಟ್ಟು ಒಡೆಯಿತು. ೧೮೦೯ –೧೦ರಲ್ಲೂ ರೈತಾಪಿ ಜನತೆ ಬ್ರಿಟಿಷರ ರೆವೆನ್ಯೂ ಸೆಟ್ಲ್‌ಮೆಂಟ್ ಪ್ರಕ್ರಿಯೆಯಲ್ಲಿ ಭಾಗವಹಿಸಲೇ ಇಲ್ಲ. ಸರಕಾರಕ್ಕೆ ಪಾವತಿಸಬೇಕಾದ "ಕಿಸ್ತು" ಕೂಡ ಪಾವತಿಸಲಿಲ್ಲ.[೧೧]

ಈ ಸಂದರ್ಭದಲ್ಲಿ ಜನತೆ ತೆರಿಗೆ ಪಾವತಿಸದೇ ಬಾಕಿ ಇರಿಸಿ, 'ತೆರಿಗೆ ಪಾವತಿ ಇಲ್ಲ' ಎಂಬ ಚಳುವಳಿಯಾಗಿ ಇದು ಪರಿವರ್ತನೆಯಾಯಿತು(ಶ್ಯಾಮ್ ಭಟ್ ೧೯೯೮:೧೧೦). ಇದಕ್ಕೆ ಸಾರ್ವತ್ರಿಕ ಸ್ವರೂಪ ಬೆಳೆದುಬಂತು. ಜನಸಮುದಾಯಗಳು ಸರಕಾರ, ವ್ಯಾಪಾರಿ ಸಮುದಾಯ ಮತ್ತು ಮಧ್ಯವರ್ತಿ ಲೇವಾದೇವಿಗಾರರ ವಿರುದ್ಧ ಮೌನವಾಗಿ ಪ್ರತಿಭಟಿಸಿದರು. ಈ ಚಳುವಳಿಯ ಪರಿಣಾಮವಾಗಿ ತೆರಿಗೆ ಸಂಗ್ರಹದಲ್ಲಿ ವಿಪರೀತ ಕುಸಿತ ಉಂಟಾಯಿತು.

ತೆರಿಗೆ ಸಂಗ್ರಹದಲ್ಲಿ ಆಗಿರುವ ಕುಸಿತ ಮತ್ತು ಸಮಗ್ರ ಪರಿಸ್ಥಿತಿಯನ್ನು ಅಂದಾಜಿಸಲು ಬ್ರಿಟಿಷ್ ಸರಕಾರ ನಿರ್ಧರಿಸಿತು. ಆ ಪ್ರಕಾರ ಸರಕಾರ ಬ್ರಿಟಿಷ್ ಕಂದಾಯಾಧಿಕಾರಿ 'ಹ್ಯಾರೀಸ್' ಎಂಬವರಿಂದ ತನಿಖೆ ನಡೆಸಿ ಒಂದು ವರದಿಯನ್ನು ಪಡೆಯಿತು. ಜಿಲ್ಲೆಯ ರೈತರ ಅತ್ಯಂತ ದಾರುಣಮಯ ಸನ್ನಿವೇಶಕ್ಕೆ ಸರಕಾರದ ತೆರಿಗೆ ನೀತಿಯೇ ಕಾರಣವೆಂದು ಆ ವರದಿ ಗುರುತಿಸಿತು. ಮುಂದುವರಿದು ಆ ವರದಿಯ ಪ್ರಕಾರ ವ್ಯಾಪಾರದಲ್ಲಿ ಆಗಿರುವ ಸ್ಥಗಿತತೆ ಮತ್ತು ಹಣ ಲೇವಾದೇವಿಗಾರರು ಸಮಾಜದಲ್ಲಿ ನಿರ್ವಹಿಸುತ್ತಿರುವ ಪಾತ್ರವೂ ಮುಖ್ಯ ಕಾರಣವಾಗಿದೆ ಎಂದು ತಿಳಿಸಿರುತ್ತಾನೆ (ಶ್ಯಾಮ್ ಭಟ್ ೧೯೯೮:೧೧೦).

ಆದುದರಿಂದ ಸರಕಾರದ ತನಿಖಾ ವರದಿಯ ಪ್ರಕಾರ ಕೆಳಕಂಡ ಅಂಶಗಳು ಕರಾವಳಿ ಕರ್ನಾಟಕದ ಜನತೆಯ ಪ್ರಪ್ರಥಮ ನೋ ಟ್ಯಾಕ್ಸ್ ಪೇಮೆಂಟ್ ಸಂಘರ್ಷಕ್ಕೆ ಕಾರಣಗಳಾಗಿವೆ.

ಎ. ಸರಕಾರದಿಂದ ವಿಪರೀತ ತೆರಿಗೆ ವಸೂಲಾತಿ.

ಬಿ. ವ್ಯಾಪಾರ ಮತ್ತು ಆ ವರ್ಗದ ಮೂಲಕ ನಡೆಯುತ್ತಿರುವ ಶೋಷಣೆ.

ಸಿ. ವ್ಯಾಪಾರಿ ವರ್ಗದಿಂದ ರೂಪಿಸಲ್ಪಟ್ಟು ಮತ್ತು ಸರಕಾರದಿಂದ ಪರೋಕ್ಷವಾಗಿ ಬೆಂಬಲ ಪಡೆದ ಹಣ ಲೇವಾದೇವಿಗಾರರ ಪಾತ್ರ

ಮೇಲಿನ ಅಂಶಗಳ ಆಧಾರದ ಮೇಲೆ ರೈತಾಪಿ ಸಮುದಾಯದ ಪ್ರಪ್ರಥಮ ಪ್ರತಿರೋಧವಾಗಿರುವ ನೋ ಟ್ಯಾಕ್ಸ್ ಪೇಮೆಂಟ್ ಅಥವಾ ಸರಕಾರಕ್ಕೆ ತೆರಿಗೆ ಪಾವತಿಸದೇ ಬಾಕಿ ಇರಿಸುವ ಕಾರ್ಯಕ್ರಮವು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಆದಾಯದ ಮೂಲಕ್ಕೆ ಗಂಭೀರ ತಡೆಯನ್ನು ಒಡ್ಡಿತ್ತು. ತನ್ಮೂಲಕ ಕರಾವಳಿ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯೋದ್ಯಮ ಸಂಘರ್ಷದ ಸ್ವರೂಪ ಹೊಸ ತಿರುವನ್ನು ಪಡೆದುಕೊಂಡಿತ್ತು.

ನೋ ಟ್ಯಾಕ್ಸ್ ಪೇಮೆಂಟ್ ಎಂಬ ಅಘೋಷಿತ ಮತ್ತು ಅಸಂಘಟಿತ ಪ್ರತಿರೋಧದ ಕಾರ್ಯಕ್ರಮ ಸರಕಾರದೊಂದಿಗೆ ಜನರ ಮುಖಾಮುಖಿಗೆ ಕಾರಣವಾಯಿತು. ಇದರಿಂದ ಎಚ್ಚೆತ್ತ ಬ್ರಿಟಿಷ್ ಆಡಳಿತ ಸ್ವಲ್ಪ ಪ್ರಮಾಣದಲ್ಲಿ ತೆರಿಗೆ ಪರಿಷ್ಕರಣೆ ಮಾಡಿದರು. ಆದರೆ ಮುಂದಿನ ಕೆಲವು ವರ್ಷಗಳಲ್ಲಿ ಸರಕಾರದ ಧೋರಣೆಯು ಈ ಮೊದಲಿನಂತೆಯೇ ಮುಂದುವರಿದು ಮತ್ತೆ ರೈತಾಪಿ ಜನರನ್ನು ದುರಂತಮಯ ಪರಿಸ್ಥಿತಿಗೆ ದೂಡಿತ್ತು. ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಬೆಲೆ ನಿರ್ಧರಿತ ದರಕ್ಕಿಂತ ಜಾಸ್ತಿ ಇದ್ದಾಗ ರೈತಾಪಿ ಜನತೆ ಆ ಹೆಚ್ಚುವರಿ ಮಾರುಕಟ್ಟೆ ದರದ ಮೇಲೆ ಹೆಚ್ಚುವರಿ ತೆರಿಗೆ ಪಾವತಿಸಬೇಕಿತ್ತು. ಆದರೆ ೧೮೨೦ರ ನಂತರ ಮಾರುಕಟ್ಟೆ ದರ ನಿರ್ಧರಿತ ಉತ್ಪನ್ನಗಳ ದರಕ್ಕಿಂತ ತೀವ್ರ ಇಳಿಮುಖವಾಯಿತು.

ಇದೊಂದು ಹೊಸ ಆರ್ಥಿಕ ಬಿಕ್ಕಟ್ಟಿನ ಸನ್ನಿವೇಶಗಳನ್ನು ಸೃಷ್ಟಿಸಿತು. ಜಮಾಬಂದಿಯಲ್ಲಿ ಬೆಲೆ ಇಳಿತಕ್ಕೆ ಅನುಗುಣವಾಗಿ ರೈತರಿಗೆ ತೆರಿಗೆ ಪಾವತಿಯಲ್ಲಿ ಇಳಿಮುಖ ಆಗಲಿಲ್ಲ. ರೈತರು ತಮಗೆ ನ್ಯಾಯಯುತ ದರದಲ್ಲಿ ತೆರಿಗೆ ಪಾವತಿಸಲು ಅವಕಾಶ ಕಲ್ಪಿಸದೆ ಹೆಚ್ಚುವರಿ ವಸೂಲಾತಿ ಮಾಡುವ ಮೂಲಕ ಸರಕಾರದಿಂದ ಅನ್ಯಾಯ ನಡೆಯುತ್ತಿದೆ ಎಂದು ಭಾವಿಸಿದರು. ಈ ಅವಧಿಯಲ್ಲಿ ಹೆಚ್ಚು ಕಡಿಮೆ ೪೦% ದಿಂದ ೬೦% ದಷ್ಟು ಬೆಲೆ ಕುಸಿತವಾಯಿತು(ಶ್ಯಾಮ್ ಭಟ್ ೧೯೯೮:೧೧೦). ರೈತರು ಕೆಲವು ವರ್ಷ ಸರಕಾರದ ತೆರಿಗೆ ಪಾವತಿಸಲು ಹೆಚ್ಚಿನ ಪ್ರಮಾಣದಲ್ಲಿ ತಮ್ಮ ಉತ್ಪನ್ನಗಳನ್ನು ಮಾರಬೇಕಾಗಿ ಬಂತು.[೨] ಇದೇ ಸಂದರ್ಭದಲ್ಲಿ ೧೮೨೯ರಲ್ಲಿ ಮಸ್ಕತ್‌ನ ಇಮಾಮ್ ಮತ್ತು ಇತರೆ ಅರೇಬಿಯನ್ ಬುಡಕಟ್ಟುಗಳ ಮಧ್ಯೆ ಪರಸ್ಪರ ದ್ವೇಷದ ವಾತಾವರಣ ಬೆಳೆದು ಬಂತು. ಇದರಿಂದಾಗಿ ಆ ವರ್ಷ ಅಕ್ಕಿಯನ್ನು ಕೊಂಡೊಯ್ಯಲು ಕೆನರಾದ ಬಂದರುಗಳಿಗೆ ಕೆಲವೇ ಕೆಲವು ಹಡಗುಗಳು ಮಾತ್ರ ಬಂದಿತ್ತು. ಪರಿಣಾಮವಾಗಿ ಕರಾವಳಿ ಕರ್ನಾಟಕದಲ್ಲಿ ಅಕ್ಕಿಯ ಬೇಡಿಕೆ ದೊಡ್ಡ ಪ್ರಮಾಣದಲ್ಲಿ ಕುಸಿಯಿತು. ಇದು ರೈತಾಪಿ ಸಮುದಾಯದ ಬದುಕಿಗೆ ಮತ್ತೊಂದು ಹೊಡೆತವನ್ನು ನೀಡಿತ್ತು.

ಬ್ರಿಟಿಷರು ಜಾರಿಗೊಳಿಸಿದ ಜನವಿರೋಧಿ ವಾಣಿಜ್ಯ, ಆರ್ಥಿಕ, ರಾಜಕೀಯ ನೀತಿಗಳಿಂದ ರೈತಾಪಿ ಸಮುದಾಯ ಕೃಷಿ ಕೂಲಿಕಾರ್ಮಿಕರ ಸಂಕಷ್ಟಗಳ ಆಕ್ರೋಶದ ಜ್ವಾಲಾಮುಖಿ ಮತ್ತೊಮ್ಮೆ ೧೮೩೦-೩೧ರ ಅವಧಿಯಲ್ಲಿ ಭುಗಿಲೆದ್ದಿತ್ತು. ಈ ಸಂಘರ್ಷದ ನೆಲೆ ಸರಕಾರದ ವಿರುದ್ಧವೇ ಕ್ರೋಡೀಕೃತಗೊಂಡಿತ್ತು. ಇದು ಸಂಘಟಿತ ಸ್ವರೂಪದಲ್ಲಿ ನಡೆಯಿತು. ಬ್ರಿಟಿಷರು ಇದನ್ನು ಕೂಟ್ ರೆಬೆಲಿಯನ್ (ಕೂಟ ಬಂಡಾಯ) ಎಂದು ಕರೆದರು. ೧೮೩೦-೩೧ರ ರೈತಾಪಿ ಜನತೆಯ ಪ್ರತಿರೋಧದ ಈ ಚಳುವಳಿ ಭೂ ಸಂಬಂಧದ ಸ್ವರೂಪಗಳು ಮತ್ತು ಅದಕ್ಕೆ ಸಂಬಂಧಿಸಿದ ಬ್ರಿಟಿಷ್ ನೀತಿಗಳ ವಿರುದ್ಧ, ವಿಪರೀತ ತೆರಿಗೆ, ಲೇವಾದೇವಿ ಮಧ್ಯವರ್ತಿಗಳ ವಿರುದ್ಧದ ಹೋರಾಟವಾಗಿದೆ. ಸ್ಥಳೀಯ ಆಡು ಭಾಷೆಯಲ್ಲಿ 'ಕೂಟ' ಸೇರುವುದೆಂದರೆ 'ಸಭೆ' ಸೇರುವುದು. ಇದು ಇಂಗ್ಲೀಷ್‌ನಲ್ಲಿ ಭಾಷಾಂತರಗೊಂಡು 'ಕೂಟ' ಹೋಗಿ 'ಕೂಟ್' ಎಂದು ನಾಮಪದವಾಗಿದೆ. ದಾಖಲೆಗಳಲ್ಲಿ 'ಕೂಟ್ ರೆಬೆಲಿಯನ್ಸ್' ಎಂದು ಕರೆಯಲ್ಪಟ್ಟಿದೆ. ಬ್ರಿಟಿಷರ ತೆರಿಗೆ ನೀತಿ, ಕೃಷಿ ಬಿಕ್ಕಟ್ಟು, ಬೆಲೆ ಕುಸಿತ, ವ್ಯಾಪಾರ ಮತ್ತು ವಾಣಿಜ್ಯ ನೀತಿ ಹಾಗೂ ಲೇವಾದೇವಿ ಮಧ್ಯವರ್ತಿಗಾರರ ವಿರುದ್ಧ ರೂಪಿಸಲ್ಪಟ್ಟ ಈ ಹೋರಾಟದಲ್ಲಿ ರೈತಾಪಿ ಜನತೆಯಿಂದ ಬ್ರಿಟಿಷರ ಶೋಷಣೆಯ ವಿರುದ್ಧ ಕರಾವಳಿ ಕರ್ನಾಟಕದ ವಿವಿಧ ಪ್ರಾಂತ್ಯಗಳಿಂದ ಸ್ಪಷ್ಟ ಸಂದೇಶಗಳನ್ನು ರವಾನಿಸಲಾಯಿತು (ಕೊಂಚಾಡಿ ೨೦೧೭:೬೦). ಈ ಹೋರಾಟದಲ್ಲಿ ಬ್ರಿಟಿಷ್ ಪ್ರಭುತ್ವವನ್ನು ಪದಚ್ಯುತಗೊಳಿಸುವಂತಹ ನೇರ ರಾಜಕೀಯ ಬೇಡಿಕೆ ಇರಲಿಲ್ಲ. ಅದೇ ರೀತಿ ಅಮೂಲಾಗ್ರವಾಗಿ ಭೂ ಸಂಬಂಧದ ಸ್ವರೂಪಗಳನ್ನು ಬದಲಾಯಿಸುವ ಗುರಿಯೂ ಇರಲಿಲ್ಲ. ರೈತಾಪಿ ಜನತೆ ಬ್ರಿಟಿಷ್ ಸೇವೆಯಲ್ಲಿದ್ದ ಕೆಲವು ವ್ಯಕ್ತಿಗಳು ಸೇರಿಕೊಂಡು ಸಭೆ ನಡೆಸಿ ಚರ್ಚೆ, ಮನವಿಗಳ ಮೂಲಕ ಬ್ರಿಟಿಷ್ ಸರಕಾರದ ಧೋರಣೆಗಳ ಬದಲಾವಣೆಗಾಗಿ ಕಾರ್ಯಕ್ರಮ ಅಂಗೀಕರಿಸಲಾಯಿತು. ಕೆನರಾ ಜಿಲ್ಲೆಯ ಪ್ರಮುಖ ದೇವಸ್ಥಾನಗಳ ಪ್ರಾಂಗಣಗಳು ಸಭೆ ಸೇರುವ ಸ್ಥಳವಾಗಿತ್ತು. ಮಂಗಳೂರಿನ ಕದ್ರಿ ದೇವಸ್ಥಾನ, ಕಾರ್‌ಸ್ಟ್ರೀಟ್‌ನ ಮಹಮ್ಮಾಯಿ ದೇವಸ್ಥಾನ, ಮಂಜೇಶ್ವರದ ದೇವಸ್ಥಾನ, ಬಾರ್ಕೂರು ಮತ್ತು ಕುಂದಾಪುರ ದೇವಸ್ಥಾನ ಇವುಗಳೆಲ್ಲ ಕೂಟ ಬಂಡಾಯದ ಪ್ರಮುಖ ಹೋರಾಟದ

ಕೇಂದ್ರಗಳು. ಮಂಗಳೂರಿನ ಕೊಡಿಯಾಲ್‌ಬೈಲ್ ಮಾಗಣೆಯಿಂದ ಬ್ರಿಟಿಷ್ ಸರಕಾರಕ್ಕೆ ಪ್ರಪ್ರಥಮ ಮನವಿಯೂ ಸಲ್ಲಿಸಲ್ಪಟ್ಟಿತ್ತು. ಇದೇ ಸಮಯದಲ್ಲಿ ಜಿಲ್ಲೆಯ ವಿವಿಧ ಮೂಲೆಗಳಿಂದ ಜಿಲ್ಲಾಧಿಕಾರಿಗಳಿಗೆ ಮನವಿಗಳೂ ಸಲ್ಲಿಸಲ್ಪಟ್ಟಿತ್ತು. ಇವುಗಳೆಲ್ಲವುದರ ಪರಿಣಾಮವಾಗಿ ಬ್ರಿಟಿಷ್ ಸರಕಾರದ ಆಳ್ವಿಕೆಯ ಮೂವತ್ತು ವರ್ಷಗಳ ಕಾಲಾವಧಿಯಲ್ಲಿಯೇ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಸರಕಾರಕ್ಕೆ ತೆರಿಗೆ ಸಂಗ್ರಹವಾಗುವ ಮೂಲಕ ತೀವ್ರ ಬಿಸಿಯನ್ನು ಮುಟ್ಟಿಸಿತು.

ಇದರಿಂದ ಎಚ್ಚೆತ್ತುಕೊಂಡ ಮದ್ರಾಸ್ ಪ್ರಾಂತೀಯ ಸರಕಾರವು ೧೮೩೧ರಲ್ಲಿ ಜಾನ್‌ಶಾಕ್‌ರವರ ನೇತೃತ್ವದಲ್ಲಿ ತನಿಖಾ ಸಮಿತಿಯನ್ನು ನೇಮಿಸಿತು. ಇವರನ್ನು ಕೆನರಾ ಪ್ರಾಂತ್ಯದ ಕಮಿಷನರ್‌ರನ್ನಾಗಿ ನೇಮಿಸಿ ಇಲ್ಲಿಯ ಬೆಳವಣಿಗೆ ಬಗ್ಗೆ ವಿಶೇಷ ಅಧ್ಯಯನ ನಡೆಸಿ ವರದಿ ಸಲ್ಲಿಸುವಂತೆ ಕೇಳಿಕೊಂಡಿತ್ತು. ಆದರೆ ಈ ಕಮಿಷನರ್‌ರ ವರದಿಯು ಸರಕಾರಕ್ಕೆ ನಿಜವಾದ ಕಾರಣವನ್ನು ತಿಳಿಸುವ ಬದಲು ಮತೀಯ ಕಾರಣಕ್ಕೆ ನಡೆಯಿತು ಎಂದು ವರದಿಯಲ್ಲಿ ಉಲ್ಲೇಖಿಸಲಾಗಿತ್ತು. ಸರಕಾರಿ ಸೇವೆಯಲ್ಲಿದ್ದ ಕೆಲವು ಬ್ರಾಹ್ಮಣ ಅಧಿಕಾರಿಗಳು ಕ್ರೈಸ್ತ ಅಧಿಕಾರಿಗಳ ವಿರುದ್ಧ ದ್ವೇಷ ಸಾಧಿಸಲು ರೈತರನ್ನು ಎತ್ತಿ ಕಟ್ಟಿ ಪ್ರಚೋದನೆ ನೀಡಿದುದರಿಂದ ಕೂಟ ಬಂಡಾಯ ನಡೆಯಿತು[೧೩] ಎಂದು ತಪ್ಪಾದ ವರದಿ ನೀಡಿದ್ದಾರೆ. ಬ್ರಿಟಿಷ್ ಆಡಳಿತವು ಈ ಪ್ರತಿರೋಧವನ್ನು ಬಗ್ಗು ಬಡಿಯಲು ಪ್ರಯತ್ನಿಸಿತು. ನಾಯಕತ್ವ ನೀಡಿದವರ ಮೇಲೆ ಹಿಂಸಾತ್ಮಕ ದಬ್ಬಾಳಿಕೆ ನಡೆಯುತ್ತಿದ್ದು ಅವರಿಗೆ ಕಿರುಕುಳ ನೀಡಿ ಸರಕಾರಿ ಸೇವೆಯಿಂದ ವಜಾಗೊಳಿಸ ಲಾಯಿತು; ಹಾಗೂ ಅವರ ಎಲ್ಲಾ ಸೇವಾ ಸೌಲಭ್ಯಗಳನ್ನು ಮುಟ್ಟುಗೋಲು ಹಾಕಲಾಯಿತು. ಇತರೆ ನಾಯಕರನ್ನು ಬಂಧಿಸಿ ಪ್ರಕರಣ ದಾಖಲಿಸಿ ಅವರ ಭೂಮಿಯನ್ನು ಸರಕಾರದ ವಶಕ್ಕೆ ಪಡೆಯಲಾಯಿತು. ಚಳುವಳಿಯಲ್ಲಿ ಭಾಗವಹಿಸಿ ತೆರಿಗೆ ಪಾವತಿಸದೇ ಸುಸ್ತಿದಾರರಾದ ರೈತರ ಭೂಮಿಗಳನ್ನು ಸರಕಾರವೇ ಮುಟ್ಟುಗೋಲು ಹಾಕಿ ವಶಪಡಿಸಿಕೊಂಡಿತು (ಕೊಂಚಾಡಿ ೨೦೧೭:೬೧). ಕೂಟ ಬಂಡಾಯದ ಇತರ ನಾಯಕರುಗಳಾದ ಕೃಷ್ಣ ರಾವ್, ರಂಗರಾವ್, ನಾಮಪ್ಪ, ಬಾಳಪ್ಪ, ಮಾಧವ ರಾವ್, ಸೂರಪ್ಪ, ವ್ಯಾಸರಾವ್, ಸರ್ವೋತ್ತಮ ರಾವ್, ಅತ್ತಾವರ ರಾಮಪ್ಪ ಇವರೆಲ್ಲ ಸರಕಾರಿ ಅಧಿಕಾರಿಗಳಾಗಿದ್ದಾರೆ. ಸರಕಾರಿ ಸೇವೆಯಲ್ಲಿದ್ದ ಕೃಷ್ಣ ರಾವ್‌ರವರ ಬೆಂಬಲಿಗ ದೇರೆಬೈಲ್ ರಾಮಯ್ಯ ಇನ್ನೊರ್ವ ಪ್ರಮುಖ ಹೋರಾಟಗಾರರಾಗಿದ್ದಾರೆ. (ಶ್ಯಾಮ್ ಭಟ್ ೧೯೯೮:೧೫೯).

ಈ ಮೇಲಿನ ಪ್ರತಿರೋಧಗಳಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನೆಲೆಗಟ್ಟು ಪರ್ಯಾಯ ಸ್ವರೂಪವನ್ನು ಪಡೆದಿರುತ್ತದೆ. ಬ್ರಿಟಿಷ್ ಪ್ರಭುತ್ವ ಇದನ್ನು ಬಗ್ಗು ಬಡಿಯಿತು. ಕೆಲವು ಪಾಳೆಯಗಾರಿ ಸಾಮಂತರಾಜರುಗಳು, ಅವರ ಸಂಬಂಧಿಕರು ಇದನ್ನು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಬೆಂಬಲಿಸಿದರೂ ನೇರ ಯಶಸ್ಸು ಜನತೆಗೆ ದೊರೆಯಲಿಲ್ಲ.

ರೈತಾಪಿ ಜನರ ಚಳುವಳಿಯ ಚರಿತ್ರೆಯು ಭಾರತದಲ್ಲಿ ವಸಾಹತುಶಾಹಿ ಪದ್ಧತಿಯಷ್ಟೇ ಹಳೆಯದಾಗಿದೆ. ವಸಾಹತುಶಾಹಿಯ ಪ್ರಾರಂಭದಿಂದಲೇ ರೈತಾಪಿ ಸಮುದಾಯ ಪ್ರತಿರೋಧಗಳನ್ನು ಒಡ್ಡಿದೆ. ಭಾರತದಲ್ಲಿ ರೈತರ ಹೋರಾಟವನ್ನೇ ತೆಗೆದುಕೊಂಡರೂ ಸುಮಾರು ೧೫೦ಕ್ಕೂ ಹೆಚ್ಚು ಮುಖ್ಯ ಹೋರಾಟಗಳು ನಡೆದಿರುವುದು ಕಂಡು ಬರುತ್ತದೆ. ಕಳೆದ ಎರಡು ಶತಮಾನಗಳ ಕಾಲದಲ್ಲಿ ರೈತ ಹೋರಾಟಗಳು

ಪ್ರಾಮುಖ್ಯತೆ ಹೊಂದಿದೆ. ಕಾಯಕವರ್ಗ ಸ್ಪಷ್ಟವಾಗಿ ರೂಪುಗೊಳ್ಳದ ಆ ಕಾಲದಲ್ಲಿ ಈ ಹೋರಾಟಗಳು ಬಹಳ ಪ್ರಾಮುಖ್ಯತೆಯನ್ನು ಹೊಂದಿವೆ ಎಂದು ಚರಿತ್ರೆಕಾರರಾದ ವಿಜಯ್ ಪೂಣಚ್ಚ ತಂಬಂಡರವರು ವಿಶ್ಲೇಷಿಸಿದ್ದಾರೆ (ಪೂಣಚ್ಚ ೧೯೯೯:೪). ಈ ಬೆಳವಣಿಗೆಗಳು ಕರಾವಳಿ ಕರ್ನಾಟಕದ ಪ್ರಾರಂಭದ ೫೦ ವರ್ಷಗಳ ಅಧ್ಯಯನದಲ್ಲಿ ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ.

೧೮೩೭ ರಲ್ಲಿ ನಡೆದ ಅಮರ ಸುಳ್ಯ ದಂಗೆಯು ಈ ಮೊದಲಿನ ಜನತಾ ಪ್ರತಿರೋಧದ ಚಳುವಳಿಗಳ ರೀತಿಯಲ್ಲೇ ಗುರುತಿಸಬಹುದೇ ಎಂಬುದು ಚರ್ಚೆಯ ವಿಷಯವಾಗಿದೆ. ರಾಜ ಮನೆತನದ ಹಿನ್ನೆಲೆಯ ಪಾಳೆಯಗಾರಿ ವ್ಯವಸ್ಥೆಯ ಕಲ್ಯಾಣಸ್ವಾಮಿ ಮತ್ತು ಆತನ ಬೆಂಬಲಿಗರು ಸಂಘಟಿಸಿದ ಈ ದಂಗೆಯ ಮೂಲ ಗುರಿ ಪ್ರಭುತ್ವವನ್ನು ಪದಚ್ಯುತಗೊಳಿಸಿ ರಾಜ ಪ್ರಭುತ್ವವನ್ನು ಪುನರ್ ಸ್ಥಾಪಿಸುವುದೇ ಆಗಿತ್ತು. ಹಲವಾರು ಸಾಮಂತರಾಜರುಗಳು ನೇರವಾಗಿ ಭಾಗವಹಿಸಿ ಬೆಂಬಲಿಸಿ ಸೈನಿಕ ಕಾರ್ಯಾಚರಣೆ ನಡೆಸಿದ ಈ ದಂಗೆಯನ್ನು ಶ್ಯಾಮ್ ಭಟ್‌ರವರು ರೈತಾಪಿ ಜನರ ಬೇಡಿಕೆಗಳು ಮತ್ತು ಸಕ್ರಿಯ ಭಾಗವಹಿಸುವಿಕೆ ಸಾಕಷ್ಟು ಸಂಖ್ಯೆ ಒಳಗೊಂಡಿರುವುದರಿಂದ ಈ ಮೊದಲಿನ ಎರಡು ಪ್ರತಿರೋಧಗಳ ನೆಲೆಯಲ್ಲೇ ಗುರುತಿಸಬಹುದೆಂದು ಅಭಿಪ್ರಾಯ ಪಡುತ್ತಾರೆ.

ಕಲ್ಯಾಣಸ್ವಾಮಿ ಸಂಘಟಿಸಿದ ಈ ದಂಗೆಯಲ್ಲಿ ಜನತೆಯ ಪ್ರತಿರೋಧವೂ ಸೇರಿತ್ತು. ರೈತಾಪಿ ಜನತೆ ಇದನ್ನು ಬೆಂಬಲಿಸಲು ಪ್ರಮುಖ ಕಾರಣ ಅವರುಗಳ ಬೇಡಿಕೆಯನ್ನು ಮತ್ತು ಹಿತಾಸಕ್ತಿಯನ್ನು ಅದು ಒಳಗೊಂಡಿತ್ತು. ಉದಾಹರಣೆಗೆ ಭೂ ಕಂದಾಯ ಪರಿಷ್ಕರಣೆ, ಉಪ್ಪಿನ ಮತ್ತು ತಂಬಾಕಿನ ಮೇಲಿನ ಏಕಸ್ವಾಮ್ಯದ ರದ್ದತಿಯ ಬೇಡಿಕೆಗಳೂ ಅದು ಒಳಗೊಂಡಿತ್ತು. ಈ ಅಂಶವನ್ನು ಉಲ್ಲೇಖಿಸುತ್ತಾ ಅದಕ್ಕೆ ಸಾಕ್ಷಿಯಾಗಿ ೧೮೩೭ ರ ಜುಲೈ ೧೨ ರಂದು ಜಿಲ್ಲಾ ಕಲೆಕ್ಟರ್‌ರವರು ಸರಕಾರಕ್ಕೆ ಮಾಡಿದ ವರದಿಯಲ್ಲಿದ್ದ, ಘಟ್ಟದ ಕೆಳಭಾಗದ ಕೊಡಗಿನ ಜನರ ದೂರಿನ ಸಾರಾಂಶ ತಂಬಾಕು ಮತ್ತು ಉಪ್ಪಿನ ಏಕಸ್ವಾಮ್ಯದ ವಿರುದ್ಧ ಎಂಬುದಾಗಿ ಗುರುತಿಸುತ್ತಾರೆ. ಇದೇ ರೀತಿಯಲ್ಲಿ ಜನತೆಯು ಕೂಡ ಈ ದಂಗೆಯಲ್ಲಿ ಸಕ್ರಿಯರಾಗಿ ಭಾಗವಹಿಸಿದ್ದಾರೆ ಎಂಬುದಕ್ಕೆ ಪೂರಕವಾಗಿ ಧರ್ಮಸ್ಥಳದ ಅಂದಿನ ಧರ್ಮಾಧಿಕಾರಿ ಮಂಜಪ್ಪ ಹೆಗ್ಗಡೆಯು ಬಹಿರಂಗವಾಗಿ ತನ್ನ ಸೇವಕರನ್ನು ಕಳುಹಿಸಿ, ಹಣ ಮತ್ತು ವಸ್ತು ರೂಪದ ಸಹಾಯ ಸಹಕಾರವನ್ನು ಬಂಡಾಯಗಾರರಿಗೆ ನೀಡಿರುವುದನ್ನು ಉಲ್ಲೇಖಿಸುತ್ತಾರೆ (ಶ್ಯಾಮ್ ಭಟ್ ೧೯೯೮:೧೭೦).

ಬಂಡಾಯಗಾರರು ಸುಳ್ಯದಿಂದ ಮಂಗಳೂರಿಗೆ ದಂಗೆಯೆದ್ದು ಬ್ರಿಟಿಷ್ ಕಛೇರಿ ಹಾಗೂ ಅಧಿಕಾರಿಗಳ ಮೇಲೆ ದಾಳಿ ಮಾಡಿಕೊಂಡು ಬರುತ್ತಿರುವಾಗ ಅಲ್ಲಲ್ಲಿ ರೈತರು ಸಾಕಷ್ಟು ಸಂಖ್ಯೆಯಲ್ಲಿ ದಂಗೆಕೋರರೊಂದಿಗೆ ಸೇರುತ್ತಾರೆ. ಮೌಖಿಕ ದಾಖಲೆಗಳ ಪ್ರಕಾರ ಈ ಜನತೆ ಸಾಂಪ್ರದಾಯಿಕ ಕತ್ತಿ, ಚೂರಿ, ಬೆತ್ತ ಅದರಲ್ಲೂ ಮುಖ್ಯವಾಗಿ ತೆಂಗಿನ ಗರಿಯ ದಂಡುಗಳನ್ನು ಆಯುಧಗಳನ್ನಾಗಿ ಮಾಡಿಕೊಂಡು ಬ್ರಿಟಿಷರೊಂದಿಗೆ ಹೋರಾಡಿದರೆಂಬ ಪ್ರತೀತಿ ಇದೆ. ಉಪ್ಪು ಮತ್ತು ತಂಬಾಕು ಸಂಗ್ರಹಣೆ ಮತ್ತು ಮಾರಾಟಗಳ ಡಿಪ್ಪೊಗಳಿಗೆ ದಾಳಿ ಮಾಡಿ ಅಲ್ಲಿದ್ದ ವಸ್ತುಗಳನ್ನು ಜನರಿಗೆ ಹಂಚಿದ್ದಾರೆ. ಸಾಮಂತರಾಜರ ಪ್ರತಿನಿಧಿಗಳು ಅವರ ಸೈನಿಕರು ಪೂರ್ಣ ಪ್ರಮಾಣದಲ್ಲಿ ಬ್ರಿಟಿಷರ ವಿರುದ್ಧ ಭಾಗವಹಿಸುತ್ತಾರೆ. ಕಲ್ಯಾಣಸ್ವಾಮಿಯ ದಂಡು ಮಂಗಳೂರಿಗೆ ಪ್ರವೇಶಗೈದು ಮಂಗಳೂರಿನಲ್ಲಿ ಇದ್ದ ಬ್ರಿಟಿಷ್ ಕಛೇರಿಗಳನ್ನು ಕೈವಶಪಡಿಸಿದ್ದಾರೆ. ಬಲ್ಮಠದಲ್ಲಿದ್ದ

ಸರಕಾರಿ ಕಛೇರಿಗಳಿಗೆ, ಕಡತಗಳಿಗೆ ಬೆಂಕಿ ಹಚ್ಚುತ್ತಾರೆ. ಜೈಲು ಮುರಿದು ಬಂಧಿತರನ್ನು ಬಿಡುಗಡೆಗೊಳಿಸುತ್ತಾರೆ. ಕೆಲವು ದಿನಗಳ ಕಾಲ ಬ್ರಿಟಿಷ್ ಆಡಳಿತವನ್ನು ಪದಚ್ಯುತಗೊಳಿಸಿ ಕಲ್ಯಾಣಪ್ಪನ ಆಡಳಿತ ಸ್ಥಾಪನೆಗೊಂಡು ರೈತರ ಪರವಾದ ಹುಕುಂಗಳು ಜಾರಿಯಾಗುತ್ತದೆ. ಆದರೆ ಬ್ರಿಟಿಷರು ಇತರೆ ಕಡೆಗಳಿಂದ ಸೈನಿಕರನ್ನು ಕರೆಸಿಕೊಂಡು ದಂಗೆಕೋರರನ್ನು ಸದೆ ಬಡಿದು ಹಿಂಸಾತ್ಮಕವಾಗಿ ದಂಗೆಯ ಹುಟ್ಟು ಅಡಗಿಸುತ್ತಾರೆ. ಕಲ್ಯಾಣಸ್ವಾಮಿ ಮೊದಲಾದ ನಾಯಕರನ್ನು ಬಂಧಿಸಿ ಮಂಗಳೂರಿನ ಬಿಕರ್ಣಕಟ್ಟೆಯಲ್ಲಿ ಬಹಿರಂಗ ವಿಚಾರಣೆ ನಡೆಸಿ ಸಾರ್ವಜನಿಕವಾಗಿ ನೇಣಿಗೆ ಹಾಕುತ್ತಾರೆ. ರೈತಾಪಿ ಸಮುದಾಯಕ್ಕೆ ಈ ಪ್ರತಿರೋಧದಿಂದ ಪ್ರತ್ಯಕ್ಷವಾಗಲೀ, ಪರೋಕ್ಷವಾಗಲೀ ಯಾವುದೇ ಪ್ರಯೋಜನವಾಗಲಿಲ್ಲ. ಆದರೆ ಬ್ರಿಟಿಷ್ ಪ್ರಭುತ್ವಕ್ಕೆ ಗಂಭೀರವಾದ ಎಚ್ಚರಿಕೆಯು ಈ ಚಳುವಳಿಯ ಮೂಲಕ ನೀಡಲ್ಪಟ್ಟಿತ್ತು.

ಅಮರ ಸುಳ್ಯ ದಂಗೆಯಲ್ಲಿ ರೈತಾಪಿ ಜನತೆ, ಸಾಮಂತರಾಜರುಗಳು ಮತ್ತು ಧಾರ್ಮಿಕ ನಾಯಕರುಗಳ ಸಹಕಾರಗಳು ಸಂಯುಕ್ತವಾಗಿ ಕಂಡು ಬಂದರೆ ಕರಾವಳಿ ಕರ್ನಾಟಕದ ವ್ಯಾಪಾರೀ ಸಮುದಾಯಗಳ ಪಾತ್ರ ವ್ಯತಿರಿಕ್ತವಾಗಿದೆ. ವಿವಿಧ ಕಾಲಘಟ್ಟಗಳಲ್ಲಿ ಶೋಷಕರ ಪರ ಪಾತ್ರವಹಿಸಿದ ವ್ಯಾಪಾರಿ ಸಮುದಾಯ ಈ ದಂಗೆಯ ಸಂದರ್ಭದಲ್ಲಿಯೂ ದಂಗೆಯ ವಿರುದ್ಧವಾಗಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರಭುತ್ವದ ಪರ ಪಾತ್ರವಹಿಸಿದ್ದಾರೆ. ಬಂಟ್ವಾಳದಲ್ಲಿ ಪ್ರಸಿದ್ಧ ವ್ಯಾಪಾರಿಯೂ ಅಗರ್ಭ ಭೂಮಾಲಕನೂ ಆಗಿದ್ದ 'ರಂಗಬಾಳಿಗ' ಎಂಬ ವ್ಯಾಪಾರಿಯೂ ಮಂಗಳೂರಿನಲ್ಲಿ ದಂಗೆಕೋರರಿಂದ ಬ್ರಿಟಿಷ್ ಅಧಿಕಾರಿಗಳು ಮತ್ತು ಸೈನಿಕರು ತಪ್ಪಿಸಿಕೊಳ್ಳಲು ಸಹಕರಿಸಿದ್ದಾನೆ. ಈ ವ್ಯಕ್ತಿ ಜಿಲ್ಲೆಯಲ್ಲೇ ಹೆಸರುವಾಸಿಯಾದ ವ್ಯಾಪಾರಿಯಾಗಿದ್ದಾನೆ. ಬಂಟ್ವಾಳದಲ್ಲಿ ಕೊಂಕಣಿ ಸಮುದಾಯವು ದಂಗೆಯ ಸಮಯದಲ್ಲಿ ರೈತರ ಸಂಕಷ್ಟಗಳ ಲಾಭವನ್ನು ಗಳಿಸಿದರೆಂದೂ ಹೇಳಲಾಗುತ್ತಿದೆ. ಮೌಖಿಕ ದಾಖಲೆಗಳ ಪ್ರಕಾರ ಬಂಟ್ವಾಳದ ಅಗರ್ಭ ವ್ಯಾಪಾರಿ ಸಮುದಾಯ ದಂಗೆಕೋರರುಗಳ ಬಗ್ಗೆ ಕೆಟ್ಟ ಅಶ್ಲೀಲ ಭಾಷೆಯಲ್ಲಿ ಹೀಯಾಳಿಸಿರುವಂತಹ ಮಾತುಗಳು ಈಗಲೂ ಪ್ರಚಲಿತದಲ್ಲಿದೆ. ಇದೇ ರೀತಿ ದಂಗೆಯಲ್ಲಿ ಭಾಗವಹಿಸಿದ ನಂದಾವರದ ಅರಸನ ಬಗ್ಗೆಯೂ ಇಂತಹುದೇ ಕೆಟ್ಟ ಅಪಪ್ರಚಾರ ಮೌಖಿಕ ಪರಂಪರೆಯಲ್ಲಿದೆ. ನಂದರಸನ ಬದುಕು ನರಿ, ನಾಯಿಯ ಪಾಲಾಯಿತು ಎಂದು ದಂಗೆಯಲ್ಲಿ ಭಾಗವಹಿಸಿದ್ದರಿಂದ ಗತಿಗೋತ್ರವಿಲ್ಲದೆ ಸರ್ವನಾಶವಾಯಿತು ಎಂದು ಅಪಹಾಸ್ಯ ಮಾಡಲಾಯಿತು. ಸಾಮಾನ್ಯವಾಗಿ ಯಾವುದೇ ಕೆಳವರ್ಗಗಳ ಹೋರಾಟವನ್ನು ಹೀಗಳೆಯುವ ಮೇಲ್ಜಾತಿಗಳು ತಮ್ಮ ಸ್ವಾರ್ಥ ಸಾಧನೆಗಾಗಿ ಅಮರಸುಳ್ಯ ದಂಗೆಯ ಬಗ್ಗೆಯೂ ಇದೇ ರೀತಿ ಅಪಹಾಸ್ಯ ಮಾಡಿರುವುದನ್ನು ಗಮನಿಸಬಹುದು. ಜಿಲ್ಲೆಯ ಪ್ರಸಿದ್ಧ ವ್ಯಾಪಾರಿ ಸಮುದಾಯವಾಗಿದ್ದ ಕೊಂಕಣಿ ಸಮುದಾಯ, ಕ್ರಿಶ್ಚಿಯನ್ ಸಮುದಾಯ ಈ ಹೋರಾಟವನ್ನು ವಿರೋಧಿಸುವುದು ಸಹಜವಾಗಿತ್ತು. ಏಕೆಂದರೆ ಬ್ರಿಟಿಷರ ವಾಣಿಜ್ಯ ಮತ್ತು ಆರ್ಥಿಕ ತೆರಿಗೆ ನೀತಿಗಳಿಂದ ಈ ಸಮುದಾಯಕ್ಕೆ ಸಾಕಷ್ಟು ಪ್ರಯೋಜನವಾಗಿತ್ತು.

ಬಾಸೆಲ್ ಮಿಶನ್ ಸಂಸ್ಥೆಯು ತನ್ನ ಅಸ್ತಿತ್ವದ ಪ್ರಾರಂಭದಿಂದಲೇ ಬ್ರಿಟಿಷರೊಂದಿಗೆ ಹತ್ತಿರದ ಸಂಬಂಧ ಮತ್ತು ಗೆಳೆತನವನ್ನು ಹೊಂದಿತ್ತು. ಇದು ಸಹಜವಾಗಿಯೇ ಎಲ್ಲಾ ತರದ ಸರಕಾರಿ ವಿರೋಧಿ ಕಾರ್ಯಕ್ರಮಗಳನ್ನು ವಿರೋಧಿಸುತ್ತಿತ್ತು (ವಿಲ್ಸನ್ ಪ್ರಭಾಕರ್ ೧೯೮೮:೨೯೪). ೧೮೩೭ ರ ಅಮರಸುಳ್ಯ

ದಂಗೆಯಲ್ಲಿ ಪ್ರಜ್ಞಾ ಪೂರಕವಾಗಿ ಬ್ರಿಟಿಷರ ಪರವಾಗಿ ನಿಂತು ಸಹಕರಿಸಿದರು. ಇದಕ್ಕೆ ಪ್ರತಿಫಲವಾಗಿ ಜಿಲ್ಲಾ ಕಲೆಕ್ಟರ್‌ರವರು ಉಡುಗೊರೆಯ ರೂಪದಲ್ಲಿ ಬಾಸೆಲ್ ಮಿಶನ್‌ಗೆ ನೆಲೆಯೂರಲು ಭೂಮಿಯನ್ನು ನೀಡಿತ್ತು (ವಿಲ್ಸನ್ ಪ್ರಭಾಕರ್ ೧೯೮೮:೨೯೩). ಬಾಸೆಲ್ ಮಿಶನ್ ಸಂಸ್ಥೆಯಂತೂ ನೇರವಾಗಿ ಈ ದಂಗೆಯನ್ನು ವಿರೋಧಿಸಿ ಬ್ರಿಟಿಷರೊಂದಿಗೆ ಸಹಕರಿಸಿದ ದಾಖಲೆಗಳಿವೆ. ಈ ರೀತಿ ವ್ಯಾಪಾರಿ ಸಮುದಾಯಗಳು ಮತ್ತು ಬಾಸೆಲ್ ಮಿಶನ್‌ನಂತಹ ಸಂಸ್ಥೆಗಳು ಅಮರಸುಳ್ಯ ದಂಗೆಯಲ್ಲಿ ಜನಸಾಮಾನ್ಯರ ವಿರುದ್ಧವಾಗಿ ಬ್ರಿಟಿಷ್ ಪ್ರಭುತ್ವಕ್ಕೆ ಬೆಂಗಾವಲಾಗಿ ಕಾರ್ಯನಿರ್ವಹಿಸಿದ್ದಾರೆ.[೧೪]

ಆದುದರಿಂದ ಟಿಪ್ಪುವಿನ ಮರಣೋತ್ತರ ಕರಾವಳಿ ಕರ್ನಾಟಕದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಜಾರಿಗೆ ತಂದ ಜನವಿರೋಧಿ ಆರ್ಥಿಕ, ವಾಣಿಜ್ಯ ಮತ್ತು ಕೃಷಿ ನೀತಿಗಳ ವಿರುದ್ಧ ವಿವಿಧ ಹಂತಗಳಲ್ಲಿ ಪ್ರತಿಭಟನೆಗಳು ನಡೆಯಿತು. ಪ್ರಾರಂಭದಲ್ಲಿ ನೋ ಟ್ಯಾಕ್ಸ್ ಪೇಮೆಂಟ್ ಎಂಬ ಮೌನ ಪ್ರತಿಭಟನೆ ಸುಮಾರು ೨೦ ವರ್ಷಗಳ ಕಾಲಾವಧಿ ನಡೆಯಿತು. ಅನಂತರ ಮೂವತ್ತರ ದಶಕದಲ್ಲಿ ಕೂಟ ಬಂಡಾಯ ಎಂಬ ರೈತಾಪಿ ವರ್ಗದ ಚಳುವಳಿ ನಡೆಯಿತು. ಈ ಚಳುವಳಿಗಳು ಅಹಿಂಸಾತ್ಮಕ ನೆಲೆಗಟ್ಟನ್ನು ಹೊಂದಿತ್ತು. ಆದರೂ ಸಹ ಬ್ರಿಟಿಷರಿಗೆ ನೇರ ಸವಾಲನ್ನು ಒಡ್ಡಿ ಹಲವಾರು ರೀತಿಯ ರಿಯಾಯಿತಿಗಳನ್ನು ತೆರಿಗೆ ಪರಿಷ್ಕರಣೆಗಳನ್ನು ಈಡೇರಿಸುವಲ್ಲಿ ಯಶಸ್ವಿಯಾಯಿತು. ಮುಂದುವರಿದು ನಡೆದ ಅಮರ ಸುಳ್ಯ ದಂಗೆ ಭಾರತದ ಪ್ರಪ್ರಥಮ ಸ್ವಾತಂತ್ರ್ಯ ಹೋರಾಟಕ್ಕಿಂತ ೨೦ ವರ್ಷದ ಮೊದಲೇ ಕರಾವಳಿ ಕರ್ನಾಟಕದಲ್ಲಿ ನಡೆದು ಬ್ರಿಟಿಷ್ ಅಧಿಕಾರವನ್ನು ಕೆಲದಿನಗಳ ಕಾಲ ಪದಚ್ಯುತಗೊಳಿಸಿ ರೈತಾಪಿ ಸಮುದಾಯದ ತಾತ್ಕಾಲಿಕ ಸರಕಾರವನ್ನು ಅಸ್ತಿತ್ವಕ್ಕೆ ತರಲು ಸಾಧ್ಯವಾದಂತಹ ಹಿಂಸಾತ್ಮಕ ಪ್ರತಿರೋಧವಾಗಿದೆ.

ಟಿಪ್ಪುವಿನ ಮರಣೋತ್ತರದ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನೆಲೆಗಟ್ಟು ಈ ಮೊದಲಿನ ೧೬, ೧೭ನೇ ಶತಮಾನದಲ್ಲಿ ಇದ್ದ ಸ್ವರೂಪದಲ್ಲಿ ಇರಲಿಲ್ಲ. ಬದಲಾಗಿ ರೈತಾಪಿ ಜನರ ಪ್ರತಿರೋಧ ಎಂಬ ಹೊಸ ಸ್ವರೂಪದಲ್ಲಿ ನಡೆದಿದೆ. ಇದಲ್ಲದೆ ಅಮರ ಸುಳ್ಯ ದಂಗೆಯಂತಹ ಪಾಳೆಯಗಾರಿ ಸಂಬಂಧದ ಹಿಂಸಾತ್ಮಕ ಸಂಘರ್ಷದಲ್ಲಿ ವಾಣಿಜ್ಯೋದ್ಯಮದ ಹಿತಾಸಕ್ತಿ ಅಭಿವ್ಯಕ್ತಗೊಂಡಿದೆ.

೧೮ ನೇ ಶತಮಾನದ ಪ್ರಥಮಾರ್ಧದಲ್ಲಿ ಹೊಸ ಸಾಮಾಜಿಕ ಮತ್ತು ಆರ್ಥಿಕ ಶಕ್ತಿಗಳ ಉಗಮ ಹೊಸ ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳನ್ನು ರೂಪಿಸಿತು. ಈ ಸಂಬಂಧ ಶೋಷಣೆಯ ಮೂಲವನ್ನು ಮತ್ತಷ್ಟು ವಿಸ್ತಾರಗೊಳಿಸಿತು. ಬ್ರಿಟಿಷರ ವ್ಯಾಪಾರ ಮತ್ತು ವಾಣಿಜ್ಯದ ಧೋರಣೆಗಳು, ಆರ್ಥಿಕ ಅಭಿವೃದ್ಧಿಯನ್ನು ವಿಸ್ತರಿಸಲು ಸಹಕಾರಿಯಾಗುವ ಬದಲು ಕರಾವಳಿ ಕರ್ನಾಟಕದಲ್ಲಿ ರೈತಾಪಿ ಜನರನ್ನು ಹಿಂಡಿ ಹಿಪ್ಪೆ ಮಾಡಿತು.

ಗ್ರಾಮೀಣ ಕರಕುಶಲ ಕೈಗಾರಿಕೆ, ಕೃಷಿ ಆಧಾರಿತ ಗುಡಿ ಕೈಗಾರಿಕೆಗಳು ಉದಾಹರಣೆಗೆ ನಾರಿನ ಉತ್ಪನ್ನಗಳ ತಯಾರಿಕೆ, ಎಣ್ಣೆ ಉತ್ಪಾದನೆ, ಬೆಲ್ಲದ ತಯಾರಿಕೆ, ಶೇಂದಿ ತಯಾರಿಕೆ, ಉಪ್ಪು ತಯಾರಿಕೆ ಇವುಗಳಿಗೆ ಹೊಸ ಸ್ವರೂಪ ದೊರೆಯಿತು. ಈ ಉತ್ಪನ್ನಗಳು ಮುಂಬೈ ಮತ್ತಿತರೆ ದೇಶದ ಭಾಗಗಳಿಗೆ ರಫ್ತು ಆಗುತ್ತಿತ್ತು. ಅಮ್ಮಿದೀಪ ದ್ವೀಪ ಸಮೂಹಗಳಿಂದ ತೆಂಗಿನ ಉತ್ಪನ್ನಗಳು ಮಂಜಿಯ ಮೂಲಕ

ಮಂಗಳೂರು ಬಂದರಿಗೆ ಬರುತ್ತಿದ್ದವು. ಸಹಜವಾಗಿಯೇ ಈ ಮೊದಲಿನ ಶತಮಾನದಲ್ಲಿ ಇದ್ದ ವ್ಯಾಪಾರ ವ್ಯವಹಾರದ ಸ್ವರೂಪ ಬ್ರಿಟಿಷ್ ಆಳ್ವಿಕೆಯ ಈ ಶತಮಾನದಲ್ಲಿ ಹೊಸ ಮಜಲನ್ನು ಪ್ರವೇಶಿಸಿತು. ಸಾಂಪ್ರದಾಯಿಕ ಸಾಂಬಾರು ಪದಾರ್ಥಗಳ ಮತ್ತು ಅಕ್ಕಿಯಂತಹ ರಫ್ತಿನ ಉತ್ಪನ್ನಗಳೊಂದಿಗೆ ಈ ಹೊಸ ಉತ್ಪನ್ನಗಳು ಸೇರಿಕೊಂಡು ಬಂದರನ್ನು ಆಧಾರಿಸಿದ ರಫ್ತುಗಳಿಗೆ ವಿಶೇಷ ಸ್ಥಾನಮಾನ ದೊರೆಯಿತು (ಶ್ಯಾಮ್ ಭಟ್ ೧೯೯೮:೧೯೬).

ಇದರೊಂದಿಗೆ ಮಂಗಳೂರು ಮತ್ತು ಬಂಟ್ವಾಳ ಎರಡು ಅತೀ ಮುಖ್ಯ ವ್ಯಾಪಾರಿ ಕೇಂದ್ರವಾಗಿ ಪ್ರವರ್ಧಮಾನಕ್ಕೆ ಬಂತು. ಮೈಸೂರು ಮತ್ತಿತರೆ ಮಲೆನಾಡಿನ ಪ್ರದೇಶಗಳಿಂದ ಬರುತ್ತಿದ್ದ ವಸ್ತುಗಳನ್ನು ಬಂಟ್ವಾಳದಲ್ಲಿ ವರ್ತಕರು ಕ್ರಯಕ್ಕೆ ಪಡೆಯುತ್ತಿದ್ದರು. ಅಲ್ಲಿಂದ ಅನಂತರ ಅದು ನದಿಯ ಮೂಲಕ ಮಂಗಳೂರನ್ನು ತಲುಪುತ್ತಿತ್ತು. ಬಂಟ್ವಾಳವು ಈ ಅಧ್ಯಾಯದ ಅವಧಿಯಲ್ಲಿ ಕಾಫಿ ವ್ಯಾಪಾರದ ಕೇಂದ್ರವಾಗಿತ್ತು. ಚಿಕ್ಕಮಗಳೂರು, ಮಡಿಕೇರಿ, ಕೊಡಗುಗಳಿಂದ ಕಾಫಿಯು ಬಂಟ್ವಾಳಕ್ಕೆ ಬರುತ್ತಿತ್ತು. ಅಲ್ಲಿ ವರ್ತಕರು ವಿಕ್ರಯಿಸಿ ರಫ್ತಿಗಾಗಿ ಮಂಗಳೂರು ಬಂದರಿಗೆ ತರುತ್ತಿದ್ದವು. ಮಂಗಳೂರು ಘಟ್ಟ ಪ್ರದೇಶಕ್ಕೆ ತಾಗಿಕೊಂಡ ಪ್ರದೇಶಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಇದ್ದ ಹವ್ಯಕ ಬ್ರಾಹ್ಮಣರು ಅಡಿಕೆ ಕೃಷಿ ಮತ್ತು ಇತರೆ ತೋಟದ ಬೆಳೆಗಳಲ್ಲಿ ಪರಿಣತಿಯನ್ನು ಹೊಂದಿದ್ದರು. ಗೌಡ ಸಾರಸ್ವತ ಸಮುದಾಯ ಅಥವಾ ಕೊಂಕಣಿ ಸಮುದಾಯ ವ್ಯಾಪಾರಿ ಸಮುದಾಯವಾಗಿ ಪ್ರಸಿದ್ಧಿಗೆ ಬಂದಿದ್ದರು. ಅದೇ ರೀತಿ ಮಧ್ಯಂತರ ಹಣ ಲೇವಾದೇವಿಗಾರರಾಗಿಯೂ ಇವರು ಪ್ರಖ್ಯಾತರಾಗಿದ್ದರು.

೧೮ ನೇ ಶತಮಾನದ ಕೊನೆಯರ್ಧದಲ್ಲಿ ಬ್ರಿಟಿಷರು ನಿರಂತರ ಯುದ್ಧದಲ್ಲಿ ಭಾಗವಹಿಸಿದರು. ಈ ರೀತಿಯ ಯುದ್ಧಗಳು ಮತ್ತು ಸಾರ್ವಭೌಮತೆಯ ಮಹತ್ತರ ಪರಿಣಾಮಗಳು ಬ್ರಿಟಿಷ್ ವಾಣಿಜ್ಯೋದ್ಯಮದಲ್ಲಿ ಯಜಮಾನಿಕೆ ನಡೆಸಲು ಸಾಧ್ಯವಾಯಿತು. ಅದರ ಕಾರಣದಿಂದ ನೇರವಾಗಿ ಮಾರುಕಟ್ಟೆಗಳನ್ನು ನಿಯಂತ್ರಿಸಿದರು. ಸ್ಥಳೀಯ ಭಾರತೀಯ ಸ್ವರೂಪದ ವ್ಯಾಪಾರ ವ್ಯವಹಾರವನ್ನು ಬದಲಿಸಿ ಅದರ ಬದಲು ಸಾಲ ಸೌಲಭ್ಯ ಆಧಾರಿತ ವಾಣಿಜ್ಯ ನೀತಿಯನ್ನು ಪ್ರಾಯೋಗಿಕವಾಗಿ ಜಾರಿಗೆ ತಂದರು (ಆಸಿಯಾ ಸಿದ್ದಿಕ್ ೧೯೯೫:೫).

ಆಶಿಮ್ ದಾಸ್ ಗುಪ್ತಾರವರ ಪ್ರಕಾರ ಭಾರತದ ಕರಾವಳಿ ತೀರ ಆಧಾರಿತ ಅಂತರಾಷ್ಟ್ರೀಯ ವ್ಯಾಪಾರವನ್ನು ಬುಲಿಯನ್ (ಚಿನ್ನ) ಆಧಾರಿತ ವ್ಯಾಪಾರವನ್ನಾಗಿ ಪೂರ್ಣ ಪ್ರಮಾಣದಲ್ಲಿ ಪರಿವರ್ತಿಸಿದರು.

ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರ ಏಕಸ್ವಾಮ್ಯವು ಚಾರ್ಟರ್ ಆ್ಯಕ್ಟ್ ೧೮೧೩ ರ ಮುಖಾಂತರ ಭಾರತದ ಮಟ್ಟಿಗೆ ಕೊನೆಗೊಂಡು ಕೇವಲ ಚೀನಾ ದೇಶಕ್ಕೆ ಮಾತ್ರ ಅನ್ವಯಿಸಲ್ಪಟ್ಟಿತ್ತು (ಆಸಿಯಾ ಸಿದ್ದಿಕ್ ೧೯೯೫:೧೧). ಇದರ ಪರಿಣಾಮಗಳು ಕರಾವಳಿ ಕರ್ನಾಟಕದ ವ್ಯಾಪಾರದ ಮೇಲೆ ಇದು ಯಾವ ರೀತಿಯಲ್ಲೂ ಪರಿಣಾಮ ಬೀರಲಿಲ್ಲ.

ರಾಜಕೀಯ ಅಧಿಕಾರದ ಮೂಲಕ ೧೭೯೯ ರ ನಂತರ ಕರಾವಳಿ ಕರ್ನಾಟಕದಲ್ಲಿ ತನ್ನ ಹಿಡಿತಕ್ಕೆ ತೆಗೆದುಕೊಂಡ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ವಾಣಿಜ್ಯೋದ್ಯಮ ಹಾಗೂ ಸಂಪತ್ತನ್ನು ತನ್ನ

ವಶಕ್ಕೆ ಪಡೆಯುವ ಮೂಲಕ ಅನಂತರದ ವರ್ಷಗಳಲ್ಲಿ ಅದು ವ್ಯಾಪಾರಿ ಕೇಂದ್ರದ ಚಾರಿತ್ರಿಕ ಬಿಂದು ಆಯಿತು.

ಸರಿಸುಮಾರು ವಸಾಹತುಶಾಹಿಯ ಪ್ರಾರಂಭದ ಏಳು ದಶಕಗಳ ಬೆಳವಣಿಗೆಯನ್ನು ಆಸಿಯಾ ಸಿದ್ದಿಕ್‌ರವರು 'ಟ್ರೇಡ್ ಆ್ಯಂಡ್ ಫೈನಾನ್ಸ್ ಇನ್ ಕೊಲೊನಿಯಲ್ ಇಂಡಿಯಾ ೧೭೫೦-೧೮೬೦' ಈ ಕೃತಿಯಲ್ಲಿ ಪ್ರತಿಪಾದಿಸಿದ ಅಂಶಗಳನ್ನು ಕರಾವಳಿ ಕರ್ನಾಟಕಕ್ಕೂ ಅನ್ವಯಿಸಬಹುದು.

ಭಾರತದಲ್ಲಿ ನಿರ್ದಿಷ್ಟವಾಗಿ ೧೮ನೇ ಶತಮಾನದ ಮಧ್ಯ ಭಾಗದ ನಂತರದ ಸಾಮ್ರಾಜ್ಯಶಾಹಿ ವಿಸ್ತರಣೆಯ ಸಂದರ್ಭದಲ್ಲಿ ವ್ಯಾಪಾರ ವ್ಯವಹಾರವನ್ನು ಅಧ್ಯಯನ ನಡೆಸಿದಾಗ ವಿದೇಶೀ ವ್ಯಾಪಾರ ಅದರಲ್ಲೂ ಮುಖ್ಯವಾಗಿ ಬ್ರಿಟನ್‌ನೊಂದಿಗಿನ ವ್ಯಾಪಾರವೇ ಮೇಲುಗೈ ಹೊಂದಿದ್ದಿತ್ತು. ಮೂಲಭೂತವಾಗಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಯು ಒಂದು ವ್ಯಾಪಾರ ವ್ಯವಹಾರ ಕಂಪನಿಯಾಗಿ ಬೆಳೆದು ಬಂದು ಭೂಭಾಗದ ವಿಸ್ತರಣೆ ಮಾಡುತ್ತಾ ಒಂದು ವಿದೇಶೀ ಆಡಳಿತಾತ್ಮಕ ಸಂಸ್ಥೆಯಾಯಿತು. ವ್ಯಾಪಾರ ವ್ಯವಹಾರದಲ್ಲಿ ತೊಡಗಿಸಿಕೊಂಡಿರುವ ಬಂಡವಾಳ ಮತ್ತು ಮಾರುಕಟ್ಟೆ ಇವುಗಳು ಭಾರತದ ಒಳಗೆ ಮತ್ತು ಹೊರಗೆ ವಾಣಿಜ್ಯೋದ್ಯಮಿಗಳ ಮತ್ತು ಕೈಗಾರಿಕೋದ್ಯಮಿಗಳ ಹೆಚ್ಚಿನ ಕಾಳಜಿಯ ವಿಷಯವಾಗಿ ಮುಂದುವರಿಯಿತು. ಭಾರತದ ಸಂಕೀರ್ಣಮಯ ವಿಶಾಲ ಭೂ ಪ್ರದೇಶಗಳ ಜಾಲವನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿತ್ತು. ಆಮೇಲೆ ಅದು ಒಂದೆಡೆಯಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಹಿತಾಸಕ್ತಿಯನ್ನು ಕಾಯುವುದು ಹಾಗೂ ಮತ್ತೊಂದೆಡೆಯಲ್ಲಿ ವ್ಯಾಪಾರಿಗಳ ವಾಣಿಜ್ಯ ಉದ್ದಿಮೆಗಳ ಈಡೇರಿಕೆಗಾಗಿ ತನ್ನ ವಸಾಹತುಶಾಹಿ ಶೋಷಣೆಯನ್ನು ಉಪಯೋಗಿಸಿಕೊಂಡಿತ್ತು.

ಟಿಪ್ಪುವಿನ ಮರಣೋತ್ತರ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕವು ಅಖಿಲ ಭಾರತ ವ್ಯಾಪ್ತಿಯಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ನಡೆಸಿದ ವಾಣಿಜ್ಯಾತ್ಮಕ ಕೃಷಿ ಸಂಬಂಧದ ಬೆಳವಣಿಗೆಗಳಿಗೆ ಈಡಾಯಿತು. ಈಸ್ಟ್ ಇಂಡಿಯಾ ಕಂಪೆನಿಯು ೧೮೧೩ ರಲ್ಲಿ ಪ್ರಾರಂಭಿಸಿದ ಇಂಡಿಯಾದೊಂದಿಗಿನ ಮುಕ್ತ ವ್ಯಾಪಾರವು ಅನಂತರ ಅತ್ಯಲ್ಪ ಕಾಲದಲ್ಲಿಯೇ ಮೂರು ಪಟ್ಟಿಗೂ ಹೆಚ್ಚಾಯಿತು. ಅಷ್ಟೇ ಅಲ್ಲ ವ್ಯಾಪಾರದ ಇಡೀ ಸ್ವರೂಪವೇ ಬದಲಾಯಿತು. ೧೮೧೩ ರವರೆಗೆ ಇಂಡಿಯಾವು ಪ್ರಧಾನವಾಗಿ ರಫ್ತು ಮಾಡುವ ದೇಶವಾಗಿದ್ದಿತ್ತು. ಈಗ ಅದು ಆಮದು ಮಾಡಿಕೊಳ್ಳುವ ದೇಶವಾಗಿದೆ ಎಂದು ಕಾರ್ಲ್ ಮಾರ್ಕ್ಸ್‌ರವರು ಹೇಳುತ್ತಾರೆ. ಆದರೆ ಕರಾವಳಿ ಕರ್ನಾಟಕಕ್ಕೆ ಸಂಬಂಧಿಸಿ ಈ ಹೇಳಿಕೆಯು ವಾಸ್ತವವಲ್ಲ. ಆದರೆ ಉಳಿದಂತೆ ಈಸ್ಟ್ ಇಂಡಿಯಾ ಕಂಪೆನಿಯು ಜಾರಿಗೊಳಿಸಿದ ರೈತವಾರಿ ಪದ್ಧತಿ ವಿಪರೀತ ಭೂಕಂದಾಯ ನೀತಿ ಹಾಗೂ ವಿವಿಧ ಏಕಸ್ವಾಮ್ಯ ನೀತಿಗಳಿಂದ ರೈತಾಪಿ ಜನತೆ ತೀವ್ರ ಸಂಕಷ್ಟಕ್ಕೆ ಒಳಗಾದರು ಎಂಬುದು ಬಹಳಷ್ಟು ಸ್ಪಷ್ಟವಾಗಿದೆ. ತೆರಿಗೆಯನ್ನು ವಸೂಲು ಮಾಡಲು ಹಿಂಸಾಕೃತ್ಯಗಳನ್ನು ಮಾಡುತ್ತಿದ್ದರು ಎಂಬುದರ ಬಗ್ಗೆ ೧೮೫೫ ರಲ್ಲಿ ಲಂಡನ್‌ನಲ್ಲಿ ಈ ಬಗ್ಗೆ ತನಿಖೆಗಾಗಿ ರಚಿಸಲ್ಪಟ್ಟ ಆಯೋಗದ ವರದಿಯನ್ನು ಕಾರ್ಲ್ ಮಾರ್ಕ್ಸ್‌ರವರು ತನ್ನ ಲೇಖನವೊಂದರಲ್ಲಿ ಕೆಳಕಂಡಂತೆ ವಿವರಿಸಿದ್ದಾರೆ. ಇಲ್ಲಿ ಕೆನರಾ ತಾಲೂಕಿನ ನಿವಾಸಿಗಳು ಸಲ್ಲಿಸಿದ ಮನವಿಯೊಂದನ್ನು ಉಲ್ಲೇಖಿಸಲಾಗಿದೆ. ಆ ಮನವಿಯಲ್ಲಿ ಇಲ್ಲಿಯ ನಿವಾಸಿಗಳು ಈ ಮೊದಲು ಹಲವಾರು ಬಾರಿ ಸರಕಾರಕ್ಕೆ ದೂರು ನೀಡಿದರೂ ಅದರಿಂದ ಯಾವುದೇ ಉದ್ದೇಶವು

ಸಾಧನೆಯಾಗಲಿಲ್ಲವೆಂದು ಆಯೋಗಕ್ಕೆ ಮನವಿಯಲ್ಲಿ ವಿವರಿಸುತ್ತಾ ಇಲ್ಲಿಯ ಪರಿಸ್ಥಿತಿಗಳ ಬಗ್ಗೆ ದೀರ್ಘ ವಿವರಣೆ ನೀಡಿದ್ದಾರೆ.

> ನಾವು ಶುಷ್ಕ ಹಾಗೂ ತರಿ ಭೂಮಿಗಳಲ್ಲಿ ಗುಡ್ಡ ಹಾಗೂ ಇಳಿಜಾರು ಪ್ರದೇಶಗಳಲ್ಲಿ, ಕಾಡು ಭೂಮಿಗಳಲ್ಲೂ ಸಾಗುವಳಿ ಮಾಡುತ್ತಿದ್ದಾಗ ಸಣ್ಣ ಪ್ರಮಾಣದ ಕಂದಾಯ ಕೊಡಬೇಕೆಂದು ನಿಗದಿ ಮಾಡಲಾಗಿದ್ದಿತ್ತು. ರಾಣಿ, ಬಹದ್ದೂರ್ ಹಾಗೂ ಟಿಪ್ಪೂರವರ ಆಳ್ವಿಕೆಗಳಲ್ಲಿ ನಾವು ಸುಖ ಶಾಂತ ಜೀವನ ನಡೆಸುತ್ತಿದ್ದೇವು. ಆಗಿನ ಸಿರ್ಕಾರ್ ಅಧಿಕಾರಿಗಳು ನಮ್ಮ ಮೇಲೆ ಮತ್ತಷ್ಟೂ ತೆರಿಗೆ ಹಾಕಿದರು. ಆದರೆ ನಾವು ಅದನ್ನು ಯಾವತ್ತೂ ಕೊಡಲೇ ಇಲ್ಲ. ಕಂದಾಯ ವಸೂಲು ಮಾಡುವಾಗ ನಮಗೇನೂ ಯಾವ ರೀತಿಯ ಕಷ್ಟಕೋಟಲೆಗಳಿಗೂ, ದಬ್ಬಾಳಿಕೆಗಳಿಗೂ, ಹಿಂಸೆಗೂ ಗುರಿಪಡಿಸುತ್ತಿರಲಿಲ್ಲ. ಆದರೆ ಈ ದೇಶವನ್ನು ಗೌರವಾರ್ಹ ಕಂಪೆನಿಗೆ ಒಪ್ಪಿಸಿದ ಮೇಲೆ ಅವರು ನಮ್ಮಿಂದ ಹಣ ಸುಲಿಯಲು ನಾನಾ ರೀತಿಯ ಯೋಜನೆಗಳನ್ನು ಮಾಡಿದರು. ಈ ದುಷ್ಟ ಗುರಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರ ಹೊಸ ಹೊಸ ನಿಯಮಗಳನ್ನು ಆವಿಷ್ಕರಣ ಮಾಡಿದರು. ಕಾನೂನುಗಳನ್ನು ರಚಿಸಿದರು ಮತ್ತು ಅದನ್ನು ಜಾರಿಗೆ ತರುವಂತೆ ನಮ್ಮ ಕಲೆಕ್ಟರ್‌ಗಳಿಗೂ, ಸಿವಿಲ್ ಜಡ್ಜ್‌ಗಳಿಗೂ ನಿರ್ದೇಶನ ನೀಡಿದರು. ಆದರೆ ಆಗಿನ ಕಲೆಕ್ಟರ್‌ಗಳೂ ಅವರ ಅಧೀನ ದೇಶಿಯ ಅಧಿಕಾರಿಗಳೂ ಕೆಲವು ಕಾಲ ನಮ್ಮ ತೊಂದರೆಗಳ ಕಡೆಗೆ ಸೂಕ್ತ ಗಮನ ನೀಡಿ ನಮ್ಮ ಇಚ್ಛೆಗೆ ಅನುಗುಣವಾಗಿ ನಡೆದುಕೊಂಡರು. ಇದಕ್ಕೆ ವಿರುದ್ಧವಾಗಿ ಈಗಿನ ಕಲೆಕ್ಟರ್‌ಗಳೂ, ಅವರ ಅಧೀನ ಅಧಿಕಾರಿಗಳೂ ಹೇಗಾದರು ಮಾಡಿ ಬಡ್ತಿ ಪಡೆದುಕೊಳ್ಳುವ ಹಂಬಲದಿಂದ ಜನರ ಒಟ್ಟಿನ ಹಿತ ಹಾಗೂ ಸಂಕ್ಷೇಮವನ್ನು ಉಪೇಕ್ಷಿಸಿ ನಮ್ಮ ಕಷ್ಟ ಕಾರ್ಪಣ್ಯಗಳನ್ನು ಕಿವಿಯ ಮೇಲೂ ಹಾಕಿಕೊಳ್ಳದೇ ನಮ್ಮನ್ನು ನಾನಾ ರೀತಿಯ ದಬ್ಬಾಳಿಕೆಗಳಿಗೆ ಗುರಿಪಡಿಸಿದ್ದಾರೆಂದೂ ವಿವರವಾಗಿ ತಿಳಿಸಲಾಗಿದೆ (ಮಾರ್ಕ್ಸ್ ೧೯೮೭:೭,೯೮).

ಮೇಲಿನ ಉಲ್ಲೇಖದಿಂದ ಟಿಪ್ಪುವಿನ ಕಾಲಘಟ್ಟದ ಧೋರಣೆಗಳ ಬಗ್ಗೆ ಮಾತ್ರವಲ್ಲದೆ ಕಂಪೆನಿ ಸರಕಾರದ ಹಿಂಸಾತ್ಮಕ ಧೋರಣೆಗಳ ಬಗ್ಗೆಯೂ ವಿವರಣೆಯನ್ನು ನೀಡುತ್ತದೆ. ಈ ರೀತಿ ಈ ಅವಧಿ ತೀವ್ರ ದಬ್ಬಾಳಿಕೆಯ ಕಾಲಘಟ್ಟವಾಗಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಅಪಾರ ಪ್ರಮಾಣದ ಆದಾಯವನ್ನು ಸೂರೆಗೈದಿತು.

ಇದರ ಒಟ್ಟಾರೆ ಫಲಿತಾಂಶಗಳೆಂದರೆ ಬ್ರಿಟಿಷ್ ಅಧಿಕಾರದ ಕ್ರೋಡೀಕರಣ ಮತ್ತು ರೈತಾಪಿ ಸಮುದಾಯದ ಮೇಲೆ ನಡೆಸಿದ ನಿರ್ದಾಕ್ಷಿಣ್ಯ ಶೋಷಣೆಗಳ ಪರಿಣಾಮವಾಗಿ ವಾಣಿಜ್ಯೋದ್ಯಮ ತೀವ್ರ ಗತಿಯಲ್ಲಿ ಬೆಳವಣಿಗೆಗೊಂಡಿತ್ತು. ಇದರಿಂದಾಗಿ ಬಂಡವಾಳ ಕ್ರೋಡೀಕರಣವಾಯಿತು. ಮುಂದೆ ವಸಾಹತು ಶಾಹಿ ಮತ್ತು ಸಾಮ್ರಾಜ್ಯಶಾಹಿ ಶೋಷಣೆ ತೀವ್ರವಾಯಿತು. ಕರಾವಳಿ ಕರ್ನಾಟಕದಲ್ಲಿ ಎಲ್ಲಾ ರೀತಿಯ ಅನ್ಯಾಯ, ದೌರ್ಜನ್ಯ, ದಬ್ಬಾಳಿಕೆಯ ವಿರುದ್ಧ ಪ್ರತಿರೋಧಗಳು ತೆರಿಗೆ ಪಾವತಿಸದೆ ಇರುವ ಚಳುವಳಿಯ ಮೂಲಕ, ಕೂಟ ಬಂಡಾಯದ ಮೂಲಕ ನಡೆಯಿತು. ೧೮೩೭ರಲ್ಲಿ ಹಿಂಸಾತ್ಮಕವಾದ ಅಮರ ಸುಳ್ಯ ದಂಗೆಯಲ್ಲಿ ಕೆಳ ದಿನಗಳವರೆಗೆ ಬ್ರಿಟಿಷ್ ಅಧಿಕಾರವು ಕರಾವಳಿ ಕರ್ನಾಟಕದಲ್ಲಿ ಪದಚ್ಯುತ ಗೊಂಡರೂ ಮುಂದೆ ಬ್ರಿಟಿಷರು ಇದನ್ನು ಹಿಂಸಾತ್ಮಕವಾಗಿ ಬಗ್ಗು ಬಡಿದರು. ಮುಂದೆ ೨೦ನೇ ಶತಮಾನದ ಗಾಂಧಿಯುಗದವರೆಗೆ ಕರಾವಳಿ ಕರ್ನಾಟಕದಲ್ಲಿ ಯಾವುದೇ ರೀತಿಯ ಹಿಂಸಾತ್ಮಕ ಅಥವಾ ಅಹಿಂಸಾತ್ಮಕ ಪ್ರತಿಭಟನೆಗಳು ಬೆಳೆದು ಬರಲಿಲ್ಲ.

# ಟಿಪ್ಪಣಿಗಳು

೧. ಬ್ರಿಟಿಷರು ಹೈದರಾಲಿ ಮತ್ತು ಟಿಪ್ಪುವಿನ ವಿರುದ್ಧ ವ್ಯಾಪಕವಾದ ಅಪಪ್ರಚಾರಗಳನ್ನು ನಡೆಸಿರುವುದು ಕಂಡುಬರುತ್ತದೆ. ಹೈದರಾಲಿ ಮತ್ತು ಟಿಪ್ಪು ಇವರಿಬ್ಬರೂ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯನ್ನು ಭಾರತದಿಂದ ಹೊರದಬ್ಬಲು ಅವಿರತವಾದ ಪ್ರಯತ್ನವನ್ನು ಮಾಡುತ್ತಿರುತ್ತಾರೆ. ಆದುದರಿಂದ ಸಹಜವಾಗಿಯೇ ಬ್ರಿಟಿಷರು ಇವರಿಬ್ಬರ ವಿರುದ್ಧ ವ್ಯಾಪಕವಾದ ಯೋಜನಾಬದ್ಧವಾ ಅಪಪ್ರಚಾರಗಳನ್ನು ನಡೆಸುತ್ತಾರೆ. ಪ್ರಾರಂಭದಲ್ಲಿ ಹೈದರಾಲಿಯ ಬಗ್ಗೆ ಅವರು ಆತ ಅಷ್ಟೊಂದು ಪ್ರಾಮುಖ್ಯವಲ್ಲದ ಕುಟುಂಬದಲ್ಲಿ ಜನಿಸಿದ್ದವನೆಂದೂ ಹೇಳುತ್ತಾರೆ. ಈ ರೀತಿಯ ಅಪಪ್ರಚಾರದ ಮೂಲ ಉದ್ದೇಶ ಅಂದಿನ ಭಾರತೀಯ ಸಮಾಜದಲ್ಲಿದ್ದ ಸಾಮಾಜಿಕ ಹಿನ್ನೆಲೆಯು ಅಧಿಕಾರ ಚಲಾಯಿಸಲು ಅತೀ ಅವಶ್ಯಕತೆಯಾಗಿತ್ತು. ಆದುದರಿಂದ ಅಂತಹ ಸಾಮಾಜಿಕ ಅಂತಸ್ತು ಹೊಂದಿರದ ವ್ಯಕ್ತಿಯ ವಿರುದ್ಧ ಜನಸಾಮಾನ್ಯರು ಬಂಡಾಯಗೊಳ್ಳಲು ಈ ರೀತಿಯ ಪ್ರಚಾರ ನಡೆಸುತ್ತಾರೆ. ಬ್ರಿಟಿಷರು ಹೈದರಾಲಿಯ ವಿರುದ್ಧ ಹಾಗೂ ಟಿಪ್ಪುವಿನ ವಿರುದ್ಧದ ಅಪಪ್ರಚಾರಗಳು ಆಧಾರರಹಿತ ಎಂದು ಡಚ್ ಚರಿತ್ರೆ ಬರೆದಿರುವ ಮೋನಿಸ್‌ರವರು ತಿಳಿಸುತ್ತಾರೆ. ಇವರ ಕೃತಿ ಡಚ್ ಇನ್ ಮಲಬಾರ್ ಎಂಬುದರಲ್ಲಿ ಬ್ರಿಟಿಷರ ಅಪಪ್ರಚಾರಗಳಿಗೆ ಸಂಬಂಧಿಸಿ ಆತನು ಸತ್ಯಾಸತ್ಯತೆಯ ಬಗ್ಗೆ ತನಿಖೆ ನಡೆಸಿದಾಗ ಅವುಗಳೆಲ್ಲವು ಕೂಡ ದುರುದ್ದೇಶಪೂರಿತ ಆಧಾರರಹಿತ ಅಪಪ್ರಚಾರಗಳು ಎಂದು ಪ್ರಬಲವಾಗಿ ಪ್ರತಿಪಾದಿಸುತ್ತಾನೆ. ಇದೇ ರೀತಿಯಲ್ಲಿ ಟಿಪ್ಪುವಿನಿಂದ ಯುದ್ಧ ಕೈದಿಗಳಾಗಿ ರಾಜ್ಯ ವಿವಿಧ ಜೈಲುಗಳಲ್ಲಿದ್ದ ಬ್ರಿಟಿಷ್ ಸೈನ್ಯಾಧಿಕಾರಿಗಳು ಬಿಡುಗಡೆಗೊಂಡ ನಂತರ ಬರೆದಿರುವಂತಹ ಪುಸ್ತಕಗಳಲ್ಲಿ ಟಿಪ್ಪುವು ಒಬ್ಬ ಮತಾಂಧ, ವಿಕೃತ ಮನೋಭಾವದ ಅಮಾನುಷ ವ್ಯಕ್ತಿ ಮತ್ತು ಕಾಮುಕನೆಂದು ಚಿತ್ರಿಸಿದ್ದಾರೆ. ಕ್ರೈಸ್ತ ಸಮುದಾಯ ಮತ್ತು ನಾಯರ್ ಸಮುದಾಯವನ್ನು ವ್ಯಾಪಕವಾಗಿ ಮತಾಂತರ ಮಾಡಿದ್ದಾನೆಂದು ಹೇಳಲಾಗುತ್ತಿದೆ. ಇವುಗಳ ಹಿಂದೆ ವ್ಯವಸ್ಥಿತ ಹುನ್ನಾರವಿದೆ.

೨. ಮೈಸೂರಿನ ಹೈದರಾಲಿ ಮತ್ತು ಟಿಪ್ಪು ಕಾಲಘಟ್ಟದಲ್ಲಿ ಬ್ರಿಟಿಷರು ಮರಾಠರೊಂದಿಗೆ ಮತ್ತು ಹೈದರಬಾದಿನ ನಿಜಾಮರೊಂದಿಗೆ ಐಕ್ಯ ಒಪ್ಪಂದವನ್ನು ಮಾಡಿಕೊಂಡಿದ್ದರು. ಈ ಮೂರೂ ದಕ್ಷಿಣ ಭಾರತದ ಪ್ರಬಲ ಶಕ್ತಿಗಳು ಬ್ರಿಟಿಷರ ವಿರುದ್ಧ ಎಂದೆಂದೂ ಒಗ್ಗೂಡದಂತೆ ಪ್ರಯತ್ನಿಸುತ್ತಾರೆ. ಇದರಲ್ಲಿ ಯಶಸ್ವಿಯನ್ನು ಕೂಡಾ ಪಡೆಯುತ್ತಾರೆ. ಮುಖ್ಯವಾಗಿ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದ ಹೈದರಾಲಿ ಮತ್ತು ಟಿಪ್ಪುವಿನ ವಿರುದ್ಧ ಐಕ್ಯ ಕೂಟವನ್ನು ರಚಿಸಿ ನಾಲ್ಕು ಆಂಗ್ಲೋ ಮೈಸೂರು ಯುದ್ಧಗಳಲ್ಲಿ ಹೋರಾಡುತ್ತಾರೆ. ಹೈದರಾಲಿ ಟಿಪ್ಪುನೊಂದಿಗೆ ಮರಾಠರೇ ಆಗಲೀ ಅಥವಾ ನಿಜಾಮನೇ ಆಗಲೀ ಒಪ್ಪಂದ ಮಾಡಿಕೊಳ್ಳದಂತೆ ಕ್ರಮವಹಿಸುತ್ತಾರೆ. ಆದರೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಕೇವಲ ರಾಜಕೀಯ ಕಾರಣಕ್ಕಾಗಿ ಮಾತ್ರ ಮರಾಠರು ಮತ್ತು ನಿಜಾಮರೊಂದಿಗೆ ಐಕ್ಯತೆಯನ್ನು ಪ್ರದರ್ಶಿಸುತ್ತಾರೆ.

೩. ಫ್ರಾನ್ಸಿಸ್ ಬುಕಾನನ್ ಬೆಂಗಾಲ್ ಈಸ್ಟ್ ಇಂಡಿಯಾ ಕಂಪೆನಿಯ ಓರ್ವ ಬೋಟನಿಕಲ್ ಅಧಿಕಾರಿಯಾಗಿದ್ದನು. ಲಾರ್ಡ್ ಕಾರ್ನ್‌ವಾಲೀಸ್ ಈತನನ್ನು ಸರಕಾರಿ ಆದೇಶದ ಪ್ರಕಾರ ಟಿಪ್ಪುವಿನ ಮರಣಾನಂತರ ಮದ್ರಾಸ್ ಪ್ರಾಂತೀಯ ಸರಕಾರದ ವ್ಯಾಪ್ತಿಗೆ ಒಳಪಡುವ ಮದ್ರಾಸ್, ಕೆನರಾ, ಮೈಸೂರು ಮತ್ತು ಕೊಡಗುಗಳ ಚಾರಿತ್ರಿಕ, ಸಾಮಾಜಿಕ, ಆರ್ಥಿಕ, ಆಚಾರ – ವಿಚಾರಗಳ ಅಧ್ಯಯನ ನಡೆಸಿ ವರದಿ ನೀಡಲು ನಿಯೋಜಿಸುತ್ತಾನೆ. ಆತನು ಸುಮಾರು ಮೂರು ವರ್ಷಗಳ ಕಾಲ ಮೇಲಿನ ಪ್ರದೇಶಗಳಲ್ಲಿ ವ್ಯಾಪಕವಾಗಿ ಸಂಚಾರ ನಡೆಸಿ ಮಾಹಿಗಳನ್ನು, ದಾಖಲೆಗಳನ್ನು ಸಂಗ್ರಹಿಸಿ ಈಸ್ಟ್ ಇಂಡಿಯಾ ಕಂಪೆನಿಯ ಸರಕಾರಕ್ಕೆ ವರದಿಯನ್ನು ಸಲ್ಲಿಸುತ್ತಾನೆ. ಇದು ಮೂರು ಸಂಪುಟಗಳನ್ನು ಒಳಗೊಂಡಿರುವ ಮಹತ್ವಪೂರ್ಣ ಕೃತಿಯಾಗಿದೆ.

೪. ಕರಾವಳಿ ಕರ್ನಾಟಕವು ೧೭೯೯ರಲ್ಲಿ ಟಿಪ್ಪು ಶ್ರೀರಂಗಪಟ್ಟಣದಲ್ಲಿ ಮಡಿದ ಮೇಲೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸುಪರ್ದಿಗೆ ಬಂತು. ಮಲಬಾರ್ ತೀರವು ಈ ಮೊದಲೇ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು. ಪೂರ್ವ ಕರಾವಳಿಯಲ್ಲಿ ಕನ್ಯಾಕುಮಾರಿಯಿಂದ ಕಲ್ಕತ್ತಾವರೆಗಿನ ಎಲ್ಲಾ ಬಂದರುಗಳು ಬ್ರಿಟಿಷರ ನಿಯಂತ್ರಣದಲ್ಲಿ ಇತ್ತು. ಪಶ್ಚಿಮ ಕರಾವಳಿಯಲ್ಲಿ ಕೇವಲ ಗೋವಾ ಬಂದರು ಹೊರತುಪಡಿಸಿ ಸಮಗ್ರವಾಗಿ ಬ್ರಿಟಿಷರ ನಿಯಂತ್ರಣಕ್ಕೆ ಬಂದಿತ್ತು. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಬಂದರು ನಗರಗಳಿಗೆ ಅತೀ ಹೆಚ್ಚಿನ ಮಹತ್ವ ನೀಡಿದ್ದ ಕಾರಣ ಇದಕ್ಕೆ ಅನ್ವಯಿಸಿಕೊಂಡಿರುವ ಭೂಪ್ರದೇಶಗಳಲ್ಲಿ ಹೊಸ ಹೊಸ ವಾಣಿಜ್ಯದ ನಿಯಮಗಳು ಹಾಗೂ ಆಡಳಿತಕ್ಕೆ ಸಂಬಂಧಪಟ್ಟಂತಹ ತೆರಿಗೆ ನೀತಿ ಮತ್ತು ಕಾನೂನು ಕಟ್ಟಳೆಗಳನ್ನು ಮೊತ್ತ ಮೊದಲಿಗೆ ಜಾರಿಗೊಳಿಸಿತ್ತು. ಇದೇ ರೀತಿ ಬಂದರು ನಗರಗಳ ಮುಖಾಂತರ ಭಾರತದಿಂದ ವ್ಯಾಪಕ ಪ್ರಮಾಣದ ಕಚ್ಚಾ ವಸ್ತುಗಳನ್ನು ಇಂಗ್ಲೆಂಡ್ ಮತ್ತಿತರೆ ದೇಶಗಳಿಗೆ ದೊಡ್ಡ ದೊಡ್ಡ ಗಾತ್ರದ ಹಡಗುಗಳ ಮೂಲಕ ಕಳುಹಿಸಲು ಸಾಧ್ಯವಾಗುತ್ತಿತ್ತು. ಸಿದ್ಧಪಡಿಸಿದ ವಸ್ತುಗಳು ಯುರೋಪಿನಿಂದ ಭಾರತದಲ್ಲಿ ಮಾರುಕಟ್ಟೆಗಾಗಿ ಅಗಾಧ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳಲು ಈ ಎಲ್ಲಾ ಬಂದರುಗಳೇ ಆಧಾರಸ್ತಂಭವಾಗಿತ್ತು. ಒಟ್ಟಿನಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ವಾಣಿಜ್ಯ ವ್ಯವಹಾರದ ನಿರ್ವಹಣೆಗೆ ಬಂದರು ನಗರಗಳು ಅತೀ ದೊಡ್ಡ ಕೊಡುಗೆಯನ್ನು ನೀಡಿದೆ.

೫. ಬ್ರಿಟಿಷ್ ಮದ್ರಾಸ್ ಸರಕಾರದ ಅಧಿಕಾರಿಗಳಾಗಿದ್ದ ಅಲೆಗ್ಸಾಂಡರ್ ರೀಡ್ ಮತ್ತು ಥಾಮಸ್ ಮುನ್ರೋರವರು ಈ ಪ್ರಾಂತ್ಯದಲ್ಲಿ ಭೂ ಸಂಬಂಧಗಳಿಗೆ ಸಂಬಂಧಿಸಿ ವ್ಯಾಪಕ ಬದಲಾವಣೆಗಳನ್ನು ಅಳವಡಿಸಿಕೊಂಡ ಅತೀ ಪ್ರಮುಖ ಅಧಿಕಾರಿಗಳಾಗಿದ್ದಾರೆ. ಕರಾವಳಿ ಕರ್ನಾಟಕ ಮತ್ತಿತರೆ ಕಡೆಗಳಲ್ಲಿಯ ಭೂಮಿಯ ನಿರ್ವಹಣೆ ತೆರಿಗೆಯ ಪ್ರಮಾಣ ಇವುಗಳನ್ನು ಅನುಸರಿಸಿ ರೈತವಾರಿ ಪದ್ಧತಿಯನ್ನು ರೂಪಿಸಿ ಜಾರಿಗೊಳಿಸಿದರು. ಇದು ಮೇಲ್ನೋಟಕ್ಕೆ ರೈತಾಪಿ ಸಮುದಾಯದ ಪರವಾಗಿರುವ ಧೋರಣೆಗಳು ಎಂದು ಕಂಡುಬಂದರೂ ವಾಸ್ತವಿಕವಾಗಿ ರೈತರಿಗೆ ಸಹಕಾರಿಯಾಗದೆ ಭೂಮಾಲೀಕ ಸಮುದಾಯದ ಹಿತಾಸಕ್ತಿಗೆ ಪೂರಕವಾಗಿತ್ತು. ಬ್ರಿಟಿಷರು ಜನಪರ ರೈತ ನೀತಿಯನ್ನು ಹೊಂದಿರುವುದನ್ನು ಜನರಿಗೆ ಅರ್ಥೈಸಿಕೊಳ್ಳಲು ಸಹಕಾರಿಯಾಗುವಂತೆ ರೆವೆನ್ಯೂ ಸೆಟ್ಲ್‌ಮೆಂಟ್(ಜಮಾಬಂಧಿ)

ಪದ್ಧತಿಯನ್ನು ೧೮೦೦ರಿಂದಲೇ ಜಾರಿಗೊಳಿಸಿದರು. ಪ್ರತೀ ವರ್ಷ ಪ್ರತೀ ತಾಲೂಕು, ಪ್ರತೀ ಕಂದಾಯ ಹೋಬಳಿಗಳಲ್ಲಿ ಬ್ರಿಟಿಷ್ ಅಧಿಕಾರಿಗಳು ಎಲ್ಲಾ ಭೂಮಿಯ ದಾಖಲೆಗಳೂ ಮತ್ತು ತೆರಿಗೆಯ ವಿವರಗಳೊಂದಿಗೆ ಕಛೇರಿಗಳಲ್ಲಿ ನಿರ್ದಿಷ್ಟಪಡಿಸಿದ ದಿನಗಳನ್ನು ಲಭ್ಯರಿರುತ್ತಾರೆ. ಇದರಲ್ಲಿ ವಿವಿಧ ರೀತಿಯ ತೊಂದರೆಗೊಳಗಾಗಿರುವ ರೈತಾಪಿ ಸಮುದಾಯ ತಮ್ಮ ಅಹವಾಲುಗಳನ್ನು ಸಲ್ಲಿಸಿ ಪರಿಹಾರ ಪಡೆಯಲು ಅವಕಾಶವಿತ್ತು. ತೆರಿಗೆಯ ಪರಿಷ್ಕರಣೆ, ಗೇಣಿ ಪದ್ಧತಿಯ ಅನಾನುಕೂವಾಗುವ ಬಗ್ಗೆ ಅಧಿಕಾರಿಗಳಿಗೆ ಈ ಸೆಟ್ಲ್‌ಮೆಂಟ್‌ನಲ್ಲಿ ದೂರು ನೀಡಿ ಪರಿಹಾರ ಪಡೆಯಲು ಸಾಧ್ಯವೆಂದು ಬ್ರಿಟಿಷರು ವ್ಯಾಪಕ ಪ್ರಚಾರ ಮಾಡುತ್ತಿದ್ದರು. ಈ ರೀತಿಯ ಸೆಟ್ಲ್‌ಮೆಂಟಿನ ಜಿಲ್ಲಾ ಮಟ್ಟದ ವರದಿಯನ್ನು ಕ್ರೋಡೀಕರಿಸಿ ಸರಕಾರಕ್ಕೆ ಪ್ರತೀ ವರ್ಷ ಸಲ್ಲಿಸಲಾಗುತ್ತಿತ್ತು.

೬. ಲೇವಾದೇವಿ ಮಧ್ಯವರ್ತಿ ಪದ್ಧತಿಯು ಟಿಪ್ಪುವಿನ ಆಡಳಿತ ಅವಧಿಯಲ್ಲಿ ಪರಿಸ್ಥಿತಿಗಳ ಒತ್ತಡಗಳಿಗೆ ಅನುಗುಣವಾಗಿ ಚಲಾವಣೆಗೆ ಬಂದ ಹೊಸ ಪದ್ಧತಿಯಾಗಿದೆ. ನಿರಂತರ ಯುದ್ಧದಿಂದ ಟಿಪ್ಪುವಿನ ರಾಜ್ಯ ಖಜಾನೆಗೆ ಆರ್ಥಿಕ ಸಮಸ್ಯೆ ಎದುರಾಗಿತ್ತು. ಅಗಾಧವಾದ ಮಿಲಿಟರಿ ವೆಚ್ಚಗಳಿಗೆ ಪಾವತಿ ಮಾಡಲು ನಗದು ರೂಪದ ತೆರಿಗೆಯು ಅನಿವಾರ್ಯವಿತ್ತು. ನಗದು ರೂಪದ ತೆರಿಗೆ ಪಾವತಿಯನ್ನು ಮಾಡುವರೇ ರೈತಾಪಿ ಸಮುದಾಯಕ್ಕೆ ಸಮಸ್ಯೆಯಾಗಿತ್ತು. ಇಂತಹ ಸಂದರ್ಭದಲ್ಲಿ ನಗದನ್ನು ವಸ್ತುರೂಪಕ್ಕೆ ಪರ್ಯಾಯವಾಗಿ ನೀಡಲು ಆರ್ಥಿಕ ಅನುಕೂಲವಿರುವ ವ್ಯಾಪಾರಿ ಸಮುದಾಯ ಮತ್ತು ಭೂಮಾಲೀಕರು ಮುಂದೆ ಬಂದರು. ಇವರುಗಳು ನಗದು ಅವಶ್ಯಕತೆಯಿರುವ ರೈತಾಪಿ ಸಮುದಾಯಕ್ಕೆ ಅವರ ಭೂಮಿ, ಉತ್ಪಾದನೆಯ ವಸ್ತುಗಳು ಮತ್ತು ಬೆಲೆಬಾಳುವ ಇನ್ನಿತರೆ ಒಡವೆ ಹಾಗೂ ಪಾತ್ರೆಗಳನ್ನು ಗಿರವಿ ಇಟ್ಟು ಮಧ್ಯವರ್ತಿಗಳಿಂದ ಸಾಲಪಡೆಯಲು ಪ್ರಾರಂಭಿಸಿದರು. ಈ ರೀತಿ ಲೇವಾದೇವಿಗಾರರು ತಾವು ನೀಡಿದ ಸಾಲಕ್ಕೆ ವಿಪರೀತ ಬಡ್ಡಿಯನ್ನು ಸಾಲಗಾರರಿಂದ ವಸೂಲು ಮಾಡುತ್ತಿದ್ದರು. ಸಾಲ ಮತ್ತು ಬಡ್ಡಿಯನ್ನು ಮರುಪಾವತಿ ಮಾಡಲು ಅಸಾಧ್ಯವಾದಲ್ಲಿ ಸಂಬಂಧಪಟ್ಟ ಸಾಲಗಾರರ ಭೂಮಿ ಮತ್ತು ಅವರು ಅಡವಿಟ್ಟಿರುವ ಆಭರಣ ವಸ್ತುಗಳು, ಪಾತ್ರೆ ಮೊದಲಾದವುಗಳನ್ನು ತಮ್ಮ ಸ್ವಾಧೀನಕ್ಕೆ ಪಡೆಯುತ್ತಿದ್ದರು.

೭. ಕರಾವಳಿ ಕರ್ನಾಟಕದಲ್ಲಿ ತಂಬಾಕು ಬೆಳೆಯನ್ನು ಕಾಸರಗೋಡು, ಉದುಮ ಮತ್ತು ಹೊಸದುರ್ಗಾ ಮೊದಲಾದ ತಾಲೂಕಿನ ಸಮುದ್ರ ತೀರಗಳಲ್ಲಿ ರೈತರು ಬೆಳೆಸುತ್ತಿದ್ದರು. ಇದನ್ನು ಹೊಗೆಸೊಪ್ಪು ಎಂದೂ ಕರೆಯುತ್ತಾರೆ. ಈ ಹೊಗೆಸೊಪ್ಪು ಅಥವಾ ತಂಬಾಕು ಅಮಲು ಪದಾರ್ಥವನ್ನು ಹೊಂದಿದ್ದು ಜನತೆ ಬೇರೆ ಬೇರೆ ರೀತಿಯಲ್ಲಿ ಇದನ್ನು ಉಪಯೋಗಿಸುತ್ತಾರೆ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಇದರ ಮೇಲೆ ನಿಯಂತ್ರಣ ಹೇರಿ ಅದರ ಬೆಳೆ ಮತ್ತು ಉತ್ಪಾದನೆಯನ್ನು ಸಂಪೂರ್ಣವಾಗಿ ಪರವಾನಿಗೆ ಆಧಾರಿಸಿದ ವಾಣಿಜ್ಯ ಕೃಷಿಯನ್ನಾಗಿ ಮಾಡಿತ್ತು. ಇದರಿಂದಾಗಿ ಸರಕಾರಕ್ಕೆ ವಿವಿಧ ರೀತಿಯ ಶುಲ್ಕಗಳನ್ನು ಹೊಸತಾಗಿ ಪಾವತಿಸಬೇಕಾಯಿತು. ಉತ್ಪಾದನೆಯನ್ನು ನಿರ್ದಿಷ್ಟಪಡಿಸಿದ ಕಾಂಟ್ರಾಕ್ಟ್ ನೀಡುವ ಮೂಲಕ ಏಜೆಂಟ್ ಪದ್ಧತಿಯನ್ನು ಜಾರಿಗೊಳಿಸಿದರು. ಇದಲ್ಲದೆ ಸರಕಾರವೇ ನಡೆಸುವ ಡಿಪ್ಪೋಗಳಲ್ಲಿ ಮಾತ್ರ ಉತ್ಪಾದನೆಯನ್ನು ಮಾರಲು ಅವಕಾಶವಿತ್ತು. ಈ ಹೊಸ ಪದ್ಧತಿಯಿಂದ

ಮಧ್ಯವರ್ತಿಗಳೆಂಬ ಹೊಸ ವಿಭಾಗ ಬೆಳೆದು ಬಂದು ರೈತರನ್ನು ಕಡಿಮೆ ಬೆಲೆಗೆ ಮಾರಾಟ ಮಾಡುವಂತೆ ಒತ್ತಾಯಿಸಿದರು. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ತಂಬಾಕು ಉತ್ಪಾದನೆ ಮತ್ತು ಮಾರಾಟವನ್ನು ನಿಷೇಧಿಸಲಾಗಿತ್ತು. ಆದರೆ ಬ್ರಿಟಿಷರಿಗೆ ವ್ಯಾಪಕ ಆದಾಯವನ್ನು ದೊರಕಿಸಿಕೊಡುತ್ತಿದ್ದು ದೊಡ್ಡ ಪ್ರಮಾಣದಲ್ಲಿವ ವಿದೇಶಗಳಿಗೆ ರಫ್ತು ಆಗುತ್ತಿತ್ತು.

೮. ಕರಾವಳಿ ಕರ್ನಾಟಕದಲ್ಲಿ ಶೇಂದಿಯನ್ನು ತಾಳೆಮರ ಮತ್ತು ತೆಂಗಿನ ಮರದಿಂದ ಉತ್ಪಾದಿಸುತ್ತಾರೆ. ಸಾಮಾನ್ಯವಾಗಿ ಕರಾವಳಿ ಕರ್ನಾಟಕದಲ್ಲಿ ವಾಸಿಸುತ್ತಿರುವ ಹಿಂದುಳಿದ ಬಿಲ್ಲವ ಸಮುದಾಯದ ಕುಲಕಸುಬು ಎಂದು ಪರಿಗಣಿಸಲಾಗಿದೆ. ಶೇಂದಿಯಿಂದ ಬೆಲ್ಲವನ್ನು ಕೂಡ ಮಾಡಲಾಗುತ್ತದೆ. ಆದರೆ ಹೆಚ್ಚಿನ ಪ್ರಮಾಣದಲ್ಲಿ ಇದು ಅಮಲು ದ್ರವ್ಯವಾಗಿ ರೈತಾಪಿ ಕೃಷಿಕೂಲಿಕಾರರ ಅಚ್ಚುಮೆಚ್ಚಿನ ಪಾನೀಯವಾಗಿರುತ್ತದೆ. ಟಿಪ್ಪು ಸುಲ್ತಾನ್ ಕೂಡ ಇದರ ಮೇಲೆ ಭಾಗಶಃ ನಿಷೇಧವನ್ನು ಹೇರಿದ್ದನು. ಆದರೆ ಬ್ರಿಟಿಷ್ ಆಡಳಿತ ಅವಧಿಯ ಕಾಲದಲ್ಲಿ ಶೇಂದಿ ಮೂರ್ತೆದಾರಿಕೆಯ ಮೇಲೆ ಸಂಪೂರ್ಣ ನಿಯಂತ್ರಣ ಹೇರಿ ಲೈಸನ್ಸ್ ಪದ್ಧತಿಯನ್ನು ಜಾರಿಗೊಳಿಸಿತು. ಇದರಿಂದಾಗಿ ಮೂರ್ತೆದಾರಿಕೆ ಮಾಡುವ ಜನತೆ ನಿರ್ದಿಷ್ಟಪಡಿಸಿದ ಮರಗಳನ್ನು ಗುರುತುಪಡಿಸಿ ಅವುಗಳಿಗೆ ವಾರ್ಷಿಕ ಶುಲ್ಕವನ್ನು ಪಾವತಿಸಿ ಲೈಸನ್ಸ್ ಪಡೆಯಬೇಕಿತ್ತು. ಈ ರೀತಿ ಲೈಸನ್ಸ್ ಪಡೆದ ಮರಗಳಿಂದ ಮಾತ್ರ ಮೂರ್ತೆದಾರಿಕೆಯನ್ನು ಮಾಡಿ ಶೇಂದಿಯನ್ನು ಪಡೆಯಬಹುದು ಅಕ್ರಮವಾಗಿ ಪರವಾನಿಗೆ ರಹಿತ ಮೂರ್ತೆದಾರಿಕೆಯ ಮೇಲೆ ಸರಕಾರವು ಕ್ರಿಮಿನಲ್ ಮೊಕದ್ದಮೆಯನ್ನು ಹೂಡುತ್ತಿತ್ತು. ಇದೇ ರೀತಿ ಸಂಗ್ರಹಿಸಿದ ಶೇಂದಿಯನ್ನು ನಿರ್ದಿಷ್ಟಪಡಿಸಿದ ಡಿಪ್ಪೋಗಳ ಮೂಲಕ ಮಾತ್ರ ಮಾರಾಟ ಮಾಡಬಹುದಿತ್ತು. ಈ ರೀತಿ ಮಾರಾಟದ ಮೇಲೂ ನಿಯಂತ್ರಣ ಮತ್ತು ಶುಲ್ಕ ಪಾವತಿಯ ವಿಧಾನವು ಮೂರ್ತೆದಾರಿಕೆಯ ಬಡಕುಟುಂಬಗಳ ಮೇಲೆ ಎರಡು ವಿಧಾನಗಳಿಂದ ಶೋಷಣೆಯನ್ನು ಬ್ರಿಟಿಷ್ ಸರಕಾರ ನಡೆಸಿತ್ತು.

೯. ಅಮೆರಿಕಾದಲ್ಲಿ ಅಂತರಾಷ್ಟ್ರೀಯ ಹತ್ತಿ ಬಿಕ್ಕಟ್ಟು ಸಂಭವಿಸಿದಾಗ ಇಂಗ್ಲೆಂಡಿನ ಹತ್ತಿ ಉದ್ಯಮಕ್ಕೆ ಭಾರತದಿಂದ ಹತ್ತಿಯನ್ನು ಸರಬರಾಜು ಮಾಡುವ ಅನಿವಾರ್ಯತೆ ಉಂಟಾಯಿತು. ಅದಕ್ಕನುಗುಣವಾಗಿ ಮುಂಬಯಿ ಪ್ರಾಂತ್ಯಕ್ಕೆ ಸಂಬಂಧಪಟ್ಟ ಧಾರವಾಡ ಹುಬ್ಬಳ್ಳಿಗಳಿಂದ ಹತ್ತಿಯನ್ನು ಕಾರವಾರ ಬಂದರಿನ ಮೂಲಕ ಸರಬರಾಜು ಮಾಡಲು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯೋದ್ಯಮಿಗಳು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಮೇಲೆ ಒತ್ತಡ ಹೇರಿದರು. ಇದಕ್ಕೆ ಪೂರಕವಾಗಿ ಕಾರವಾರ ಬಂದರಿನಲ್ಲಿ ಸಣ್ಣಪ್ರಮಾಣದ ಬಂದರು ಅಭಿವೃದ್ಧಿ ಕಾಮಗಾರಿಗಳು ಪ್ರಾರಂಭವಾದವು. ಕಾರವಾರ ಬಂದರು ಪ್ರಮುಖ ಅಂತರಾಷ್ಟ್ರೀಯ ಮಟ್ಟದ ಬಂದರಾಗಿ ಬೆಳೆದು ಬರುವ ಸಾಧ್ಯತೆಗಳನ್ನು ಮನಗಂಡ ವ್ಯಾಪಾರೋದ್ಯಮಿಗಳು ಮತ್ತು ಶ್ರೀಮಂತ ವರ್ಗ ಕಾರವಾರ ಬಂದರಿನ ಸುತ್ತಮುತ್ತಲಿನ ಭೂಮಿಗಳನ್ನು ವಿಕ್ರಯಿಸುವ ಕ್ರಮಕ್ಕೆ ಮುಂದಾದರು. ಇದರ ಪರಿಣಾಮವಾಗಿ ಭೂಮಿಗೆ ಮಾರುಕಟ್ಟೆ ದರವೂ ಜಾಸ್ತಿಯಾಯಿತು. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಭೂಮಿಯನ್ನು ಆಧಾರಿಸಿ ಆರ್ಥಿಕ ಲಾಭ ಮಾಡುವ ಆಧುನಿಕ ಪರಿಭಾಷೆಯ ರಿಯಲ್ ಎಸ್ಟೇಟ್

ವ್ಯಾಪಾರ ಎಂಬ ಕಣ್ಣೋಟವು ೧೮೬೩ರಲ್ಲೇ ಚಾಲ್ತಿಯಲ್ಲಿ ಇತ್ತು ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಆದುದರಿಂದ ಒಂದು ಪ್ರದೇಶದ ಭೂಮಿಯ ಮೌಲ್ಯದಲ್ಲಿ ಏರಿಳಿತಗಳನ್ನು ವಾಣಿಜ್ಯೋದ್ಯಮಿಗಳು ನಿರ್ಧರಿಸುತ್ತಿದ್ದರು ಎಂಬುದು ಈ ಬೆಳವಣಿಗೆಯಿಂದ ಸ್ಪಷ್ಟವಾಗುತ್ತದೆ.

೧೦. ಮದ್ರಾಸ್ ಪ್ರಾಂತ್ಯದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾದ ಸರಕಾರವು ಅನುಸರಿಸುತ್ತಿದ್ದ ಕಂದಾಯ ವಸೂಲಾತಿ ನೀತಿ ಇಡೀ ಭಾರತದಲ್ಲೇ ಕುಖ್ಯಾತಿಯನ್ನು ಪಡೆದಿತ್ತು ಎಂಬುದು ಈ ಬಗ್ಗೆ ರೂಪಿಸಲಾಗಿದ್ದ ಆಯೋಗದ ವರದಿಯಿಂದ ತಿಳೀದು ಬರುತ್ತದೆ. ತೆರಿಗೆ ಪಾವತಿಸದೇ ಇರುವ ಜನರ ಮೇಲೆ ನಡೆಸುತ್ತಿದ್ದ ಚಿತ್ರಹಿಂಸೆಗಳು ಲಂಡನ್‌ನಲ್ಲಿ ವ್ಯಾಪಕ ಟೀಕೆಗೆ ಒಳಗಾಗಿತ್ತು. ಜೈಲುಗಳಲ್ಲಿ ತೆರಿಗೆ ಪಾವತಿಸದೇ ಹಾಗೂ ಇನ್ನಿತರೆ ತೆರಿಗೆ ಸಂಬಂಧದ ಅಪರಾಧಿಗಳಿಗಾಗಿ ಕೊಳೆಯುತ್ತಿದ್ದ ರೈತರ ಸಂಖ್ಯೆಯು ಇತರೆ ಕ್ರಿಮಿನಲ್ ಅಪರಾಧಿಗಳ ಸಂಖ್ಯೆಯಷ್ಟೇ ಇತ್ತು ಎಂಬುದು ಬ್ರಿಟಿಷ್ ಮದ್ರಾಸ್ ಪ್ರಾಂತೀಯ ಸರಕಾರದ ಕಂದಾಯ ನೀತಿಗೆ ಹಿಡಿದ ಕೈಗನ್ನಡಿಯಾಗಿದೆ. ಈ ಆಯೋಗದ ವರದಿಯ ಅನಂತರವೂ ಮದ್ರಾಸ್ ಪ್ರಾಂತ್ಯದಲ್ಲಿ ಯಾವುದೇ ಬದಲಾವಣೆಗಳು ಆಗಲಿಲ್ಲ.

೧೧. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಸರಕಾರಕ್ಕೆ ಪಾವತಿಸಬೇಕಾದ ವಿವಿಧ ರೀತಿಯ ಸಂದಾಯಗಳನ್ನು ಕಿಸ್ತು ಎಂದು ಕರೆಯುತ್ತಾರೆ. ಇದು ಪರ್ಷಿಯಾ ಭಾಷೆಯ ಶಬ್ದವಾಗಿದ್ದು ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಢಳಿತ ಅವಧಿಯಲ್ಲಿ ಈ ಶಬ್ದ ವ್ಯಾಪಕವಾಗಿ ಚಲಾವಣೆಗೆ ಬಂತು.

೧೨. ಕರಾವಳಿ ಕರ್ನಾಟಕದಲ್ಲಿ ೧೮೨೦ರ ನಂತರ ಕೃಷಿರಂಗದಲ್ಲಿ ವ್ಯಾಪಕ ಬಿಕ್ಕಟ್ಟು ಎದುರಾಯಿತು. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಿದ್ಯಮಾನಗಳಿಂದ ರೈತಾಪಿ ಸಮುದಾಯವು ಬೆಲೆಕುಸಿತ ಎಂಬ ಗಂಭೀರ ಸಮಸ್ಯೆಯನ್ನು ಎದುರಿಸಬೇಕಾಯಿತು. ಈ ಬೆಲೆಕುಸಿತವು ಇಬ್ಬಗೆಯ ದುಷ್ಪರಿಣಾಮವನ್ನು ರೈತಾಪಿ ಸಮುದಾಯ ಎದುರಿಸುವಂತೆ ಮಾಡಿತ್ತು. ಒಂದನೆಯದಾಗಿ ಸರಕಾರಕ್ಕೆ ರೈತರು ಈ ಮೊದಲಿನ ದರದಲ್ಲೇ ತೆರಿಗೆಯನ್ನು ಪಾವತಿಸಬೇಕಾಗಿತ್ತು. ಇದರ ಅರ್ಥ ವಾಸ್ತವಿಕ ಬೆಲೆಯ ಎರಡುಪಟ್ಟನ್ನು ತೆರಿಗೆ ನೀಡಬೇಕಾಗಿ ಬಂತು. ಎರಡನೆಯದಾಗಿ ಬೆಲೆಕುಸಿತದಿಂದ ರೈತರು ಹೆಚ್ಚಿನ ಪ್ರಮಾಣದಲ್ಲಿ ತಮ್ಮ ಉತ್ಪನ್ನಗಳನ್ನು ಕಡಿಮೆ ದರಕ್ಕೆ ಮಾರಬೇಕಾಯಿತು. ಸಾಮಾನ್ಯವಾಗಿ ಬೆಲೆಕುಸಿತ ಸಂಭವಿಸುವಾಗ ಬೇಡಿಕೆಗಳ ಪ್ರಮಾಣ ಹೆಚ್ಚಾಗುತ್ತದೆ. ಆದರೆ ಕರಾವಳಿ ಕರ್ನಾಟಕದಲ್ಲಿ ಈ ರೀತಿಯಲ್ಲಿ ಬೇಡಿಕೆ ಮತ್ತು ಸರಬರಾಜಿನ ಆರ್ಥಿಕ ನಿಯಮಗಳು ಕಾರ್ಯಾಚರಿಸದಂತೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ನಿಗಾವಹಿಸಿತ್ತು.

೧೩. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ವಿರುದ್ಧ ಕರಾವಳಿ ಕರ್ನಾಟಕದಲ್ಲಿ ನಡೆದಂತಹ ಕೂಟ ಬಂಡಾಯದ ಕಾರಣಗಳನ್ನು ಕಂಡು ಹಿಡಿದು ಸರಕಾರಕ್ಕೆ ವರದಿಯನ್ನು ಸಲ್ಲಿಸಲು ೧೮೩೧ರಲ್ಲಿ ಬ್ರಿಟಿಷ್ ಅಧಿಕಾರಿ ಜಾನ್ ಶಾಕ್‌ರವರ ನೇತೃತ್ವದಲ್ಲಿ ತನಿಖಾ ಸಮಿತಿಯನ್ನು ನೇಮಿಸಿತು. ಈತ ಕೆನರಾ ಪ್ರಾಂತ್ಯದ ಕಮಿಷನರ್ ಆಗಿದ್ದು ಈತ ಸರಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಕೂಟ ಬಂಡಾಯವು

ಆರ್ಥಿಕ ಮತ್ತು ರಾಜಕೀಯ ಕಾರಣಕ್ಕಾಗಿ ನಡೆದಿರುವುದಿಲ್ಲ. ಅದರ ಬದಲಾಗಿ ಧಾರ್ಮಿಕ ಮತ್ತು ಮತೀಯ ಕಾರಣಕ್ಕೆ ಸರಕಾರಿ ಸೇವೆಯಲ್ಲಿದ್ದ ಬ್ರಾಹ್ಮಣ ಸಮುದಾಯದ ಅಧಿಕಾರಿಗಳು ಕ್ರೈಸ್ತ ಸಮುದಾಯದ ಅಧಿಕಾರಿಗಳ ವಿರುದ್ಧ ದ್ವೇಷವನ್ನು ಸಾಧಿಸಲು ರೈತರನ್ನು ಎತ್ತಿಕಟ್ಟಿ ಪ್ರಚೋದನೆ ನೀಡಿದ್ದರಿಂದ ಕೂಟ ಬಂಡಾಯ ನಡೆಯಿತು ಎಂದು ವರದಿಯಲ್ಲಿ ಉಲ್ಲೇಖಿಸಿರುತ್ತಾರೆ. ಹಿಂದೂ, ಮುಸ್ಲಿಂ, ಕ್ರೈಸ್ತ ಎಂಬ ಧಾರ್ಮಿಕ ವಿಭಜನೆಯು ವ್ಯವಸ್ಥಿತವಾಗಿ ಈ ಅವಧಿಯಲ್ಲಿ ರೂಪುಗೊಂಡಿರುವುದಿಲ್ಲ. ಬ್ರಿಟಿಷ್ ವ್ಯವಸ್ಥೆಯು ತನ್ನ ಹೆಚ್ಚಿನ ಅಧಿಕಾರಿಗಳನ್ನಾಗಿ ಬ್ರಾಹ್ಮಣ ಮತ್ತು ಇತರೆ ಶ್ರೀಮಂತ ಸಮುದಾಯಗಳಿಂದ ನೇಮಿಸಿಕೊಂಡಿತ್ತು. ಕ್ರೈಸ್ತ ಸಮುದಾಯದ ವಿರುದ್ಧ ಥಾಮಸ್ ಮುನ್ರೋ ನಡೆಸಿದ ಅಧಿಕಾರದ ಭಾಗವಾಗಿ ಅವರು ಕಳಕೊಂಡ ಭೂಮಿಯನ್ನು ಮರು ಹಿಂತಿರುಗಿಸುವ ಪ್ರಕ್ರಿಯೆಯ ವಿರುದ್ಧ ಯಾವುದೇ ರೀತಿಯಲ್ಲಿ ಕ್ರೈಸ್ತೇತರ ಜನರು ಪ್ರತಿಭಟಿಸಿದ ದಾಖಲೆಗಳಿಲ್ಲ. ಅನಂತರವೂ ಕೂಡ ವಿವಿಧ ಪ್ರತಿರೋದಗಳಲ್ಲಿ ಧಾರ್ಮಿಕ ನೆಲೆಗಟ್ಟಿನ ಬೇಡಿಕೆಗಳು ಅಭಿವ್ಯಕ್ತವಾಗಲಿಲ್ಲ. ಆದುದರಿಂದ ಜಾನ್ ಶಾಕ್‌ರವರ ಮತೀಯ ದುರ್ಲಾಭ ಪಡೆಯುವ ಹುನ್ನಾರವನ್ನು ಈ ವರದಿ ಹೊಂದಿದೆ.

೧೪. ೧೮೩೭ರ ಅಮರಸುಳ್ಯ ದಂಗೆಯಲ್ಲಿ ಬಾಸೆಲ್ ಮಿಶನ್ ಸಂಸ್ಥೆಯು ಬ್ರಿಟಿಷರ ಪರವಾಗಿ ಕಾರ್ಯಾಚರಿಸಿದ್ದು ಸ್ಪಷ್ಟವಾಗಿ ದಾಖಲೆಗಳಲ್ಲಿ ಅಭಿವ್ಯಕ್ತಗೊಂಡಿದೆ. ಕರಾವಳಿ ಕರ್ನಾಟಕಕ್ಕೆ ಈ ಮಿಶನರಿ ಸಂಸ್ಥೆ ಪಾದಾರ್ಪಣೆ ಮಾಡಿ ಬ್ರಿಟಿಷ್ ಅಧಿಕಾರಿ ಯಂತ್ರದ ಸಹಾಯ ಸಹಕಾರದ ಮೂಲಕ ಮತಾಂತರದ ಪ್ರಕ್ರಿಯೆಯನ್ನು ಅದಾಗಲೇ ಜಾರಿಗೊಳಿಸಿತ್ತು. ಅಮರಸುಳ್ಯ ದಂಗೆಯು ಈ ಬಾಸೆಲ್ ಮಿಶನ್ ಸಂಸ್ಥೆಗೆ ಬ್ರಿಟಿಷ್ ಅಧಿಕಾರಿ ವಲಯಕ್ಕೆ ಅತೀ ಹತ್ತಿರದ ಸಂಬಂಧಗಳನ್ನು ರೂಪಿಸಿಕೊಳ್ಳಲು ಅವಕಾಶ ಕಲ್ಪಿಸಿತ್ತು. ಇದನ್ನು ಸಮರ್ಥವಾಗಿ ಉಪಯೋಗಿಸಿಕೊಂಡ ಬಾಸೆಲ್ ಮಿಶನ್ ದಂಗೆಕೋರರ ವಿರುದ್ಧ ಸಮಗ್ರ ಮಾಹಿತಿ ಕಲೆಹಾಕುವ ಕ್ರಮವನ್ನು ಮಾತ್ರವಲ್ಲದೆ ದಂಗೆಯ ವಿರುದ್ಧವಾಗಿ ವ್ಯಾಪಕವಾದ ಅಪಪ್ರಚಾರವನ್ನೂ ಮಾಡಿತ್ತು. ರೋಮನ್ ಕ್ಯಾಥೊಲಿಕ್ ಈಗಾಗಲೇ ೧೭೯೯ರಿಂದಲೇ ಬ್ರಿಟಿಷ್ ಸರಕಾರದ ಪರವಾದ ಧೋರಣೆಗಳನ್ನು ಅನುಸರಿಸುತ್ತಿದ್ದರು. ಈ ನಿಟ್ಟಿನಲ್ಲಿ ಬಾಸೆಲ್ ಮಿಶನ್ ಅದಕ್ಕಿಂತಲೂ ಒಂದು ಹೆಜ್ಜೆ ಮುಂದುವರಿದು ಬ್ರಿಟಿಷರೊಂದಿಗೆ ಸಹಕರಿಸಿತ್ತು. ಇದಕ್ಕೆ ಪ್ರತೀಕಾರ ಎಂಬ ರೀತಿಯಲ್ಲಿ ಬ್ರಿಟಿಷ್ ಆಡಳಿತ ಬಲ್ಮಠದಲ್ಲಿ ಇವರ ವ್ಯವಹಾರಗಳಿಗೆ ಸಂಬಂಧಿಸಿ ಭೂಮಿಯನ್ನು ಒದಗಿಸಿತ್ತು.

# ಅಧ್ಯಾಯ ೬

# ವಸಾಹತುಶಾಹಿ ಕರಾವಳಿಯ ವಾಣಿಜ್ಯ ವ್ಯವಹಾರಗಳ ಏಕಸ್ವಾಮ್ಯ ಮತ್ತು ದುಡಿಯುವ ವರ್ಗಗಳ ಪ್ರತಿಭಟನೆಗಳು

ಕರಾವಳಿ ಕರ್ನಾಟಕದಲ್ಲಿ ಯುರೋಪಿಯನ್ನರ ಆಗಮನದಿಂದ ಪ್ರಾರಂಭವಾಗಿ ಅನಂತರ ವಿವಿಧ ಕಾಲಘಟ್ಟಗಳಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಬೆಳೆದು ಬಂದ ಪರಿಸ್ಥಿತಿಗಳನ್ನು ಹಾಗೂ ಅವುಗಳು ನಿರೂಪಿಸಿದ ಆರ್ಥಿಕ ಮತ್ತು ವಾಣಿಜ್ಯದ ಘಟ್ಟಗಳನ್ನು ಸೈದ್ಧಾಂತೀಕರಣ ಪ್ರಕ್ರಿಯೆಗೆ ಈ ಅಧ್ಯಾಯದಲ್ಲಿ ಒಳಪಡಿಸಲಾಗಿದೆ. ವಿವಿಧ ಸಂದರ್ಭಗಳಲ್ಲಿ ಬ್ರಿಟಿಷ್ ಆಡಳಿತದ ವಿರುದ್ಧ ನಡೆದ ಪ್ರತಿರೋಧಗಳೂ ಅವುಗಳು ಬೀರಿದ ಪರಿಣಾಮಗಳನ್ನು ವಿಶ್ಲೇಷಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕೆನರಾ ವಿಘಟನೆಯ ನಂತರ ಬ್ರಿಟಿಷ್ ಸರಕಾರದ ಸಾಮ್ರಾಜ್ಯಶಾಹಿ ಧೋರಣೆಯ ಪರಿಣಾಮವಾಗಿ ಬೆಳೆದು ಬಂದು ವಾಣ್ಯಜ್ಯ ವ್ಯವಹಾರಗಳ ಏಕಸ್ವಾಮ್ಯಗಳನ್ನು ವಿಮರ್ಶಿಸಲಾಗಿದೆ. ಇದರ ಪರಿಣಾಮವಾಗಿ ದುಡಿಯುವ ವರ್ಗ, ಜನತೆ ನಡೆಸಿದ ಸಂಘರ್ಷಗಳನ್ನು ಸ್ವಾತಂತ್ರ ಹೋರಾಟದ ಭಾಗವಾಗಿಯೂ ವಿಶ್ಲೇಷಣೆ ಮಾಡಲಾಗಿದೆ.

ಈ ಅಧ್ಯಾಯದಲ್ಲಿ ಕೆನರಾ ವಿಭಜನೆಯ ನಂತರದ ಅವಧಿಯಲ್ಲಿ ವಸಾಹತುಶಾಹಿ ಕಾಲಘಟ್ಟದ ಅಂತಿಮ ವರ್ಷಗಳಲ್ಲಿ ನಡೆದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳು ಕರಾವಳಿ ಕರ್ನಾಟಕದಲ್ಲಿ ಪಡೆದುಕೊಂಡ ವಿವಿಧ ಆಯಾಮಗಳನ್ನು ಗುರುತಿಸಲಾಗಿದೆ. ಈ ಕಾಲಘಟ್ಟದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆದು ಬಂದ ವಸಾಹತುಶಾಹಿ ಮತ್ತು ರಾಷ್ಟ್ರೀಯವಾದದ ಪರಿಕಲ್ಪನೆಗಳನ್ನು ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳ ಪರಿಸ್ಥಿತಿಗಳಿಗೆ ಅನ್ವಯಿಸಿ ವಿಶ್ಲೇಷಿಸಲಾಗಿದೆ.

ಕರಾವಳಿ ಕರ್ನಾಟಕದಲ್ಲಿ ೧೮೩೭ರ ಅಮರಸುಳ್ಯ ದಂಗೆಯ ನಂತರ ದೀರ್ಘ ಅವಧಿಯಲ್ಲಿ ಬ್ರಿಟಿಷ್ ವಸಾಹತುಶಾಹಿ ಶೋಷಣೆಯ ವಿರುದ್ಧ ಯಾವುದೇ ರೀತಿಯ ಪ್ರತಿರೋಧಗಳು ಬೆಳೆದು ಬಂದಿರುವುದಿಲ್ಲ. ಕರಾವಳಿ ಕರ್ನಾಟಕದಲ್ಲಿ ಬ್ರಿಟಿಷ್ ಸರಕಾರಕ್ಕೆ ಇದು ೧೯೨೦ ರವರೆಗೂ ನಿರಾತಂಕ ಪರಿಸ್ಥಿತಿ ನಿರ್ಮಾಣ ಮಾಡಿಕೊಟ್ಟಿತು. ಹೆಚ್ಚು ಕಡಿಮೆ ನೂರು ವರ್ಷಗಳ ಅವಧಿಯಲ್ಲಿ ಬ್ರಿಟಿಷ್

ವಸಾಹತುಶಾಹಿ ಶೋಷಣೆಯ ವಿರುದ್ಧ ಪ್ರತಿಭಟನೆಗಳು ಕರಾವಳಿ ಕರ್ನಾಟಕದಲ್ಲಿ ರೂಪುಗೊಂಡಿಲ್ಲದಿರುವುದು ಗಂಭೀರ ಚರ್ಚೆಗೆ ಅರ್ಹವಾದ ವಿಷಯವಾಗಿದೆ.

ಪ್ರಥಮ ಮಹಾಯುದ್ಧದ ಸಂದರ್ಭದಲ್ಲಿ ರೂಪುಗೊಂಡ ಸಂಘರ್ಷವನ್ನು ಬಾಸೆಲ್ ಮಿಶನ್‌ನ ಕೈಗಾರಿಕಾ ಮತ್ತು ವಾಣಿಜ್ಯ ಆಯಾಮಕ್ಕೆ ಸಂಬಂಧಿಸಿ ವಿಶ್ಲೇಷಿಸಲಾಗಿದೆ. ಈ ಪ್ರಕ್ರಿಯೆ ಎರಡನೇ ಮಹಾಯುದ್ಧದ ಸಂದರ್ಭದಲ್ಲೂ ಮರುಕಳಿಸಿದೆ. ಇದೇ ಅವಧಿಯಲ್ಲಿ ಕರಾವಳಿ ಕರ್ನಾಟಕದಲ್ಲಿ ದುಡಿಯುವ ವರ್ಗಗಳಾದ ಕೃಷಿ ಕೂಲಿಕಾರರ, ನೇಯ್ಗೆ ಕಾರ್ಮಿಕರ, ಹಂಚಿನ ಕಾರ್ಮಿಕರ, ಬೀಡಿ ಕಾರ್ಮಿಕರ, ಕಾಫಿ ಮತ್ತು ಪ್ಲಾಂಟೇಶನ್ ಕಾರ್ಮಿಕರ ಚಳವಳಿಗಳೊಂದಿಗೆ ಅಂತರ್ಗತವಾದ ಸಂಘರ್ಷದ ಸನ್ನಿವೇಶವನ್ನು ವಿವರವಾಗಿ ಚರ್ಚಿಸಲಾಗಿದೆ.

ಇಪ್ಪತ್ತನೇ ಶತಮಾನದ ಪ್ರಥಮಾರ್ಧದಲ್ಲಿ ವಿಸ್ತಾರ ಸ್ವರೂಪದ ಸಂಘರ್ಷಗಳನ್ನು ಕಟ್ಟಿಕೊಟ್ಟ ಇತಿಹಾಸ ಕರಾವಳಿ ಕರ್ನಾಟಕದ್ದಾಗಿದೆ. ರೈತಾಪಿ ಜನರ, ಕೃಷಿಕೂಲಿಕಾರರ ಮತ್ತು ಕಾರ್ಮಿಕವರ್ಗದ ಸಾಮೂಹಿಕ ಚಳವಳಿಗಳು ರೂಪುಗೊಂಡಿದ್ದು ಅವುಗಳ ವಿಶ್ಲೇಷಣೆ ಈ ಅಧ್ಯಾಯದ ವಸ್ತು ವಿಷಯವಾಗಿದೆ.

ಬ್ರಿಟಿಷ್ ಈಸ್ಟ್ ಇಂಡಿಯಾ ಮತ್ತು ಬ್ರಿಟಿಷ್ ಸರಕಾರದ ಮಧ್ಯೆ ಇದ್ದ ಸಂಬಂಧಗಳನ್ನು ಕಾರ್ಲ್ ಮಾರ್ಕ್ಸ್‌ರವರು ಬ್ರಿಟಿಷ್ ಪತ್ರಿಕೆಗೆ ಬರೆದ ಲೇಖನದಲ್ಲಿ, ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ಬ್ರಿಟಿಷ್ ಸರಕಾರ ಯಾವುದೇ ನೈತಿಕತೆ, ಸಾಮಾಜಿಕ, ರಾಜಕೀಯ ಮತ್ತು ವಾಣಿಜ್ಯದ ಮೌಲ್ಯಗಳಿಗೆ ಬೆಲೆ ಕೊಡುವ ಸಂಸ್ಥೆಯಾಗಿ ಉಳಿದಿಲ್ಲ ಎಂಬುದನ್ನು ಸ್ಪಷ್ಟವಾಗಿ ತೋರಿಸಿರುತ್ತಾರೆ.

ಈಸ್ಟ್ ಇಂಡಿಯಾ ಕಂಪನಿಯು ೧೮೧೩ ರಲ್ಲಿ ಪ್ರತೀ ೨೦ ವರ್ಷಕ್ಕೊಮ್ಮೆ ಸನ್ನದು ನವೀಕರಿಸುವ ಸರದಿ ಬಂದಾಗ ಸಮಕಾಲೀನ ಇಂಗ್ಲೆಂಡಿನಲ್ಲಿ ಚಾಲ್ತಿಯಲ್ಲಿದ್ದ ಓರಿಯಂಟಲಿಸಂ, ಇವಾಂಜಲಿಸ್ಟ್ ಮತ್ತು ಪಾಶ್ಚಾತ್ತೀಕರಣದ ಪರವಾದ ಪ್ರತಿಪಾದಕರು ಮಂಡಿಸಿದ ವಾದಗಳನ್ನು ವಿಶ್ಲೇಷಿಸಲಾಗಿದೆ. ಮುಕ್ತ ಆರ್ಥಿಕತೆಯನ್ನು ಪ್ರತಿಪಾದಿಸಿದ ವಾದಗಳನ್ನು, ವಸಾಹತುಶಾಹಿ ಮತ್ತು ರಾಷ್ಟ್ರೀಯ ವಾದದ ಸಿದ್ಧಾಂತಗಳನ್ನು ವಿಶ್ಲೇಷಿಸಲಾಗಿದೆ.

ಕರಾವಳಿ ಕರ್ನಾಟಕದಲ್ಲಿ ವ್ಯಾಪಕವಾಗಿ ನಡೆದ ವಾಣಿಜ್ಯೀಕರಣದಿಂದ ಗ್ರಾಮೀಣ ಕರಕುಶಲ ಗುಡಿ ಕೈಗಾರಿಕೆಗಳು ಮತ್ತು ಕೃಷಿರಂಗದ ನಾಶ ಇವುಗಳ ಬಗ್ಗೆ ಚರ್ಚಿಸಲಾಗಿದೆ. ವಸಾಹತುಶಾಹಿಯು ಹೊಸಹೊಸ ಭೂ ಪ್ರದೇಶಗಳನ್ನು ಆಕ್ರಮಿಸುವ ಹಿನ್ನೆಲೆಯಲ್ಲಿ ಬೆಳೆದು ಬಂದ ಎರಡು ಮಹಾಯುದ್ಧಗಳು ಬಾಸೆಲ್ ಮಿಶನ್‌ನ ವಾಣಿಜ್ಯೋದ್ಯಮ ಮತ್ತು ಕೈಗಾರಿಕಾ ಘಟಕಗಳ ಮೇಲೆ ಬಿದ್ದ ಗಂಭೀರ ಪರಿಣಾಮಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ೧೯ನೇ ಶತಮಾನದ ಸರಿಸುಮಾರಿಗೆ ಭಾರತದಲ್ಲಿ ನೇಯ್ಗೆ ಮತ್ತು ಕೈ ಮಗ್ಗದ ಪರಿಸ್ಥಿತಿಯನ್ನು ಚರ್ಚಿಸಲಾಗಿದೆ. ಭಾರತದ ಅಂತರಾಷ್ಟ್ರೀಯ ವ್ಯಾಪಾರ ವ್ಯವಹಾರದಲ್ಲಿ ನೇಯ್ಗೆಯ ಸ್ಥಾನಮಾನವನ್ನು ವಿಶ್ಲೇಷಿಸಲಾಗಿದೆ.

ಸಂಘಟಿತ ಕಾರ್ಮಿಕ ವರ್ಗ ತಮ್ಮ ಹಿತಾಸಕ್ತಿ ರಕ್ಷಣೆಗಾಗಿ ಮಾಲಕರೊಂದಿಗೆ, ವಾಣಿಜ್ಯೋದ್ಯಮಿಗಳೊಂದಿಗೆ ನಡೆಸಿದ ಮುಖಾಮುಖಿ ಸಮರಧೀರ ಚಳುವಳಿಯ ಬಗ್ಗೆ ಹಾಗೂ ಬ್ರಿಟಿಷ್ ಪ್ರಭುತ್ವ ಮತ್ತು

ಮಾಲಕ ವರ್ಗ ಇದನ್ನು ಎದುರಿಸಿದ ವಿಧಾನವನ್ನು ವಿಶ್ಲೇಷಿಸಲಾಗಿದೆ. ಹಂಚಿನ ಕೈಗಾರಿಕೆಯ ಕಾರ್ಮಿಕರು ೧೯೪೦ರ ದಶಕದಲ್ಲಿ ಸಂಘಟಿತರಾಗಿ ಚಳುವಳಿಗಳನ್ನು ಸಂಘಟಿಸಿದ್ದರು. ಅದೇ ರೀತಿ ಬ್ರಿಟಿಷ್ ಪ್ರಭುತ್ವದ ದಮನಕಾರಿ ಧೋರಣೆಯನ್ನೂ ವಿರೋಧಿಸಿ ಕಾರ್ಮಿಕ ವರ್ಗ ಸ್ವಾತಂತ್ರ್ಯ ಹೋರಾಟದಲ್ಲೂ ಭಾಗವಹಿಸಿದ ಬಗ್ಗೆ ವಿಶ್ಲೇಷಣೆಯನ್ನು ಇದು ಒಳಗೊಂಡಿದೆ.

ಬ್ರಿಟಿಷ್‌ರೊಂದಿಗೆ ೧೯ನೇ ಶತಮಾನದಿಂದಲೇ ಹೆಗಲಿಗೆ ಹೆಗಲು ಕೊಟ್ಟು ಸಹಕರಿಸಿದ ಭೂಮಾಲಿಕ ವರ್ಗದ ವಿರುದ್ಧ ಕರಾವಳಿ ಕರ್ನಾಟಕದಲ್ಲಿ ಸರಿಸುಮಾರು ಒಂದು ಶತಮಾನದ ಅವಧಿಯಲ್ಲಿ ಯಾವುದೇ ಪ್ರತಿರೋಧಗಳು ಎದುರಾಗಲಿಲ್ಲ. ರೈತರ ಶೋಷಣೆ ಮಿತಿ ಮೀರಿತ್ತು. ಗೇಣಿ ಪದ್ಧತಿ, ವಿಪರೀತ ಕಂದಾಯ, ವಸೂಲಾತಿಗಳು ನಡೆಯುತ್ತಿದ್ದರೂ ಯಾವುದೇ ಪ್ರತಿರೋಧಗಳು ಬೆಳೆದು ಬರಲಿಲ್ಲ. ಕಯ್ಯೂರಿನ ಸಮರಧೀರ ರೈತ ಚಳುವಳಿ ಕರಾವಳಿ ಕರ್ನಾಟಕದಲ್ಲಿ ರೈತಾಪಿ ಸಮುದಾಯ ಬ್ರಿಟಿಷ್ ಪ್ರಭುತ್ವ ಮತ್ತು ಭೂಮಾಲಕರ ವಿರುದ್ಧ ನಡೆಸಿದ ಚಳುವಳಿಯ ವಿಶ್ಲೇಷಣೆಯನ್ನು ಚರ್ಚಿಸಲಾಗಿದೆ

ಈ ಕಾಲಘಟ್ಟದಲ್ಲಿ ಹೊಸತಾಗಿ ಪ್ಲಾಂಟೇಶನ್ ಬೆಳೆದು ಬಂದ ಬಗ್ಗೆ ಅದರೊಂದಿಗೆ ರೂಪಿತಗೊಂಡ ಕಾರ್ಮಿಕರ ವರ್ಗದ ಸ್ಥಿತಿಗತಿ, ಕಾಫಿ ಕ್ಯೂರಿಂಗ್ ವರ್ಕ್ಸ್ ಮತ್ತು ವಿದೇಶೀ ವಾಣಿಜ್ಯ ಗಳಿಕೆಯ ಬಗ್ಗೆ ವಿಶ್ಲೇಷಿಸಲಾಗಿದೆ.

ವಸಾಹತುಶಾಹಿಯ ಕೊನೆಯ ಕಾಲಘಟ್ಟದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಪಡೆದುಕೊಂಡ ತಿರುವು ಸಂಕೀರ್ಣತೆಯಿಂದ ಕೂಡಿದೆ ಮತ್ತು ಸಾಕಷ್ಟು ವೈರುಧ್ಯತೆಗಳನ್ನು ಒಳಗೊಂಡಿದೆ. ಏಕೆಂದರೆ ಸರಿಸುಮಾರು ೧೮೩೭ ರಿಂದ ಪ್ರಾರಂಭಗೊಂಡ ಒಂಬತ್ತು ದಶಕಗಳು ಬ್ರಿಟಿಷ್ ಪ್ರಭುತ್ವಕ್ಕೆ ಪ್ರತಿರೋಧದ ಅಲೆಗಳನ್ನು ಸೃಷ್ಟಿಸದಿರುವುದು ಗಂಭೀರ ವಿಶ್ಲೇಷಣೆಗೆ ಒಳಪಡಬೇಕಾದ ಅಂಶವಾಗಿದೆ. ಬ್ರಿಟಿಷ್ ಆಡಳಿತ ನೀತಿ ಜನಪರವಾಗಿದ್ದರಿಂದ ಇಂತಹ ಪ್ರತಿಭಟನೆಗಳು ನಡೆಯಲಿಲ್ಲ ಎಂದರ್ಥವಲ್ಲ. ಬ್ರಿಟಿಷರು ನಿರಂತರವಾಗಿ ವ್ಯಾಪಾರಿಗಳನ್ನು, ಭೂಮಾಲೀಕರನ್ನು, ಮಧ್ಯವರ್ತಿ ಲೇವಾದೇವಿಗಾರರನ್ನು ಒಳಗೊಂಡು ನಿರಂತರ ಶೋಷಣೆ ನಡೆಯುತ್ತಿದ್ದರೂ ಪ್ರತಿರೋಧ ರೂಪುಗೊಳ್ಳಲಿಲ್ಲ. ಇದಕ್ಕೆ ಆರ್ಥಿಕ ಕಾರಣಗಳನ್ನು ಒಳಗೊಂಡಂತೆ, ಬ್ರಿಟಿಷರು ಜಾರಿಗೊಳಿಸಿದ ಕಟ್ಟು ನಿಟ್ಟಿನ ಅಮಾನುಷ ದಬ್ಬಾಳಿಕೆ ಮತ್ತು ಭಯ ಮಿಶ್ರಿತ ಆಡಳಿತವು ಕರಾವಳಿ ಕರ್ನಾಟಕದ ಜನಜೀವನವನ್ನು ತನ್ನ ಕಪಿಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳಲು ಸಾಧ್ಯವಾಗಿರುವುದೇ ಇದಕ್ಕೆ ಮೂಲ ಕಾರಣವಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಈ ಎಲ್ಲಾ ದೃಷ್ಟಿಕೋನಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಈ ಅಧ್ಯಾಯದಲ್ಲಿ ಕಾರ್ಲ್ ಮಾರ್ಕ್ಸ್‌ರವರ ಕೃತಿಗಳು, ಲಕ್ಷ್ಮೀ ಸುಬ್ರಹ್ಮಣ್ಯಂ ಕೃತಿ, ಎಂ.ಎನ್. ನರಸಿಂಹಮೂರ್ತಿಯವರ ಕೃತಿ, ಬಾಸೆಲ್ ಮಿಶನ್‌ನ ಚರಿತ್ರೆಗೆ ಸಂಬಂಧಪಟ್ಟು ಸಿ.ಎಲ್. ಪುಟಾರ್ಡೋರವರ ಕೃತಿ, ಪ್ರಭಾಕರ್ ಪೀಟರ್ ವಿಲ್ಸನ್‌ರವರ ಕೃತಿ, ಜಿ. ಶಿರಿಯವರ ಕೃತಿ, ಸಿ.ಜೆ. ಹ್ಯಾಮಿಲ್ಟನ್‌ರವರ ಕೃತಿ, ಬಿ.ವಿ. ಕಕ್ಕಿಲ್ಲಾಯರವರ ಕೃತಿ, ವಿಜಯ್ ತಂಬಂಡ ಪೂಣಚ್ಚರವರ ಕೃತಿ, ಬಿ.ಎಲ್. ರೈಸ್‌ರವರ ಗಜೆಟಿಯರ್, ಟಿ.ಡಬ್ಲ್ಯೂ ವೆನ್‌ರವರ ಹಾಗೂ ಇ.ಎಂ.ಎಸ್ ನಂಬೂದಿರಿಪಾದ್‌ರವರ ಕೃತಿಗಳನ್ನು ಆಕರ ಗ್ರಂಥಗಳನ್ನಾಗಿ

ಬಳಸಿಕೊಳ್ಳಲಾಗಿದೆ. ಸ್ವಾತಂತ್ರ್ಯ ಪೂರ್ವದ ವಿವಿಧ ಪತ್ರಿಕಾ ವರದಿಗಳು, ಸ್ಮರಣ ಸಂಚಿಕೆಗಳು ಹಾಗೂ ಬಿಡಿ ಬರಹಗಳನ್ನು ಉಪಯೋಗಿಸಲಾಗಿದೆ. ಮುಂಬಯಿ ಪತ್ರಾಗಾರದ ದಾಖಲೆಗಳು, ಚೆನ್ನೈ ಪತ್ರಾಗಾರದ ದಾಖಲೆಗಳು, ಮಂಗಳೂರಿನ ಕೆಟಿಸಿ ಪತ್ರಾಗಾರದ ದಾಖಲೆಗಳು ಈ ಅಧ್ಯಾಯದಲ್ಲಿ ಬಳಸಿಕೊಳ್ಳಲಾಗಿದೆ. ಇದಲ್ಲದೆ ದ.ಕ ಜಿಲ್ಲೆಗೆ ಇನ್ನೂರು ವರ್ಷಗಳು ಸಂದಿರುವ ನೆನಪಿನ ಪೊಲಿ ಎಂಬ ಸ್ಮರಣ ಸಂಚಿಕೆ, ಮಂಗಳೂರು ದರ್ಶನ ಎಂಬ ಮೂರು ಸಂಪುಟಗಳ ಮಹಾನಗರ ಪಾಲಿಕೆಯ ಸ್ಮರಣ ಸಂಚಿಕೆ, ಅಬ್ಬಕ್ಕ ದೇವಿ ನೆನಪಿನ ಸ್ಮರಣ ಸಂಚಿಕೆಗಳನ್ನೂ ಉಪಯೋಗಿಸಲಾಗಿದೆ. ಇದೇ ರೀತಿ ಮೌಖಿಕ ಮತ್ತು ಕಾರ್ಮಿಕ ನಾಯಕರುಗಳೊಂದಿಗಿನ ಸಂದರ್ಶನದ ಸಾರಾಂಶಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

ಈ ಅಧ್ಯಾಯದ ಪ್ರಥಮ ಭಾಗದಲ್ಲಿ ವಸಾಹತುಶಾಹಿ ಕರಾವಳಿಯಲ್ಲಿ ಬ್ರಿಟಿಷ್ ವಾಣಿಜ್ಯೋದ್ಯಮ ಮತ್ತು ಸಿದ್ಧಾಂತಗಳ ಮುಖಾಮುಖಿಯನ್ನು ಮಾಡಲಾಗಿದೆ. ಎರಡನೇ ಭಾಗದಲ್ಲಿ ವ್ಯಾಪಕ ವಾಣಿಜ್ಯೀಕರಣದ ಪರಿಣಾಮವಾಗಿ, ವಸಾಹತುಶಾಹಿ ಆರ್ಥಿಕತೆಯ ಹಿನ್ನೆಲೆಯಿಂದ ಸ್ಥಳೀಯ ವ್ಯಾಪಾರ, ಕರಕುಶಲ ಮತ್ತು ಕೃಷಿರಂಗದ ನಾಶದ ಬಗ್ಗೆ ವಿಶ್ಲೇಷಿಸಲಾಗಿದೆ. ಮೂರನೇ ಭಾಗದಲ್ಲಿ ದುಡಿಯವ ವರ್ಗ ಮತ್ತು ಬ್ರಿಟಿಷ್ ಪ್ರಭುತ್ವ ಹಾಗೂ ಕೈಗಾರಿಕೆಗಳ ಮಾಲೀಕರುಗಳೊಂದಿಗೆ ನಡೆದ ಮುಖಾಮುಖಿ ಮತ್ತು ಸಮರಧೀರ ಚಳುವಳಿಯ ಬಗ್ಗೆ ವಿಶ್ಲೇಷಿಸಲಾಗಿದೆ. ಇದೇ ಭಾಗದಲ್ಲಿ ಸಮರಧೀರ ರೈತ ಚಳುವಳಿಗಳು ಭೂಮಾಲಕರ ವಿರುದ್ಧ ಮತ್ತು ಬ್ರಿಟಿಷ್ ಪ್ರಭುತ್ವಗಳ ವಿರುದ್ಧ ನಡೆಸಿದ ಹೋರಾಟಗಳನ್ನು ವಿಶ್ಲೇಷಿಸಲಾಗಿದೆ. ನಾಲ್ಕನೇ ಭಾಗದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳ ಘಟನಾವಳಿಗಳನ್ನು ವಿಶ್ಲೇಷಿಸಲಾಗಿದೆ. ಕೊನೆಯ ಭಾಗದಲ್ಲಿ ಈ ಅಧ್ಯಾಯದ ಸಂಕ್ಷಿಪ್ತ ಫಲಿತಗಳನ್ನು ಚರ್ಚಿಸಲಾಗಿದೆ.

ಬ್ರಿಟಿಷರು ಕರಾವಳಿ ಕರ್ನಾಟಕವನ್ನು ೧೭೯೯ ರಿಂದ ಸ್ವಾಧೀನ ಪಡಿಸಿಕೊಂಡು ತಮ್ಮ ನಿರಂಕುಶ ವಸಾಹತುಶಾಹಿ ಆಡಳಿತದ ಶೋಷಣೆಯ ವಿವಿಧ ರೂಪಗಳನ್ನು ನಿರಂತರವಾಗಿ ಜಾರಿಗೊಳಿಸಿದರು. ಕರಾವಳಿ ಕರ್ನಾಟಕ ಭಾರತದ ಆಹಾರದ ಕಣಜವೆಂದು ೧೭ನೇ ಶತಮಾನದಲ್ಲಿ ಪರಿಗಣಿತವಾದ ಈ ಪ್ರಾಂತ್ಯದಲ್ಲಿ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ, ಕೃಷಿ ಪ್ರಧಾನ ಆರ್ಥಿಕತೆಯ ಬದಲು ವಾಣಿಜ್ಯೋದ್ಯಮಕ್ಕೆ ಪೂರಕವಾದ ಕೃಷಿಯ ಬೆಳವಣಿಗೆಗೆ ಉತ್ತೇಜನ ನೀಡಿತ್ತು. ಬ್ರಿಟಿಷರು ವಾಣಿಜ್ಯ ಹಿತಾಸಕ್ತಿಗಾಗಿ ರೂಪಿಸಿದ ಹಲವಾರು ಏಕಸ್ವಾಮ್ಯ ನೀತಿಗಳು ಮತ್ತು ಕಾನೂನು ಕಟ್ಟಳೆಗಳಿಂದ ತೀವ್ರ ಸಂಕಷ್ಟಕ್ಕೆ ಒಳಗಾದ ರೈತಾಪಿ ಜನತೆ ಪ್ರತಿರೋಧ ಸಂಘರ್ಷಗಳ ಅಲೆಗಳಲ್ಲಿ ಭಾಗವಹಿಸಿ ಆಕ್ರೋಶ ವ್ಯಕ್ತಪಡಿಸಿದರು. ಆದರೆ ಬಲಾಢ್ಯವಾಗಿ ಸಂಘಟಿತರಾದ ಬ್ರಿಟಿಷ್ ಪ್ರಭುತ್ವ ಇವೆಲ್ಲವುಗಳನ್ನು ಧ್ವಂಸಗೊಳಿಸಿ ಮತ್ತಷ್ಟು ತೀವ್ರವಾದ ತನ್ನ ಶೋಷಣಾ ನೀತಿಯನ್ನು ಮುಂದುವರಿಸಿತು. ಅಂತರರಾಷ್ಟ್ರೀಯ ವಾಣಿಜ್ಯೋದ್ಯಮಗಳ ಹತ್ತಿ ಬಿಕ್ಕಟ್ಟು ಉದ್ಭವಿಸಿದಾಗ ಇಂಗ್ಲೆಂಡಿನ ವಾಣಿಜ್ಯೋದ್ಯಮಿಗಳ ಒತ್ತಡಕ್ಕೆ ಅನುಗುಣವಾಗಿ ಕರಾವಳಿ ಕರ್ನಾಟಕವನ್ನು ವಿಭಜಿಸುವ ಮೂಲಕ ಕರಾವಳಿ ಕರ್ನಾಟಕದ ಐಕ್ಯತಾ ಮನೋಭಾವದೊಂದಿಗೆ ಸಂಘರ್ಷವನ್ನು ನಿರೂಪಿಸಿತು. ಪ್ರಸ್ತುತ ಈ ಅಧ್ಯಾಯವು ಬ್ರಿಟಿಷ್ ವಸಾಹತುಶಾಹಿಯ ಕೊನೆಯ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮದ ಹಿತಾಸಕ್ತಿ ಮತ್ತು ರೈತಾಪಿ ಕೃಷಿಕೂಲಿ ಕಾರ್ಮಿಕವರ್ಗದ ಮುಖಾಮುಖಿ, ಸಂಘರ್ಷದ ಚರಿತ್ರೆಯನ್ನು ವಿಶ್ಲೇಷಿಸಲಾಗಿದೆ.

ವಸಾಹತುಶಾಹಿ ಕಾಲಘಟ್ಟದ ಅಂತಿಮ ವರ್ಷಗಳಲ್ಲಿ ನಡೆದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳು ಕರಾವಳಿ ಕರ್ನಾಟಕದಲ್ಲಿ ಪಡೆದುಕೊಂಡ ವಿವಿಧ ಆಯಾಮಗಳನ್ನು ಗುರುತಿಸಲಾಗಿದೆ. ಈ ಕಾಲಘಟ್ಟದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆದು ಬಂದ ವಸಾಹತುಶಾಹಿ ಮತ್ತು ರಾಷ್ಟ್ರೀಯವಾದದ ಪರಿಕಲ್ಪನೆಗಳನ್ನು ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷಗಳ ಪರಿಸ್ಥಿತಿಗಳಿಗೆ ಅನ್ವಯಿಸಿ ವಿಶ್ಲೇಷಿಸಲಾಗಿದೆ.

* * * *

**ವಸಾಹತುಶಾಹಿ ಕರಾವಳಿಯಲ್ಲಿ ಬ್ರಿಟಿಷ್ ವಾಣಿಜ್ಯೋದ್ಯಮ ಮತ್ತು ಸಿದ್ಧಾಂತಗಳ ಮುಖಾಮುಖಿ**

ಬ್ರಿಟಿಷ್ ಖಾಸಗಿ ವ್ಯಾಪಾರೋದ್ಯಮಿಗಳಿಗೆ ಸಂಬಂಧಿಸಿದಂತೆ ೧೮೧೩ರ ವೇಳೆಗೆ ಇಂಗ್ಲೆಂಡ್ ಮತ್ತು ಭಾರತದಲ್ಲಿ ವಾಣಿಜ್ಯೋದ್ಯಮದ ಮಹತ್ವಪೂರ್ಣ ಪಾತ್ರದ ಬಗ್ಗೆ ಇರುವ ಮನೋಭಾವದಲ್ಲಿ ಸಾಕಷ್ಟು ಬದಲಾವಣೆಯಾಗಿತ್ತು. ಬ್ರಿಟನ್‌ನ ಪ್ರಪ್ರಥಮ ಕೈಗಾರಿಕಾ ಕ್ರಾಂತಿಯ ಹರಿಕಾರರೂ ಮತ್ತು ಫಲಾನುಭವಿಗಳೂ ಆಗಿದ್ದ ಇಂಗ್ಲೆಂಡಿನ ಖಾಸಗಿ ಉದ್ಯಮಿಗಳು ಅವರ ಕೈಗಾರಿಕೆಗಳಿಗೆ ಭಾರತದಲ್ಲಿ ಮುಕ್ತತೆಯ ವಾದವನ್ನು ಬೆಂಬಲಿಸುತ್ತಾ, ಭಾರತವನ್ನು ಮುಕ್ತವಾಗಿ ತೆರೆದಿಡಬೇಕೆಂದು ಬಯಸಿದ್ದರು.[೧] ಈ ರೀತಿ ಮುಕ್ತ ವಾತಾವರಣದಿಂದ ಭಾರತಕ್ಕೆ ಬಂಡವಾಳ ಮತ್ತು ತಾಂತ್ರಿಕತೆಯು ವರ್ಗಾವಣೆಗೊಂಡು ಭಾರತದ ಸರ್ವಾಂಗೀಣ ಅಭಿವೃದ್ಧಿ ಸಾಧ್ಯ ಎಂಬ ಚರ್ಚೆ ಸಾರ್ವತ್ರಿಕವಾಗಿ ನಡೆಯುತ್ತಿತ್ತು (ಲಕ್ಷ್ಮೀ ಸುಬ್ರಹ್ಮಣಿಯನ್ ೨೦೧೦:೯೪). ಈ ವಾದ ಈಸ್ಟ್ ಇಂಡಿಯಾ ಕಂಪನಿಯ ಲೈಸನ್ಸ್‌ನ್ನು ನವೀಕರಿಸುವ ಸಂದರ್ಭದಲ್ಲಿ ಪ್ರಬಲವಾಗಿ ಬೆಳೆದು ಬಂತು. ಈ ಸಂದರ್ಭದಲ್ಲಿ ಎರಡು ಪ್ರಮುಖ ಬೇಡಿಕೆಗಳೂ ರೂಪಿತವಾಗಿತ್ತು. ಅವುಗಳೆಂದರೆ:

೧. ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಏಕಸ್ವಾಮ್ಯ ರದ್ದು ಮಾಡಿ ಅದನ್ನು ಚೀನಾಕ್ಕೆ ಮಾತ್ರ ಅನ್ವಯಿಸುವುದು.

೨. ಭಾರತದಲ್ಲಿ ಕ್ರಿಶ್ಚಿಯನ್ ಮಿಶನರಿಗಳಿಗಾಗಿ ಚಟುವಟಿಕೆ ನಡೆಸಲು ಮತ್ತು ಮತಧರ್ಮಗಳ ಪ್ರಚಾರಕ್ಕೆ ಅವಕಾಶ ನೀಡುವುದು(ಲಕ್ಷ್ಮೀ ಸುಬ್ರಹ್ಮಣಿಯನ್ ೨೦೧೦:೯೧).

ಭಾರತಕ್ಕೆ ಸಂಬಂಧಿಸಿದಂತೆ ಈಸ್ಟ್ ಇಂಡಿಯಾ ಕಂಪನಿ ಮತ್ತು ಬ್ರಿಟಿಷ್ ಪ್ರಭುತ್ವ ಹೊಂದಿದ್ದ 'ಒರಿಯಂಟಲಿಸಂ'[೨] ಎಂಬ ಕಣ್ಣೋಟದಿಂದ 'ಪಾಶ್ಚಾತ್ಯೀಕರಣ'[೩] ಎಂಬ ಹೊಸ ಮಜಲಿಗೆ ಬದಲಾವಣೆ ಹೊಂದಿತ್ತು. ಇದಾದ ನಂತರ ಮತ್ತೆ ೨೦ ವರ್ಷಗಳಲ್ಲಿ ಕಂಪನಿಯ ನವೀಕರಣದ ಪ್ರಶ್ನೆ ಬಂದಾಗ ಇಂಗ್ಲೆಂಡಿನಲ್ಲಿ ವ್ಯಾಪಕವಾದ ಪ್ರತಿರೋಧಗಳು ಬೆಳೆದು ಬಂತು. ಚೈನಾದೊಂದಿಗೆ ಇದ್ದ ಟೀ ಉದ್ಯಮದ ಏಕಸ್ವಾಮ್ಯವನ್ನು ರದ್ದು ಮಾಡಬೇಕೆಂದು ಒತ್ತಾಯಿಸಲಾಯಿತು. ಇದೇ ರೀತಿ ಎಲ್ಲಾ ರೀತಿಯ ಏಕಸ್ವಾಮ್ಯಕ್ಕೂ ವಿರೋಧ ಅಭಿವ್ಯಕ್ತಗೊಂಡಿತ್ತು. ಇದರ ಪರಿಣಾಮವಾಗಿ ಕಂಪನಿಯು ಕೇವಲ ರಾಜಕೀಯ ಅಧಿಕಾರದ ಕಾರ್ಯ ಚಟುವಟಿಕೆಗಳಿಗೆ ಮೀಸಲಾಗಿರಿಸಲ್ಪಟ್ಟಿತ್ತು. ಆದರೂ ಸಹ ೧೮೩೩ಕ್ಕೆ ಕಂಪನಿಯ ಲೈಸನ್ಸ್ ಮತ್ತೆ ನವೀಕರಿಸಲ್ಪಟ್ಟಿತ್ತು. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರೋದ್ಯಮದ ಏಕಸ್ವಾಮ್ಯಕ್ಕೆ

ತಡೆಹೇರಲ್ಪಟ್ಟಿತ್ತು. ಈಗಾಗಲೇ ಚರ್ಚಿಸಿರುವಂತೆ ಈ ಬದಲಾವಣೆಗಳೊಂದಿಗೆ ಈ ಮೊದಲಿದ್ದ ಓರಿಯಂಟ್‌ಲಿಸಂನ ಸಿದ್ಧಾಂತದ ಬದಲು ಸಾಮ್ರಾಜ್ಯಶಾಹಿ ಪರವಾದ ಸಿದ್ಧಾಂತಗಳು ಬ್ರಿಟಿಷ್ ವಾಣಿಜ್ಯವಲಯದಲ್ಲಿ ರೂಪೀಕರಿಸಲ್ಪಟ್ಟಿತ್ತು. ಇದರ ಮೂರು ಸ್ತರಗಳೇ, ಫ್ರೀ ಟ್ರೇಡರ್ಸ್ (ಮುಕ್ತ ವ್ಯಾಪಾರ), ಉಪಯುಕ್ತತೆ ಮತ್ತು ಇವಾಂಜಲಿಸ್ಟ್ (ಮಿಷನರಿಗಳು)ಗಳು ಎಂಬುದಾಗಿದೆ. ಜೆ.ಎಸ್. ಮಿಲ್ಲ್‌ರವರು ಉಪಯುಕ್ತತೆ ಸಿದ್ಧಾಂತದ ಪ್ರಮುಖ ಬರಹಗಾರರೂ ಪ್ರತಿಪಾದಕರೂ ಆಗಿದ್ದರು (ಲಕ್ಷ್ಮೀ ಸುಬ್ರಹ್ಮಣಿಯನ್ ೨೦೧೧:೯೭). ಇವಾಂಜಲಿಸ್ಟ್ (ಮಿಷನರಿ) ಪಂಥದ ಪ್ರಬಲ ಪ್ರತಿಪಾದಕ ಚಾರ್ಲಿಸ್ ಗ್ರಾಂಟ್ ಆಗಿದ್ದರು.

ಭಾರತವನ್ನು ಅಧೋಗತಿಯಿಂದ ಮೇಲೆತ್ತಲು ಇವಾಂಜಲಿಕಲ್ ಸಿದ್ಧಾಂತದ ಕಾರ್ಯಕ್ರಮಗಳು ಮತ್ತು ಕ್ರಿಶ್ಚಿಯನ್ ಮತೀಯ ವಿಚಾರಗಳಿಂದ ಮಾತ್ರ ಸಾಧ್ಯ ಎಂದು ಇವಾಂಜಲಿಕಲ್ ಸಿದ್ಧಾಂತಕಾರರು ಪ್ರತಿಪಾದಿಸಿದರು. ಇದರಿಂದಾಗಿ ಮಾತ್ರ ಭಾರತದ ಬೌದ್ಧಿಕ ಮತ್ತು ಭೌತಿಕ ಪ್ರಗತಿ ಸಾಧ್ಯ ಎಂದು ಪ್ರತಿಪಾದಿಸಿದರು. ಈ ಚಿಂತನೆಯ ನೆಲೆಗಟ್ಟಿನಲ್ಲೇ ಮುಕ್ತ ವಾಣಿಜ್ಯ ಸಿದ್ಧಾಂತದ ಪ್ರತಿಪಾದಕರು ಮತ್ತು ಇವಾಂಜಲಿಕಲ್ ಸಿದ್ಧಾಂತದ ಪ್ರತಿಪಾದಕರು ಒಂದೇ ವಾದದ ಅಡಿಯಲ್ಲಿ ಸಂಧಿಸಲ್ಪಡುತ್ತಾರೆ. ಮುಕ್ತ ವ್ಯಾಪಾರದ ಪ್ರತಿಪಾದಕರಿಗೆ ಬ್ರಿಟಿಷರು ಉತ್ಪಾದಿತ ಕೈಗಾರಿಕಾ ವಸ್ತುಗಳಿಗೆ ಭಾರತವು ಒಂದು ದೊಡ್ಡ ಮಾರುಕಟ್ಟೆಯನ್ನು ಹೊಂದಿದೆ. ಅದೇ ರೀತಿ ಭಾರತದಲ್ಲಿ ಕಚ್ಚಾ ವಸ್ತುಗಳು ಯಥೇಚ್ಛವಾಗಿ ಉತ್ಪಾದಿಸಲ್ಪಡುತ್ತಿರುವುದರಿಂದ ಇಂಗ್ಲೆಂಡಿಗೆ ಅದನ್ನು ರಫ್ತು ಮಾಡುವುದರಿಂದ ಅಲ್ಲಿಯ ಕೈಗಾರಿಕೆಗಳಿಗೆ ಅನುಕೂಲವಾಗುತ್ತದೆ. ಇದು ಯಶಸ್ವಿಯಾಗಿ ಜಾರಿಯಾಗಲು ಶಿಕ್ಷಣ ಮತ್ತು ಮುಕ್ತ ವ್ಯಾಪಾರ ವ್ಯವಹಾರದ ವಾತಾವರಣ ಅನಿವಾರ್ಯ ಎಂಬುದು ಈ ಪಂಥದ ವಾದವಾಗಿತ್ತು. ಸಾಂಬಾರು ಪದಾರ್ಥಗಳ ವ್ಯಾಪಾರದಿಂದ ಲಾಭಗಳಿಸುವ ಯರೋಪಿಯನ್ನರ ಮೊದಲಿನ ವಾದಕ್ಕೆ ಬದಲಾಗಿ ಕೈಗಾರಿಕಾ ಉತ್ಪನ್ನಗಳ ಮಾರಾಟದಿಂದ ಬಂಡವಾಳ ಕ್ರೋಡೀಕರಣದತ್ತ ವಾಲಿತು. ಈ ಹಿನ್ನೆಲೆಯಲ್ಲಿ ಈಸ್ಟ್ ಇಂಡಿಯಾ ಕಂಪನಿ ಕಂದಾಯ ಸಂಗ್ರಹಣೆ, ಕಾನೂನು ಮತ್ತು ಸುವ್ಯವಸ್ಥೆಯ ಪಾಲನೆಯೊಂದಿಗೆ ಮುಕ್ತ ವ್ಯಾಪಾರ ವ್ಯವಹಾರದ ವಾಣಿಜ್ಯೋದ್ಯಗಳಿಗೆ ಅಗತ್ಯ ಮೂಲಭೂತ ವ್ಯವಸ್ಥೆಗಳನ್ನು ಕಲ್ಪಿಸುವ ಒಂದು ಆಡಳಿತಾತ್ಮಕ ಕೇಂದ್ರವಾಗಿ ಮಾರ್ಪಾಡು ಹೊಂದಿತ್ತು.

ಕಾರ್ಲ್ ಮಾರ್ಕ್ಸ್‌ರವರು ಈಸ್ಟ್ ಇಂಡಿಯಾ ಕಂಪನಿಯ ಇತಿಹಾಸ ಹಾಗೂ ಅದು ಇಂಗ್ಲೆಂಡ್‌ನಲ್ಲಿ ತನ್ನ ಅಸ್ತಿತ್ವದ ಅವಧಿಯುದ್ದಕ್ಕೂ ವಾಣಿಜ್ಯ ಇತಿಹಾಸದಲ್ಲಿ ಲಜ್ಜೆಗೆಟ್ಟ ರೀತಿಯಲ್ಲಿ ವರ್ತಿಸಿದ ಪಾತ್ರವನ್ನು ೧೮೫೩ರ ಜೂನ್ ೨೪ ರಂದು ನ್ಯೂಯಾರ್ಕ್ ಡೈಲಿ ಟ್ರಿಬ್ಯೂನ್‌ನಲ್ಲಿ ಬರೆದ ಲೇಖನದ ಅಂಶವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

> ಈಸ್ಟ್ ಇಂಡಿಯಾ ಕಂಪನಿಯು ಸರಕಾರಕ್ಕೆ ಲಂಚವನ್ನು ಕೊಡುತ್ತಾ, ಪ್ರತಿಬಾರಿ ತನ್ನ ವ್ಯಾಪಾರದ ಸನ್ನದನ್ನು ನವೀಕರಿಸುವ ಪರಿಪಾಠವನ್ನು ಪ್ರಾರಂಭಿಸಿತು. ಇದೇ ರೀತಿ ಬ್ಯಾಂಕ್ ಆಫ್ ಇಂಗ್ಲೆಂಡ್ ಕೂಡಾ ಮಾಡುತ್ತಿತ್ತು. ಈ ಎರಡು ವಾಣಿಜ್ಯ ಸಂಸ್ಥೆಗಳು ತನ್ನ ಗುತ್ತೇದಾರಿಕೆಯ ಅವಧಿ ಮುಗಿದ ಪ್ರತಿಯೊಂದು ಕಾಲಘಟ್ಟದಲ್ಲೂ ತನ್ನ ಸನ್ನದನ್ನು ನವೀಕರಿಸಲು ಸರಕಾರಕ್ಕೆ ಹೊಸ ಸಾಲ ಕೊಡುವ ಮೂಲಕವಷ್ಟೇ ಹೊಸ ಬಳುವಳಿ (ಉಡುಗೊರೆ) ಕೊಡುವ ಮೂಲಕವಷ್ಟೇ ಲೈಸನ್ಸ್ ನವೀಕರಿಸಿಕೊಳ್ಳಲು

ಸಾಧ್ಯವಿದ್ದಿತ್ತು.[೪] ಆದರೆ ಏಳು ವರ್ಷಗಳ ಯುದ್ಧದ ಘಟನೆಗಳು[೫] ಈಸ್ಟ್ ಇಂಡಿಯಾ ಕಂಪನಿಯನ್ನು ವಾಣಿಜ್ಯ ಸಂಸ್ಥೆಯಾಗಿದ್ದುದರಿಂದ ಸೈನಿಕ ಮತ್ತು ಭೂ ಸ್ವತ್ತಿನ ಸಂಸ್ಥೆಯನ್ನಾಗಿ ಪರಿವರ್ತಿಸಿ ಅದು ಆಗಲೇ ಪ್ರಾಚ್ಯದಲ್ಲಿನ ಈಗಿನ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಅಡಿಪಾಯವನ್ನು ಹಾಕಿದರು (ಮಾರ್ಕ್ಸ್ ೧೯೮೦:೨೮).

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಭ್ರಷ್ಟಾಚಾರ ಮತ್ತು ಇನ್ನಿತರೆ ಕಾನೂನುಬಾಹಿರ ಕೃತ್ಯಗಳ ಮೂಲಕ ಪರವಾನಿಗೆಯನ್ನು ನವೀಕರಿಸಿಕೊಳ್ಳುತ್ತಿತ್ತು. ಇದರೊಂದಿಗೆ ವಾಣಿಜ್ಯ ಸಂಸ್ಥೆಯೊಂದು ಭಾರತದಂಥ ರಾಷ್ಟ್ರಗಳನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುವ ಮುಖಾಂತರ ಸೈನಿಕ ಮತ್ತು ಭೂಸ್ವತ್ತಿನ ಸಂಸ್ಥೆಯಾಗಿ ಪರಿವರ್ತನೆಗೊಂಡು ಸಾರ್ವಭೌಮ ಅಧಿಕಾರವನ್ನು ಚಲಾಯಿಸುತ್ತಿತ್ತು. ಆದುದರಿಂದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ಬ್ರಿಟಿಷ್ ಸರಕಾರ ಯಾವುದೇ ನೈತಿಕತೆ, ಸಾಮಾಜಿಕ, ರಾಜಕೀಯ ಮತ್ತು ವಾಣಿಜ್ಯದ ಮೌಲ್ಯಗಳಿಗೆ ಬೆಲೆ ಕೊಡುವ ಸಂಸ್ಥೆಯಾಗಿಲ್ಲ ಎಂದು ತಿಳಿದು ಬರುತ್ತದೆ. ಸಹಜವಾಗಿಯೇ ಅದು ಸಂಪತ್ತಿನ ಕ್ರೋಢೀಕರಣಕ್ಕಾಗಿ ಹಾತೊರೆಯುತ್ತಿದ್ದುದು ಸ್ಪಷ್ಟವಾಗಿ ಅಭಿವ್ಯಕ್ತವಾಗುತ್ತದೆ. ಈ ರೀತಿ ಯುದ್ಧಗಳ ಇತಿಹಾಸವು ಸಮಗ್ರವಾಗಿ ಭಾರತದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವಾದ ೧೮೫೭ ರಲ್ಲಿ ಕೊನೆಯನ್ನು ಕಂಡರೆ ಕರಾವಳಿ ಕರ್ನಾಟಕದಲ್ಲಿ ೧೮೩೭ ರ ಅಮರ ಸುಳ್ಯ ದಂಗೆಯೇ ಕೊನೆಯಾಯಿತು. ಕಲ್ಯಾಣಸ್ವಾಮಿ ಈತನನ್ನು ನಂದಾವರದಲ್ಲಿ ಸೇರಿಕೊಂಡ ಲಕ್ಷ್ಮಪ್ಪರಸ ಬಂಟ ಹಾಗೂ ಬೀರಣ್ಣ ಬಂಟ ಇವರುಗಳನ್ನು ಸೆರೆ ಹಿಡಿದು ಬಿಕ್ರನಕಟ್ಟೆಯಲ್ಲಿ (ಬಿಕರ್ಣಕಟ್ಟೆ) ೧೮೩೭ ರಲ್ಲಿ ಗಲ್ಲಿಗೇರಿಸಿದರು. ಕಾಸರಗೋಡಿನ ಬೀರಣ್ಣ ಬಂಟನ ದಂಗೆ ಕಾರ್ಯವನ್ನು ಧೈರ್ಯ ಮತ್ತು ಯುಕ್ತಿಗಳಿಂದ ಎದುರಿಸಿ ಅವನನ್ನು ಸೆರೆ ಹಿಡಿದು ಬ್ರಿಟಿಷರಿಗೆ ಒಪ್ಪಿಸಿದ ಪಾಡಿ ಸುಬ್ಬಯ್ಯನಿಗೆ ಕಂಪೆನಿ ಸರ್ಕಾರ ೧೮೩೮ರಲ್ಲಿ ಎರಡು ಚಿನ್ನದ ಬಳೆಗಳ ಇನಾಮು ಗೌರವಾರ್ಥ ನೀಡಿತ್ತು.[೬] ಅನಂತರ ಗಾಂಧಿ ಯುಗದವರೆಗೆ ಯಾವುದೇ ರೀತಿಯಾದ ವಿರೋಧವನ್ನು ಬ್ರಿಟಿಷರು ಇಲ್ಲಿ ಎದುರಿಸಲಿಲ್ಲ (ನರಸಿಂಹಮೂರ್ತಿ ೨೦೦೭:೫೭). ೧೮೫೭ರ ದಂಗೆಯ ಯಾವುದೇ ಲಕ್ಷಣಗಳು ಈ ಪ್ರಾಂತ್ಯದಲ್ಲಿ ರೂಪುಗೊಂಡಿಲ್ಲ.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಕರಾವಳಿ ಕರ್ನಾಟಕದಲ್ಲಿ ೧೭೯೯ರಲ್ಲಿ ಅಧಿಕಾರವನ್ನು ಕೈವಶಪಡಿಸಿಕೊಂಡ ಮೇಲೆ ಪ್ರಾರಂಭದ ನಾಲ್ಕು ದಶಕಗಳಲ್ಲಿ ಹಲವಾರು ರೀತಿಯ ಪ್ರತಿರೋಧಗಳನ್ನು ಎದುರಿಸಬೇಕಾಯಿತು. ಪ್ರತೀ ಸಂದರ್ಭದಲ್ಲೂ ಬ್ರಿಟಿಷ್ ಪ್ರಭುತ್ವ ಇವುಗಳನ್ನು ಅಮಾನುಷವಾಗಿ ನಿಯಂತ್ರಣಕ್ಕೆ ತಂದು ತನ್ನ ಶೋಷಣೆಯನ್ನು ಮತ್ತಷ್ಟು ತೀವ್ರಗೊಳಿಸುತ್ತಿತ್ತು. ಇದಾದ ನಂತರ ೧೮೩೭ರಲ್ಲಿ ಅಮರ ಸುಳ್ಯ ದಂಗೆ ನಡೆದ ಮೇಲೆ ದೀರ್ಘ ಅವಧಿಯಲ್ಲಿ ಯಾವುದೇ ಪ್ರತಿಭಟನೆಗಳು ಬೆಳೆದು ಬರಲಿಲ್ಲ. ಇದಕ್ಕೆ ಕೆಳಕಂಡ ಕಾರಣಗಳನ್ನು ಗುರುತಿಸಬಹುದು.

ಬ್ರಿಟಿಷರು ರೂಢಿಗೆ ತಂದ ರೈತವಾರಿ ಪದ್ಧತಿಯಲ್ಲಿ ಭೂಮಾಲಕರಿಗೆ ಮತ್ತು ಮಧ್ಯವರ್ತಿ ಲೇವಾದೇವಿಗಾರರಿಗೆ ಪ್ರಬಲವಾದ ಆರ್ಥಿಕ ಹಿತಾಸಕ್ತಿಯನ್ನು ಮತ್ತು ಸಾಮಾಜಿಕ ಹಾಗೂ ರಾಜಕೀಯ ಮಾನ್ಯತೆಯನ್ನು ದೊರಕಿಸಿಕೊಟ್ಟಿತ್ತು. ಇವರುಗಳು ಬ್ರಿಟಿಷ್ ಆಳ್ವಿಕೆಯ ಹಲವಾರು ಉಪಕ್ರಮಗಳಿಂದ

ಸಾಕಷ್ಟು ಪ್ರಯೋಜನ ಪಡೆದಿದ್ದರು. ಬಡ ಸಾಗುವಳಿದಾರರನ್ನು ಗೇಣಿದಾರರನ್ನಾಗಿ ಮಾಡಿ ವಿವಿಧ ರೀತಿಯಲ್ಲಿ ಶೋಷಣೆ ಮಾಡುತ್ತಿದ್ದರು. ಗೇಣಿ ಪದ್ಧತಿಯಲ್ಲಿ ಹಲವಾರು ಸ್ತರಗಳನ್ನು ರೂಪಿಸಿ ಕೆಲವು ಸಂದರ್ಭಗಳಲ್ಲಿ ಅವರನ್ನು ಭೂಮಿಯಿಂದ ಒಕ್ಕಲೆಬ್ಬಿಸಿ ಬೀದಿಪಾಲು ಮಾಡಿ ಅವರ ಭೂಮಿಗಳನ್ನು ತಾವೇ ವಶಪಡಿಸಿಕೊಳ್ಳುತ್ತಿದ್ದರು. ಆರ್ಥಿಕ ಲೇವಾದೇವಿ ಮಧ್ಯವರ್ತಿ ವಿಭಾಗ ಕೂಡ ಬ್ರಿಟಿಷ್ ವ್ಯವಸ್ಥೆಯಲ್ಲಿ ಎಲ್ಲಾ ರೀತಿಯ ಸ್ಥಾನಮಾನ ಗೌರವಗಳಿಗೆ ಪಾತ್ರರಾಗಿ ಬ್ರಿಟಿಷ್ ವ್ಯವಸ್ಥೆಯನ್ನು ಪ್ರಬಲರಾಗಿ ಬೆಂಬಲಿಸುವ ಗುರಾಣಿಯಂತೆ ೧೮೩೭ ರ ನಂತರ ಕಾರ್ಯಾಚರಿಸಿರುವುದು ಪ್ರಮುಖ ಆರ್ಥಿಕ ಕಾರಣವಾಗಿದೆ. ಇದರೊಂದಿಗೆ ೧೮೩೭ರ ಅಮರ ಸುಳ್ಯ ದಂಗೆಯಲ್ಲಿ ಭಾಗವಹಿಸಿದ ಕಲ್ಯಾಣಸ್ವಾಮಿ ಮತ್ತು ಇತರರನ್ನು ಬಂಧಿಸಿ ಕ್ರೂರವಾಗಿ ನೇಣುಗಂಬದಲ್ಲಿ ಹಲವಾರು ದಿನಗಳ ಕಾಲ ಶವಗಳು ನೇತಾಡುವಂತೆ ಮಾಡುವ ಮೂಲಕ, ಬ್ರಿಟಿಷ್ ಪ್ರಭುತ್ವದ ವಿರುದ್ಧ ಹೋರಾಡಿದರೆ ಈ ರೀತಿಯ ಕ್ರೂರ ಶಿಕ್ಷೆಗಳನ್ನು ಅನುಭವಿಸಬೇಕಾಗುತ್ತದೆ ಎಂಬ ಭಯದ ವಾತಾವರಣವನ್ನು ನಿರ್ಮಾಣ ಮಾಡಿದರು. ಇದು ಮುಂದಿನ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ಯಾವುದೇ ಹಿಂಸಾತ್ಮಕ ಪ್ರತಿಭಟನೆಗಳು ಬೆಳೆದು ಬಾರದಿರಲು ಮೊದಲನೇ ಕಾರಣವಾಗಿದೆ.

ಎರಡನೆಯದಾಗಿ ಈ ಮೊದಲಿನ ಕೂಟ ಬಂಡಾಯ, ತೆರಿಗೆ ಪಾವತಿಸದೇ ಇರುವಂತಹ ಮೌನ ಪ್ರತಿಭಟನೆ ಮೊದಲಾದವುಗಳಿಗೆ ನಾಯಕತ್ವ ನೀಡಿದ ಸರಕಾರಿ ಸೇವೆಯಲ್ಲಿದ್ದ ಸಮಾಜದ ಮೇಲ್ವರ್ಗದಿಂದ ಬಂದ ನಾಯಕರುಗಳು ಬ್ರಿಟಿಷರಿಂದ ವಿವಿಧ ರೀತಿಯ ದಬ್ಬಾಳಿಕೆಗೊಳಗಾಗಿದ್ದರು. ಇದು ಅನಂತರದ ದಿನಗಳಲ್ಲಿ ಬ್ರಿಟಿಷರ ಬಗ್ಗೆ ಭಯದ ಪರಿಸ್ಥಿತಿಯನ್ನು ನಿರ್ಮಾಣ ಮಾಡಿತ್ತು.

ಮೂರನೆಯದಾಗಿ ಶಿಕ್ಷಿತ ವ್ಯಾಪಾರಿ ಸಮುದಾಯಗಳಾಗಿದ್ದ ಜಿಎಸ್‌ಬಿ (ಗೌಡ ಸಾರಸ್ವತ ಬ್ರಾಹ್ಮಣ) ಸಮುದಾಯ ಮತ್ತು ಕ್ರೈಸ್ತ ಸಮುದಾಯಗಳು ಬ್ರಿಟಿಷ್ ವ್ಯವಸ್ಥೆಯ ಪರವಾಗಿ ಇದ್ದು ಬ್ರಿಟಿಷ್ ಸರಕಾರದ ಧೋರಣೆಗಳನ್ನು ವಾಣಿಜ್ಯದ ಕಾರಣಗಳಿಗಾಗಿ ಬೆಂಬಲಿಸಿದರು. ಬಾಸೆಲ್ ಮಿಶನ್ ಸಂಸ್ಥೆಯು ಇದೇ ಧೋರಣೆಯನ್ನು ಅನುಸರಿಸುತ್ತಿದ್ದರು.[೭] ಇದಕ್ಕೆ ಪೂರಕವಾಗಿ ಬಾಸೆಲ್ ಮಿಶನ್ ಮತ್ತು ಕ್ರೈಸ್ತ ಸಮುದಾಯದ ಬ್ರಿಟಿಷ್ ಪರವಾದ ಪಾತ್ರದ ಬಗ್ಗೆ ಸಿ. ಎಲ್. ಫುರ್ಟಾದೊ ಇವರು ಸಂಪಾದಿಸಿರುವ 'ಪರ್‌ಸ್ಪೆಕ್ಟಿವ್ ಆ್ಯಂಡ್ ರಿಸೋರ್ಸಸ್ ಫಾರ್ ಎ ಹಿಸ್ಟರಿ ಆಫ್ ಕ್ರಿಶ್ಚಿಯನ್ಸ್ ಇನ್ ಕರ್ನಾಟಕ' ಎಂಬ ಕೃತಿಯನ್ನು ಉಲ್ಲೇಖಿಸಬಹುದು.

> ಟಿಪ್ಪು ೧೭೯೯ ರಲ್ಲಿ ಮಡಿದ ಮೇಲೆ ಕೊಂಕಣಿ, ಕ್ರೈಸ್ತರು, ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿದ್ದರು. ಈ ಹಿನ್ನೆಲೆಯಲ್ಲಿ ಕೊಂಕಣಿ ಕ್ರೈಸ್ತರು ಜಿಲ್ಲೆಯ ಪ್ರಥಮ ಕಲೆಕ್ಟರ್‌ರಾದ ಥೋಮಸ್ ಮುನ್ರೋರನ್ನು ೧೭೯೯ರ ಜುಲೈ ೮ರಿಂದ ೧೮೦೦ರ ಡಿಸೆಂಬರ್ ೧೦ರವರೆಗಿನ ಅವಧಿಯಲ್ಲಿ ಭೇಟಿಯಾಗುತ್ತಿದ್ದರು(ಫುರ್ಟಾದೊ ೨೦೧೬:೩೦).

ನಾಲ್ಕನೆಯದಾಗಿ ಎ.ಆರ್. ಡಿಸ್ನಿಯವರು ಹೇಳುವಂತೆ ಯುರೋಪಿಯನ್ನರೊಂದಿಗೆ ಕರಾವಳಿ ಕರ್ನಾಟಕದ ಸಾಮಾಜಿಕ, ಆರ್ಥಿಕ ಮತ್ತು ವಾಣಿಜ್ಯದ ಮುಖಾಮುಖಿಯು ಕಾಸ್ಮೋಪೊಲಿಟನ್ ಸಂಸ್ಕೃತಿಯು ಬೆಳೆದು ಬರಲು ಕಾರಣವಾಗಿತ್ತು. ಇಂತಹ ಈ ಸಂಸ್ಕೃತಿ ಸಾಮಾನ್ಯವಾಗಿ ಅನ್ಯಾಯ, ದೌರ್ಜನ್ಯ,

ದಬ್ಬಾಳಿಕೆಗಳನ್ನು ಪ್ರತಿಭಟಿಸುವ ಬದಲು ಕಾನೂನು ಕಟ್ಟಳೆಗಳನ್ನು ವಿಧೇಯತೆಯಿಂದ ಪರಿಪಾಲಿಸುವ ಪ್ರವೃತ್ತಿ ಸಹಜವಾಗಿರುತ್ತದೆ. ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರ ಆಗಮನದಿಂದಲೇ ಕಾನೂನು ನೀತಿ, ನಿಯಮಗಳಿಗೆ ಗೌರವಿಸುವ ಪರಿಪಾಠ ಬೆಳೆದು ಬಂದಿರುವುದನ್ನು ಗಮನಿಸಬಹುದು. ೧೬೭೩ ರಲ್ಲಿ ಇಂಗ್ಲೀಷ್ ಪ್ರವಾಸಿಗನಾಗಿರುವ ಪ್ರೇಯರ್‌ರವರು ಕರಾವಳಿ ಕರ್ನಾಟಕ ಪ್ರಾಂತ್ಯಕ್ಕೆ ಭೇಟಿ ಕೊಟ್ಟಿದ್ದನು. ಆತನು ತನ್ನ ಬರವಣಿಗೆಯಲ್ಲಿ ಕೆನರಾ ಪ್ರಾಂತ್ಯದ ಜನರು ಉತ್ತಮ ಕಾನೂನುಗಳನ್ನು ಹೊಂದಿದ್ದು ಅವುಗಳನ್ನು ಗೌರವಿಸುವವರಾಗಿದ್ದಾರೆ ಎಂದು ತಿಳಿಸಿದ್ದಾನೆ.

ಐದನೆಯದಾಗಿ ಸಾಮಾಜಿಕವಾಗಿ ತೀವ್ರ ಶೋಷಣೆಗೆ ಒಳಗಾಗಿದ್ದ ಹಿಂದುಳಿದ ಮತ್ತು ತಳಸಮುದಾಯದ ಜನತೆ ಬಡತನ, ಹಿಂದುಳಿದಿರುವಿಕೆ ಮತ್ತು ಧಾರ್ಮಿಕ ಆಚಾರ ವಿಚಾರಗಳಲ್ಲೇ ಸಂಪೂರ್ಣವಾಗಿ ಇದ್ದುಕೊಂಡು ಯಾವುದೇ ರೀತಿಯ ಅನ್ಯಾಯಗಳನ್ನು ಪ್ರತಿಭಟಿಸುವ ಗೋಜಿಗೆ ಹೋಗಲಿಲ್ಲ. ಈ ಸಮುದಾಯ ಸಾಮಾನ್ಯವಾಗಿ ಕರ್ಮ ಸಿದ್ಧಾಂತದಲ್ಲಿ ಬಲವಾದ ನಂಬಿಕೆ ಹೊಂದಿರುತ್ತಾರೆ. ಇದರೊಂದಿಗೆ ಈ ತಳ ಸಮುದಾಯದ ದಲಿತರು ಮತ್ತು ಹಿಂದುಳಿದವರು ಭೂರಹಿತರ ಕೃಷಿ ಕಾರ್ಮಿಕರಾಗಿದ್ದವರು ವಲಸೆ ಕಾರ್ಮಿಕರಾಗಿ ಕಾಫಿ ತೋಟಗಳಿಗೆ ವಲಸೆ ಹೋದರು. ಉಳಿದ ವಿಭಾಗ ೧೮೫೦ ನಂತರ ಕರಾವಳಿ ಕರ್ನಾಟಕದಲ್ಲಿ ಬೆಳೆದು ಬಂದ ಸಣ್ಣಪುಟ್ಟ ಕೈಗಾರಿಕೆಗಳಲ್ಲಿ ತೊಡಗಿಸಿಕೊಂಡು ಜೀವನ ಸಾಗಿಸಲು ಪ್ರಾರಂಭಿಸಿದರು. ಪರಿಣಾಮವಾಗಿ ಅನ್ಯಾಯ, ಶೋಷಣೆ, ದೌರ್ಜನ್ಯಗಳ ವಿರುದ್ಧ ಸಿಡಿದೇಳಬೇಕಾದ ತಳ ಸಮುದಾಯ ಪರ್ಯಾಯ ವ್ಯವಸ್ಥೆಯ ಭಾಗವಾಗಿ ಹೋದರು. ಇದರರ್ಥ ಪ್ಲಾಂಟೇಶನ್, ಕೈಗಾರಿಕಾ ಘಟಕ ಮತ್ತು ವಾಣಿಜ್ಯೋದ್ಯಮ ಚಟುವಟಿಕೆಗಳು ಜಂಟಿಯಾಗಿ ಯಾವುದೇ ಪ್ರತಿರೋಧಗಳು ಬೆಳೆದು ಬರದಂತಹ ಪರಿಸ್ಥಿತಿಗೆ ಕಾರಣವಾಯಿತು.

ಈ ಎಲ್ಲಾ ಕಾರಣಗಳಿಂದಾಗಿ ಕರಾವಳಿ ಕರ್ನಾಟಕದಲ್ಲಿ ೧೮೩೭ ರ ಅಮರ ಸುಳ್ಯ ದಂಗೆಯ ನಂತರ ಗಾಂಧಿಯುಗದವರೆಗೆ ಯಾವುದೇ ರೀತಿಯ ಪ್ರತಿಭಟನೆಗಳು, ಹೋರಾಟಗಳು ನಡೆಯಲಿಲ್ಲ. ಆದರೆ ಗಾಂಧಿಯುಗದಲ್ಲಿ ನಡೆದ ಪ್ರತಿರೋಧಗಳಿಗೆ ಸಮಾಜದ ಮೇಲ್ವರ್ಗಗಳಿಂದ ಭೂಮಾಲೀಕ, ಪಾಳೆಯಗಾರಿ ಹಾಗೂ ಜಿಎಸ್‌ಬಿ ಸಮುದಾಯದಿಂದ ಬೆಳೆದು ಬಂದ ನಾಯಕರುಗಳೇ ನಾಯಕತ್ವ ನೀಡಿರುವುದನ್ನು ಗಮನಿಸಬಹುದು.[೮]

೧೯ನೇ ಶತಮಾನದ ಪ್ರಾರಂಭದಲ್ಲಿ ಕಂಡು ಬಂದ ರೈತಾಪಿ ಜನತೆಯ ಪ್ರತಿರೋಧಗಳು ಆ ಸ್ವರೂಪದಲ್ಲಿ ಮತ್ತೆ ಎಂದೂ ಮುಂದಿನ ಶತಮಾನದ ಉದ್ದಕ್ಕೂ ಕಂಡು ಬಂದಿಲ್ಲ. ಆದುದರಿಂದ ಬ್ರಿಟಿಷ್ ಸಾಮ್ರಾಜ್ಯಶಾಹಿ ಕರಾವಳಿ ಕರ್ನಾಟಕದ ತನ್ನ ದಮನಕಾರಿ ಆಡಳಿತ ಮತ್ತು ಸಂಪನ್ಮೂಲ ಸಂಗ್ರಹದ ಧೋರಣೆಯನ್ನು ನಿರಾತಂಕವಾಗಿ ಮುಂದುವರಿಸಿತು.

ಈ ಅವಧಿಯಲ್ಲಿ ಅಂದರೆ ೧೯ನೇ ಶತಮಾನದ ಪ್ರಥಮಾರ್ಧದಲ್ಲಿ ಕೈಗಾರಿಕಾ ಘಟಕಗಳ ಪ್ರಾರಂಭದೊಂದಿಗೆ ಹೊಸ ಕಾರ್ಮಿಕ ವರ್ಗ ಕರಾವಳಿ ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಬದುಕಿನಲ್ಲಿ ಬೆಳೆದು ಬಂತು. ಆದರೆ ಬ್ರಿಟಿಷ್ ಪ್ರಭುತ್ವ ಏಕಮುಖ ಪ್ರವಾಹದಂತೆ ನಿರಾತಂಕವಾಗಿ ಚಲಿಸುತ್ತಿತ್ತು. ಪ್ರತ್ಯಕ್ಷವಾಗಲೀ, ಪರೋಕ್ಷವಾಗಲೀ ಅದನ್ನು ಕನಿಷ್ಟ ಪಕ್ಷ ಬೌದ್ಧಿಕವಾಗಿಯೂ ತರಾಟೆಗೆ

ತೆಗೆದುಕೊಳ್ಳುವ ಸಂಘರ್ಷಮಯ ಮನೋಸ್ಥಿತಿಗಳು ಬೆಳೆದು ಬರಲಿಲ್ಲ. ಆದರೆ ೨೦ನೆಯ ಶತಮಾನದಲ್ಲಿ ಇವುಗಳು ಸಂಘಟಿತ ಸ್ವರೂಪವನ್ನು ಪಡೆಯಿತು. ಶೋಷಿತವರ್ಗ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಸಂಘಟಿತಗೊಂಡು ಬ್ರಿಟಿಷ್ ಸಾಮ್ರಾಜ್ಯಶಾಹಿಯ ನೊಗವನ್ನು ಪ್ರಶ್ನಿಸಲು ಪ್ರಾರಂಭಿಸಿತು. ಈ ಹಿನ್ನೆಲೆಯಲ್ಲಿ ಪ್ರಥಮ ಜಾಗತಿಕ ಯುದ್ಧದ ಅವಧಿಯಲ್ಲಿ ರೂಪುಗೊಂಡ ಬ್ರಿಟಿಷ್ ಆಡಳಿತದ ಧೋರಣೆ ಮತ್ತು ಬಾಸೆಲ್ ಮಿಶನ್ ಪ್ರವರ್ತಿತ ಕೈಗಾರಿಕಾ ಘಟಕಗಳ ಸಂಘರ್ಷ ಒಂದು ಹೊಸ ಬೆಳವಣಿಗೆಯಾಗಿದೆ. ಇದು ಮುಂದೆ ಎರಡನೇ ಜಾಗತಿಕ ಯುದ್ಧದ ಅವಧಿಯಲ್ಲೂ ನಡೆಯಿತು. ಈ ಅವಧಿಯಲ್ಲಿ ವಿವಿಧ ರೀತಿಯ ಪ್ರತಿರೋಧದ ನೆಲೆಗಳು–ಕಾರ್ಮಿಕ ವರ್ಗ ಸಂಘಟಿತಗೊಂಡು ಹಂಚು, ಕಾಫಿ, ನೇಯ್ಗೆ ಮತ್ತು ಬೀಡಿ ಉದ್ಯಮದಲ್ಲಿ ಬೆಳೆದು ಬಂದುದನ್ನು ವಿಶ್ಲೇಷಿಸಲಾಗಿದೆ. ಅದೇ ರೀತಿ ರೈತಾಪಿ ಜನರ ಹಾಗೂ ಮೂರ್ತೆದಾರಿಕೆಯ ಜನ ವಿಭಾಗಗಳು ಬ್ರಿಟಿಷ್ ಪ್ರಭುತ್ವದ ವಾಣಿಜ್ಯ ನೀತಿಯೊಂದಿಗೆ ನಡೆಸಿದ ಸಂಘರ್ಷದ ಕಥಾನಕವನ್ನು ಇಲ್ಲಿ ಚರ್ಚೆಗೆ ಕೈಗೆತ್ತಿಕೊಳ್ಳಲಾಗಿದೆ.

**ವಾಣಿಜ್ಯೀಕರಣ ಮತ್ತು ಸ್ಥಳೀಯ ವ್ಯಾಪಾರ, ಕರಕುಶಲ ಮತ್ತು ಕೃಷಿರಂಗದ ನಾಶ**

ಮುಕ್ತ ವ್ಯಾಪಾರ, ಕೈಗಾರೀಕರಣ ಮತ್ತು ವಾಣಿಜ್ಯೀಕರಣದ ಪ್ರಕ್ರಿಯೆಗಳು ಕರಾವಳಿ ಕರ್ನಾಟಕದಲ್ಲಿ ೧೯ನೇ ಶತಮಾನದ ಕೊನೆಯ ಘಟ್ಟದಲ್ಲಿ ಪ್ರಾರಂಭವಾಯಿತು. ಈ ನಿಟ್ಟಿನಲ್ಲಿ ಬಾಸೆಲ್ ಮಿಶನ್‌ನಂತಹ ಸಂಸ್ಥೆಗಳು ಜನಜೀವನದ ಮೇಲೆ ಹಾಗೂ ಆರ್ಥಿಕತೆಯ ಮೇಲೆ ಪ್ರಭಾವವನ್ನು ಬೀರಲು ಪ್ರಾರಂಭಿಸಿದವು. ಬಾಸೆಲ್ ಮಿಶನ್ ಕ್ರೈಸ್ತ ಮತ ಪ್ರಚಾರಕ ಸಂಸ್ಥೆಗಳೂ, ವಾಣಿಜ್ಯ ಹಿತಾಸಕ್ತಿಗಳೂ ಪರಸ್ಪರ ಪೂರಕ ನೆಲೆಗಟ್ಟಿನಲ್ಲಿ ಬ್ರಿಟಿಷ್ ಸರಕಾರ ಮತ್ತು ಈಸ್ಟ್ ಇಂಡಿಯಾ ಕಂಪನಿಗಳ ಲೈಸನ್ಸ್ ನವೀಕರಣದ ಸಂದರ್ಭದಲ್ಲಿ ಸಹಕರಿಸಿದನ್ನು ಈಗಾಗಲೇ ಚರ್ಚಿಸಲಾಗಿದೆ. ಇವಾಂಜಲಿಸ್ಟ್ ವಿಚಾರದ ಭಾಗವಾಗಿ ಬಾಸೆಲ್ ಮಿಶನ್ ಸಂಸ್ಥೆಯು ಸ್ಥಾಪನೆಗೊಂಡು ಭಾರತವನ್ನು ಪ್ರವೇಶಿಸಿ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಚರಿತ್ರೆಯ ಅವಿಭಾಜ್ಯ ಅಂಗವಾಯಿತು.

ಬಾಸೆಲ್ ನಗರವು ಸ್ವಿಜರ್ಲೆಂಡ್, ಫ್ರಾನ್ಸ್ ಮತ್ತು ಜರ್ಮನಿಯ ಗಡಿ ಪ್ರದೇಶದ ನಗರವಾಗಿತ್ತು. ಇಲ್ಲಿ ಕ್ರಿಸ್ತನ ಜೀವನ ಸಂದೇಶ ಪ್ರಸಾರ ಮತ್ತು ಕ್ರೈಸ್ತ ಸಭೆಗಳ ಸ್ಥಾಪನೆಯ ಉದ್ದೇಶದಿಂದ ೧೮೧೫ ರಲ್ಲಿ ಬಾಸೆಲ್ ಮಿಶನ್ ಸ್ಥಾಪನೆಯಾಗುತ್ತದೆ. ಈ ಮಿಶನ್ ಲೂಥರನ್ ಸಂಪ್ರದಾಯ, ಪುನಃಸ್ಥಾನ ಸಂಪ್ರದಾಯ[೧೦], ಸ್ವಿಂಗಿಯಾನ್[೧೧] ಸಂಪ್ರದಾಯದ ಕೆಲವು ಕ್ರೈಸ್ತರು ಸಂಘಟಿಸಿದ ಮಿಶನರಿ ಸಂಸ್ಥೆಯಾಗಿತ್ತು. ಇದು ಸ್ವತಂತ್ರವಾದ, ಸ್ವಯಂ ಸೇವಾ ಮನೋಭಾವದ ಮಿಶನರಿಯಾಗಿ ಸರಕಾರದ ಅಥವಾ ರಾಜ್ಯದ ಚರ್ಚಿನ ಭಾಗವಾಗಿರಲಿಲ್ಲ. ಬ್ರಿಟಿಷ್ ಪಾರ್ಲಿಮೆಂಟ್ ೧೮೩೩ರಲ್ಲಿ ಭಾರತ ಎಲ್ಲಾ ದೇಶಗಳ ಮಿಶನರಿಗಳಿಗೂ ಮುಕ್ತವಾಗಿರಿಸಿದ ಸಂದರ್ಭದಲ್ಲಿ ಬಾಸೆಲ್ ಮಿಶನ್ ಭಾರತದಲ್ಲಿ ತನ್ನ ಕಾರ್ಯ ಚಟುವಟಿಕೆ ಆರಂಭಿಸಲು ನಿರ್ಧರಿಸುತ್ತದೆ. ಮಂಗಳೂರಿಗೆ ೧೮೩೪ ರಲ್ಲಿ ಬಾಸೆಲ್ ಮಿಶನ್‌ನ ನಾಲ್ಕು ಮಿಶನರಿಗಳು ಬರುತ್ತಾರೆ. ಬಾಸೆಲ್ ಮಿಶನ್ ಕರ್ನಾಟಕದಲ್ಲಿನ ಇತರ ಮಿಶನ್ ಸಂಸ್ಥೆಗಳಿಂದ ಭಿನ್ನವಾಗಿದ್ದು ಅದು ಕೇವಲ ಸುವಾರ್ತೆ ಸಾರಿ ಕ್ರೈಸ್ತೇತರರನ್ನು ಕ್ರೈಸ್ತ ಮತಕ್ಕೆ ಮತಾಂತರಿಸುವ ಕಾರ್ಯದಲ್ಲಿ ಮಾತ್ರ ತೊಡಗಿಕೊಳ್ಳದೆ ಜಗತ್ತು ಇಂದೂ ನೆನಪಿಸುವಂತಹ ಕೈಗಾರಿಕೆಗಳ ಸ್ಥಾಪನೆ, ಶಿಕ್ಷಣ, ಮುದ್ರಣ, ನೇಯ್ಗೆ ಕಾರ್ಖಾನೆ, ಕಾರ್ಯಾಗಾರ, ಕೃಷಿ, ಭಾಷೆ ಪತ್ರಿಕೋದ್ಯಮ

ಇತ್ಯಾದಿ ಕ್ಷೇತ್ರಗಳಲ್ಲೂ ಶ್ಲಾಘನೀಯ ಕಾರ್ಯಗಳನ್ನು ನಿರ್ವಹಿಸುತ್ತದೆ (ಅಶೋಕ್ ಡಿ'ಸೋಜಾ ೨೦೧೫:೨೫).

ಬ್ರಿಟಿಷ್ ಸರಕಾರವು ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳಿಗೆ ಹಾಗೂ ಕಂದಾಯ ವಸೂಲಿಗೆ ಹೆಚ್ಚಿನ ಗಮನ ಹರಿಸಿತೇ ಹೊರತು ಕರಾವಳಿ ಕರ್ನಾಟಕದ ಯಾವುದೇ ಕೈಗಾರಿಕೆಗಳನ್ನು ಸ್ಥಾಪಿಸುವ ಸಾಹಸಕ್ಕೆ ಕೈ ಹಚ್ಚಲಿಲ್ಲ. ಇಂತಹ ಸಂದರ್ಭದಲ್ಲಿ ಬಾಸೆಲ್ ಮಿಶನ್ ಹಲವು ಕೈಗಾರಿಕೆಗಳನ್ನು ಸ್ಥಾಪಿಸಿತು. ೧೯ನೇ ಶತಮಾನದಲ್ಲಿ ಕೈಗಾರಿಕಾ ಉತ್ಪನ್ನಗಳ ಗುಣಮಟ್ಟಕ್ಕೆ ಮಂಗಳೂರನ್ನು ಅಂತರಾಷ್ಟ್ರೀಯ ಮಟ್ಟಕ್ಕೆ ಗುರುತಿಸುವಲ್ಲಿ ಸಫಲತೆ ಹೊಂದಿತ್ತು. ಇದರಿಂದಾಗಿ ಇಲ್ಲಿನ ಆರ್ಥಿಕತೆಯ ಬೆಳವಣಿಗೆಗೆ ಚಾಲನೆ ನೀಡಿ ಮುಂಚೂಣಿಯಲ್ಲಿ ಇದ್ದುಕೊಂಡು ಜಿಲ್ಲೆಯ ಕೈಗಾರಿಕಾ ಕ್ಷೇತ್ರದಲ್ಲಿಯೇ ಅಗ್ರಗಣ್ಯ ಎನಿಸಿದೆ (ಪೀಟರ್ ೨೦೧೫:೧೨೬,೧೨೭).

ಕೃಷಿ ಸಮುದಾಯವನ್ನು ಗಮನಿಸಿ ಬಾಸೆಲ್ ಮಿಶನ್ ಕೃಷಿರಂಗದಲ್ಲೂ ಹೊಸ ಹೊಸ ಪ್ರಯೋಗವನ್ನು ಪ್ರಾರಂಭಿಸಿತು. ಬಲ್ಮಠದಲ್ಲಿ ವಾಣಿಜ್ಯ ಬೆಳೆ ಕಾಫಿಯನ್ನು ೧೮೪೦ ರಲ್ಲಿ ನೆಟ್ಟು ಕಾಫಿ ಪ್ಲಾಂಟೇಶನ್ ಮಾಡಲಾಯಿತು. ಆದರೆ ಅದು ನಿರೀಕ್ಷಿತ ಯಶಸ್ಸು ಕಾಣಲಿಲ್ಲ. ಕೈಗಾರಿಕಾ ತರಬೇತಿ ಶಾಲೆಯನ್ನು ೧೮೪೬ ರಲ್ಲಿ ಪ್ರಾರಂಭಿಸಿ ಇಲ್ಲಿ ಮರದ ಕೆಲಸ, ನೇಯ್ಗೆ, ಬಟ್ಟೆ ತಯಾರಿಕೆ ಮೊದಲಾದವುಗಳ ಬಗ್ಗೆ ತರಬೇತಿ ನೀಡಲಾಯಿತು. ಮುಂದೆ ಇದನ್ನು ಕೂಡ ಕೈಬಿಡಲಾಯಿತು. ಬಾಸೆಲ್ ಮಿಶನ್ "ಇಂಡಸ್ಟ್ರಿಯಲ್ ಕಮಿಶನ್"[೨] ಎಂಬ ಸಹ ಸಂಸ್ಥೆಯನ್ನು ೧೮೫೪ ರಲ್ಲಿ ಪ್ರಾರಂಭಿಸಿ 'ಕಾರ್ಲ್ ಹರಸಿನ್' ಎಂಬಾತನು ಈ ಸಂಸ್ಥೆಯ ಪ್ರಥಮ ಅಧ್ಯಕ್ಷನಾದನು. ಭಾರತದಲ್ಲಿ ಬಾಸೆಲ್ ಮಿಶನಿನ ಪರವಾಗಿ ಕೈಗಾರಿಕೆಗಳನ್ನು ಸ್ಥಾಪಿಸಿ ಅವುಗಳನ್ನು ನಡೆಸಿಕೊಂಡು ಬರುವುದು ಇಂಡಸ್ಟ್ರಿಯಲ್ ಕಮಿಶನ್‌ನ ಮುಖ್ಯ ಕಾರ್ಯಭಾರವಾಗಿತ್ತು. ಇದರ ಅಂಗವಾಗಿ ೧೮೬೫ರಲ್ಲಿ ಮಂಗಳೂರಿನ ಜೆಪ್ಪು ಎಂಬಲ್ಲಿ ಪ್ರಪ್ರಥಮ ಹಂಚಿನ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಮುಂದೆ ೧೮೮೨ ರಲ್ಲಿ ಕುದ್ರೋಳಿಯಲ್ಲಿ ಹಾಗೂ ೧೮೮೬ ರಲ್ಲಿ ಮಲ್ಪೆಯಲ್ಲಿ ಇನ್ನೊಂದು ಹಂಚಿನ ಕಾರ್ಖಾನೆಗಳು ಸ್ಥಾಪನೆಯಾಯಿತು.

ಬಾಸೆಲ್ ಮಿಶನ್‌ನ ಮೂಲಕ ಕೈಗಾರಿಕಾ ಕ್ಷೇತ್ರದಲ್ಲಾಗಿರುವ ಬದಲಾವಣೆಗಳು ಮಂಗಳೂರಿನ ಸ್ವರೂಪವನ್ನು ವಾಣಿಜ್ಯಾತ್ಮಕವಾಗಿ, ರಚನಾತ್ಮಕವಾಗಿ ಹಾಗೂ ಆರ್ಥಿಕವಾಗಿ ಪ್ರಭಾವಿಸಿದೆ. ಮಂಗಳೂರು ಕೇವಲ ವ್ಯಾಪಾರ ಕೇಂದ್ರವಷ್ಟೇ ಅಲ್ಲದೆ ವಸ್ತುಗಳನ್ನು ಉತ್ಪಾದಿಸುವ ನಗರವಾಗಿಯೂ ಬೆಳೆದಿದೆ (ಪೀಟರ್ ೨೦೧೫:೧೨೮).

ಬಾಸೆಲ್ ಮಿಶನ್‌ನ ಕೈಗಾರಿಕಾ ಉತ್ಪನ್ನಗಳಿಗೆ ವ್ಯವಸ್ಥಿತವಾದ ವಿತರಣಾ ಜಾಲದ ಅಗತ್ಯವಿತ್ತು. ಅದಕ್ಕಾಗಿ ಸಂಪನ್ಮೂಲ ಕ್ರೋಡೀಕರಣ ವಿತರಣೆ ಮತ್ತು ನಿಯಂತ್ರಣ ಸಾಧಿಸುವ ಹಿನ್ನೆಲೆಯಲ್ಲಿ ಬಾಸೆಲ್ ಮಿಶನ್ ಚರ್ಚೆ ನಡಸಿತು. ಈ ಹಿನ್ನೆಲೆಯಲ್ಲಿ ೧೮೫೯ ರಲ್ಲಿ ಬಾಸೆಲ್ ಮಿಶನ್ ಟ್ರೇಡಿಂಗ್ ಸಂಸ್ಥೆ ಪ್ರಾರಂಭಗೊಂಡು ಬಾಸೆಲ್ ಮಿಶನ್ ನಡೆಸುತ್ತಿದ್ದ ಎಲ್ಲಾ ಪ್ರಿಂಟಿಂಗ್ ಪ್ರೆಸ್, ನೇಯ್ಗೆ, ಹಂಚಿನ ಕಾರ್ಖಾನೆಗಳು ಇದರ ವ್ಯಾಪ್ತಿಗೆ ಒಳಗಾಯಿತು (ಬೆನ್ನೆಟ್:೨೦೧೫:೧೩೫).

ಪ್ರಥಮ ಮಹಾಯುದ್ಧ ೧೯೧೪ರಲ್ಲಿ ಪ್ರಾರಂಭವಾದ ಕೂಡಲೇ ಜರ್ಮನಿಯು ಇಂಗ್ಲೆಂಡಿನ ಶತ್ರು ರಾಷ್ಟ್ರವಾಗಿರುವ ಹಿನ್ನೆಲೆಯಲ್ಲಿ ಬಾಸೆಲ್ ಮಿಶನ್‌ನ ಕೈಗಾರಿಕಾ ಚಟುವಟಿಕೆ, ಧಾರ್ಮಿಕ ಚಟುವಟಿಕೆ, ಪತ್ರಿಕಾ ಮತ್ತು ವ್ಯಕ್ತಿಗತ ಸ್ವಾತಂತ್ರ್ಯದ ಮೇಲೆ ಬ್ರಿಟಿಷ್ ಸಾಮ್ರಾಜ್ಯಶಾಹಿ ದಿಗ್ಬಂಧನ ವಿಧಿಸಿತು. ಇದರಿಂದಾಗಿ ಬಾಸೆಲ್ ಮಿಶನಿನ ಮೇಲೆ ಗಂಭೀರ ಪ್ರಮಾಣದ ದುಷ್ಪರಿಣಾಮಗಳು ಎದುರಾದವು. ಬ್ರಿಟಿಷ್ ಸರಕಾರ ೧೯೧೪ರಲ್ಲಿ 'ದಿ ಡಿಫೆನ್ಸ್ ಇಂಡಿಯಾ ಆ್ಯಕ್ಟ್'ನ್ನು ಜಾರಿಗೊಳಿಸಿತು. ಇದರ ಪ್ರಕಾರ ಬ್ರಿಟಿಷರ ಶತ್ರು ರಾಷ್ಟ್ರದ ಪ್ರಜೆಗಳು ಒಂದೇ ಪ್ರದೇಶದಲ್ಲಿ ನೆಲೆಗೊಳ್ಳಬೇಕಿತ್ತು. ಮುಂದಿನ ಆದೇಶ ಬರುವ ತನಕ ಒಂದೇ ಸ್ಥಳದಲ್ಲಿ ಇದ್ದು ಪೊಲೀಸರಿಗೆ ತಮ್ಮ ಇರುವಿಕೆಯನ್ನು ಖಾತ್ರಿಪಡಿಸಿ ಸಹಿ ಹಾಕಬೇಕು. ಅಲ್ಲಿ ಅವರಿಗೆ ಮುಕ್ತವಾಗಿ ಬೆಸೆಯುವ, ಮಾತಾಡುವ ಹಕ್ಕು ಇರಲಿಲ್ಲ. ಹೆಚ್ಚು ಕಡಿಮೆ ಗೃಹ ಬಂಧನದಂತೆಯೇ ಇತ್ತು. ಬಾಸೆಲ್ ಮಿಶನ್‌ನಲ್ಲಿ ದುಡಿಯುವ ಎಲ್ಲಾ ಜರ್ಮನ್ ಪ್ರಜೆಗಳನ್ನು ಈ ಮೂಲಕ ಗೃಹ ಬಂಧನಕ್ಕೆ ಒಳಪಡಿಸಲಾಯಿತು. ಹೋಸ್ಟೈಲ್ ಫೋರಿನರ್ಸ್ ಟ್ರೇಡಿಂಗ್ ಆಕ್ಟ್ ೧೯೧೪ರ ಪ್ರಕಾರ ವೈರಿ ದೇಶಗಳ ವಾಣಿಜ್ಯ ವ್ಯವಹಾರಗಳ ಮೇಲೆ ನಿಯಂತ್ರಣವನ್ನು ಜಾರಿಗೊಳಿಸಿತ್ತು. ಇದರ ಪ್ರಕಾರ ಬಾಸೆಲ್ ಮಿಶನ್‌ನ ಎಲ್ಲಾ ಕೈಗಾರಿಕೆ, ವ್ಯಾಪಾರ, ವ್ಯವಹಾರಗಳನ್ನು ಕಸ್ಟೋಡಿಯನ್ ಆಫ್ ಎನಿಮಿ ಪ್ರಾಪರ್ಟೀಸ್ ಆಫೀಸರ್‌ರವರಿಗೆ ನೀಡಲಾಯಿತು. ಜರ್ಮನಿ ಪ್ರಜೆಗಳಾಗಿರುವ ಮಿಶನರಿಗಳನ್ನು ನಿರ್ದಿಷ್ಟವಾಗಿ ಫ್ಯಾಕ್ಟರಿಯಲ್ಲಿ ದುಡಿಯುತ್ತಿರುವವರನ್ನು ಶತ್ರು ರಾಷ್ಟ್ರದ ಪ್ರಜೆಗಳೆಂದು ಬಂಧಿಸಲಾಯಿತು. ಮಂಗಳೂರಿನ ಸುತ್ತಮುತ್ತ ಇದ್ದ ಬಾಸೆಲ್ ಮಿಶನ್‌ನ ಪ್ರೆಸನ್ನು ಹೊರತುಪಡಿಸಿ ಇತರೆಲ್ಲ ಕೈಗಾರಿಕಾ ಘಟಕಗಳನ್ನು, ಅದರ ಆಸ್ತಿ ಪಾಸ್ತಿಗಳನ್ನು ಮುಟ್ಟುಗೋಲು ಹಾಕಿ ಬ್ರಿಟಿಷ್ ಸರಕಾರ ಲಂಡನ್‌ನಲ್ಲಿ ವಿಶೇಷವಾಗಿ ರೂಪಿಸಿದ ಕಾಮನ್‌ವೆಲ್ತ್ ಟ್ರಸ್ಟಿಗೆ ನಿರ್ವಹಿಸಿ ಕೊಡಲಾಯಿತು (ದೇವದತ್ತ ೨೦೦೪:೧). ಅನಂತರ ಬಾಸೆಲ್ ಮಿಶನ್ ಹೆಸರಲ್ಲಿದ್ದ ಎಲ್ಲಾ ಕೈಗಾರಿಕೆ, ವಾಣಿಜ್ಯ ಸಂಸ್ಥೆಗಳ ಹೆಸರಿನ ಮುಂದೆ ಬಾಸೆಲ್ ಮಿಶನ್ ಎಂಬ ಹೆಸರಿನ ಬದಲು 'ಕಾಮನ್‌ವೆಲ್ತ್ ಟ್ರಸ್ಟ್'[೧೨] ಎಂದು ಕರೆಯಲ್ಪಟ್ಟಿತ್ತು.

ಇದರಿಂದಾಗಿ ಬಾಸೆಲ್ ಮಿಶನ್‌ನ ಕೈಗಾರಿಕಾ ಉತ್ಪಾದನೆ ಮತ್ತು ಮಾರುಕಟ್ಟೆಗಳಿಗೆ ತುಂಬಲಾರದ ನಷ್ಟವಾಯಿತು. ವ್ಯಾಪಾರ ವ್ಯವಹಾರ ಕುಸಿತಕ್ಕೊಳಗಾಯಿತು. ಈ ಪರಿಸ್ಥಿತಿ ಯುದ್ಧ ಮುಗಿಯುವವರೆಗೂ ಮುಂದುವರಿಯಿತು.

ಅನಂತರವೂ ಪರಿಸ್ಥಿತಿ ಸುಧಾರಿಸಲಿಲ್ಲ. ಒಂದನೇ ಮಹಾಯುದ್ಧ ಮುಗಿದ ನಂತರ ಮತ್ತೆ ನಿಷೇಧಗಳು ಇಲ್ಲದಿದ್ದರೂ ವ್ಯಾಪಾರ ವ್ಯವಹಾರ ಸಾಧಾರಣ ಮಟ್ಟದಲ್ಲಿ ಮುಂದುವರಿಯಿತು. ಎರಡನೇ ಬಾರಿಗೆ ಮಹಾಯುದ್ಧ ಪ್ರಾರಂಭವಾದಾಗ ೧೯೩೯ರಲ್ಲಿ ಮತ್ತೆ ಮೇಲ್ಕಂಡ ಎಲ್ಲಾ ನಿಷೇಧಾಜ್ಞೆಯ ಕಾನೂನುಗಳು ಪುನಃ ಜಾರಿಗೆ ಬರುತ್ತವೆ. ಆದುದರಿಂದ ಮತ್ತೆ ಯಥಾ ಪ್ರಕಾರ ಬಾಸೆಲ್ ಮಿಶನ್‌ನ ಕೈಗಾರಿಕಾ ವ್ಯಾಪಾರ ವ್ಯವಹಾರಗಳ ಮೇಲೆ ಬ್ರಿಟಿಷರ ನೇರ ನಿಯಂತ್ರಣ ಮುಂದುವರಿಯುತ್ತದೆ. ಇದರಿಂದಾಗಿ ಮತ್ತೊಮ್ಮೆ ಸಂದಿಗ್ಧಮಯ ದುಃಸ್ಥಿತಿ ಒದಗುತ್ತದೆ.

ಆದುದರಿಂದ ಕರಾವಳಿ ಕರ್ನಾಟಕ ವಾಣಿಜ್ಯೋದ್ಯಮ ಮತ್ತು ಸಂಘರ್ಷ ೨೦ನೇ ಶತಮಾನದಲ್ಲಿ ಸಾಮ್ರಾಜ್ಯಶಾಹಿ ಯುದ್ಧದ ಪರಿಣಾಮವಾಗಿ ನಡೆಯುತ್ತದೆ. ಇದರಿಂದಾಗಿ ಬಾಸೆಲ್ ಮಿಶನ್‌ನ ಆರ್ಥಿಕತೆ

ಮಾತ್ರವಲ್ಲ ಜಿಲ್ಲೆಯ ಜನಜೀವನವು ಕೂಡಾ ತೀವ್ರ ಬಿಕ್ಕಟ್ಟಿಗೆ ಒಳಗಾಗುತ್ತದೆ. ಒಂದೊಮ್ಮೆ ಒಂದೇ ಸಿದ್ಧಾಂತವಾಗಿರುವ ಓರಿಯಂಟಲಿಸಂ ಮುಕ್ತ ಆರ್ಥಿಕತೆ ಮತ್ತು ಇವಾಂಜಲಿಸ್ಟ್ ಸಿದ್ಧಾಂತದ ಆಧಾರದ ಮೇಲೆ ಪರಸ್ಪರ ಪೂರಕವಾಗಿ ಕಾರ್ಯಾಚರಿಸಿದ ಮಿಶನ್‌ನ ದೃಷ್ಟಿಕೋನವೂ ಮುಕ್ತ ಆರ್ಥಿಕತೆಯನ್ನು ಪ್ರತಿಪಾದಿಸಿದ ವಾಣಿಜ್ಯೋದ್ಯಮದ ಹಿತಾಸಕ್ತಿಗಳೂ ಪರಸ್ಪರ ಸಂಘರ್ಷ ಎದುರಿಸಿವೆ.

ಕೈಮಗ್ಗ ಮತ್ತು ನೇಯ್ಗೆ ಭಾರತದ ಪ್ರಮುಖ ಜೀವನಾಧಾರ ಕಸುಬಾಗಿತ್ತು. ಇದು ಮಾತ್ರವೇ ಗುಡಿಕೈಗಾರಿಕೆಗೆ ಸಂಬಂಧಿಸಿ ಭಾರತದ ಸ್ಥಾನವನ್ನು ಅಂತರಾಷ್ಟ್ರೀಯವಾಗಿ ಮೇಲಕ್ಕೆತ್ತರಿಸಿದ ಕೈಗಾರಿಕಾ ಉತ್ಪನ್ನವಾಗಿತ್ತು. ಈ ಹಿನ್ನೆಲೆಯಲ್ಲಿ ಸಿ.ಜೆ. ಹ್ಯಾಮಿಲ್ಟನ್‌ರವರು ತನ್ನ 'ಟ್ರೇಡ್ ಆ್ಯಂಡ್ ಟ್ರೇಡ್ ರಿಲೇಷನ್ಸ್ ಬಿಟ್ವೀನ್ ಇಂಗ್ಲೆಂಡ್ ಆ್ಯಂಡ್ ಇಂಡಿಯಾ (೧೬೦೦-೧೮೯೬)'ದಲ್ಲಿ ಈ ರೀತಿ ಉಲ್ಲೇಖಿಸಿರುತ್ತಾರೆ.

> ಭಾರತವು ಒಂದು (ಉತ್ಪಾದನೆಯಲ್ಲಿ) ಕೈಗಾರಿಕಾ ರಾಷ್ಟ್ರವಾಗಿರಲಿಲ್ಲ. ಆದರೆ ಕೈಮಗ್ಗ (ಹತ್ತಿಯಿಂದ ನೂಲು ಮಾಡುವುದು) ಮತ್ತು ನೇಯ್ಗೆ ಇದು ಅಂತರಾಷ್ಟ್ರೀಯವಾಗಿ ಮಾನ್ಯತೆ ಪಡೆದಿತ್ತು. ಕೈಮಗ್ಗವಂತೂ ಈಗ ಹೆಚ್ಚು ಕಡಿಮೆ ಭಾರತದಿಂದ ಮಾಯವಾಗಿತ್ತು. ಆದರೆ ನೇಯ್ಗೆ ಎಂದೂ ನಾಶವಾಗಿರಲಿಲ್ಲ. ೧೮೪೪ರ ಹೊತ್ತಿಗೆ ಇಂಗ್ಲೆಂಡಿನಿಂದ ಆಮದಾದ ನೂಲುಗಳಿಂದಲೇ ಭಾರತೀಯ ಬಟ್ಟೆಯ ಮಿಲ್‌ಗಳು ಕಾರ್ಯಾಚರಿಸುತ್ತಿತ್ತು (ಹ್ಯಾಮಿಲ್ಟನ್ ೧೯೧೯:೫).

ಈ ವಿಶ್ಲೇಷಣೆಯನ್ನು ಕರಾವಳಿ ಕರ್ನಾಟಕಕ್ಕೂ ಅನ್ವಯಿಸಬಹುದು. ಕರಾವಳಿ ಕರ್ನಾಟಕದಲ್ಲಿ ನೇಯ್ಗೆ ಒಂದು ಗುಡಿ ಕೈಗಾರಿಕೆಯಾಗಿತ್ತು. ಕರಾವಳಿಯ ಉದ್ದಕ್ಕೂ ಅಲ್ಲಲ್ಲಿ ಸಣ್ಣ ಪ್ರಮಾಣದಲ್ಲಿ ಮನೆಗಳನ್ನು ಆಧಾರಿಸಿ ನೇಯ್ಗೆಯ ಕೆಲಸ ನಡೆಯುತ್ತಿತ್ತು. ನೇಯ್ಗೆ ಕುಲಕಸುಬಾಗಿದ್ದು ಜನರ ಅವಶ್ಯಕತೆಯನ್ನು ಈಡೇರಿಸುತ್ತಿತ್ತು. ಇದನ್ನು ಹೊರತುಪಡಿಸಿ ವ್ಯಾಪಾರ-ವ್ಯವಹಾರದ ಬೇಡಿಕೆಗಳನ್ನು ಪೂರೈಸುವ ಗುರಿ ಹೊಂದಿರಲಿಲ್ಲ. ನೇಯ್ಗೆಗೆ ಬೇಕಾದ ಕಚ್ಚಾ ವಸ್ತು ಹತ್ತಿ ಬೆಳೆಗೆ ಪೂರಕವಾದ ವಾತಾವರಣ ಕರಾವಳಿ ಕರ್ನಾಟಕದಲ್ಲಿ ಇಲ್ಲದಿರುವುದರಿಂದ ಇಲ್ಲಿಗೆ ಹತ್ತಿಯು ಧಾರವಾಡ, ಹುಬ್ಬಳ್ಳಿ ಮೊದಲಾದ ಪ್ರದೇಶಗಳಿಂದ ಬರುತ್ತಿತ್ತು.

ಇಪ್ಪತ್ತನೆಯ ಶತಮಾನದಲ್ಲಿ ಮಂಗಳೂರು ಮತ್ತು ಉಡುಪಿ, ಮುಲ್ಕಿ, ಕುಂದಾಪುರಗಳ ಸುತ್ತ ಮುತ್ತ ವ್ಯವಸ್ಥಿತವಾದ ನೇಯ್ಗೆಗಾರಿಕೆಯ ಕೇಂದ್ರಗಳು ಬೆಳೆದು ಬಂದುವು. ಮಂಗಳೂರಲ್ಲಿ ಮಾರ್ಣಮಿಕಟ್ಟೆ, ಕಂಕನಾಡಿ, ಮುಖ್ಯ ಕೇಂದ್ರಗಳಾಗಿದ್ದವು. ಜಪ್ಪು, ಬಪ್ಪಾಲ್, ಪಡೀಲ್, ಕದ್ರಿ, ಬಿಕರ್ಣಕಟ್ಟೆಗಳಲ್ಲಿ ನೇಯ್ಗೆ ಕಾರ್ಖಾನೆಗಳನ್ನು ಬಾಸೆಲ್ ಮಿಶನ್ ಸಂಸ್ಥೆಯೂ ಹಾಗೂ ಇತರೆ ಖಾಸಗಿ ವ್ಯಕ್ತಿಗಳೂ ಪ್ರಾರಂಭಿಸಿದರು. ಆ ಸಂದರ್ಭದಲ್ಲಿ ಮಂಗಳೂರು ಕೇಂದ್ರವೊಂದರಲ್ಲೇ ೨೫೦ ರಿಂದ ೩೦೦ ರಷ್ಟು ನೇಯ್ಗೆಯ ಘಟಕಗಳು ಇದ್ದು ಅದರಲ್ಲಿ ಸರಿಸುಮಾರು ೮೦೦೦ಕ್ಕೂ ಅಧಿಕ ಮಂದಿ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದರು (ಶಿರಿ ೨೦೦೦:೨೧). ಬಾಸೆಲ್ ಮಿಶನ್ ಸಂಸ್ಥೆಯು ಇದನ್ನು ಒಂದು ಫ್ಯಾಕ್ಟರಿ ಅಥವಾ ಕಾರ್ಖಾನೆಯ ಸ್ವರೂಪದಲ್ಲಿ ಸಂಘಟಿಸಿತ್ತು. ಇದು ೧೮೪೪ರಲ್ಲಿ ಮೊದಲ ಬಾರಿಗೆ ಬೃಹತ್ ಪ್ರಮಾಣದಲ್ಲಿ ಬಟ್ಟೆ ತಯಾರಿಕಾ ಸಾಹಸಕ್ಕೆ ಕೈ ಹಾಕಿತ್ತು. ಮಂಗಳೂರಿನ ಬಲ್ಮಠದಲ್ಲಿ ಬಾಸೆಲ್ ಮಿಶನ್‌ನ ನೇಯ್ಗೆ ಕಾರ್ಖಾನೆಯು ೧೮೪೪ರಲ್ಲಿ ರೆವೆರೆಂಡ್ ಮಿಡ್ಜ್ ಎಂಬವರ ನಾಯಕತ್ವದಲ್ಲಿ ಪ್ರಾರಂಭವಾಯಿತು. ಈ ಕಾರ್ಖಾನೆಯು

೧೮೫೧ ರ ಹೊತ್ತಿಗೆ ೨೧ ಯುರೋಪಿಯನ್ ಮಗ್ಗಗಳನ್ನು ಹೊಂದಿತ್ತು. ಅದೇ ವರ್ಷ ಜೋನ್ ಹಲ್ಲರ್ ಎಂಬ ತಜ್ಞರು ಈ ಕಾರ್ಖಾನೆಯ ನಾಯಕತ್ವ ವಹಿಸಿಕೊಂಡನು. ಖಾಕಿ ಬಣ್ಣವನ್ನು ಕಂಡು ಹಿಡಿದುದು ಈತನ ಮುಖ್ಯ ಸಂಶೋಧನೆ. ಖಾಕಿ ಬಣ್ಣವನ್ನು ಸಂಶೋಧಿಸಿದ ನಂತರ ಇಡೀ ವಿಶ್ವದಲ್ಲಿಯೇ ಮೊದಲ ಬಾರಿಗೆ ಮಂಗಳೂರಿನ ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯಲ್ಲಿ ಖಾಕಿ ವಸ್ತ್ರವನ್ನು ಉತ್ಪಾದಿಸಲಾಯಿತು. ಅಂದಿನ ಮದ್ರಾಸ್ ಪ್ರಾಂತ್ಯದ ಗವರ್ನರ್ ಲಾರ್ಡ್ ರಾಬರ್ಟ್ ಮಂಗಳೂರಿನ ನೇಯ್ಗೆ ಕಾರ್ಖಾನೆಗೆ ಒಮ್ಮೆ ಭೇಟಿ ನೀಡಿದ ಸಂದರ್ಭದಲ್ಲಿ ಖಾಕಿ ವಸ್ತ್ರವನ್ನು ನೋಡಿ ಅದರಿಂದ ಬಹಳಷ್ಟು ಪ್ರಭಾವಿತರಾಗಿ ಖಾಕಿ ವಸ್ತ್ರವನ್ನು ಬ್ರಿಟಿಷ್ ಸೈನಿಕರ ಸಮವಸ್ತ್ರವನ್ನಾಗಿ ಬಳಸಲು ಶಿಫಾರಸ್ಸು ಮಾಡಿದರು. ಅವರ ಶಿಫಾರಸ್ಸನ್ನು ಬ್ರಿಟಿಷ್ ಸರಕಾರವು ಅಂಗೀಕರಿಸಿದ್ದರಿಂದ ಇಡೀ ಪ್ರಪಂಚದಾದ್ಯಂತ ಬ್ರಿಟಿಷರು ಸೈನಿಕರ ಖಾಕಿ ಬಟ್ಟೆಯನ್ನು ತಮ್ಮ ಸಮವಸ್ತ್ರಗಳನ್ನಾಗಿ ಬಳಸುವಂತಾಯಿತು. ಬ್ರಿಟಿಷ್ ಸೈನಿಕರು ಮಾತ್ರವಲ್ಲದೆ, ಇಂದು ಪ್ರಪಂಚದ ಹಲವು ದೇಶಗಳ ಸೈನಿಕರು, ಪೋಲೀಸರು, ಸಾರಿಗೆ ಇಲಾಖೆ ನೌಕರರು ಮತ್ತು ಹಲವೆಡೆ ಶಾಲಾ ವಿದ್ಯಾರ್ಥಿಗಳ ಸಮವಸ್ತ್ರಕ್ಕಾಗಿ ಖಾಕಿ ಬಟ್ಟೆಯನ್ನು ಬಳಸಲಾಗುತ್ತಿದೆ. ಹೀಗೆ ಖಾಕಿ ಬಣ್ಣ ಮತ್ತು ಖಾಕಿ ಬಟ್ಟೆಯ ಸಂಶೋಧನೆ, ಮಂಗಳೂರಿನ ಬಾಸೆಲ್ ಮಿಶನ್ ನೇಯ್ಗೆ ಕಾರ್ಖಾನೆಯು ಇಡೀ ಪ್ರಪಂಚದ ವಸ್ತ್ರೋದ್ಯಮಕ್ಕೆ ಸಲ್ಲಿಸಿದ ಮಹೋನ್ನತ ಕೊಡುಗೆಯಾಗಿದೆ (ಪೀಟರ್ ೨೦೧೫:೧೨೬).

## ದುಡಿಯುವ ವರ್ಗ– ಬ್ರಿಟಿಷ್ ಪ್ರಭುತ್ವ ಸಂಘರ್ಷ

ಕರಾವಳಿ ಕರ್ನಾಟಕದಲ್ಲಿ ಸರಿಸುಮಾರು ೮೦೦ಕ್ಕೂ ಜಾಸ್ತಿ ಬಟ್ಟೆ ತಯಾರಿಕೆಯ ಘಟಕಗಳಿದ್ದು ಅದರಲ್ಲಿ ಅಂದಾಜು ೨೦,೦೦೦ ದಷ್ಟು ಕಾರ್ಮಿಕರು ನೇರವಾಗಿ ಉದ್ಯೋಗದಲ್ಲಿ ನಿರತರಾಗಿದ್ದರು. ಅತ್ಯಂತ ನಿಕೃಷ್ಟ ಕೂಲಿಗೆ ಬದುಕುತ್ತಿದ್ದ ಇವರಿಗೆ ಯಾವುದೇ ಸೌಲಭ್ಯಗಳಾಗಲೀ, ಭದ್ರತೆಗಳಾಗಲೀ ಇರಲಿಲ್ಲ. ಕಾರ್ಮಿಕರ ಶೋಷಣೆ ಮಿತಿ ಮೀರಿತ್ತು. ಒಂದನೇ ಮತ್ತು ಎರಡನೇ ಮಹಾ ಯುದ್ಧದಿಂದ ಉಂಟಾದ ಬೆಲೆ ಏರಿಕೆ ಮತ್ತು ಆಹಾರದ ಅಭಾವದಿಂದ ಈ ಸಮುದಾಯ ತೀವ್ರ ಸಂಕಷ್ಟಕ್ಕೆ ಒಳಗಾಯಿತು. ಇಂತಹ ಸಂದರ್ಭದಲ್ಲಿ ಈ ಕಾರ್ಮಿಕರನ್ನು ಸಂಘಟಿಸಲು ಸಿಂಪನ್ಸ್ ಸೋನ್ಸ್ ಎಂಬ ಕಾರ್ಮಿಕ ನಾಯಕರು ಪ್ರಪ್ರಥಮ ಬಾರಿಗೆ ಸಂಘಟನಾ ಕೆಲಸಕ್ಕೆ ಇಳಿದರು. ಆ ಮೂಲಕ ಮಂಗಳೂರಿನ ಜೆಪ್ಪು ಬಪ್ಪಾಲ್ ಎಂಬ ಪ್ರದೇಶದಲ್ಲಿ ೧೯೩೬ಕ್ಕೆ ಕರ್ನಾಟಕದಲ್ಲೇ ಪ್ರಪ್ರಥಮ ನೇಕಾರರ ಸಂಘ ಮಂಗಳೂರಲ್ಲಿ ಅಸ್ತಿತ್ವಕ್ಕೆ ಬಂತು (ಶಿರಿ ೨೦೦೦:೩೦). ಸಂಘಟನೆ ರೂಪಿಸುವ ಪ್ರಥಮ ಸಭೆಗೆ ಕೇವಲ ೧೫ ಜನ ಭಾಗವಹಿಸಿದರೆ ನಂತರದ ಎರಡನೇ ಸಭೆಯು ಮಾರ್ಣಮಿಕಟ್ಟೆಯ ಸಿರಿಯನ್ ಕ್ರಿಶ್ಚಿಯನ್ ಶಾಲಾ ವಠಾರದಲ್ಲಿ ನಡೆದಾಗ ೩೦೦ ಜನ ಸೇರಿದ್ದರು. ಪ್ರಥಮ ಸಭೆಯಲ್ಲಿ ಕಾರ್ಮಿಕ ಸಹಾನುಭೂತಿಯ ಅಲೇಮಾನ್ ಶೀನಿವಾಸ್ ರಾಯರ ನೇತೃತ್ವದಲ್ಲಿ ಆರಂಭಿಸಬೇಕೆಂಬ ನಿರ್ಣಯ ಕೈಗೊಂಡರು. ಆದರೆ ಎರಡನೇ ಸಭೆಗೆ ಅವಿಭಜಿತ ದ.ಕ ಜಿಲ್ಲೆಯ ಪ್ರಖ್ಯಾತ ಕಾರ್ಮಿಕ ನಾಯಕರಾದ ಕಾಂಗ್ರೆಸ್ಸ್ ಸೋಶಲಿಸ್ಟ್ ಪಕ್ಷದ ಕಮಲಾದೇವಿ ಚಟ್ಟೋಪಾಧ್ಯಾಯ[೪] ಮತ್ತು ಎಸ್. ಎನ್. ಹೊಳ್ಳರು ಭಾಗವಹಿಸಿದ್ದರು. ವಿ.ವಿ. ಗಿರಿಯವರನ್ನು ಗೌರವಾಧ್ಯಕ್ಷರನ್ನಾಗಿಯೂ, ಎಸ್. ಎನ್. ಹೊಳ್ಳ ಅಧ್ಯಕ್ಷರೂ, ಜಾರಪ್ಪರವರು ಕಾರ್ಯದರ್ಶಿಯಾಗಿರುವ ಸಮಿತಿಯು ಸಿಂಪನ್ಸ್ ಸೋನ್ಸ್‌ರ ನಾಯಕತ್ವ–ಮಾರ್ಗದರ್ಶನದಲ್ಲಿ ಪ್ರಾರಂಭವಾಗಿ

ಮುಂದಿನ ೧೧ ವರ್ಷಗಳ ವಸಾಹತುಶಾಹಿ ಕಾಲಘಟ್ಟದಲ್ಲಿ ಮಾಲಕರೊಂದಿಗೆ ಮತ್ತು ಬ್ರಿಟಿಷರೊಂದಿಗೆ ತೀವ್ರ ಸಂಘರ್ಷದ ಸನ್ನಿವೇಶವನ್ನು ನಿರೂಪಿಸಿತು (ಶಿರಿ ೨೦೦೦:೨೦).

ನೇಕಾರರ ಸಂಘ ಪ್ರಾರಂಭವಾದ ಮರು ವರ್ಷವೇ ೩೫ ದಿನಗಳ ಸಮರಧೀರ ಮುಷ್ಕರ ನಡೆಯಿತು. ಇದಕ್ಕೆ ನಾಯಕತ್ವ ನೀಡಲು ಕೇರಳದ ಪ್ರಖ್ಯಾತ ಕಾರ್ಮಿಕ ನಾಯಕರಾದ ಎಚ್. ಮಂಜುನಾಥ ರಾವ್ ಮತ್ತು ಕೆ.ಪಿ ಗೋಪಾಲನ್ ಭಾಗವಹಿಸಿದ್ದರು. ಮುಂದೆ ೧೯೪೦ ರಲ್ಲಿ ಮತ್ತೆ ನೇಕಾರರು ಮುಷ್ಕರ ನಡೆಸಿದಾಗ ಬ್ರಿಟಿಷ್ ಸರಕಾರವು ಇದು ಬ್ರಿಟಿಷ್ ಪ್ರಭುತ್ವದ ವಿರುದ್ಧದ ಚಳುವಳಿ ಎಂದು ಪರಿಗಣಿಸಿ ಮೊದಲ ಬಾರಿಗೆ ತೀವ್ರ ದಬ್ಬಾಳಿಕೆ ನಡೆಸಿತು (ಶಿರಿ ೨೦೦೦:೩೧). ಬ್ರಿಟಿಷ್ ಪ್ರಭುತ್ವವು ಮಾಲೀಕರಿಗೆ ಬಾಡಿಗೆ ನೇಕಾರರನ್ನು ನೇಮಿಸಲು ತಿಳಿಸಿ ಕೆಲಸ ಯಥಾಸ್ಥಿತಿ ಮುಂದುವರಿಕೆಗೆ ಪೊಲೀಸರ ಸಹಾಯವನ್ನು ಒದಗಿಸಿತು. ಕಾರ್ಖಾನೆಗಳ ಗೇಟಿನ ಮುಂಭಾಗದಲ್ಲಿ ಧರಣಿ ನಿರತರ ಮೇಲೆ ಪೊಲೀಸರು ದಬ್ಬಾಳಿಕೆ ನಡೆಸಿ ಕಾರ್ಮಿಕರ ಪ್ರಮುಖ ಹತ್ತು ನಾಯಕರುಗಳನ್ನು ದಸ್ತಗಿರಿ ಮಾಡಿ ಜೈಲಿಗಟ್ಟಿದರು. ಇವರುಗಳಲ್ಲಿ ಸಂಘದ ಅಧ್ಯಕ್ಷರಾದ ಎಸ್.ಎನ್. ಹೊಳ್ಳ ಮತ್ತು ಬೀಡಿ ಕಾರ್ಮಿಕರ ಸಂಘದ ಕಾರ್ಯದರ್ಶಿ ಕೇಶವ ಕಾಮತ್‌ರವರೂ ಬಂಧಿಸಲ್ಪಟ್ಟರು. ನೇಯ್ಗೆ ಕಾರ್ಮಿಕರ ಪ್ರಮುಖ ಮುಂದಾಳು ಸಿಂಪನ್ಸ್ ಸೋನ್ಸ್ ಮತ್ತು ಇತರ ಪ್ರಮುಖ ನಾಯಕರೂ ಭೂಗತರಾದರು. ಈ ಸಮಯದಲ್ಲಿ ದಬ್ಬಾಳಿಕೆಗೊಳಗಾದ ಕಾರ್ಮಿಕರಿಗೆ ಮತ್ತು ಮುಷ್ಕರವನ್ನು ಮುಂದುವರಿಸಲು ಸಹಾಯಕವಾಗುವಂತೆ ಕೇರಳದ ಜನಪ್ರಿಯ ಕಮ್ಯುನಿಸ್ಟ್ ನಾಯಕ ಪಿ. ಕೃಷ್ಣಪಿಳ್ಳೆಯವರು[೧೫] ಮಂಗಳೂರಿಗೆ ಬಂದು ಚಳುವಳಿಗೆ ಮಾರ್ಗದರ್ಶನ ನೀಡಿದರು. ಇದೇ ರೀತಿ ಮತ್ತೆ ೧೯೪೨ರಲ್ಲಿ ಸಿಕ್ವೆರಾ ರಂಗಿನ ಕಾರ್ಖಾನೆಯ ಕಾರ್ಮಿಕರು ಅರ್ಧಾಣೆ ಕೂಲಿ ಹೆಚ್ಚಳಕ್ಕಾಗಿ ಮುಷ್ಕರ ನಡೆಸಿದರು(ಶಿರಿ ೨೦೦೦:೩೨). ಪುನಃ ೧೯೪೬ರಲ್ಲಿ ನೇಕಾರರು ಮೊದಲ ಬಾರಿಗೆ ಬೋನಸ್‌ಗಾಗಿ ಮುಷ್ಕರವನ್ನು ಸಂಘಟಿಸಿದರು. ಈ ಬೋನಸ್ ಚಳುವಳಿಯ ಜನಪ್ರಿಯ ಘೋಷಣೆ:

ಓಡುದ ಬೀಡಿದ ಮಗ್ಗದ ದನಿಕುಲೇ
ಮರ್ಯಾದಿಡು ಎಂಕ್ಲೆನ ಬೋನಸ್ ಕೊರ್ಲೆ (ಶಿರಿ ೨೦೦೦:೫೭).

ಇದರ ಕನ್ನಡ ಅನುವಾದ ಕೆಳಕಂಡಂತಿದೆ,

ಹಂಚಿನ ಬೀಡಿಯ ಮಗ್ಗದ ಮಾಲಕರೇ
ಮರ್ಯಾದೆಯಿಂದ ನಮ್ಮ ಬೋನಸ್ ಕೊಡಿ.

ಬೋನಸ್‌ಗಾಗಿ ನಡೆದ ಈ ಮುಷ್ಕರವು ಕೂಡಾ ಮಾಲಕವರ್ಗಕ್ಕೆ ತೀವ್ರ ಪ್ರಮಾಣದಲ್ಲಿ ಬಿಸಿ ಮುಟ್ಟಿಸಿತು. ಒಟ್ಟಿನಲ್ಲಿ ಸಂಘಟಿತ ನೇಯ್ಗೆ ಕಾರ್ಮಿಕರು ಕಳೆದ ಒಂದು ದಶಕದಿಂದ ವಾಣಿಜ್ಯೋದ್ಯಮಿಗಳ ವಿರುದ್ಧ ಮತ್ತು ಬ್ರಿಟಿಷ್ ಪ್ರಭುತ್ವದ ವಿರುದ್ಧ ಪ್ರಬಲ ಸಂಘರ್ಷವನ್ನು ನಡೆಸಿದ್ದು ನೇಯ್ಗೆ ಕಾರ್ಮಿಕರ ವಿಭಾಗವಾಗಿದೆ. ಬ್ರಿಟಿಷ್‌ರೊಂದಿಗೆ ಸಂಘಟಿತ ಕಾರ್ಮಿಕ ವರ್ಗದ ಸಂಘರ್ಷದಲ್ಲಿ ನೇಯ್ಗೆ ಕಾರ್ಮಿಕರ ಪಾತ್ರ ಮಹತ್ವದ್ದಾಗಿದೆ.

ಬಾಸೆಲ್ ಮಿಶನ್ ೧೯ನೇ ಶತಮಾನದಲ್ಲಿ ಕೈಗಾರಿಕಾ ಘಟಕಗಳನ್ನು ಪ್ರಾರಂಭಿಸುವ ಮೂಲಕ ಕೈಗಾರಿಕಾ ಕಾರ್ಮಿಕವರ್ಗದ ಪರಿಕಲ್ಪನೆ ಪ್ರಾರಂಭವಾಯಿತು. ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ಹಂಚು ಮತ್ತು ನೇಯ್ಗೆ ಉದ್ಯಮದಲ್ಲಿ ದುಡಿಯುತ್ತಿದ್ದ ಕಾರ್ಮಿಕವರ್ಗ, ಬಂಡವಾಳಶಾಹಿ ಮತ್ತು ಕಾರ್ಮಿಕ ವರ್ಗದ ಮುಖಾಮುಖಿಯ ಪ್ರಮುಖ ಹೆಗ್ಗುರುತು ಆಗಿದೆ.

ಹಂಚು ತಯಾರಿಕೆಯ ತಂತ್ರಜ್ಞಾನ, ಅವಿಷ್ಕಾರ ಮತ್ತು ಕಾರ್ಖಾನೆಯ ಪ್ರಾರಂಭ ಇವು ಬಾಸೆಲ್ ಮಿಶನ್ ಸಂಸ್ಥೆಯ ಮಹತ್ತರ ಕೊಡುಗೆಯಾಗಿದೆ. ಪ್ರಪ್ರಥಮ ಹಂಚಿನ ಕಾರ್ಖಾನೆಯು ೧೮೬೫ರಂದು ಜೆಪ್ಪುವಿನಲ್ಲಿ ಸ್ಥಾಪಿಸಲ್ಪಟ್ಟಿದ್ದು, ಇಲ್ಲಿ ಉತ್ಪಾದಿಸಲಾದ ಹಂಚುಗಳನ್ನು ಮಂಗಳೂರು ಹಂಚು ಎಂದು ಕರೆಯುತ್ತಾರೆ. ಅವಿಭಜಿತ ದ.ಕ ಜಿಲ್ಲೆಯ ಆರ್ಥಿಕತೆಗೆ ಬಹು ದೊಡ್ಡ ಕೊಡುಗೆ ನೀಡಿರುವ ಹಂಚು ಉದ್ಯಮ ನಿರೂಪಿಸಿದ ಆರ್ಥಿಕತೆ ಮತ್ತು ಅದರೊಂದಿಗೆ ಅಂತರ್ಗತವಾಗಿರುವ ಸಂಘರ್ಷದ ಎಳೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

೧೯೪೦ ರ ಆಸುಪಾಸಿನಲ್ಲಿ ಮಂಗಳೂರಿನ ಸುತ್ತಮುತ್ತ ೩೬ ಹಂಚಿನ ಕಾರ್ಖಾನೆಗಳು ಇದ್ದವು. ಇದರಲ್ಲಿ ಸುಮಾರು ೫೦೦೦ಕ್ಕೂ ಮಿಕ್ಕಿದ ಕಾರ್ಮಿಕರು ನೇರವಾಗಿ ದುಡಿಯುತ್ತಿದ್ದರು. (ಶಿರಿ ೨೦೦೦:೩೬). ಆರಂಭದಿಂದಲೂ ಬಾಸೆಲ್ ಮಿಶನ್ ಹಂಚಿನ ಕಾರ್ಖಾನೆಗಳು ತಮ್ಮ ಗುಣಮಟ್ಟವನ್ನು ಕಾಯ್ದುಕೊಂಡಿವೆ. ಭಾರತದಲ್ಲಿ ಮಾತ್ರವಲ್ಲದೆ ಪ್ರಪಂಚದೆಲ್ಲೆಡೆ ಬಾಸೆಲ್ ಮಿಶನ್‌ನ ಹಂಚುಗಳು "ಮಂಗಳೂರು ಹಂಚುಗಳು" ಎಂಬ ಖ್ಯಾತಿಯನ್ನು ಗಳಿಸಿದೆ. ಹಂಚುಗಳಲ್ಲದೆ ಇತರೆ ಮಣ್ಣಿನ ಅಲಂಕಾರಿಕ ಉತ್ಪನ್ನಗಳನ್ನು ಇಲ್ಲಿ ಉತ್ಪಾದಿಸಲಾಗುತ್ತಿತ್ತು. ಈ ಹಂಚಿನ ಉತ್ಪನ್ನಗಳು ಅಂತರಾಷ್ಟ್ರೀಯ ಬೇಡಿಕೆಯನ್ನು ಪಡೆದುಕೊಂಡಿದ್ದು ೧೯೦೫ ಮತ್ತು ೧೯೦೯ ರಲ್ಲಿ ಮುಂಬಯಿ ಮತ್ತು ನಾಗಪುರಗಳಲ್ಲಿ ನಡೆದ ಅಖಿಲ ಭಾರತ ಕೈಗಾರಿಕಾ ಪ್ರದರ್ಶನದಲ್ಲಿ ಚಿನ್ನದ ಪದಕಗಳನ್ನು ಪಡೆದುಕೊಂಡಿವೆ (ಪೀಟರ್ ೨೦೧೫:೧೨೮).ಹಂಚು ಕಾರ್ಮಿಕರಿಗೆ ಅತ್ಯಲ್ಪ ಸಂಬಳ ದೊರೆಯುತ್ತಿದ್ದು ಕಾರ್ಮಿಕ ಕಾನೂನುಗಳಿದ್ದರೂ ಯಾವುದೇ ಸೇವಾ ಸೌಲಭ್ಯಗಳನ್ನು ಮಾಲೀಕರು ನೀಡುತ್ತಿರಲಿಲ್ಲ. ೧೯೪೨ ರಲ್ಲಿ ಜೆಪ್ಪು ಕಾಮನ್‌ವೆಲ್ತ್ ಟೈಲ್ ಫ್ಯಾಕ್ಟರಿಯಲ್ಲಿ ಎದ್ದ ವಿವಾದವು ಗಂಭೀರ ತಿರುವನ್ನು ಪಡೆದು ಅಂದಿನ ದಿನಗಳಲ್ಲಿ ಆಗ ತಾನೇ ವಿದ್ಯಾರ್ಥಿ ನಾಯಕರಾಗಿ ಎಡಪಂಥೀಯರೆಂದು ಗುರುತಿಸಲ್ಪಟ್ಟಿದ್ದ ಬಿ.ವಿ. ಕಕ್ಕಿಲ್ಲಾಯರವರು ಭಾಗವಹಿಸಿ ಕೈಗಾರಿಕಾ ವಿವಾದವನ್ನು ದಾಖಲಿಸಿದ್ದರು. ಆ ಪ್ರಕಾರ ಮಲಬಾರ್ ಸಂಧಾನ ಅಧಿಕಾರಿಯವರಾದ 'ಮೋಸೆಸ್'ರವರ ಸಮ್ಮುಖದಲ್ಲಿ ಸಂಧಾನ ನಡೆದು ಕಾರ್ಮಿಕರಿಗೆ ಸ್ವಲ್ಪ ಮಟ್ಟಿನ ಪರಿಹಾರ ದೊರೆಯಿತು. ಈ ಚಳುವಳಿಯ ಮುಂದುವರಿದ ಭಾಗವಾಗಿ ೧೯೪೪ ರಲ್ಲಿ ಹಂಚು ಕೆಲಸಗಾರರ ಸಂಘದ ಕಚೇರಿಯು ಬೋಳಾರದ ಫೆರಿ ರೋಡ್‌ನಲ್ಲಿ ತೆರೆಯಲ್ಪಟ್ಟಿತ್ತು. ಎ ಕೃಷ್ಣ ಶೆಟ್ಟಿಯವರು ಇದರ ಅಧ್ಯಕ್ಷರಾಗಿಯೂ ಬಿ.ವಿ. ಕಕ್ಕಿಲ್ಲಾಯರು ಕಾರ್ಯದರ್ಶಿ ಯಾಗಿಯೂ, ಸಿಂಪ್ಸನ್ಸ್ ಸೋನ್ಸ್‌ರವರು ಸಹಕಾರ್ಯದರ್ಶಿಯಾಗಿಯೂ ಆಯ್ಕೆಯಾದರು. ಈ ಹಂಚಿನ ಕೆಲಸಗಾರರ ಸಂಘವು ೨೭ ಕಾರ್ಖಾನೆಗಳಲ್ಲಿ ಸಂಘಟಿತವಾಯಿತು (ಶಿರಿ ೨೦೦೦:೪೮). ಹಂಚಿನ ಕೆಲಸಗಾರರ ಮಧ್ಯೆ ರಾಜಕೀಯ ಪ್ರಜ್ಞೆ ಬೆಳೆದು ಬಂತು. ಬ್ರಿಟಿಷ್ ಪ್ರಭುತ್ವದ ವಿರುದ್ಧ ಸ್ವಾತಂತ್ರ್ಯ ಹೋರಾಟದ ಭಾಗವಾಗಿಯೂ ಈ ಕಾರ್ಮಿಕರು ಹೋರಾಟಕ್ಕೆ ಇಳಿಯುತ್ತಾರೆ. ಆಗ ಪ್ರತೀ ಸಮಯದಲ್ಲೂ

ಕಾರ್ಖಾನೆಯ ಮಾಲಕರು ಮತ್ತು ಬ್ರಿಟಿಷ್ ಪೋಲೀಸರು ದಬ್ಬಾಳಿಕೆ ನಡೆಸುತ್ತಾರೆ. ಹಂಚಿನ ಕಾರ್ಮಿಕರು ವೇತನ ಹೆಚ್ಚಳ ಮತ್ತು ಇತರೆ ಬೇಡಿಕೆಗಳನ್ನು ಈಡೇರಿಸಲು ಆಗ್ರಹಿಸಿ ೧೯೪೫ರಲ್ಲಿ ಮುಷ್ಕರ ನಡೆಸುತ್ತಾರೆ. ಇದೇ ಸಮಯದಲ್ಲಿ ಬೀಡಿ ಕಾರ್ಮಿಕರೂ ಮುಷ್ಕರಕ್ಕೆ ಇಳಿಯುತ್ತಾರೆ. ಆಗ ಬ್ರಿಟಿಷ್ ಪೋಲೀಸರು ದಬ್ಬಾಳಿಕೆಯನ್ನು ಪ್ರಾರಂಭಿಸುತ್ತಾರೆ. ಕಾರ್ಖಾನೆಗಳ ಮತ್ತು ಬೀಡಿ ಉದ್ಯಮಗಳ ಮಾಲೀಕ ವರ್ಗ ಸಂಪೂರ್ಣವಾಗಿ ಪೋಲೀಸ್ ದಬ್ಬಾಳಿಕೆಯನ್ನು ಬೆಂಬಲಿಸುತ್ತಾರೆ. ಬಿ.ವಿ ಕಕ್ಕಿಲ್ಲಾಯ, ಶಾಂತಾರಾಮ್ ಪೈ, ಕೇಶವ ಕಾಮತ್, ಎಸ್. ಎನ್. ಹೊಳ್ಳ ಮೊದಲಾದ ಕಾರ್ಮಿಕ ನಾಯಕರನ್ನು ಡಿಫೆನ್ಸ್ ಆಫ್ ಇಂಡಿಯಾ ಆ್ಯಕ್ಟ್‌ನಡಿಯಲ್ಲಿ ಬಂಧಿಸಿ ವೆಲ್ಲೂರು ಜೈಲಿಗೆ ಹಾಕುತ್ತಾರೆ. ಆಗ ಈ ಮುಷ್ಕರವನ್ನು ಎ. ಕೃಷ್ಣ ಶೆಟ್ಟಿಯವರು ಯಶಸ್ವಿಯಾಗಿ ಮುನ್ನಡೆಸುತ್ತಾರೆ. (ಶಿರಿ ೨೦೦೦:೪೮).

ಇದು ವಸಾಹತುಶಾಹಿ ಕಾಲಘಟ್ಟದ ಕೊನೆಯ ಮೂರು ವರ್ಷಗಳ ಕಾಲದಲ್ಲಿ ಸಂಘಟಿತ ಕಾರ್ಮಿಕ ವರ್ಗದ ಹಿತಾಸಕ್ತಿಯೂ, ವಾಣಿಜ್ಯೋದ್ಯಮಿಗಳ ಹಿತಾಸಕ್ತಿಯೂ ತೀವ್ರ ಸಂಘರ್ಷಕ್ಕೆ ಇಳಿದ ಕಾಲಾವಧಿಯಾಗಿದೆ. ಸಂಘಟಿತ ಕಾರ್ಮಿಕ ವರ್ಗ ಕೇವಲ ತಮ್ಮ ಆರ್ಥಿಕ ಬೇಡಿಕೆಗಳಲ್ಲದೆ ರಾಜಕೀಯ ಬೇಡಿಕೆ ಮತ್ತು ಬ್ರಿಟಿಷ್ ಪ್ರಭುತ್ವದ ಶೋಷಣೆಯನ್ನು ಕೊನೆಗಾಣಿಸಿ ವಸಾಹತುಶಾಹಿಯಿಂದ ವಿಮೋಚನೆ ಹೊಂದುವ ರಾಜಕೀಯ ಚಳುವಳಿಯೂ ಆಗಿತ್ತು.

ಹತ್ತೊಂಬತ್ತನೇ ಶತಮಾನದ ಪ್ರಥಮಾರ್ಧದಲ್ಲಿ ಸಮರಧೀರ ಚಳುವಳಿಗಳನ್ನು ನಡೆಸಿದ ಕರಾವಳಿ ಕರ್ನಾಟಕದ ರೈತಾಪಿ ವರ್ಗ ಮತ್ತೆ ವಿಸ್ತೃತ ಪ್ರಮಾಣದಲ್ಲಿ ಸಂಘಟಿತರಾಗಿ ಇಪ್ಪತ್ತನೇ ಶತಮಾನದ ಪ್ರಥಮಾರ್ಧದಲ್ಲಿ ಭೂಮಾಲಕರೊಂದಿಗೆ ಮತ್ತು ಪ್ರಭುತ್ವದೊಂದಿಗೆ ನೇರ ಸಂಘರ್ಷಕ್ಕೆ ಇಳಿಯುತ್ತಾರೆ. ಕರಾವಳಿ ಕರ್ನಾಟಕದ ಅಂದಿನ ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶಗಳಾದ ಕಾಸರಗೋಡು, ತ್ರಿಕ್ಕರಿಪುರ, ಹೊಸದುರ್ಗಗಳಲ್ಲಿ ಕರ್ಷಕ ಸಂಘಂ (ರೈತ ಸಂಘ)ವನ್ನು ಭೂಮಾಲಿಕರ ದಬ್ಬಾಳಿಕೆ, ಅನ್ಯಾಯಯುತ ವಿಪರೀತ ಗೇಣಿ ಮತ್ತು ಭೂಮಾಲಕ ಪದ್ಧತಿಯ ವಿರುದ್ಧವಾಗಿ ಸಂಘಟಿಸುತ್ತಾರೆ.

೧೯೩೬ರಲ್ಲಿ ಹುಟ್ಟಿದ ಕಿಸಾನ್ ಸಭಾ ಭೂಮಾಲೀಕ ಬಂಡವಾಳಶಾಹಿ ಪದ್ಧತಿಯನ್ನು ನಾಶ ಮಾಡಲು ಸ್ವಾತಂತ್ರ್ಯ ಹೋರಾಟದೊಡನೆ ರೈತ ಹೋರಾಟವನ್ನು ಬೆಸೆಯುತ್ತಾ, ಭಾರತದ ರೈತಾಪಿ ವರ್ಗವನ್ನು ಒಂದುಗೂಡಿಸಲು ಸಿದ್ಧಾಂತ, ಸಂಘರ್ಷ, ಹೋರಾಟ ಎಂಬ ಮಾದರಿ ಅಂಶಗಳನ್ನು ಹಮ್ಮಿಕೊಂಡಿತ್ತು (ತಂಬಂಡ ೧೯೯೯:೦೬). ರೈತ ಚಳುವಳಿಯ ಬಗ್ಗೆ ತಂಬಂಡ ವಿಜಯ್ ಪೂಣಚ್ಚರವರು ರೈತ ಚಳುವಳಿಗಳು ಎಂಬ ಕೃತಿಯಲ್ಲಿ ಮುಂದುವರಿದು ಅಂಕೋಲದಲ್ಲಿ ನಡೆದ ಚಳುವಳಿಯ ಬಗ್ಗೆ ಕೆಳಕಂಡಂತೆ ಪ್ರಸ್ತಾಪಿಸಿದ್ದಾರೆ.

> ಹೆಚ್ಚು ಗೇಣಿಯ ವಿರುದ್ಧ ೧೯೩೧ರ ಏಪ್ರಿಲ್‌ನಲ್ಲಿ ರೈತರು ಅಂಕೋಲದಲ್ಲಿ ಕರ ನಿರಾಕರಣೆ ಚಳುವಳಿ ನಡೆಸಿದರು. ಇದರ ಬೆನ್ನಿಗೆ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹಗಳು ರಂಗನಾಥ ದಿವಾಕರ ಮತ್ತು ಸರ್ದಾರ್ ವೀರಣ್ಣ ಗೌಡ ಅವರ ನೇತೃತ್ವದಲ್ಲಿ ನಡೆದ ಹೋರಾಟ ಇನ್ನೂ ಹಸಿಹಸಿಯಾಗಿತ್ತು. ೧೯೩೧ ರಲ್ಲಿ ಸಿರ್ಸಿ, ಸಿದ್ದಾಪುರಗಳಲ್ಲಿ ರೈತರ ಅಡಿಕೆ ಬೆಳೆ ಹಾಳಾದರೂ ಕಂದಾಯ ವಜಾ ಆಗಲಿಲ್ಲ. ಪರಿಣಾಮವಾಗಿ ರೈತರ ಪ್ರತಿಭಟನೆಗಳು ನಡೆದವು. ಆದರೆ ಅದು

ವಿಫಲವಾದರೂ ಮುಂದಿನ ಹೋರಾಟಕ್ಕೆ ನಾಂದಿಯಾಯಿತು. ಮುಂಬಯಿಯಲ್ಲಿದ್ದ ಉತ್ತರ ಕನ್ನಡದ ದಿನಕರ ದೇಸಾಯಿ ಅವರು ಎಡಪಂಥೀಯ ಚಿಂತಕರು ಮಾತ್ರವಲ್ಲದೆ ಅಂಕೋಲ, ಕುಮಟಗಳಲ್ಲಿ ಸಮ್ಮೇಳನಗಳನ್ನು ನಡೆಸಿ ಕರಾವಳಿ ಉದ್ದಕ್ಕೂ ರೈತ ಚಳುವಳಿ ಪ್ರಬಲವಾಗಿ ಬೇರೂರಲು ಕಾರಣರಾದರು. ಕಿಸಾನ್ ಸಭಾದ ಎನ್.ಎಲ್. ಉಪಾಧ್ಯಾಯ ಎನ್.ಜಿ. ಮಾಲಶೇಖರ್, ಪುರುಷೋತ್ತಮ, ಜೋಗ ನಾಯಕ್ ಮುಂತಾದವರು ರೈತರನ್ನು ವ್ಯಾಪಕವಾಗಿ ಸಂಘಟಿಸಿದರು (ತಂಬಂಡ ೧೯೯೯:೦೮).

ಮೇಲಿನ ವಿವರಗಳಿಂದ ಉತ್ತರ ಕನ್ನಡ ಜಿಲ್ಲೆಯಲ್ಲಿ ರೈತಾಪಿ ಸಮುದಾಯದ ಸಂಘಟನೆ ಮತ್ತು ಹೋರಾಟಗಳ ಚಿತ್ರಣ ದೊರೆಯುತ್ತದೆ. ಆ ಪ್ರಕಾರ ಕೆನರಾದ ದಕ್ಷಿಣ ಭಾಗದ ರೈತರಿಗಿಂತಲೂ ಮುಂಚಿತವಾಗಿ ಉತ್ತರ ಭಾಗದ ರೈತರು ಅನ್ಯಾಯದ ವಿರುದ್ಧ ಸಂಘಟಿತರಾಗಿ ಸ್ವರ ಎಬ್ಬಿಸಿರುವುದು ವಿಶೇಷವಾಗಿದೆ.

ಅವಿಭಜಿತ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಯಲ್ಲಿ ಸಮಗ್ರ ಭೂಸುಧಾರಣೆಯ ಬೇಡಿಕೆ ಕೂಡಾ ಕರ್ಷಕ ಸಂಘಂನ ಬೇಡಿಕೆಯಾಗಿರುತ್ತದೆ. ಈ ಸಂಘಟನೆಗಳ ಪ್ರಭಾವ ಅನ್ಯಾಯ, ದೌರ್ಜನ್ಯ, ಶೋಷಣೆಗಳ ಪ್ರತಿರೋಧ ಮತ್ತು ಪ್ರಭುತ್ವದ ದಬ್ಬಾಳಿಕೆಯ ವಿರುದ್ಧದ ಸಂಘಟಿತ ಮುಖಾಮುಖಿಯೇ ಕಯ್ಯೂರು ರೈತ ಚಳುವಳಿಯಾಗಿದೆ.

ಕಯ್ಯೂರು ಕಾಸರಗೋಡು ತಾಲೂಕಿನ ಹೊಸದುರ್ಗ ಹೋಬಳಿಯ ಒಂದು ಗ್ರಾಮವಾಗಿದೆ. ಇ.ಎಂ.ಎಸ್ ನಂಬೂದಿರಿಪಾದ್‌ರವರ ಪ್ರಕಾರ ಈ ಗ್ರಾಮದಲ್ಲಿ ಭೂಸಂಬಂಧಗಳು ಮಲಬಾರ್‌ನಲ್ಲಿರುವಂತಹ ಜನ್ಮಿ ಪದ್ಧತಿಯ ಪ್ರಕಾರ ಇತ್ತು. ಇಲ್ಲಿಯ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸಂಬಂಧಗಳು ಮಲಬಾರ್‌ನೊಂದಿಗೆ ಅನುರೂಪ ಹೊಂದಿತ್ತು. ಆದರೆ ಆಡಳಿತಾತ್ಮಕವಾಗಿ ಸೌತ್ ಕೆನರಾ ಜಿಲ್ಲೆಯ ಭಾಗವಾಗಿತ್ತು. ಆದುದರಿಂದ ೧೯೩೦ ರಲ್ಲಿ ಜಾರಿಗೆ ಬಂದಿದ್ದ ಮಲಬಾರ್ ಟೆನೆನ್ಸಿ ಆ್ಯಕ್ಟ್‌ನ ವಿಧಿಗಳು ಇಲ್ಲಿಗೆ ಅನ್ವಯವಾಗದೆ ರೈತವಾರಿ ಪದ್ಧತಿಯನ್ನು ಅನ್ವಯಿಸಲಾಗುತ್ತಿತ್ತು. ಆದುದರಿಂದ ಈ ಪ್ರದೇಶದ ರೈತರು ಕರ್ಷಕ ಸಂಘಂನಲ್ಲಿ ಸಂಘಟಿತರಾಗಿ ಮಲಬಾರ್ ಟೆನೆನ್ಸಿ ಆ್ಯಕ್ಟ್‌ನ ಪರಿಚ್ಛೇದಗಳನ್ನು ಹೊಸದುರ್ಗ ತಾಲೂಕಿನಲ್ಲೂ ಜಾರಿಗೊಳಿಸಬೇಕೆಂದು ಅವರ ಬೇಡಿಕೆಯಾಗಿತ್ತು. ಏಕೆಂದರೆ ಅಲ್ಲಿಯ ಜನ್ಮಿ ಭೂಮಾಲೀಕರುಗಳು ರೈತರನ್ನು ಒಕ್ಕಲೆಬ್ಬಿಸುವುದು, ಗೇಣಿ ವಸೂಲಿ ಮೊದಲಾದವುಗಳನ್ನು ಮಾಡುತ್ತಿದ್ದರು. ಕೊಯ್ಲಿಗೆ ಬಂದ ಫಸಲುಗಳನ್ನು ಭೂಮಾಲೀಕರ ಗೂಂಡಾಗಳೊಂದಿಗೆ ಕೊಂಡೊಯ್ಯುತ್ತಿದ್ದರು. ೧೯೪೦ರ ಸೆಪ್ಟೆಂಬರ್ ೧೫ರಂದು ಜನ್ಮಿ ಭೂಮಾಲೀಕರು ಈ ಮೊದಲಿನ ಎರಡು ವರ್ಷಗಳಲ್ಲಿ ಫಸಲು ಕೊಯ್ದು ಕೊಂಡು ಹೋಗಲು ಅಸಾಧ್ಯವಾದುದಕ್ಕೆ ಪ್ರತೀಕಾರ ರೂಪಿಸಲು ನಿರ್ಧರಿಸಿದರು. ರೈತರು ಸಂಘಟಿತರಾದ ಕಾರಣ ಘರ್ಷಣೆಗಳು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಪೊಲೀಸರು ಭೂಮಾಲಿಕರ ಪರವಾಗಿ ಬಂದು ರೈತ ಸಂಘದ ಕಾರ್ಯಕರ್ತರ ಮೇಲೆ ಹಲ್ಲೆಗಳನ್ನು ನಡೆಸಿದರು. ಇದರಿಂದಾಗಿ ರೈತ ಸಂಘದ ಓರ್ವ ಸ್ವಯಂ ಸೇವಕನಿಗೆ ತೀವ್ರ ಗಾಯಗಳಾದವು. ಈ ದಬ್ಬಾಳಿಕೆ ಘಟನೆಗಳನ್ನು ವಿರೋಧಿಸಿ ಮಾರ್ಚ್ ೨೮ರಂದು ಕಯ್ಯೂರಿನಲ್ಲಿ ಪ್ರತಿಭಟನಾ ಸಭೆ ಮತ್ತು ಮೆರವಣಿಗೆಗಳು ನಡೆಯಿತು. ಅದರಲ್ಲಿ ಇನ್ನೂರರಿಂದ ಇನ್ನೂರೈವತ್ತರಷ್ಟು ಜನ ಭಾಗವಹಿಸಿದರು. ಕಯ್ಯೂರಿನಲ್ಲಿ ಪೊಲೀಸ್ ತನಿಖೆಯನ್ನು ಆಗಾಗ ಬಂದು ನಡೆಸುತ್ತಿದ್ದ ಒಬ್ಬ ಪೊಲೀಸ್ ಪೇದೆಯು ಅಂದೂ ಕೂಡ ಬಂದನು. ಆತನನ್ನು ಕಂಡ ಕೂಡಲೇ ಜನ

ರೊಚ್ಚಿಗೆದ್ದರು. ಆತ ಮೆರವಣಿಗೆಯೊಂದಿಗೆ ಸೇರಿಕೊಂಡು ತಪ್ಪಿಸಿಕೊಳ್ಳಲು ಪ್ರಯತ್ನಿಸಿದನು. ಒಂದು ಹಂತದಲ್ಲಿ ಮೆರವಣಿಗೆಯ ಮಧ್ಯದಿಂದ ಓಡಿದನು. ಆಗ ಪ್ರತಿಭಟನಾಕಾರರು ಬೆನ್ನಟ್ಟಿದಾಗ ನಡೆದ ಸಂಘರ್ಷದಲ್ಲಿ ಗಂಭೀರ ಗಾಯಗೊಂಡು ಅನಂತರ ಆತನು ಕೊಲೆಯಾದನು (ಇಎಂಎಸ್ ೨೦೧೦:೨೧೦).

ರೈತರ ಮೆರವಣಿಗೆಯ ಸಂದರ್ಭದಲ್ಲಿ ಕರ್ತವ್ಯ ನಿರ್ವಹಣೆಗಾಗಿ ಬಂದಿದ್ದ ಬ್ರಿಟಿಷ್ ಪೊಲೀಸ್ ಪೇದೆಯೊಬ್ಬ ಸತ್ತ ಘಟನೆಯನ್ನು ನೆಪ ಮಾಡಿಕೊಂಡು ನಡೆದಂತಹ ಪೊಲೀಸರ ಮತ್ತು ಭೂಮಾಲೀಕರ ಅಮಾನುಷ ದಬ್ಬಾಳಿಕೆ, ಅತ್ಯಾಚಾರ, ಲೂಟಿ, ಕೊಳ್ಳಿ ಇಡುವಿಕೆಗಳೊಂದಿಗೆ ನಡೆದ ಬಂಧನಸತ್ರವು ಅಂತಿಮವಾಗಿ ರೈತ ನಾಯಕರ ಮೇಲೆ ಕೊಲೆ ಮೊಕದ್ದಮೆಯ ಪ್ರಕರಣ ದಾಖಲಾಗುತ್ತದೆ (ಕೊಂಚಾಡಿ ೨೦೧೭:೬೩). ಮೊಕದ್ದಮೆಯ ತನಿಖೆಯು ಮಂಗಳೂರು ಕೋರ್ಟ್‌ನಲ್ಲಿ ನಡೆಯುತ್ತದೆ. ಕಣ್ಣೂರು ಜೈಲಿನಲ್ಲಿದ್ದ ರೈತ ಮುಖಂಡರನ್ನು ತನಿಖೆಗೆ ಮಂಗಳೂರಿಗೆ ರೈಲ್ವೇ ಮುಖಾಂತರ ತರುತ್ತಾರೆ. ಅಪರಾಧಿಗಳಿಗೆ ಕೈಕೋಳ ತೊಡಿಸಿ ರೈಲ್ವೇ ನಿಲ್ದಾಣದಿಂದ ಕೋರ್ಟ್ ಇರುವ ಬಾವುಟ ಗುಡ್ಡೆಗೆ ಕೊಂಡೊಯ್ಯುವಾಗ ಪ್ರತೀ ಬಾರಿಯೂ ರಸ್ತೆಯ ಇಕ್ಕೆಲಗಳಲ್ಲಿ ನೂರಾರು ಜನತೆ ನಿಂತು ಈ ಚಳುವಳಿಗಾರರಿಗೆ ಅಭಿನಂದನೆ ಸಲ್ಲಿಸುತ್ತಾರೆ. ಕೊನೆಗೂ ತನಿಖೆ ಮುಗಿದು ಅಪ್ಪು, ಅಬೂಬಕ್ಕರ್, ಕುಂಞಂಬ್ಬು, ಚಿರಕುಂಡ ಇವರನ್ನು ನೇಣಿಗೇರಿಸುತ್ತಾರೆ. ಈ ಘಟನೆಯು ಬ್ರಿಟಿಷ್ ಪ್ರಭುತ್ವದ ವಿರುದ್ಧ ಹಾಗೂ ಭೂಮಾಲಕರ ವಿರುದ್ಧ ಆಕ್ರೋಶ ರೈತಾಪಿ ವರ್ಗದಲ್ಲಿ ಪ್ರಬಲವಾಗಿ ಮೂಡಿ ಬರುತ್ತದೆ. ಅಖಿಲ ಭಾರತ ಮಟ್ಟದಲ್ಲಿ 'ಆಲ್ ಇಂಡಿಯಾ ಕಿಸಾನ್ ಸಭಾ' ೧೯೩೬ ರಲ್ಲಿ ಸ್ಥಾಪನೆಯಾಗಿ ರೈತರನ್ನು ಬ್ರಿಟಿಷರ ವಸಾಹತುಶಾಹಿಯ ಧೋರಣೆಯ ವಿರುದ್ಧ, ಭೂಮಾಲಕ ಪದ್ಧತಿಯ ವಿರುದ್ಧ ಚಳವಳಿಯನ್ನು ಸಂಘಟಿಸುತ್ತದೆ. ಎಡಪಂಥೀಯ ಚಿಂತನೆಯ ಈ ರೈತ ಸಂಘ ಕರಾವಳಿ ಕರ್ನಾಟಕದಲ್ಲಿ ಎಲ್ಲೂ ತನ್ನ ಘಟಕವನ್ನು ವಸಾಹತುಶಾಹಿಯ ಕೊನೆಯ ಅವಧಿಯವರೆಗೆ ಹೊಂದಿರುವುದಿಲ್ಲ.

ಕಾಫಿ ಒಂದು ವಾಣಿಜ್ಯ ಬೆಳೆಯಾಗಿ ಕರಾವಳಿ ಕರ್ನಾಟಕದಲ್ಲಿ ವಸಾಹತುಶಾಹಿ ಘಟ್ಟದ ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ನಿರ್ಣಾಯಕ ಪಾತ್ರ ವಹಿಸಿದೆ. ಕಾಫಿಯನ್ನು ಕೊಡಗು, ಚಿಕ್ಕಮಗಳೂರು ಮತ್ತು ಹಾಸನದ ಘಟ್ಟಪ್ರದೇಶಗಳಲ್ಲಿ ಪ್ಲಾಂಟೇಶನ್‌ಗಳನ್ನು ಮಾಡಿ ಬೆಳೆಸುವ ಪ್ರಕ್ರಿಯೆ ೧೮ನೇ ಶತಮಾನದಲ್ಲಿ ಪ್ರಾರಂಭವಾಯಿತು. ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ, ಮೈಸೂರು ಆ್ಯಂಡ್ ಕೂರ್ಗ್ ಇದರಲ್ಲಿ ಬಿ.ಎಲ್. ರೈಸ್‌ರವರು ಕಾಫಿ ಉದ್ಯಮದ ಬಗ್ಗೆ ವಿವರಗಳನ್ನು ನೀಡುತ್ತಾ, ಕಾಫಿ ಉದ್ಯಮದಿಂದ ಬಹಳಷ್ಟು ಭೌತಿಕ ಬದಲಾವಣೆಗಳನ್ನು ತರಲು ಸಾಧ್ಯವಾಗಿದೆ ಎಂದು ಹೇಳಿದ್ದಾರೆ. ಉಜ್ವಲ ಭವಿಷ್ಯದ ಈಡೇರಿಕೆಗಾಗಿ ಸುಲಭದ ದಾರಿ ಕಾಫಿ ಪ್ಲಾಂಟೇಶನ್ ಎಂದು ಜನ ಅಭಿಪ್ರಾಯಕ್ಕೆ ಬಂದಿದ್ದರು ಎಂದೂ ತಿಳಿಸುತ್ತಾರೆ. ಇವರು ಗೆಜೆಟಿಯರ್‌ನಲ್ಲಿ ಈ ಕೆಳಕಂಡಂತೆ ವಿವರಿಸಿದ್ದಾರೆ.

> ಬಹುಶಃ ಮಾಪಿಳ್ಳೆಗಳು ನಾಲ್ಕುಂಡ ಎಂಬಲ್ಲಿ ಇದನ್ನು ಪರಿಚಯಿಸಿರುತ್ತಾರೆ ಮತ್ತು ಇದರಲ್ಲಿ ಯಶಸ್ಸನ್ನು ಪಡೆಯುತ್ತಾರೆ. ಕೊಡಗಿನ ಪ್ರಪ್ರಥಮ ಸೂಪರಿಂಡೆಂಟ್ ಕ್ಯಾಪ್ಟನ್ ಸಿ.ಜೆ ಹಾರ್ಡಿಯು ಇದಕ್ಕೆ ತುಂಬಾ ಪ್ರೋತ್ಸಾಹ ನೀಡಿದನು. ಆದುದರಿಂದ ಸ್ಥಳೀಯರು ಕೆಲವೇ ಕೆಲವು ಪ್ಲಾಂಟೇಶನ್‌ಗಳನ್ನು ಹೊಂದಿದ್ದರು. ಆದರೆ ಯಾವಾಗ ಯುರೋಪಿಯನ್ನರು ಇದನ್ನು ಪ್ರಾರಂಭಿಸಿದರೋ ಆಗ ಅದು

ಕೊಡಗಿನ ಪ್ರಮುಖ ಕೈಗಾರಿಕೆಯಾಗಿತ್ತು. ಪ್ರಪ್ರಥಮ ಯುರೋಪಿಯನ್ನರ ಪ್ಲಾಂಟೇಶನ್ ೧೮೫೪ ರಲ್ಲಿ ಮಡಿಕೇರಿಯಲ್ಲಿ ಪ್ರಾರಂಭವಾಯಿತು. ಇತರರು ವಿವಿಧೆಡೆಗಳಲ್ಲಿ ಇದನ್ನು ಪ್ರಾರಂಭಿಸಿದರು. ಸರಿಸುಮಾರು ೧೮೬೫ರ ಅವಧಿಗೆ ಉಜ್ವಲ ಭವಿಷ್ಯದ ಖಾತ್ರಿ ಮತ್ತು ಅತ್ಯಂತ ಸುಲಭದ ರಹದಾರಿ ಎಂಬ ನಂಬಿಕೆಯಲ್ಲಿ ಜನ ಸಾರ್ವತ್ರಿಕವಾಗಿ ಮುಗಿಬಿದ್ದರು (ರೈಸ್ ೧೯೦೮:೨೮೯).

ಆದರೆ ಟಿ. ಡಬ್ಲ್ಯೂ ವೆನ್‌ರವರು ತನ್ನ 'ಮಂಗಳೂರು' ಎಂಬ ಕೃತಿಯಲ್ಲಿ ರೆವೆರೆಂಡ್ ಎ. ಫೆನ್ನಲ್ ಎಂಬವರು ಪ್ರಪ್ರಥಮ ಪ್ಲಾಂಟರ್ ಆಗಿದ್ದು ಅವರು ತಮ್ಮ ಹೆಸರಲ್ಲಿ ಮೂರು ಪ್ಲಾಂಟೇಶನ್‌ಗಳನ್ನು ಹೊಂದಿದ್ದರು ಎಂದು ತಿಳಿಸುತ್ತಾರೆ. ಕೊಡಗಿನಲ್ಲಿ ೧೮೭೦ ರಲ್ಲಿ ಸರಿ ಸುಮಾರು ೨೦೦ ಕ್ಕೂ ಹೆಚ್ಚಿನ ಕಾಫಿ ಪ್ಲಾಂಟರ್‌ಗಳು ಇದ್ದರು ಎಂದೂ ತಿಳಿಸುತ್ತಾರೆ(ವೆನ್ ೧೯೪೫:೧೨೨).

ಕಾಫಿ ತೋಟಗಳಲ್ಲಿ ಕೂಲಿ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ಬೇಕಾಗಿತ್ತು. ಇದನ್ನು ದಕ್ಷಿಣ ಕನ್ನಡ ಜಿಲ್ಲೆಯಿಂದ ಮುಖ್ಯವಾಗಿ ದಲಿತ ಮತ್ತು ಹಿಂದುಳಿದ ಸಮುದಾಯಗಳ ಕಾರ್ಮಿಕರನ್ನು ಕೆಲವು ಕಂಟ್ರಾಕ್ಟರ್‌ಗಳು ಮತ್ತು ಮೇಸ್ತ್ರಿಗಳು ಕಾಫಿ ತೋಟಗಳಲ್ಲಿ ದುಡಿಯಲು ಸರಬರಾಜು ಮಾಡುತ್ತಿದ್ದರು. ಈ ಕಾರ್ಮಿಕರು ಅಲ್ಲಿ ಲೈನ್‌ಗಳೆಂಬ ಚಿಕ್ಕ ಮನೆಗಳಲ್ಲಿ ವಾಸಿಸುತ್ತಿದ್ದರು. ಅಪರಿಚಿತವಾದ ಪ್ರತಿಕೂಲ ಹವಾಮಾನದಲ್ಲಿ ಪ್ರಾರಂಭದಲ್ಲಿ ಸಾಕಷ್ಟು ತೊಂದರೆಗಳನ್ನು ಅನುಭವಿಸಿದ ಬಗ್ಗೆ ಮೌಖಿಕ ದಾಖಲೆಗಳು ತಿಳಿಸುತ್ತವೆ. ಅತ್ಯಲ್ಪ ಕೂಲಿಯಲ್ಲಿ ಮಾಲೀಕರ, ಕಂಟ್ರಾಕ್ಟರ್‌ಗಳ ದಬ್ಬಾಳಿಕೆಯಲ್ಲಿ ಸರಿಸುಮಾರು ಯಾವ ಭದ್ರತೆಗಳೂ ಇಲ್ಲದೆ ಅರೆ ಗುಲಾಮರಂತೆ ಬದುಕುತ್ತಿದ್ದರು.[೧೭]

ಘಟ್ಟಪ್ರದೇಶಗಳಿಂದ ಕಾಫಿ ಉತ್ಪನ್ನಗಳು ಮಂಗಳೂರಿನಲ್ಲಿ ಕ್ಯೂರಿಂಗ್ ಆಗಿ ಬಂದರಿನ ಮೂಲಕ ವಿದೇಶಕ್ಕೆ ರಫ್ತು ಆಗುತ್ತಿತ್ತು. ಈ ಕಾಫಿಯ ಸಾಗಾಣಿಕೆಯ ಪ್ರಕ್ರಿಯೆಯಲ್ಲಿ ಬಂಟ್ವಾಳ ಪ್ರಮುಖ ಕೇಂದ್ರವಾಗಿತ್ತು. ಬಂಟ್ವಾಳವನ್ನು 'ಎಂಪೋರಿಯಂ ಆಫ್ ಕಾಫಿ ಟ್ರೇಡ್' ಎಂದು ಪರಿಗಣಿಸಲಾಗುತ್ತಿತ್ತು. ಅಲ್ಲಿಂದ ಇದು ನದಿಯ ಮೂಲಕ ಮಂಗಳೂರಿಗೆ ರವಾನೆಯಾಗುತ್ತಿತ್ತು. ಮಂಗಳೂರಿನಲ್ಲಿ ಮೂರು ಕಾಫಿ ಕ್ಯೂರಿಂಗ್ ಫ್ಯಾಕ್ಟರಿಗಳಲ್ಲಿ ಇದು ಸಂಸ್ಕರಣೆಯಾಗುತ್ತಿತ್ತು. ಅವುಗಳೆಂದರೆ

೧. ಮೆಸರ್ಸ್ ಮೋರ್ಗನ್ ಆ್ಯಂಡ್ ಸನ್ಸ್

೨. ಅರ್ಥರ್‌ಸ್ಟನ್ ಸನ್ಸ್ ಆ್ಯಂಡ್ ಕಂಪನಿ

೩. ಸಲ್ಡಾನ ಆ್ಯಂಡ್ ಸನ್ಸ್ (ಸ್ಟುವರ್ಟ್ ೧೮೯೩:೧೦೩).

ಇಲ್ಲಿ ಸಾವಿರಾರು ಸಂಖ್ಯೆಯಲ್ಲಿ ಕಾರ್ಮಿಕರು ಕೆಲಸ ಮಾಡುತ್ತಿದ್ದರು. ಇವರಿಗೆ ವರ್ಷದ ಐದು ತಿಂಗಳು ಮಾತ್ರ ಕೆಲಸ ದೊರೆಯುತ್ತಿತ್ತು. ಅದು ಡಿಸೆಂಬರ್‌ನಿಂದ ಏಪ್ರಿಲ್ ತಿಂಗಳವರೆಗೆ ಕೆಲಸ ದೊರೆಯುತ್ತಿದ್ದು ಅನಂತರ ಇತರೆ ಕೆಲಸಕ್ಕೆ ಸೇರುತ್ತಿದ್ದರು. ಈಗಾಗಲೇ ಕಾಫಿ ಉದ್ಯಮಕ್ಕೆ ಕ್ರೈಸ್ತ ಸಮುದಾಯ ಪೂರ್ಣ ಪ್ರಮಾಣದಲ್ಲಿ ಇಳಿದಿರುವ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತದೆ. ಈ ಬಗ್ಗೆ ಸಿ.ಎಲ್. ಪುಟಾರ್ಡೋರವರ ವಿವರಣೆ ಕೆಳಕಂಡಂತಿದೆ.

ಅವರು (ಕ್ರೈಸ್ತರು) ಪ್ಲಾಂಟೇಶನ್‌ಗಳಲ್ಲಿ ಗುಮಾಸ್ತರುಗಳಾಗಿ ಮತ್ತು ಕಾಫಿ ತೋಟಕ್ಕೆ ಕೂಲಿಯಾಳುಗಳನ್ನು ಸರಬರಾಜು ಮಾಡುವವರುಗಳಾಗಿ ದುಡಿದರು. ಅವರುಗಳಲ್ಲಿ ಕೆಲವರು ಕಾಫಿ ಪ್ಲಾಂಟೇಶನ್‌ಗಳನ್ನು ಮತ್ತು ಕಾಫಿ ಕ್ಯೂರಿಂಗ್ ಫ್ಯಾಕ್ಟರಿಗಳನ್ನು ಪ್ರಾರಂಭಿಸಿದರು. ಉದಾಹರಣೆಗೆ: ಮೇರಿ ಮೆಗ್ದಾಲಿನ್ ಕೊಯೆಲ್ಲೋ ಮತ್ತು ಬಾಸಿಲ್ ಬ್ರಿಟ್ಟೋರವರು ೧೯ನೇ ಶತಮಾನದಲ್ಲಿ ಕಾಫಿ ಪ್ಲಾಂಟರ್‌ಗಳಾಗಿ ಪ್ರವರ್ಧಮಾನಕ್ಕೆ ಬಂದರು. ನಿವೃತ್ತ ಸರಕಾರಿ ಅಧಿಕಾರಿಗಳು ಮತ್ತು ಹಂಚಿನ ಕಾರ್ಖಾನೆಯ ಮಾಲಕರುಗಳು ಕೂಡಾ ಕಾಫಿ ತೋಟಗಾರಿಕೆ ಪ್ರಾರಂಭಿಸಿದರು. ಎ.ಜೆ. ಸಲ್ದಾನ ಇವರು ಬೋಳೂರಿನಲ್ಲಿ ೧೮೪೪ರಲ್ಲಿ ಕಾಫಿ ಕ್ಯೂರಿಂಗ್ ಫ್ಯಾಕ್ಟರಿಯನ್ನು ತೆರೆದರು (ಪುರ್ಟಾದೊ ೨೦೧೬:೪೪).

ಕಾಫಿ ಉದ್ಯಮದಿಂದ ಘಟ್ಟಪ್ರದೇಶದ ಪ್ಲಾಂಟರ್‌ಗಳು, ಮಧ್ಯವರ್ತಿ ವ್ಯಾಪಾರಿಗಳು ಅಪಾರ ಲಾಭ ಗಳಿಸುತ್ತಿದ್ದರು. ಕಾಫಿಯು ಗರಿಷ್ಠ ಪ್ರಮಾಣದಲ್ಲಿ ಇಂಗ್ಲೆಂಡಿಗೆ ರಫ್ತು ಆಗುತ್ತಿತ್ತು. ಅಲ್ಲಿಯ ಖಾಸಗಿ ಉದ್ಯಮಿಗಳೂ ಸಾಕಷ್ಟು ಲಾಭ ಪಡೆಯುತ್ತಿದ್ದರು. ವಸಾಹತುಶಾಹಿ ಬ್ರಿಟಿಷ್ ಪ್ರಭುತ್ವವು ಸಾಕಷ್ಟು ಪ್ರಮಾಣದಲ್ಲಿ ತೆರಿಗೆ ಸಂಗ್ರಹ ಗಳಿಸುತ್ತಿತ್ತು. ಆದರೆ ಇತ್ತ ಕಾರ್ಮಿಕ ವರ್ಗ ಯಾವುದೇ ಸಾಮಾಜಿಕ, ಆರ್ಥಿಕ, ಭದ್ರತೆಗಳಿಲ್ಲದೆ ಕನಿಷ್ಠ ಸಂಬಳಕ್ಕೆ ತೋಟದಲ್ಲಿ ಮತ್ತು ಕಾಫಿ ಕ್ಯೂರಿಂಗ್ ಸಂಸ್ಥೆಗಳಲ್ಲಿ ದುಡಿಯುತ್ತಿದ್ದು ಮಾಲಕವರ್ಗದ ಹಿತಾಸಕ್ತಿಗೂ, ಕಾರ್ಮಿಕವರ್ಗದ ಹಿತಾಸಕ್ತಿಗೂ ಸದಾ ಸಂಘರ್ಷ ನಡೆಯುತ್ತಿತ್ತು. ಆದರೆ ೨೦ನೇ ಶತಮಾನದ ಮೂರನೇ ದಶಕದಲ್ಲಿ ಕಾರ್ಮಿಕರು ಸಂಘಟಿತರಾಗಿ ತಮ್ಮ ಹಿತಾಸಕ್ತಿಗಳ ಈಡೇರಿಕೆಗಾಗಿ ಒತ್ತಾಯಿಸುವ ಪರಿಪಾಠ ಜಾರಿಯಾಯಿತು.

ಇತರೆ ತೋಟಗಾರಿಕಾ ಬೆಳೆಗಳಾದ ತೆಂಗು, ಅಡಿಕೆ, ಕೊಕ್ಕೋ, ಶುಂಠಿ, ಏಲಕ್ಕಿ ಇವುಗಳೆಲ್ಲವು ಮಂಗಳೂರು ಬಂದರನ್ನೇ ಆಶ್ರಯಿಸಿ ವ್ಯಾಪಾರ ನಡೆಯುತ್ತಿತ್ತು. ಇಲ್ಲಿಯೂ ಕೂಡ ವ್ಯಾಪಾರದಲ್ಲಿ ಮಧ್ಯವರ್ತಿಗಳ ಪ್ರಭಾವ ಹೆಚ್ಚಾಗಿತ್ತು. ಇದರಿಂದ ಬ್ರಿಟಿಷ್ ಸರಕಾರಕ್ಕೆ ತೆರಿಗೆಯ ರೂಪದಲ್ಲಿ ಸಾಕಷ್ಟು ಲಾಭ ದೊರೆಯಿತು. ಈ ಮೊದಲಿನ ಶತಮಾನದಲ್ಲಿ ಕರಾವಳಿ ಕರ್ನಾಟಕದಲ್ಲಿ ಸಾಂಬಾರು ಪದಾರ್ಥಗಳು ನಿರ್ವಹಿಸಿದ ಪಾತ್ರವನ್ನು ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ಕರಾವಳಿಯ ತೋಟಗಾರಿಕಾ ಬೆಳೆಗಳು ಆಕ್ರಮಿಸಿ ವಾಣಿಜ್ಯ ವ್ಯವಹಾರದ ಪ್ರಭಾವವನ್ನು ನಿರ್ಧರಿಸಿತು.

## ಸ್ವಾತಂತ್ರ್ಯ ಪೂರ್ವದಲ್ಲಿ ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷ

ಕರಾವಳಿ ಕರ್ನಾಟಕದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ತೀವ್ರತೆ ದೇಶದ ಉಳಿದೆಡೆಗಳಂತೆ ನಡೆಯಲಿಲ್ಲ. ಸತ್ಯಾಗ್ರಹ, ಪ್ರತಿಭಟನೆ, ಅಸಹಕಾರ ಚಳುವಳಿ ಮೊದಲಾದ ಅಹಿಂಸಾತ್ಮಕ ವಿಧಾನಗಳ ಮೂಲಕ ಇತಿಮಿತಿಯಲ್ಲೇ ನಡೆಯಿತು. ಈ ಸಂದರ್ಭದಲ್ಲಿ ೧೯೧೧ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮೂರ್ತೆದಾರಿಕೆ ಮಾಡುವ ಬಿಲ್ಲವ ಸಮುದಾಯ ನಡೆಸಿದ ಒಂದು ಮುಷ್ಕರದ ಬಗ್ಗೆ ಸತ್ಯದೀಪಿಕೆ ಎಂಬ ಪ್ರತಿಕೆಯ ದಿನಾಂಕ ೦೪-೧೦-೧೯೧೧ರ ಸಂಚಿಕೆ XVIರಲ್ಲಿ ವರದಿಯಾಗಿದೆ. ಅದು ಕೆಳಕಂಡಂತಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಈಳಿಗರು ತಮ್ಮ ವೃತ್ತಿಯಿಂದ ಸಾಕಷ್ಟು ಆದಾಯವಾಗುವುದಿಲ್ಲವೆಂದು ತಿಳಿದು ಮುಷ್ಕರ ಹಿಡಿದಿರುವರು. ಇವರನ್ನು ಸಂಧಾನಕ್ಕೆ ತರುವ ಪ್ರಯತ್ನ ನಡೆಯುತ್ತಿದೆ. ಈ ನಮ್ಮ

> ತೀರದಲ್ಲಿ (ಪಶ್ಚಿಮ ಕರಾವಳಿಯಲ್ಲಿ-ವಿವರಣೆ ಲೇಖಕರದ್ದು) ಇಂಥ ಮುಷ್ಕರ ಎದ್ದದ್ದು ಇದು ಎರಡನೇ ಬಾರಿ. ಇಪ್ಪತ್ತು ವರ್ಷಗಳ ಹಿಂದೆ ಅಬಕಾರಿ ಕ್ರಮಗಳು ಜಾರಿಗೆ ಬಂದಾಗ ಮಲಬಾರಿನ ಕುರುಂಬಡು ನಾಡು ಎಂಬಲ್ಲಿ ಕಠಿಣ ಮುಷ್ಕರ ಎದ್ದಿತ್ತು. ಆವಾಗ ಹೆಚ್ಚು ಕಡಿಮೆ ೫೦೦ ಮಂದಿ ಈಳವರು ಮುಷ್ಕರ ಹಿಡಿದು ೫೧/೨ ತಿಂಗಳಾದರೂ ಮುಷ್ಕರ ನಡೆಸಿದರು (ಸತ್ಯದೀಪಿಕೆ ೧೯೧೧:೧೧೨).

ಆದುದರಿಂದ ಈ ಚಳುವಳಿ ಬ್ರಿಟಿಷರ ಧೋರಣೆಯ ವಿರುದ್ಧ ಕರಾವಳಿ ಕರ್ನಾಟಕದಲ್ಲಿ ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲೇ ನಡೆದ ಕೃಷಿಕೂಲಿ ಕಾರ್ಮಿಕ ಮೂರ್ತೆದಾರ ಸಮುದಾಯದ ಪ್ರತಿರೋಧವಾಗಿದೆ. ಇದರಲ್ಲಿ ಸಾವಿರಾರು ಸಂಖ್ಯೆಯಲ್ಲಿ ಜನ ಭಾಗವಹಿಸಲಿಲ್ಲ. ಆದರೂ ಇದೊಂದು ಗಮನಾರ್ಹವಾದ ಪ್ರತಿರೋಧವಾಗಿದೆ. ಸ್ವಾತಂತ್ರ್ಯ ಹೋರಾಟಕ್ಕಾಗಿ ನಡೆದ ಚಳವಳಿಯಲ್ಲೂ ಕರಾವಳಿ ಕರ್ನಾಟಕದ ಈ ಭಾಗದಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ಜನಸಾಮಾನ್ಯರು ಈ ಹೋರಾಟಕ್ಕೆ ಧುಮುಕ್ಕಲಿಲ್ಲ. ಅದರಲ್ಲೂ ಕರಾವಳಿ ಕರ್ನಾಟಕಕ್ಕೆ ಸಂಬಂಧಿಸಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಬಲವಾದ ಉಪ್ಪಿನ ಸತ್ಯಾಗ್ರಹಗಳು ನಡೆದಿವೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಸ್ವರೂಪದ ಚಳುವಳಿ ನಡೆದಿಲ್ಲ.

ಯುದ್ಧ ವಿರೋಧಿ ಚಳುವಳಿಗಳೂ ಇಲ್ಲಿ ಇತಿಮಿತಿಯಲ್ಲಿ ನಡೆಯಿತು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿ ಮಂಗಳೂರಿನಲ್ಲಿ ಮಾತ್ರ ನಡೆಯಿತೇ ವಿನಃ ವಿಕೇಂದ್ರೀಕೃತ ರೀತಿಯಲ್ಲಿ ಗ್ರಾಮ, ಹೋಬಳಿ ಮಟ್ಟದಲ್ಲಿ ನಡೆಯಲಿಲ್ಲ. ಕಯ್ಯೂರಿನ ಹುತಾತ್ಮ ಸಂಗಾತಿಗಳು ರೈತ ಸಂಘದ ಮೂಲಕ ನಡೆಸಿದ ಭೂಸುಧಾರಣೆಯ ಹೋರಾಟಗಳು ಕರಾವಳಿ ಕರ್ನಾಟಕದಲ್ಲಿ ಮೂಡಿ ಬರಲಿಲ್ಲ. ಅಷ್ಟು ಮಾತ್ರವಲ್ಲದೆ ತೆಲಂಗಾಣ ಮಾದರಿಯ ಹೋರಾಟಗಳು ನಡೆದಿಲ್ಲ. ಪಶ್ಚಿಮ ಬಂಗಾಳ, ಮಹಾರಾಷ್ಟ್ರ, ಪಂಜಾಬಿನಲ್ಲಿ ನಡೆದಂತಹ ಕ್ರಾಂತಿಕಾರಿ ಗುಂಪುಗಳ ಸ್ವಾತಂತ್ರ್ಯ ಹೋರಾಟಗಳು ಕರಾವಳಿ ಕರ್ನಾಟಕದಲ್ಲಿ ನಡೆದಿರುವುದಿಲ್ಲ. ಇಂತಹ ಸನ್ನಿವೇಶಕ್ಕೆ ಈ ಭೂಪ್ರದೇಶ ನಾಲ್ಕು ಶತಮಾನಗಳಿಂದ ವಾಣಿಜ್ಯಾತ್ಮಕವಾಗಿ ಬೆಳೆದಿರುವುದೇ ಕಾರಣವಾಗಿದೆ.

ಬ್ಯಾಂಕಿಂಗ್ ರಂಗ ಮರ್ಕಂಟೈಲಿಸಂನ ಮೂಲಭೂತ ಅವಶ್ಯಕತೆಯಾಗಿದೆ. ಕರಾವಳಿ ಕರ್ನಾಟಕದಲ್ಲಿ ಈ ವಾಣಿಜ್ಯೋದ್ಯಮ ಕಳೆದ ೧೯ನೇ ಶತಮಾನದಿಂದಲೇ ಬೆಳವಣಿಗೆಯಾಗುತ್ತಿತ್ತು. ದೇಶೀಯ ಬ್ಯಾಂಕಿಂಗ್ ರಂಗಕ್ಕೆ ಸುಮಾರು ಒಂದು ಶತಮಾನದ ಇತಿಹಾಸವಿದೆ. ೨೦ನೇ ಶತಮಾನದ ಪ್ರಾರಂಭದಲ್ಲೇ ಮಂಗಳೂರು ಮತ್ತು ಉಡುಪಿಯಲ್ಲಿ ಬ್ಯಾಂಕಿಂಗ್ ರಂಗ ಪ್ರವರ್ಧಮಾನಕ್ಕೆ ಬಂತು. ಈ ರಂಗದಲ್ಲಿ ಅದಾಗಲೇ ಚಾಲ್ತಿಯಲ್ಲಿದ್ದ ಲೇವಾದೇವಿಗಾರರು, ಭೂಮಾಲೀಕರು ಮತ್ತು ವ್ಯಾಪಾರೋದ್ಯಮಿಗಳು ಹಾಗೂ ಇತರ ಮೇಲ್ವರ್ಗದ ಪ್ರಮುಖರು ತಮ್ಮ ಔದ್ಯೋಗಿಕ ಮತ್ತು ವಾಣಿಜ್ಯಾತ್ಮಕ ಆವಶ್ಯಕತೆಗಳನ್ನು ಈಡೇರಿಸಲು ಬ್ಯಾಂಕುಗಳನ್ನು ತೆರೆದರು. ಪ್ರಸ್ತುತ ದೇಶದ ಪ್ರಮುಖ ೨೭ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ನಾಲ್ಕು ಬ್ಯಾಂಕುಗಳು ಇಲ್ಲಿಯೇ ಸ್ಥಾಪನೆಗೊಂಡಿರುವಂತಹುಗಳು. ಅದೇ ರೀತಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಬ್ಯಾಂಕ್ ಶಾಖೆಗಳನ್ನು ಈ ಭಾಗದಲ್ಲಿ ಕಾಣಬಹುದು. ನ.ಕೃ. ತಿಂಗಳಾಯ ಇವರು ದ.ಕ ಜಿಲ್ಲೆಯ ಬ್ಯಾಂಕಿಂಗ್ ಇತಿಹಾಸದ ಬಗ್ಗೆ ಈ ರೀತಿ ವಿವರಿಸುತ್ತಾರೆ.

> ದ.ಕ ಜಿಲ್ಲೆಯಲ್ಲಿ ಸ್ಥಳೀಯ ಬ್ಯಾಂಕುಗಳು ಹುಟ್ಟುವ ಮೊದಲು ಮದ್ರಾಸಿನಿಂದ ಬಂದ ಎರಡು ಬ್ಯಾಂಕುಗಳು ಇಲ್ಲಿ ವ್ಯವಹಾರ ಪ್ರಾರಂಭಿಸಿದವು. ಈಸ್ಟ್ ಇಂಡಿಯಾ ಕಂಪೆನಿ ಸರಕಾರದ ನೇತೃತ್ತ್ವದಲ್ಲಿ ರೂಪುತಾಳಿದ ಬ್ಯಾಂಕ್ ಆಫ್ ಮದ್ರಾಸ್ ೧೮೬೮ ರಲ್ಲಿ ಮಂಗಳೂರಿನಲ್ಲಿ ತನ್ನ ಶಾಖೆಯನ್ನು ತೆರೆಯಿತು. ಅದರ ಸೇವೆ ಶ್ರೀಮಂತ ವರ್ಗದ ಗ್ರಾಹಕರಿಗೆ ಮಾತ್ರ ಸೀಮಿತವಾಗಿತ್ತು. ಮಂಗಳೂರಿನಲ್ಲಿ ಅಸ್ತಿತ್ವಕ್ಕೆ ಬಂದ ಕಾಫಿ ಪರಿಷ್ಕರಣಾ ಕಾರ್ಖಾನೆಗಳಿಗೆ ಆರ್ಥಿಕ ನೆರವನ್ನು ನೀಡಲು ಈ ಬ್ಯಾಂಕು ಜಿಲ್ಲೆಗೆ ಬಂದಿತ್ತು. ಆ ಬಳಿಕ ಜಿ. ಅರ್ಬಿತ್ ನಾಟ್ ಆ್ಯಂಡ್ ಕಂಪೆನಿ ಎಂಬ ಆಂಗ್ಲ ವ್ಯಾಪಾರಿ ಸಂಸ್ಥೆ ಕೂಡ ಮಂಗಳೂರಿನಲ್ಲಿ ಬ್ಯಾಂಕಿಂಗ್ ವ್ಯವಹಾರ ಪ್ರಾರಂಭಿಸಿತು. ಜನಸಾಮಾನ್ಯರಿಂದ ದೂರವಾಗಿದ್ದ ಈ ಬ್ಯಾಂಕುಗಳು ಲಾಭದಾಯಕ ವ್ಯವಹಾರವನ್ನು ಮಾಡುತ್ತಿದ್ದವು (ತಿಂಗಳಾಯ ೨೦೦೦:೧೧೮).

ಮೇಲಿನ ವಿಶ್ಲೇಷಣೆಯಿಂದ ಬ್ಯಾಂಕಿಂಗ್ ರಂಗದ ಮೂಲ ಉದ್ದೇಶ ವಾಣಿಜ್ಯೋದ್ಯಮ ಅವಶ್ಯಕತೆಗಳನ್ನೇ ಈಡೇರಿಸುವುದೆಂಬುದು ಬಹಳ ಸ್ಪಷ್ಟವಾಗಿ ತಿಳಿದು ಬರುತ್ತದೆ. ಕೆನರಾ ಬ್ಯಾಂಕಿಂಗ್ ಕೋರ್ಪರೇಶನ್ (ಉಡುಪಿ) ಲಿಮಿಟೆಡ್ ಎಂಬ ಬ್ಯಾಂಕು ೧೯೦೬ ರ ಮೇ ೨೮ ರಂದು ಹಾಜಿ ಖಾಸಿಂ ಸಾಹೇಬರ ನೇತೃತ್ತ್ವದಲ್ಲಿ ಪ್ರಾರಂಭವಾಯಿತು. ಈ ವ್ಯಕ್ತಿ ಓರ್ವ ಉದ್ಯಮಿಯಾಗಿದ್ದರು. ಮುಂದೆ ಈ ಬ್ಯಾಂಕು ಕೋರ್ಪರೇಶನ್ ಬ್ಯಾಂಕ್ ಎಂದು ನಾಮಕರಣವಾಯಿತು. ಇದಾದ ಬಳಿಕ ೩೩ ದಿನಗಳ ಅವಧಿಯಲ್ಲಿ ಮಂಗಳೂರಿನಲ್ಲಿ ಅಮ್ಮೆಂಬಳ ಸುಬ್ಬರಾವ್ ಎಂಬವರ ನೇತೃತ್ವದಲ್ಲಿ ಕೆನರಾ ಹಿಂದೂ ಪರ್ಮನೆಂಟ್ ಫಂಡ್ ಎಂಬ ಹೆಸರಿನಲ್ಲಿ ಬ್ಯಾಂಕು ಸ್ಥಾಪನೆಯಾಯಿತು. ಮುಂದೆ ಇದಕ್ಕೆ ಹಲವಾರು ಬ್ಯಾಂಕುಗಳು ಸೇರ್ಪಡೆಗೊಂಡು ಕೆನರಾ ಬ್ಯಾಂಕ್ ಲಿಮಿಟೆಡ್ ಎಂದು ನಾಮಕರಣವಾಯಿತು. ಇದೇ ರೀತಿ ೧೯೨೩ ರಲ್ಲಿ ಜಯಲಕ್ಷ್ಮೀ ಬ್ಯಾಂಕ್ ಸಾರಸ್ವತ ಸಮಾಜದಿಂದ ಸ್ಥಾಪನೆಯಾಯಿತು. ೧೯೨೪ ರಲ್ಲಿ ಕರ್ನಾಟಕ ಬ್ಯಾಂಕ್ ಬ್ರಾಹ್ಮಣ ಸಮುದಾಯದಿಂದ ಪ್ರಾರಂಭವಾಯಿತು. ೧೯೨೫ ರಲ್ಲಿ ರೋಮನ್ ಕ್ರೈಸ್ತರು ಕ್ಯಾಥೊಲಿಕ್ ಬ್ಯಾಂಕನ್ನೂ, ೧೯೩೧ ರಲ್ಲಿ ಭೂಮಾಲಕ ಮತ್ತು ಬಂಟ ಸಮುದಾಯದ ಹಿನ್ನೆಲೆಯಲ್ಲಿ ವಿಜಯ ಬ್ಯಾಂಕ್ ಸ್ಥಾಪನೆಯಾಯಿತು. ಇದೇ ರೀತಿ ಸಿಂಡಿಕೇಟ್ ಬ್ಯಾಂಕ್ ೧೯೨೫ ರಲ್ಲಿ ಮಣಿಪಾಲದಲ್ಲಿ ಗೌಡ ಸಾರಸ್ವತ ಸಮಾಜದ ವ್ಯಕ್ತಿಗಳಿಂದ ಪ್ರಾರಂಭವಾಯಿತು. ಆದುದರಿಂದ ಬ್ಯಾಂಕಿಂಗ್ ರಂಗದ ಸ್ಥಾಪನೆ, ಕಾರ್ಯಾಚರಣೆ ಹಾಗೂ ಉದ್ದೇಶಗಳೂ ಮೂಲಭೂತವಾಗಿ ವಾಣಿಜ್ಯೋದ್ಯಮಿಗಳ ಹಿತಾಸಕ್ತಿಯನ್ನು ಕಾಪಾಡುವುದೇ ಆಗಿದೆ.

ವಸಾಹತುಶಾಹಿಯ ಕೊನೆಯ ಕಾಲಘಟ್ಟದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಪಡೆದುಕೊಂಡ ತಿರುವು ಸಂಕೀರ್ಣತೆಯಿಂದ ಕೂಡಿದೆ ಮತ್ತು ಸಾಕಷ್ಟು ವೈರುಧ್ಯತೆಗಳನ್ನು ಒಳಗೊಂಡಿದೆ. ೧೭೫೭ ರಿಂದ ಬ್ರಿಟಿಷರು ತಮ್ಮ ಹಿತಾಸಕ್ತಿಗಳನ್ನು ನೋಡಿಕೊಳ್ಳುವುದಕ್ಕಾಗಿಯೇ ಭಾರತದ ಮೇಲೆ ತಮ್ಮ ನಿಯಂತ್ರಣವನ್ನು ಇಟ್ಟುಕೊಂಡಿದ್ದರು. ಆದರೆ ಅವರ ಆಳ್ವಿಕೆ ಮೂಲ ಲಕ್ಷಣ ಉದ್ದಕ್ಕೂ ಹಾಗೆಯೇ ಉಳಿಯುತ್ತದೆ ಎಂದು ಯೋಚಿಸುವುದು ತಪ್ಪಾಗುತ್ತದೆ. ಸುಮಾರು ಇನ್ನೂರು ವರ್ಷಗಳಷ್ಟು ದೀರ್ಘಕಾಲದ ಚರಿತ್ರೆಯಲ್ಲಿ ಅದು ಅನೇಕ ಹಂತಗಳನ್ನು ಹಾಯ್ದು ಬಂದಿತ್ತು. ಬ್ರಿಟನಿನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಗಳಲ್ಲಿ ಕಂಡು ಬಂದ ವ್ಯತ್ಯಾಸಗಳಲ್ಲಿ ಇಲ್ಲಿನ ಬ್ರಿಟಿಷ್ ಆಳ್ವಿಕೆ ಪ್ರಭುತ್ವ ಹಾಗೆಯೇ ಅದರ ನೀತಿಗಳು ಮತ್ತು ಪರಿಣಾಮಗಳು ಬದಲಾದವು.

ಸರಿಸುಮಾರು ೧೮೩೭ ರಿಂದ ಪ್ರಾರಂಭಗೊಂಡ ಒಂಬತ್ತು ದಶಕಗಳು ಬ್ರಿಟಿಷ್ ಪ್ರಭುತ್ವಕ್ಕೆ ಪ್ರತಿರೋಧದ ಅಲೆಗಳನ್ನು ಸೃಷ್ಟಿಸದಿರುವುದು ಗಂಭೀರ ವಿಶ್ಲೇಷಣೆಗೆ ಒಳಪಡಬೇಕಾದ ಅಂಶವಾಗಿದೆ. ಬ್ರಿಟಿಷ್ ಆಡಳಿತ ನೀತಿ ಜನಪರವಾಗಿದ್ದರಿಂದ ಇಂತಹ ಪ್ರತಿಭಟನೆಗಳು ನಡೆಯಲಿಲ್ಲ ಎಂದರ್ಥವಲ್ಲ. ಬ್ರಿಟಿಷರು ನಿರಂತರವಾಗಿ ವ್ಯಾಪಾರಿಗಳನ್ನು, ಭೂಮಾಲೀಕರನ್ನು, ಮಧ್ಯವರ್ತಿ ಲೇವಾದೇವಿಗಾರರನ್ನು ಒಳಗೊಂಡು ನಿರಂತರ ಶೋಷಣೆ ನಡೆಯುತ್ತಿದ್ದರೂ ಪ್ರತಿರೋಧ ರೂಪುಗೊಳ್ಳಲಿಲ್ಲ. ಬ್ರಿಟಿಷರು ಜಾರಿಗೊಳಿಸಿದ ಕಟ್ಟು ನಿಟ್ಟಿನ ಅಮಾನುಷ ದಬ್ಬಾಳಿಕೆ ಮತ್ತು ಭಯ ಮಿಶ್ರಿತ ಆಡಳಿತವು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸಂಬಂಧಗಳಲ್ಲಿ ಕರಾವಳಿ ಕರ್ನಾಟಕದ ಜನಜೀವನವನ್ನು ತನ್ನ ಕಪಿಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳಲು ಸಾಧ್ಯವಾಗಿರುವುದೇ ಇದಕ್ಕೆ ಮೂಲ ಕಾರಣ.

ಸರಿಸುಮಾರು ೧೮೩೩ ರ ಅವಧಿಯಲ್ಲಿ ಇಂಗ್ಲೆಂಡಿನಲ್ಲಿ ಬೆಳೆದು ಬಂದ ಒರಿಯಂಟಲಿಸಂ ಮತ್ತು ಮುಕ್ತ ಆರ್ಥಿಕ ನೀತಿಗಳ ಪರಿಣಾಮವಾಗಿ ಬೆಳೆದು ಬಂದ ವಾಣಿಜ್ಯೋದ್ಯಮಿಗಳ ಮತ್ತು ಕೈಗಾರಿಕೋದ್ಯಮಿಗಳ ಒತ್ತಡವು ಭಾರತಕ್ಕೆ ಬಾಸೆಲ್ ಮಿಶನ್‌ನಂತಹ ಸಂಸ್ಥೆಗಳು ಆಗಮಿಸಲು ಕಾರಣವಾಯಿತು. ಬಾಸೆಲ್ ಮಿಶನ್ ಸಂಸ್ಥೆಯು ಮತೀಯ ಕಾರ್ಯಭಾರದೊಂದಿಗೆ ವಾಣಿಜ್ಯೋದ್ಯಮ ಕೈಗಾರಿಕಾ ಘಟಕಗಳನ್ನು ಪ್ರಾರಂಭಿಸಿ ಮುಂದಿನ ಅವಧಿಯಲ್ಲಿ ಎಲ್ಲಾ ರೀತಿಯ ಸಂಘರ್ಷಗಳಲ್ಲೂ ಅನಿವಾರ್ಯವಾಗಿ ಭಾಗವಹಿಸಬೇಕಾಯಿತು. ಶಿಕ್ಷಣ, ಧಾರ್ಮಿಕತೆ ಮತ್ತು ವಾಣಿಜ್ಯೋದ್ಯಮಗಳಲ್ಲಿ ಸಕ್ರಿಯವಾಗಿದ್ದ ಬಾಸೆಲ್ ಮಿಶನ್ ಸಂಸ್ಥೆಯ ಚಟುವಟಿಕೆ ಮತ್ತು ಹಿತಾಸಕ್ತಿಗೆ ಒಂದನೇ ಮತ್ತು ಎರಡನೇ ಮಹಾಯುದ್ಧಗಳು ಸವಾಲಾಗಿ ಬೆಳೆದು ಬಂತು. ಹತ್ತೊಂಬತ್ತನೇ ಶತಮಾನದಲ್ಲಿ ಪರಸ್ಪರ ಪೂರಕವಾದ ಬಾಸೆಲ್ ಮಿಶನ್‌ನ ಹಿತಾಸಕ್ತಿ ಮತ್ತು ವಾಣಿಜ್ಯೋದ್ಯಮಿಗಳ ಹಿತಾಸಕ್ತಿಗಳು ಇಪ್ಪತ್ತನೇ ಶತಮಾನದಲ್ಲಿ ಪರಸ್ಪರ ಸಂಘರ್ಷಮಯ ಸನ್ನಿವೇಶವನ್ನು ಎದುರಿಸಬೇಕಾಗಿ ಬಂತು.

ಅನಂತರದ ಅವಧಿಯಲ್ಲಿ ಕರಾವಳಿ ಕರ್ನಾಟಕದಲ್ಲಿ ದುಡಿಯುವ ವರ್ಗ, ಮಾಲಕ ವರ್ಗ ಮತ್ತು ಬ್ರಿಟಿಷ್ ಪ್ರಭುತ್ವ ಪರಸ್ಪರ ಸಂಘರ್ಷಮಯ ಸನ್ನಿವೇಶಗಳನ್ನು ಎದುರಿಸಿದೆ. ಇದೇ ರೀತಿಯಲ್ಲಿ ರೈತಾಪಿ ಸಮುದಾಯ, ಕೃಷಿ ಕೂಲಿ ಕಾರ್ಮಿಕರು, ಭೂಮಾಲಕ ವರ್ಗ ಮತ್ತು ಬ್ರಿಟಿಷ್ ಪ್ರಭುತ್ವ ಪರಸ್ಪರ ಸಂಘರ್ಷಮಯ ಸನ್ನಿವೇಶದಲ್ಲಿ ನೇರವಾಗಿ ಭಾಗವಹಿಸುವ ಮೂಲಕ ಸ್ವಾತಂತ್ರ್ಯ ಚಳುವಳಿಗೂ ಹೊಸ ಸ್ವರೂಪವನ್ನು ನೀಡಿದೆ. ಕರಾವಳಿ ಕರ್ನಾಟಕವು ವಾಣಿಜ್ಯೋದ್ಯಮವು ಪ್ರಸ್ತುತ ಕಾಲಘಟ್ಟದಲ್ಲಿ ಬಂಡವಾಳಶಾಹಿಯಾಗಿ ಬೆಳವಣಿಗೆ ಹೊಂದಿ ಎಲ್ಲಾ ರೀತಿಯ ಶೋಷಣೆಗಳಿಗೆ ಮೂಲ ಕಾರಣವಾಯಿತು.

## ಟಿಪ್ಪಣಿಗಳು

೧. ವಸಾಹತುಶಾಹಿ ಕಾಲಘಟ್ಟದಲ್ಲಿ ಮುಕ್ತ ವ್ಯಾಪಾರ ಪ್ರತಿಪಾದನೆ ವ್ಯಾಪಕವಾಗಿ ಕೇಳಿಬಂತು. ಇದರ ಪ್ರಕಾರ ವ್ಯಕ್ತಿಗತ ಪ್ರಯತ್ನಕ್ಕೆ ಹೆಚ್ಚಿನ ಮಹತ್ವ ನೀಡಲಾಗುತ್ತದೆ. ಈ ಸಿದ್ಧಾಂತವು ಯಾವುದೇ ಅಡೆತಡೆ ಇಲ್ಲದೆ ಬಂಡವಾಳವು ಲಾಭವನ್ನು ಮಾಡಲು ಅವಕಾಶ ಕಲ್ಪಿಸಿಕೊಡುವುದಾಗಿದೆ. ಪ್ರಭುತ್ವದಿಂದ ವಾಣಿಜ್ಯೋದ್ಯಮ ಮತ್ತು ಆರ್ಥಿಕ ವ್ಯಾಪಾರ ವ್ಯವಹಾರಕ್ಕೆ ಹಸ್ತಕ್ಷೇಪ ಮಾಡದಿರುವುದು; ಸ್ವಚ್ಛಂದ ವ್ಯಾಪಾರಕ್ಕೆ ಅವಕಾಶ ಕಲ್ಪಿಸುವುದು ಮುಕ್ತ ವ್ಯಾಪಾರ ನೀತಿಯ ಲಕ್ಷಣವಾಗಿದೆ.

೨. ಕೈಗಾರಿಕಾ ಕ್ರಾಂತಿಯ ಪರಿಣಾಮಗಳ ನಂತರ ೧೮ನೇ ಶತಮಾನದಲ್ಲಿ ಬೆಳೆದು ಬಂದ ಒಂದು ಹೊಸ ಸಿದ್ಧಾಂತ ಓರಿಯಂಟಲಿಸಂ ಆಗಿದೆ. ಇದರ ಪ್ರಕಾರ ಯುರೋಪಿನ ರಾಷ್ಟ್ರಗಳು ಭಾರತದಂತಹ ವಸಾಹತುಶಾಹಿ ರಾಷ್ಟ್ರಗಳ ಭಾಷೆ, ಸಂಸ್ಕೃತಿ, ಬದುಕು, ಕಲೆ ಮತ್ತು ಪ್ರಾಚೀನ ಜ್ಞಾನ ಪರಂಪರೆಗಳನ್ನು ತಿಳಿದುಕೊಳ್ಳುವುದು ಎಂದು ಅರ್ಥ. ಎಡ್ವರ್ಡ್ ಸೈದ್ ಓರಿಯಂಟಲಿಸಂಗೆ ಸಂಬಂಧಿಸಿ ಹೊಸ ತಾತ್ವಿಕ ಜಿಜ್ಞಾಸೆಯನ್ನು ಹುಟ್ಟು ಹಾಕಿರುತ್ತಾರೆ. ಅವರು ೧೯೭೮ ರಲ್ಲಿ ರಚಿಸಿರುವ ಓರಿಯಂಟಲಿಸಂ ಎಂಬ ಗ್ರಂಥ ಜಾಗತಿಕವಾಗಿ ಹೊಸ ಚರ್ಚೆಯನ್ನು ಹುಟ್ಟು ಹಾಕಿದೆ.

೩. ಪಾಶ್ಚ್ಯಾತೀಕರಣ ಎಂಬುದು ಕೈಗಾರಿಕಾ ರಾಷ್ಟ್ರಗಳ ಹೊಸ ತಂತ್ರಜ್ಞಾನ ಮತ್ತು ಜ್ಞಾನ ಪರಂಪರೆಯನ್ನು ವಸಾಹತುಶಾಹಿ ರಾಷ್ಟ್ರಗಳಲ್ಲಿ ಅನುಸರಿಸುವ ಒಂದು ಪ್ರಕ್ರಿಯೆಯಾಗಿದೆ. ಇದು ಓರಿಯಂಟಲಿಸಂಗೆ ಪರ್ಯಾಯವಾದಂತಹ ಸಿದ್ಧಾಂತವಾಗಿದೆ.

೪. ಈಸ್ಟ್ ಇಂಡಿಯಾ ಕಂಪೆನಿಯು ೧೬೦೦ ಡಿಸೆಂಬರ್ ೩೧ ರಂದು ಲಂಡನ್‌ನಲ್ಲಿ ಸ್ಥಾಪನೆಯಾಯಿತು. ಇದನ್ನು ಜಾನ್ ಕಂಪೆನಿ ಎಂದೂ ಕರೆಯುತ್ತಾರೆ. ಕ್ರಮೇಣ ಇದು ಬ್ರಿಟಿಷ್ ಜ್ಯೊಂಟ್ ಸ್ಟಾಕ್ ಕಂಪೆನಿಯಾಗಿ ಪರಿವರ್ತನೆಯಾಯಿತು. ಇದರ ಮುಖ್ಯ ಉದ್ದೇಶ ದಕ್ಷಿಣ ಏಷ್ಯಾ ರಾಷ್ಟ್ರಗಳಲ್ಲಿ ವ್ಯಾಪಾರ- ವ್ಯವಹಾರ ನಡೆಸುವುದಾಗಿತ್ತು. ಇದರ ಸಂರಚನೆಯಲ್ಲಿ ಸಾಮಾನ್ಯ ಜನರನ್ನು ಭಾರತದೊಂದಿಗೆ ವ್ಯಾಪಾರ-ವ್ಯವಹಾರ ಮಾಡದಂತೆ ನಿರ್ಬಂಧಿಸಲಾಗಿತ್ತು. ಈಸ್ಟ್ ಇಂಡಿಯಾ ಕಂಪೆನಿಯು ೧೬೯೩ರಿಂದ ಪಾರ್ಲಿಮೆಂಟಿನಲ್ಲಿ ಅಧಿಕಾರದಲ್ಲಿರುವವರಿಗೆ ಬಳುವಳಿ (ಉಡುಗೊರೆ)ಗಳನ್ನು ಕೊಡುವ ಮೂಲಕ ಅದು ತನ್ನ ಪರವಾನಿಗೆಯನ್ನು ನವೀಕರಿಸಿತ್ತು. ಇದೇ ಅವಧಿಯಲ್ಲಿ ಸನ್ನದು ನವೀಕರಣಕ್ಕಾಗಿ ರಾಜನಿಗೆ ಹತ್ತು ಸಾವಿರ ಪೌಂಡುಗಳ ಲಂಚ ನೀಡಿದ ಪ್ರಕರಣ ಕುಖ್ಯಾತಿಯನ್ನು ಪಡೆದಿದೆ. ಈಸ್ಟ್ ಇಂಡಿಯಾ ಕಂಪೆನಿಯು ಅತ್ಯಂತ ಕಡಿಮೆ ಬಡ್ಡಿ ದರದಲ್ಲಿ ಸರಕಾರಕ್ಕೆ ಸಾಲ ನೀಡುವ ಮೂಲಕ ತನ್ನ ಉದ್ದೇಶಗಳನ್ನು ಈಡೇರಿಸಿಕೊಳ್ಳುತ್ತಿತ್ತು. ಪ್ರತಿಸ್ಪರ್ಧಿ ಕಂಪೆನಿಗಳ ಡೈರೆಕ್ಟರ್‌ಗಳನ್ನು ವಿವಿಧ ರೀತಿಯ ಆಶೆ ಆಮಿಷಗಳಿಗೆ ಒಡ್ಡಿ ತನ್ನ ಪರ ಒಲಿಸಿಕೊಳ್ಳುತ್ತಿತ್ತು. ಇದರ ಸನ್ನದು ಪ್ರತೀ ಇಪ್ಪತ್ತು ವರ್ಷಗೊಮ್ಮೆ ಪಾರ್ಲಿಮೆಂಟ್ ನವೀಕರಣ ಮಾಡುತ್ತಿತ್ತು. (ಹೆಚ್ಚಿನ ವಿವರಗಳಿಗೆ ಫೌಲೆಟ್ ಚಾರ್ಲಿಯವರ "ಇಂಗ್ಲೀಷ್ ಫ್ಯಾಕ್ಟರೀಸ್ ಇನ್ ಇಂಡಿಯಾ ಭಾಗ ೧, ೨, ೩", ವಿಲಿಯಂ ಪೋಸ್ಟರ್‌ರವರ "ದ ಇಂಗ್ಲೀಷ್ ಫ್ಯಾಕ್ಟರೀಸ್ ಇನ್

ಇಂಡಿಯಾ" ಹಾಗೂ ಸರ್ ಜಾರ್ಜ್ ಬರ್ಡ್ ವುಡ್‌ರವರ "ಎ ರಿಪೋರ್ಟ್ ಆನ್ ದ ಓಲ್ಡ್ ರೆಕಾರ್ಡ್ಸ್ ಆಫ್ ದ ಇಂಡಿಯಾ ಹೌಸ್" ಇವುಗಳನ್ನು ಗಮನಿಸಬಹುದು.)

೫. ಏಳು ವರ್ಷಗಳ ಯುದ್ಧವು ೧೭೫೬ರಿಂದ ೧೭೬೩ ರವರೆಗೆ ಎರಡು ಯುರೋಪಿಯನ್ ರಾಷ್ಟ್ರಕೂಟಗಳಾದ ಆಂಗ್ಲೋ ಪ್ರಷ್ಯನ್ ಮತ್ತು ಫ್ರಾಂಕೋ ರೂಸ್ಸೋ ಆಸ್ಟ್ರಿಯನ್ ಕೂಟಗಳ ನಡುವೆ ನಡೆಯಿತು. ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳು ತಮ್ಮ ನಡುವೆ ಜಾಗತಿಕ ವಸಾಹತುಶಾಹಿಗಳನ್ನು ಹೊಂದಲು ಮತ್ತು ವಾಣಿಜ್ಯೋದ್ಯಮದ ನಿಯಂತ್ರಣ ಪಡೆಯಲು ನಡೆದ ಪೈಪೋಟಿಯೇ ಈ ಯುದ್ಧಕ್ಕೆ ಮುಖ್ಯ ಕಾರಣವಾಗಿದೆ. ಅಮೇರಿಕಾ ಮತ್ತು ಏಷ್ಯಾದಲ್ಲಿ ವಸಾಹತುಗಳನ್ನು ಈ ರಾಷ್ಟ್ರಗಳು ಹೊಂದಿದ್ದವು. ಪೂರ್ವದ ದೇಶಗಳಲ್ಲಿ ಭಾರತ ಮುಖ್ಯ ಕ್ಷೇತ್ರವಾಗಿತ್ತು. ಇಲ್ಲಿ ಫ್ರೆಂಚರ ಮತ್ತು ಅವರ ಹಿಂಬಾಲಕ ದೊರೆಗಳು ಹಾಗೂ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಮಧ್ಯೆ ವಿವಿಧೆಡೆಗಳಲ್ಲಿ ಯುದ್ಧ ನಡೆಯಿತು. ಫ್ರೆಂಚರು ಹೆಚ್ಚಿನ ಕಡೆಗಳಲ್ಲಿ ಸೋತು ಕೇವಲ ಐದು ಕಡೆಗಳಲ್ಲಿ ಮಾತ್ರ ಅಸ್ತಿತ್ವವನ್ನು ಉಳಿಸಿದರು. ಈ ಅವಧಿಯಲ್ಲಿ ಇಂಗ್ಲೆಂಡ್ ಹೆಚ್ಚು ಕಡಿಮೆ ಭಾರತದ ಸಾರ್ವಭೌಮತೆಯನ್ನು ಕೈವಶಪಡಿಸಿಕೊಂಡಿತ್ತು.

೬. ಈಸ್ಟ್ ಇಂಡಿಯಾ ಕಂಪೆನಿಯು ಭಾರತದಲ್ಲಿ ಪ್ಲಾಸಿ ಕದನ(೧೭೫೭)ದ ನಂತರ ತನ್ನ ಅಧಿಕಾರವನ್ನು ಭದ್ರಪಡಿಸಿ ವಸಾಹತುಶಾಹಿ ಶೋಷಣೆಯನ್ನು ತೀವ್ರಗೊಳಿಸಿತ್ತು. ಅದು ದತ್ತು ಮಕ್ಕಳಿಗೆ ಹಕ್ಕಿಲ್ಲ, ಸಹಾಯಕ ಸೈನ್ಯ ಪದ್ಧತಿ ಮೊದಲಾದ ಧೋರಣೆಗಳ ಮೂಲಕ ವಿವಿಧ ಪ್ರಾಂತ್ಯಗಳನ್ನು ಕೈವಶಪಡಿಸಿಕೊಂಡು ಅಲ್ಲಿಯ ರಾಜರುಗಳನ್ನು ನಿವೃತ್ತಿಗೊಳಿಸಿತ್ತು. ಅವರಿಗೆ ರಾಜಧನ ಮತ್ತು ಮಾಸಾಸನದ ಕ್ರಮವನ್ನು ಜಾರಿಗೊಳಿಸಿತ್ತು. ಇದರೊಂದಿಗೆ ಆ ಪ್ರಾಂತ್ಯಗಳ ರಾಜ ಪ್ರಮುಖರುಗಳಿಗೆ ವಿವಿಧ ಪದವಿಗಳಾದ ರಾವ್ ಸಾಹೇಬ್ ಬಹದ್ದೂರು, ದಿವಾನ್ ಗಿರಿ, ಸರ್, ನೈಟ್‌ವುಡ್ ಮೊದಲಾದವುಗಳ ಮೂಲಕ ಅವರನ್ನು ತನ್ನ ಸರಕಾರದ ಧೋರಣೆಯತ್ತ ಒಲಿಸಿಕೊಳ್ಳುತ್ತಿತ್ತು. ಇದಲ್ಲದೆ ಈಸ್ಟ್ ಕಂಪೆನಿಯ ಪರವಾಗಿ ವಿವಿಧ ಸಂದರ್ಭಗಳಲ್ಲಿ ಕಾರ್ಯಾಚರಿಸಿದ ದೇಶೀಯ ಸಂಸ್ಥಾನದ ವ್ಯಕ್ತಿಗಳಿಗೆ ಇನಾಮುಗಳನ್ನು, ಕಮೀಷನ್‌ಗಳನ್ನು ಹಾಗೂ ಲಂಚಗಳನ್ನೂ ನೀಡುತ್ತಿತ್ತು. ಇದನ್ನು ಬ್ರಿಟಿಷ್ ಸರಕಾರವು ಭಾರತದಲ್ಲಿ ತನ್ನ ಅಧಿಕಾರವನ್ನು ಭದ್ರಪಡಿಸಲು ಜಾರಿಗೊಳಿಸಿತ್ತು.

೭. ಕ್ರೈಸ್ತ ಮಿಶನರಿ ಸಂಸ್ಥೆಗಳಿಗೆ ೧೮೩೩ರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸನ್ನದು ಪ್ರಕಾರ ಭಾರತದಲ್ಲಿ ಧಾರ್ಮಿಕ ಮತ ಪ್ರಚಾರಕ್ಕೆ ಅವಕಾಶ ದೊರೆಯಿತು. ಈ ಸಂಸ್ಥೆಗಳ ಪರವಾಗಿ ಇಂಗ್ಲೆಂಡಿನಲ್ಲಿ ವಾಣಿಜ್ಯೋದ್ಯಮಿಗಳು ಹಾಗೂ ಇತರರು ಪಾರ್ಲಿಮೆಂಟಿನ ಮೇಲೆ ಪ್ರಭಾವ ಬೀರಿದ್ದರು. ಭಾರತದಲ್ಲಿ ವಾಣಿಜ್ಯೋದ್ಯಮಕ್ಕೆ ಪೂರಕವಾಗಿ ಸೈದ್ಧಾಂತಿಕ ಕೆಲಸ ಮಾಡಲು ಕ್ರೈಸ್ತ ಮಿಶನರಿ ಸಂಸ್ಥೆಗಳ ಅವಶ್ಯಕತೆಯಿತ್ತು. ಬಾಸೆಲ್ ಮಿಶನ್ ಸಂಸ್ಥೆಯು ೧೮೧೫ ರಲ್ಲಿ ಸ್ಥಾಪನೆಯಾಗಿದ್ದರೂ ಭಾರತದಲ್ಲಿ ಮೇಲಿನ ೧೮೩೩ರ ಸನ್ನದು ಅವಕಾಶ ಕಲ್ಪಿಸಿದ್ದರಿಂದ ೧೮೩೪ಕ್ಕೆ ಕರಾವಳಿ ಕರ್ನಾಟಕಕ್ಕೆ ಬಂದರು. ಅವರು ಬಂದ ಮೂರು ವರ್ಷಗಳ ಅವಧಿಯಲ್ಲಿ ಬ್ರಿಟಿಷರ ವಿರುದ್ಧ ಅಮರ ಸುಳ್ಯ ದಂಗೆ ನಡೆಯಿತು. ಇದರಲ್ಲಿ ಬಾಸೆಲ್ ಮಿಶನ್ ಬ್ರಿಟಿಷರ ಪರವಾಗಿ ಕೆಲಸ ಮಾಡಿತ್ತು. ಇದಕ್ಕೆ ಪ್ರತಿಫಲವಾಗಿ ಬ್ರಿಟಿಷರು ಈ ಸಂಸ್ಥೆಗೆ ಕಛೇರಿ ಮತ್ತು ವ್ಯವಹಾರ ನಡೆಸಲು ಸರಕಾರಿ ಜಾಗವನ್ನು ನೀಡಿದರು.

೮. ಕರಾವಳಿ ಕರ್ನಾಟಕದಲ್ಲಿ ಯುರೋಪಿಯನ್ನರ ಆಗಮನದಿಂದ ಮೊದಲ್ಗೊಂಡು ಇಲ್ಲಿಯ ಪ್ರಮುಖ ಮೇಲ್ವರ್ಗದ ಜಾತಿ ಹಾಗೂ ಸಮುದಾಯಗಳು ಸಾಮಂತರಾಜರುಗಳಿಗೆ, ಯುರೋಪಿಯನ್ನರಿಗೆ ಪ್ರಮುಖ ರಾಜತಾಂತ್ರಿಕರಾಗಿ, ಅಧಿಕಾರಿಗಳಾಗಿ ಮತ್ತು ವ್ಯಾಪಾರದ ಸಹಾಯಕರುಗಳಾಗಿ ಕಾರ್ಯ ನಿರ್ವಹಿಸಿದರು. ಬ್ರಿಟಿಷರು ಅಧಿಕಾರ ವಹಿಸಿದ ಮೇಲೆ ನಡೆದಂತಹ ಪ್ರಮುಖ ರೈತಾಪಿ ಜನರ ಪ್ರತಿರೋಧಗಳಲ್ಲಿ ಬ್ರಾಹ್ಮಣ ಸಮುದಾಯ ನಾಯಕತ್ವ ನೀಡಿತ್ತು. ಅಮರ ಸುಳ್ಯ ದಂಗೆಯಲ್ಲಿ ಈ ಸಮುದಾಯದ ಪಾತ್ರ ಅಷ್ಟಕಷ್ಟೇ. ಇದೇ ಪ್ರಕಾರ ೧೮೩೭ ರಿಂದ ಗಾಂಧಿಯುಗದವರೆಗೆ ಯಾವುದೇ ಪ್ರತಿಭಟನೆಗಳು ಕರಾವಳಿ ಕರ್ನಾಟಕದಲ್ಲಿ ರೂಪುಗೊಳ್ಳಲಿಲ್ಲ. ಆದರೆ ಗಾಂಧಿಯುಗದಲ್ಲಿ ಪ್ರಾರಂಭವಾದ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಳೆಯಗಾರಿ, ಭೂಮಾಲೀಕ, ಮೇಲ್ವರ್ಗದ ಸಮುದಾಯಗಳಿಂದಲೇ ಬೆಳೆದು ಬಂದ ನಾಯಕರು ಪ್ರಮುಖ ಪಾತ್ರ ವಹಿಸಿದರು.

೯. ಮಾರ್ಟಿನ್ ಲೂಥರ್ ಜರ್ಮನಿನ ಓರ್ವ ಪ್ರಭಾವಿ ಹಾಗು ವಿವಾದಾಸ್ಪದ ವ್ಯಕ್ತಿಯಾಗಿದ್ದು ಕ್ರೈಸ್ತ ಧರ್ಮದಲ್ಲಿ ತೀವ್ರ ಸುಧಾರಣೆಗಳನ್ನು ಮಾಡಲು ಕಾರಣಕರ್ತನಾಗಿದ್ದನು. ಪೋಪ್ ಆಧಾರಿತ ರೋಮನ್ ಕ್ಯಾಥೊಲಿಕ್ ಕ್ರೈಸ್ತ ಧರ್ಮದ ವಿರುದ್ಧ ಇವನು ನಡೆಸಿದ ನಿರಂತರ ಹೋರಾಟದ ಫಲವಾಗಿ ಕ್ರೈಸ್ತ ಧರ್ಮದಲ್ಲಿ ಹೊಸ ಪಂಥ ಬೆಳೆದು ಬಂತು. ಕ್ಯಾಥೊಲಿಕ್ ಕ್ರೈಸ್ತ ಧರ್ಮವೂ ಕೂಡ ಹಲವಾರು ಸುಧಾರಣೆಗಳಿಗೆ ಒಳಗಾಗಬೇಕಾಯಿತು. ಈತನ ಪಂಥಕ್ಕೆ ಪ್ರೊಟೆಸ್ಟೆಂಟ್ ಪಂಥ ಎಂದು ಕರೆಯುತ್ತಾರೆ. ಇದೇ ಪ್ರಕಾರ ಈತನ ಅನುಯಾಯಿಗಳನ್ನು ಲೂಥರನ ಸಂಪ್ರದಾಯವಾದಿಗಳೆಂದು ಕರೆಯುತ್ತಾರೆ. ಈತನು ಒಟ್ಟು ತೊಂಬತ್ತೈದು ಹೊಸ ಕ್ರೈಸ್ತ ನಿಯಮಗಳನ್ನು ಪ್ರತಿಪಾದಿಸಿದನು. ಪ್ರೊಟೆಸ್ಟೆಂಟ್ ಧರ್ಮವು ಇದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದೆ.

೧೦. ಪ್ರೊಟೆಸ್ಟೆಂಟ್ ಪಂಥದಲ್ಲಿ ಮಾರ್ಟಿನ್ ಲೂಥರನ ನಂತರ ಹಲವಾರು ಪಂಗಡಗಳು ಬೆಳೆದು ಬಂದು ಕ್ರೈಸ್ತ ಸುವಾರ್ತೆಯನ್ನು ಸಾರುವ ಮಿಶನರಿ ಕೆಲಸ ಮಾಡುತ್ತಿದ್ದರು. ಇಂತಹ ಒಂದು ಪಂಗಡವೇ ಪುನಃಸ್ಥಾನ ಸಂಪ್ರದಾಯ. ಇದು ಜರ್ಮನಿ ಮತ್ತು ಇಂಗ್ಲೆಂಡಿನಲ್ಲಿ ಅಸ್ತಿತ್ವವನ್ನು ಹೊಂದಿದ್ದು ಭಾರತದಂತಹ ವಸಾಹತುಶಾಹಿ ರಾಷ್ಟ್ರಗಳಲ್ಲಿ ಧರ್ಮ ಪ್ರಚಾರದ ಜವಾಬ್ದಾರಿಯನ್ನು ಬಾಸೆಲ್ ಮಿಶನ್‌ನ ಸಂಯೋಜನೆಯಲ್ಲಿ ಕಾರ್ಯನಿರ್ವಹಿಸುತ್ತಿತ್ತು.

೧೧. ಪ್ರೊಟೆಸ್ಟೆಂಟ್ ಪಂಥದಲ್ಲಿ ಮಾರ್ಟಿನ್ ಲೂಥರನ ನಂತರ ಬೆಳೆದು ಬಂದ ಕ್ರೈಸ್ತ ಸುವಾರ್ತೆ ಸಾರುವ ಇನ್ನೊಂದು ಪಂಗಡವೇ ಸ್ವಿಂಗಿಯಾನ್ ಸಂಪ್ರದಾಯ. ಈ ಪಂಥವು ಕೂಡ ಪ್ರೊಟೆಸ್ಟೆಂಟ್ ಧಾರ್ಮಿಕ ಸಿದ್ಧಾಂತದ ಪ್ರಚಾರವನ್ನು ನಡೆಸುತ್ತಿತ್ತು. ಇದು ಕೂಡ ಬಾಸೆಲ್ ಮಿಶನ್‌ನಲ್ಲಿ ಸಂಯೋಜನೆ ಹೊಂದಿತ್ತು.

೧೨. ಇಂಡಸ್ಟ್ರಿಯಲ್ ಕಮಿಶನ್ ಎಂಬುದು ಬಾಸೆಲ್ ಮಿಶನಿನ ಧಾರ್ಮಿಕ ಚಟುವಟಿಕೆಗಳ ಪರಿಣಾಮವಾಗಿ ಮತಾಂತರಗೊಂಡ ಜನರಿಗೆ ಆರ್ಥಿಕವಾಗಿ ಉದ್ಯೋಗ ಅವಕಾಶವನ್ನು ಕಲ್ಪಿಸಿಕೊಡಲು ಜರ್ಮನಿಯ ಬಾಸೆಲ್ ಮಿಶನಿನ ಕೇಂದ್ರದಲ್ಲಿ ಅಸ್ತಿತ್ವಕ್ಕೆ ಬಂದ ಕಮಿಶನ್ ಆಗಿದೆ. ೧೮೫೨ ರ ನಂತರ ಮಿಶನರಿಗಳ ತರಬೇತಿ ವಿಧಾನವು ಬದಲಾವಣೆಗೆ ಒಳಗಾಯಿತು. ಈ ಸಂಬಂಧವಾಗಿ ಜೋಸೆಫ್ ಜೋಸೆನಾನ್ಸ್

ಚೀಫ್ ಇನ್ಸ್‌ಪೆಕ್ಟರ್ ಆಗಿದ್ದ ಸಮಯದಲ್ಲಿ ಪ್ರತ್ಯೇಕ ಇಂಡಸ್ಟ್ರಿಯಲ್ ಕಮಿಶನ್ ಪ್ರಾರಂಭಿಸಿದರು. ಸುಧಾರಣಾವಾದಿ ಸಿದ್ಧಾಂತದ ಭಾಗವಾಗಿ ಈ ತಂತ್ರಬದ್ಧ ಕ್ರಿಯಾ ಯೋಜನೆಯನ್ನು ಅಂಗೀಕರಿಸಲಾಯಿತು. ಇದರ ಪ್ರಕಾರ ಪ್ರಾರ್ಥಿಸುವುದು ಮತ್ತು ಕೆಲಸ ಮಾಡುವುದು ಎಂಬ ಹೊಸ ಕಣ್ಣೋಟವನ್ನು ಧಾರ್ಮಿಕ ಭಾಗವಾಗಿ ರೂಪೀಕರಿಸಲಾಯಿತು. ಇದು ವ್ಯಾಪಕ ಪ್ರಮಾಣದಲ್ಲಿ ಪ್ರಚಾರ ಪಡೆಯಿತು. (ಹೆಚ್ಚಿನ ವಿವರಗಳಿಗಾಗಿ ರಾಘವಯ್ಯ ಇವರ ವರ್ಡ್ ವೀವ್ ಆಫ್ ಬಾಸೆಲ್ ಮಿಶನ್‌ರವರ ಕೃತಿ ಮತ್ತು ಎಚ್.ಎಚ್. ವಿಲ್ಸನ್ ಹಾಗೂ ಇ.ಜೆ ಎಡೋನ್ನಾರವರ ಬಿಡಿ ಬರಹಗಳ ಸಂಗ್ರಹವನ್ನು ಗಮನಿಸಬಹುದು).

೧೩. ಬ್ರಿಟಿಷರು ಜಗತ್ತಿನ ವಿವಿಧ ಭಾಗಗಳಲ್ಲಿ ಹೊಂದಿದ್ದ ವಸಾಹತುಶಾಹಿ ರಾಷ್ಟ್ರಗಳ ಐಕ್ಯಗುಂಪನ್ನು ಕಾಮನ್‌ವೆಲ್ತ್ ರಾಷ್ಟ್ರಗಳೆಂದು ಈಗಲೂ ಕೂಡ ಕರೆಯಲಾಗುತ್ತಿದೆ. ಇದೇ ರೀತಿ ಪ್ರಥಮ ಮಹಾಯುದ್ಧದಲ್ಲಿ ಇಂಗ್ಲೆಂಡಿನ ವೈರಿ ರಾಷ್ಟ್ರಗಳ ಕೈಗಾರಿಕೆ ಮತ್ತು ವಾಣಿಜ್ಯ ಘಟಕಗಳನ್ನು ಕೈವಶಪಡಿಸಿಕೊಂಡ ಬ್ರಿಟಿಷ್ ಸರಕಾರ ಅವುಗಳ ನಿರ್ವಹಣೆಗಾಗಿ ರೂಪಿಸಿದ ಟ್ರಸ್ಟನ್ನು ಕಾಮನ್‌ವೆಲ್ತ್ ಟ್ರಸ್ಟ್ ಎಂದು ಕರೆದರು.

೧೪. ಕಮಲಾದೇವಿ ಚಟ್ಟೋಪಧ್ಯಾಯ ಇವರು ೧೯೦೩ ಏಪ್ರಿಲ್ ತಿಂಗಳ ಮೂರರಂದು ಮಂಗಳೂರಿನಲ್ಲಿ ಜನಿಸಿದರು. ಇವರು ಪ್ರಖ್ಯಾತ ಸ್ವಾತಂತ್ರ್ಯ ಹೋರಾಟಗಾರರೂ, ಮಹಿಳಾ ಹಕ್ಕುಗಳ ಪ್ರತಿಪಾದಕರೂ, ಕರಾವಳಿ ಕರ್ನಾಟಕದಲ್ಲಿ ಕಾರ್ಮಿಕ ಚಳುವಳಿಯನ್ನು ಮೊತ್ತಮೊದಲಿಗೆ ಕಟ್ಟಿ ಬೆಳೆಸಿದ ನಾಯಕಿಯಾಗಿದ್ದಾರೆ. ಇವರು ಬಂಗಾಳದ ಸ್ವಾತಂತ್ರ್ಯ ಹೋರಾಟಗಾರ ಹರೀಂದ್ರನಾಥ ಚಟ್ಟೋಪಧ್ಯಾಯ ಇವರನ್ನು ಮದುವೆಯಾದರು. ಇವರಿಗೆ ರಾಮನ್ ಮೆಗಸ್ಸೆ ಪ್ರಶಸ್ತಿ, ಪದ್ಮಭೂಷಣ ಮತ್ತು ಪದ್ಮವಿಭೂಷಣ ಪ್ರಶಸ್ತಿಗಳೂ ದೊರೆತಿವೆ. ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ಬರೆದಿದ್ದಾರೆ. ಇವರು ೧೯೮೮ರ ಅಕ್ಟೋಬರ್ ೨೯ರಂದು ಮೃತರಾದರು.

೧೫. ಪಿ ಕೃಷ್ಣ ಪಿಳ್ಳೆ ಇವರು ವೈಕಂ ಎಂಬ ಸ್ಥಳದಲ್ಲಿ ೧೯೦೬ ರಲ್ಲಿ ನಾಯರ್ ಕುಟುಂಬದಲ್ಲಿ ಜನಿಸಿದರು. ಇವರು ಓರ್ವ ಸ್ವಾತಂತ್ರ್ಯ ಹೋರಾಟಗಾರರಾಗಿ ೧೯೨೪ ರ ಉಪ್ಪಿನ ಸತ್ಯಾಗ್ರಹ, ವೈಕಂ ಸತ್ಯಾಗ್ರಹದಲ್ಲಿ ಭಾಗವಹಿಸಿರುತ್ತಾರೆ. ಪ್ರಾರಂಭದಲ್ಲಿ ಗಾಂಧಿವಾದಿಯಾಗಿದ್ದು ಅನಂತರ ಕಾಂಗ್ರೆಸ್ ಸೋಶಲಿಸ್ಟ್ ಪಕ್ಷದ ಕೇರಳದ ರಾಜ್ಯ ಕಾರ್ಯದರ್ಶಿಯಾಗಿದ್ದರು. ಈ ಸಮಯದಲ್ಲಿ ಎಡಪಂಥೀಯ ಚಿಂತನೆಗಳಿಂದ ಪ್ರೇರಿತರಾಗಿ ರೈತರು ಮತ್ತು ಕಾರ್ಮಿಕರನ್ನು ಸಂಘಟಿಸಿ ಅಲೆಪ್ಪಿ ಜಿಲ್ಲೆಯಲ್ಲಿ ಸಮರಧೀರ ಚಳುವಳಿಯನ್ನು ಸಂಘಟಿಸಿದರು. ಇವರು ಕಾಂಗ್ರೆಸ್ ಸೋಶಲಿಸ್ಟ್ ಪಕ್ಷದ ಕೇರಳ ಘಟಕವನ್ನು ಕಮ್ಯೂನಿಸ್ಟ್ ಪಕ್ಷದ ಶಾಖೆಯನ್ನಾಗಿ ಪರಿವರ್ತಿಸಿ ಪ್ರಪ್ರಥಮ ಕಾರ್ಯದರ್ಶಿಯಾದರು. ಇವರು ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ಭೂಗತರಾಗಿರುವಾಗ ತನ್ನ ೪೧ನೇ ವರ್ಷ ಪ್ರಾಯದಲ್ಲಿ ಹಾವು ಕಡಿದು ಮರಣವನ್ನಪ್ಪುತ್ತಾರೆ. ಕೇರಳದಲ್ಲಿ ಅತ್ಯಂತ ಜನಪ್ರಿಯರಾಗಿದ್ದ ಇವರನ್ನು ಸಖಾವ್ ಎಂದು ಈಗಲೂ ಕರೆಯುತ್ತಾರೆ.

೧೬. ಕಯ್ಯೂರಿನ ಪೊಲೀಸ್ ದೌರ್ಜನ್ಯದ ಬಗ್ಗೆ ೧೯೫೫ರಲ್ಲಿ ಪೆಮ್ಮಯ್ಯ ಎಂಬ ಸ್ಪೆಶಲ್ ಬ್ರಾಂಚಿನ ಹಿರಿಯ ಅಧಿಕಾರಿ ಮೌಖಿಕವಾಗಿ ನನ್ನಲ್ಲಿ ಅಲ್ಲಿ ನಡೆಸಿದ ದೌರ್ಜನ್ಯದ ಬಗ್ಗೆ ವಿವರವನ್ನು ತಿಳಿಸಿದರು. ಅವರ ಪ್ರಕಾರ ಸುಮಾರು ಒಂದು ತಿಂಗಳ ಕಾಲ ಅಲ್ಲಿ ಕರ್ತವ್ಯದಲ್ಲಿದ್ದ ಪೊಲೀಸರಿಗೆ ದಿನನಿತ್ಯ ಬಾಡೂಟ, ಹಣ್ಣುಹಂಪಲುಗಳು ಯಥೇಚ್ಚವಾಗಿ ಸರಬರಾಜು ಆಗುತ್ತಿತ್ತು. ಸಾಕಷ್ಟು ಕುಡಿತ ಮೋಜುಗಳಿಗೂ ಅವಕಾಶವಿದ್ದು ಅಲ್ಲಿ ಕರ್ತವ್ಯ ನಿರ್ವಹಿಸಿದ ವಿಧಾನವನ್ನು ಪೊಲೀಸ್ ಇಲಾಖೆಯಲ್ಲಿ ವಿಶೇಷ ಮಹತ್ವ ಹೊಂದಿದೆ ಎಂದು ತಿಳಿಸಿದರು. ಇದೇ ರೀತಿ ಫಳ್ನೀರಿನಲ್ಲಿ ವಾಸಿಸುತ್ತಿದ್ದ ಹಿರಿಯ ವಕೀಲ ಶಾಂತಾರಾಮ ಇವರು ಕಯ್ಯೂರಿನ ಘಟನೆಯ ನಂತರ ಪೊಲೀಸರು ಮಂಗಳೂರು ನೆಹರೂ ಮೈದಾನಿನ ಸುತ್ತಮುತ್ತ ವೇಷ ಬದಲಿಸಿ ತಿಂಗಳುಗಟ್ಟಲೆ ಕಾರ್ಯಾಚರಣೆ ಮಾಡಿದ್ದನ್ನು ವಿವರಿಸಿರುತ್ತಾರೆ. ಈ ಎರಡು ಘಟನೆಗಳು ಕಯ್ಯೂರು ಘಟನೆಯ ಅಮಾನುಷ ಪೊಲೀಸ್ ದೌರ್ಜನ್ಯ ಮತ್ತು ಬಂಧನಸತ್ರದ ಬಗ್ಗೆ ಗಮನ ಸೆಳೆಯುತ್ತದೆ.

೧೭. ಕಾಫಿ ತೋಟದಲ್ಲಿ ಕಾರ್ಮಿಕರಾಗಿ ಬದುಕು ಸಾಗಿಸುತ್ತಿದ್ದ ಜನರ ಬದುಕಿನ ದಾರುಣ ಪರಿಸ್ಥಿತಿಯ ಬಗ್ಗೆ ಡಾ. ಎಚ್. ಎಲ್. ನಾಗೇಗೌಡರವರ 'ಬೆಟ್ಟದಿಂದ ಬಟ್ಟಲಿಗೆ' ಎಂಬ ಕೃತಿಯಲ್ಲಿ ಚಾರಿತ್ರಿಕ ವಿವರಣೆಗಳು ಇವೆ. ಇದೇ ರೀತಿ ಡಾ. ಶಿವರಾಮ ಕಾರಂತರವರ ಜ್ಞಾನಪೀಠ ಪ್ರಶಸ್ತಿ ಪಡೆದ 'ಚೋಮನ ದುಡಿ' ಎಂಬ ಕಾದಂಬರಿಯಲ್ಲಿ ಹೃದಯ ವಿದ್ರಾವಕ ದಲಿತ ಕುಟುಂಬಗಳ ಚಿತ್ರಣ ಇದೆ. ಅದೇ ರೀತಿ ಕೆ. ವಿ. ರಾವ್ ಉಜಿರೆ (ಯಳಚಿತ್ತರಾಯರು) ಇವರ 'ಬಾಡ' ಕಾದಂಬರಿಯೂ ಕಾಫಿ ತೋಟದ ದಲಿತ ಮತ್ತು ಹಿಂದುಳಿದ ಕಾರ್ಮಿಕರ ಬಗ್ಗೆ ಬೆಳಕು ಚೆಲ್ಲುತ್ತದೆ. ಇವುಗಳು ಕಾಫಿ ತೋಟದಲ್ಲಿ ಕಾರ್ಮಿಕರಾಗಿ ಕೆಲಸ ನಿರ್ವಹಿಸಲು ಹೋಗುತ್ತಿದ್ದ ಕರಾವಳಿ ಕರ್ನಾಟಕದ ದಲಿತ ಮತ್ತು ಹಿಂದುಳಿದ ಜನರ ದುರಂತಮಯ ಬದುಕಿನ ಬಗ್ಗೆ ಗಮನ ಸೆಳೆಯುತ್ತದೆ. ಅದೇ ರೀತಿ ಶಿವಮೊಗ್ಗ, ಕೊಪ್ಪ, ತೀರ್ಥಹಳ್ಳಿ ಈ ಭಾಗಗಳಲ್ಲಿ ಅಡಿಕೆ ತೋಟಗಳಲ್ಲಿ ಮತ್ತು ಪ್ಲಾಂಟೇಶನ್ ಕೆಲಸ ಮಾಡುತ್ತಿದ್ದ ಕರಾವಳಿ ಕರ್ನಾಟಕದ ಹಿಂದುಳಿದ ದಲಿತ ಸಮುದಾಯಗಳ ಚಿತ್ರಣವು ಕುವೆಂಪುರವರ 'ಮಲೆಗಳಲ್ಲಿ ಮಧುಮಗಳು', 'ಕಥೆಗಾರ ಮಂಜಣ್ಣ' ಮೊದಲಾದ ಕಾದಂಬರಿಗಳಲ್ಲಿ ದೊರೆಯುತ್ತದೆ.

# ಅಧ್ಯಾಯ-೭

## ಉಪಸಂಹಾರ

ಪೋರ್ಚುಗೀಸರು ಕರಾವಳಿಗೆ ಬಂದು ತಮ್ಮ ಹೆಜ್ಜೆಗಳನ್ನು ಊರುವ ಸಂದರ್ಭದಲ್ಲಿ ಅವರಿನ್ನೂ ಶಕ್ತಿಯಾಗಿ ಬೆಳೆದಿರಲಿಲ್ಲ. ಆರಂಭದಲ್ಲಿ ಪೋರ್ಚುಗೀಸರು ವ್ಯಾಪಾರ, ವಾಣಿಜ್ಯ ಸಂಬಂಧಗಳಟ್ಟುಕೊಂಡು ಕರಾವಳಿ ಕರ್ನಾಟಕದಲ್ಲಿಯೂ ಬಂಡವಾಳ ಸಂಚಯವನ್ನು ಹೆಚ್ಚಿಸಿದರೂ ಈ ಭಾಗದಲ್ಲಿ ಬಹುಕಾಲದವರೆಗೆ ಅವರು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳಲಾಗಲಿಲ್ಲ. ಮೂಲತಃ ವ್ಯಾಪಾರಿಗಳಾದ ಪೋರ್ಚುಗೀಸರು ವ್ಯಾಪಾರ, ವಾಣಿಜ್ಯ ಉದ್ದಿಮೆಗಳ ಮೂಲಕ ಆರಂಭದಲ್ಲಿ ಮೇಲುಗೈ ಸಾಧಿಸಿದರೂ, ಕರಾವಳಿ ಪ್ರದೇಶಗಳ ದೇಸೀ ರಾಜರ ಮೇಲೆ ಅಧಿಕಾರ ಸ್ಥಾಪಿಸಿ ಒಂದು ಹಂತದಲ್ಲಿ ಜಯಶೀಲರಾದರೂ, ಎರಡನೆಯ ಹಂತ ದಲ್ಲಿ ಕೆಳದಿ ಅರಸರ ಕೈಯಲ್ಲಿ ಸೋಲಬೇಕಾಯಿತು. ಮೂರನೆಯ ಹಂತದಲ್ಲಿ ಕೆಳದಿ ಅರಸರನ್ನು ಸೋಲಿಸಿದ ಹೈದರ್ ಸಹಜವಾಗಿಯೇ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮದ ಮೇಲೆ ಟಿಪ್ಪುವಿನೊಡಗೂಡಿ ಹಿಡಿತ ಸಾಧಿಸಿ ಆ ಭಾಗಗಳನ್ನು ತಮ್ಮ ಆಳ್ವಿಕೆಗೆ ತಂದರು. ಜೊತೆಗೆ ತಮ್ಮ ರಾಜಕೀಯ ಸಹವರ್ತಿಗಳಾದ ಫ್ರೆಂಚರಿಗೂ ಮತ್ತು ಇತರ ವಿದೇಶದ ಕಂಪೆನಿಗಳಿಗೂ ಇದೇ ಭಾಗದಲ್ಲಿ ವಾಣಿಜ್ಯ ವ್ಯವಹಾರಗಳನ್ನು ಮಾಡಲು ಅವಕಾಶ ನೀಡಿದರು. ಆದರೆ ಉಳಿದ ದೇಸೀ ಅರಸರೊಂದಿಗೆ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿಯು ಮೈತ್ರಿಯನ್ನು ಬಲಪಡಿಸಿಕೊಂಡು ಟಿಪ್ಪುವಿನ ಆಡಳಿತವನ್ನು ಕೊನೆಗಾಣಿಸಿತು. ಆ ಮೂಲಕ ದೇಸೀ ಬಂಡವಾಳದ ಚಲನೆಗೆ ತಡೆಯುಂಟು ಮಾಡಿದರು. ಬದಲಿಗೆ ಯುರೋಪಿನ ಬಹಳ ದೊಡ್ಡ ರಾಜಕೀಯ ಶಕ್ತಿಯಾಗಿ ಬೆಳೆದಿದ್ದ ಇಂಗ್ಲೆಂಡ್ ಈ ಭಾಗದಲ್ಲಿ ಎಲ್ಲೆಡೆ ವಾಣಿಜ್ಯ ಮತ್ತು ಅಧಿಕಾರದ ಮೇಲೆ ಕಾಲಾನುಕ್ರಮದಲ್ಲಿ ಏಕಸ್ವಾಮ್ಯವನ್ನು ಸಾಧಿಸಿ ಇಂಗ್ಲೀಷ್ ವಸಾಹತುಶಾಹಿಯನ್ನು ಸಮರ್ಥವಾಗಿ ಹೇರಿ ಪ್ರಭುತ್ವದ ಚುಕ್ಕಾಣಿ ಹಿಡಿದರು.

ಈಗಾಗಲೇ ಟಿಪ್ಪುವಿನ ಕಾಲದಲ್ಲಿ ದುರ್ಬಲರಾಗಿದ್ದ ಜಮೀನ್ದಾರರು ಈ ಕಾಲಾವಧಿಯಲ್ಲಿ ಇನ್ನೂ ದುರ್ಬಲರಾಗಿ ಹೊಸದಾಗಿ ಉದಯಿಸಿದ ಸರ್ಕಾರದ ಆಶ್ರಯದಲ್ಲಿ ತಮ್ಮ ಭವಿಷ್ಯವನ್ನು ಕಂಡುಕೊಳ್ಳಲು

ಯತ್ನಿಸಿದರು. ಕೈಗಾರೀಕರಣದ ಪರಿಣಾಮದಿಂದಾಗಿ ಇವರೆಲ್ಲರೂ ಹೆಚ್ಚು ಹೆಚ್ಚು ಬಂಡವಾಳ ಹೂಡಿಕೆಗೆ ಸ್ಪಂದಿಸಿದರು. ಈ ಮೂಲಕ ದೇಸೀ ವಾಣಿಜ್ಯೋದ್ಯಮದ ಮೇಲೆ ಬ್ರಿಟಿಷ್ ವಸಾಹತುಶಾಹಿ ಹಿಡಿತವನ್ನು ಸಾಧಿಸಿತ್ತು. ಕೃಷಿಯಲ್ಲಿ ಬಂಡವಾಳವನ್ನೂ ತೊಡಗಿಸುವ ಪ್ರಕ್ರಿಯೆ ಭಾಗವಾಗಿ ಪ್ಲಾಂಟೇಶನ್ ಪದ್ಧತಿ ಬೆಳೆದು ಬಂತು. ಇಂತಹ ಉದ್ಯಮಗಳಿಗೆ ಆರ್ಥಿಕ ಸಂಪನ್ಮೂಲಗಳನ್ನು ಈಡೇರಿಸಿಕೊಳ್ಳಲು ಮತ್ತು ಪ್ರವರ್ಧಮಾನಕ್ಕೆ ಬರುತ್ತಿದ್ದ ಕೈಗಾರಿಕೆ ಮತ್ತು ವಾಣಿಜ್ಯ ಘಟಕಗಳಿಗೆ ಆರ್ಥಿಕ ಸಂಪನ್ಮೂಲ – ಬಂಡವಾಳವನ್ನು ಪೂರೈಕೆ ಮಾಡುವ ಉದ್ದೇಶದಿಂದ ಬ್ಯಾಂಕಿಂಗ್ ರಂಗವನ್ನು ಬ್ರಿಟಿಷ್ ವಸಾಹತುಶಾಹಿಯು ಪ್ರಾರಂಭಿಸಿತು. ನಂತರ ಬಂದ ಕೈಗಾರೀಕರಣದ ಸವಾಲುಗಳನ್ನು ದುಡಿಯುವ ಜನರು ಕಾಲದಿಂದ ಕಾಲಕ್ಕೆ ಎದುರಿಸಿದರು. ಒಂದೆಡೆ ಅದನ್ನು ಕಾರ್ಮಿಕರ ರೈತರ ಹೋರಾಟವೆನ್ನಬಹುದಾದರೂ ವಿಶಾಲಾರ್ಥದಲ್ಲಿ ರಾಷ್ಟ್ರೀಯ ಹೋರಾಟವಾಗಿತ್ತು. ಈ ಬಗೆಯ ಸ್ಥಿತ್ಯಂತರಗಳನ್ನು ಪ್ರಸ್ತುತ ಅಧ್ಯಯನವು ಅಭ್ಯಸಿಸಿದೆ.

ಪೋರ್ಚುಗೀಸರ ದಂಡನಾಯಕ ವಾಸ್ಕೋಡಿಗಾಮನ ೧೪೯೮ರ ವ್ಯಾಪಾರ ಮತ್ತು ಸೈನಿಕ ಕಾರ್ಯಾಚರಣೆಯ ಉದ್ದೇಶಗಳನ್ನು ಹೊತ್ತ ಹಡಗು ಕಲ್ಲಿಕೋಟೆಯಲ್ಲಿ ತಂಗಿದ ನಂತರ ಹಿಂತಿರುಗಿ ಹೋಗುವಾಗ ಕರಾವಳಿ ಕರ್ನಾಟಕದ ಸರಹದ್ದಿನಲ್ಲಿ ತಮ್ಮ ದಾಳಿ, ದಬ್ಬಾಳಿಕೆ ಮತ್ತು ಸಂಘರ್ಷದ ಪುಟಗಳನ್ನು ತೆರೆದಿಟ್ಟ ಘಟನೆಗಳು ನಡೆಯುತ್ತದೆ. ಮುಂದಿನ ಘಟ್ಟದಲ್ಲಿ ಪೋರ್ಚುಗಲ್ ಪ್ರಭುತ್ವ ಕಳುಹಿಸಿ ಕೊಟ್ಟ ನೌಕಾಯಾನದ ತಂಡಗಳು ಸ್ಥಳೀಯ ಸಾಮಂತ ರಾಜರನ್ನು ನೇರವಾಗಿ ಎದುರಿಸಿ, ಪೋರ್ಚುಗೀಸರು ಮೇಲುಗೈ ಸಾಧಿಸಿ ವಾಣಿಜ್ಯೋದ್ಯಮವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಸರಿಸುಮಾರು ೧೫೭೬ ರ ಅವಧಿಗೆ ಕರಾವಳಿ ಕರ್ನಾಟಕದ ಭಟ್ಕಳ ಹೊರತುಪಡಿಸಿ ಎಲ್ಲಾ ಬಂದರುಗಳಲ್ಲಿ ಪೋರ್ಚುಗೀಸರು ನಿಯಂತ್ರಣ ಸಾಧಿಸಿದರು. ಕರಾವಳಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸುತ್ತಿದ್ದ ವಿಜಯ ನಗರ ಸಾಮ್ರಾಜ್ಯದ ಸಾಮಂತ ಅರಸರುಗಳು ಅನಿವಾರ್ಯವಾಗಿ ಪೋರ್ಚುಗೀಸರೊಂದಿಗೆ ಬಾಂಧವ್ಯವನ್ನು ಇಟ್ಟುಕೊಳ್ಳಬೇಕಾಯಿತು. ಗೋವಾದಲ್ಲಿ ಪೋರ್ಚುಗೀಸರು ಬಿಜಾಪುರದ ಪ್ರತಿನಿಧಿ ಆದಿಲ್ ಶಾಹಿ ದೊರೆಗಳನ್ನು ಸೋಲಿಸಿ ಪೋರ್ಚುಗೀಸ್ ರಾಜ್ಯ ಪ್ರಭುತ್ವ ಸ್ಥಾಪನೆಗೆ ಹೊನ್ನಾವರದ ಸಾಮಂತ ಅರಸರೇ ಬೆಂಗಾವಲಾಗಿ ನಿಂತು ಸೈನಿಕ ಕಾರ್ಯಾಚರಣೆಗೆ ನಾಯಕತ್ವ ನೀಡಿದರು. ಉಳ್ಳಾಲದ ರಾಣಿ ಅಬ್ಬಕ್ಕದೇವಿ ಕೂಡ ಪ್ರಾರಂಭದಲ್ಲಿ ಪೋರ್ಚುಗೀಸರೊಂದಿಗೆ ಸಹಕಾರದ ಕೊಡುಗೆಯನ್ನು ವ್ಯಕ್ತಪಡಿಸಿ ಅನಂತರದಲ್ಲಿ ತನ್ನ ಅಧಿಕಾರದ ಅವಧಿಯುದ್ದಕ್ಕೂ ಕೆಳದಿಯ ರಾಜರೊಂದಿಗೆ ಸೇರಿಕೊಂಡು ಪ್ರತಿರೋಧ ತೋರ್ಪಡಿಸುತ್ತಾರೆ. ಇಲ್ಲಿ ಗಮನಿಸಬೇಕಾದ ಮಹತ್ವಪೂರ್ಣ ಅಂಶವೆಂದರೆ ಮುಸ್ಲಿಂ ಮತ್ತಿತರೆ ವ್ಯಾಪಾರಿ ಸಮುದಾಯಗಳು ವಿವಿಧ ಬಂದರುಗಳಲ್ಲಿ ಪೋರ್ಚುಗೀಸರ ವ್ಯಾಪಾರ ವ್ಯವಹಾರಗಳ ವಿರುದ್ಧ ಪ್ರತಿರೋಧ – ಸಂಘರ್ಷಗಳನ್ನು ನಡೆಸುತ್ತಾರೆ. ಹಿಂಸಾತ್ಮಕವಾಗಿ ಪ್ರತಿಭಟಿಸುತ್ತಾರೆ. ಸಾವು ನೋವಿಗೆ ಎದೆಯೊಡ್ಡುತ್ತಾರೆ. ವ್ಯಾಪಾರಿ ಸಮುದಾಯದ ಈ ಸಂಘರ್ಷಗಳನ್ನು ವಿವಿಧ ಸಂದರ್ಭಗಳಲ್ಲಿ ಸಾಮಾನ್ಯ ಜನತೆ ಕೂಡ ಬೆಂಬಲಿಸುತ್ತಾರೆ. ಆದರೆ ಬಲಾಢ್ಯ ಪೋರ್ಚುಗೀಸರ ಸೈನಿಕ ವ್ಯವಸ್ಥೆ ಇವೆಲ್ಲವುಗಳನ್ನು ಸದೆಬಡಿದು ಕರಾವಳಿ ಕರ್ನಾಟಕದಲ್ಲಿ ಅಗ್ರಗಣ್ಯರಾಗಿ ಮೆರೆಯುತ್ತಾರೆ. ಕರಾವಳಿ ಕರ್ನಾಟಕದ ಸಮಗ್ರ ವಾಣಿಜ್ಯ ಹಿತಾಸಕ್ತಿಯ ಮೇಲೆ ಏಕಸ್ವಾಮ್ಯವನ್ನು ಘೋಷಿಸಿ ತಮ್ಮ ಅನುಕೂಲಕ್ಕೆ ಅನುಗುಣವಾಗಿ ಶೋಷಣೆ ಮಾಡುತ್ತಾರೆ. ಈ ಎಲ್ಲಾ ಬೆಳವಣಿಗೆಗಳ

ಪರಿಣಾಮವಾಗಿ ಕರಾವಳಿ ಕರ್ನಾಟಕದಲ್ಲಿ ಅಂದಿನವರೆಗೆ ಇದ್ದ ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆಯ ಮೂಲ ಲಕ್ಷಣವು ಪಲ್ಲಟಕ್ಕೆ ಒಳಗಾಗಿ ವಾಣಿಜ್ಯೋದ್ಯಮದತ್ತ ಬದಲಾವಣೆ ಹೊಂದುತ್ತದೆ.

ಹದಿನಾರನೇ ಶತಮಾನದ ಮಧ್ಯಭಾಗದಲ್ಲಿ ಕೆಳದಿ ಸಂಸ್ಥಾನವು ಕರಾವಳಿ ಕರ್ನಾಟಕದ ಎಲ್ಲಾ ಬಂದರುಗಳಲ್ಲಿ ತನ್ನ ಪ್ರಾಬಲ್ಯವನ್ನು ಸಾಧಿಸುತ್ತದೆ. ಪೋರ್ಚುಗೀಸರು ಈ ಪ್ರದೇಶದಲ್ಲಿ ಹೊಂದಿದ್ದ ವಾಣಿಜ್ಯೋದ್ಯಮ ಏಕಸ್ವಾಮ್ಯದ ಮೇಲೆ ಪ್ರಹಾರ ನೀಡುತ್ತದೆ. ಇದರ ಪರಿಣಾಮವಾಗಿ ಅಂದಿನ ವರೆಗೆ ಅಪಾರ ಪ್ರಮಾಣದಲ್ಲಿ ಲಾಭಗಳಿಸುತ್ತಿದ್ದ ಪೋರ್ಚುಗೀಸರು ಅನಿವಾರ್ಯವಾಗಿ ಕೆಳದಿ ರಾಜರ ಮೇಲೆ ಹಲವಾರು ಬಾರಿ ಯುದ್ಧ ನಡೆಸುತ್ತಾರೆ. ಆದರೆ ಪೋರ್ಚುಗೀಸರು ಇದರಲ್ಲಿ ಸಾಕಷ್ಟು ಯಶಸ್ಸನ್ನು ಕಾಣದೆ ಕೊನೆಯಲ್ಲಿ ಶಾಂತಿ ಒಪ್ಪಂದಕ್ಕೆ ಸಹಿ ಹಾಕಬೇಕಾಗಿ ಬರುತ್ತದೆ. ಈ ಶಾಂತಿ ಒಪ್ಪಂದದ ಷರತ್ತುಗಳಲ್ಲಿ ಬಹಳ ಸ್ಪಷ್ಟವಾಗಿ ಪೋರ್ಚುಗೀಸರು ಅಸಹಾಯಕತೆಯಿಂದ ವಾಣಿಜ್ಯೋದ್ಯಮದ ಉದ್ದೇಶಗಳನ್ನು ಬಿಟ್ಟುಕೊಡಬೇಕಾದ ಸಂದರ್ಭ ಒದಗಿ ಬರುತ್ತದೆ. ಎಲ್ಲಾ ಯುದ್ಧ ಒಪ್ಪಂದಗಳಲ್ಲೂ ವಾಣಿಜ್ಯೋದ್ಯಮವು ಪ್ರಮುಖ ಅಂಶವಾಗಿ ಪರಿಗಣಿಸಲ್ಪಡುತ್ತದೆ. ಒಟ್ಟಿನಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಕೆಳದಿ ಮತ್ತು ಪೋರ್ಚುಗೀಸರ ಮಧ್ಯದ ಸಂಬಂಧಗಳಲ್ಲಿ ಹಲವಾರು ಪ್ರಮುಖ ಬೆಳವಣಿಗೆಗಳಿಗೆ ಕಾರಣವಾಯಿತು. ಕರಿಮೆಣಸು ನಿರ್ಣಾಯಕವಾಗಿ ವ್ಯಾಪಾರದ ವಸ್ತುವಾಯಿತು. ಮಲಬಾರ್ ಪ್ರಾಂತ್ಯದ ಕರಿಮೆಣಸಿಗಿಂತ ಕರಾವಳಿ ಕರ್ನಾಟಕದ ಕರಿಮೆಣಸು ಆದ್ಯತೆಯ ವಸ್ತುವಾಗಿ ಕೆಳದಿ ಸಾಮ್ರಾಜ್ಯದ ಆದಾಯದಲ್ಲಿ ಅಲ್ಲಿಯ ತನಕ ಇದ್ದ ಕೃಷಿ ಆದಾಯವನ್ನು ಹಿನ್ನಡೆಗೆ ತಳ್ಳಿ ಹಾಕಿತ್ತು.

ಕೆಳದಿ ಸಂಸ್ಥಾನದೊಂದಿಗಿನ ವಾಣಿಜ್ಯೋದ್ಯಮದ ಪರಿಣಾಮವಾಗಿ ನಡೆದ ಸಂಘರ್ಷ ಮತ್ತು ವೈಫಲ್ಯಗಳು ಹಾಗೂ ಪೋರ್ಚುಗಲ್ ದೇಶದ ಆಂತರಿಕ ಆರ್ಥಿಕ ಬಿಕ್ಕಟ್ಟು, ರಾಜಕೀಯ ವಿದ್ಯಮಾನ ಇವುಗಳೆಲ್ಲವು ಭಾರತದಲ್ಲಿ ಪೋರ್ಚುಗೀಸರ ಆಡಳಿತ ಕಾರ್ಯವೈಖರಿಗಳ ಮೇಲೆ ದುಷ್ಪರಿಣಾಮ ಬೀರಿತು. ಇದರ ಅಂತಿಮ ಪರಿಣಾಮವಾಗಿ ಕರಾವಳಿ ಕರ್ನಾಟಕವನ್ನು ಒಳಗೊಂಡಂತೆ ಭಾರತದಲ್ಲಿ ಪೋರ್ಚುಗೀಸರು ಹೊಂದಿದ್ದ ವ್ಯಾಪಾರ ವ್ಯವಹಾರ ಮತ್ತು ಆಡಳಿತ ವ್ಯವಸ್ಥೆಗಳು ಕೂಡ ಬಿಕ್ಕಟ್ಟಿಗೆ ಒಳಗಾಯಿತು.

ಮೈಸೂರಿನ ಹೈದರಾಲಿಯು ಇಕ್ಕೇರಿಯ ಕೊನೆಯ ರಾಣಿ ವೀರ ಚೆನ್ನಮಾಜಿಯನ್ನು ಸೋಲಿಸಿ ಕರಾವಳಿ ಕರ್ನಾಟಕದ ಅಧಿಕಾರವನ್ನು ಕೈವಶ ಮಾಡಿಕೊಂಡನು. ಯುರೋಪಿಯನ್ನರ ವಿರುದ್ಧ ಸದಾ ವಿರೋಧವನ್ನು ಬೆಳೆಸಿಕೊಂಡು ರಾಜಕೀಯವಾಗಿ ಮತ್ತು ವಾಣಿಜ್ಯಾತ್ಮಕ ಉದ್ದೇಶದಿಂದ ಬ್ರಿಟಿಷರೊಂದಿಗೆ ನೇರ ಸಂಘರ್ಷ ನಡೆಸಿದನು. ಹೈದರಾಲಿಯು ಬ್ರಿಟಿಷರಿಗೆ ಕರಿಮೆಣಸನ್ನು ಬಂಧೂಕಿಗೆ ಪರ್ಯಾಯವಾಗಿ ಮಾರಾಟ ಮಾಡುವ ಮೂಲಕ ಬ್ರಿಟಿಷರ ವಿರುದ್ಧ ಸಂಘರ್ಷ ನಡೆಸಲು ಯುದ್ಧೋಪಕರಣಗಳನ್ನು ಸಂಗ್ರಹಿಸುವ ತಂತ್ರಬದ್ಧ ಯೋಜನೆಯನ್ನು ರೂಪಿಸಿ ಯಶಸ್ವಿಯಾದನು. ಮುಂದೆ ಟಿಪ್ಪು ಸುಲ್ತಾನ್ ಬ್ರಿಟಿಷರ ವಿರುದ್ಧ ರಾಜಿರಹಿತ ಸಂಘರ್ಷಗಳನ್ನು ನಡೆಸಿದನು. ೧೭೮೪ ರಿಂದ ನಿರಂತರವಾಗಿ ಬ್ರಿಟಿಷರೊಂದಿಗೆ ಕಾದಾಡಿದ ಟಿಪ್ಪು ೧೭೯೯ರಲ್ಲಿ ಶ್ರೀರಂಗಪಟ್ಟಣದಲ್ಲಿ ಹತನಾಗುವ ಮುಖಾಂತರ ಬ್ರಿಟಿಷರು ಮೇಲುಗೈ ಸಾಧಿಸಿದರು. ಈ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕದ ಆರ್ಥಿಕತೆಯು ಬಂಡವಾಳಶಾಹಿ ಬೆಳವಣಿಗೆಯ ಪ್ರಾರಂಭದ ಹಂತವನ್ನು ಪ್ರವೇಶಿಸಿತ್ತು.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಕರಾವಳಿ ಕರ್ನಾಟಕವನ್ನು ತನ್ನ ಕೈವಶಪಡಿಸಿಕೊಂಡ ನಂತರ, ಇಲ್ಲಿಯ ವಾಣಿಜ್ಯ ವ್ಯಾಪಾರ ವ್ಯವಹಾರಗಳ ಮೇಲೆ ಸಂಪೂರ್ಣ ಹಿಡಿತ ಸಾಧಿಸಿತು. ಮಧ್ಯವರ್ತಿ ಲೇವಾದೇವಿಗಾರರಿಗೆ, ಕಾಂಟ್ರಕ್ಟ್‌ದಾರರಿಗೆ ಹಾಗೂ ಭೂಮಾಲೀಕರಿಗೆ ಎಲ್ಲಾ ರೀತಿಯ ಸಹಾಯ ಸಹಕಾರಗಳನ್ನು ನೀಡಿ ರೈತಾಪಿ ಕೃಷಿ ಕೂಲಿಗಾರರನ್ನು ವಿಪರೀತ ತೆರಿಗೆ ವಸೂಲಾತಿಯಿಂದ ತೀವ್ರ ಶೋಷಣೆ ಮಾಡಿತ್ತು. ಇದರ ವಿರುದ್ಧ ಹಲವಾರು ಸ್ವರೂಪದ ಪ್ರತಿಭಟನೆಗಳು ಅಹಿಂಸಾತ್ಮಕವಾಗಿಯೂ ಮತ್ತು ಹಿಂಸಾತ್ಮಕವಾಗಿಯೂ ನಡೆಯಿತು. ಈ ಅವಧಿಯಲ್ಲಿ ಪ್ಲಾಂಟೇಶನ್ ಕೃಷಿಯು ಉದ್ಯಮವಾಗಿ ಬೆಳೆದು ಬರುವ ಮುಖಾಂತರ ಕೃಷಿಯಲ್ಲಿ ಬಂಡವಾಳದ ಬೆಳವಣಿಗೆಯಾಯಿತು. ಇದಕ್ಕೆ ಪೂರಕವಾಗಿ ಆರ್ಥಿಕ ಸಂಪನ್ಮೂಲದ ಕ್ರೋಡೀಕರಣಕ್ಕೆ ಬ್ರಿಟಿಷ್ ಬ್ಯಾಂಕಿಂಗ್ ವ್ಯವಸ್ಥೆಯೂ ಪ್ರಾರಂಭವಾಯಿತು.

ವಸಾಹತುಶಾಹಿಯ ಕೊನೆಯ ಕಾಲಘಟ್ಟದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ವಿವಿಧ ಸ್ವರೂಪದಲ್ಲಿ ಅಭಿವ್ಯಕ್ತಗೊಂಡಿತ್ತು. ಒಂದೆಡೆಯಲ್ಲಿ ಸಾಮ್ರಾಜ್ಯಶಾಹಿಗಳ ಹಿತಾಸಕ್ತಿಗಾಗಿ ನಡೆದ ಎರಡು ಮಹಾಯುದ್ಧಗಳಲ್ಲಿ, ಬಾಸೆಲ್ ಮಿಶನ್‌ನ ಕೈಗಾರಿಕಾ ಘಟಕ ಮತ್ತು ವಾಣಿಜ್ಯ ಘಟಕಗಳ ಮೇಲೆ ನೇರ ದಾಳಿ ನಡೆಯಿತು. ಹೊಸತಾಗಿ ಬೆಳೆದು ಬಂದ ಕಾರ್ಮಿಕವರ್ಗ ಸಂಘಟಿತವಾಯಿತು. ತೀವ್ರ ಶೋಷಣೆಗೆ ಒಳಗಾಗಿದ್ದ, ಕೃಷಿ ಬಿಕ್ಕಟ್ಟಿನಿಂದ ಬಳಲಿದ ರೈತಾಪಿ ಸಮುದಾಯ ಕೂಡ ಭೂಮಾಲೀಕ ವ್ಯವಸ್ಥೆಯ ವಿರುದ್ಧ ಮತ್ತು ಪ್ರಭುತ್ವದ ವಿರುದ್ಧ ಸಂಘರ್ಷಕ್ಕೆ ಇಳಿಯಿತು. ಈ ರೀತಿ ರೈತಾಪಿ ವರ್ಗ, ಕೃಷಿಕೂಲಿ ಕಾರ್ಮಿಕರು ಮತ್ತು ಸಂಘಟಿತ ಕಾರ್ಮಿಕವರ್ಗ ವಾಣಿಜ್ಯೋದ್ಯಮಿಗಳ ವಿರುದ್ಧ ಮತ್ತು ಬ್ರಿಟಿಷ್ ಪ್ರಭುತ್ವದ ವಿರುದ್ಧ ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಯಲ್ಲೇ ನಿರಂತರ ಚಳುವಳಿಗಳನ್ನು ರೂಪಿಸಿದರು. ಹಲವಾರು ಬಾರಿ ಈ ಚಳುವಳಿ ಹಿಂಸಾತ್ಮಕ ಸ್ವರೂಪವನ್ನೂ ಪಡೆಯಿತು. ಅಂತಿಮವಾಗಿ ಭಾರತ ವಸಾಹತುಶಾಹಿ ಆಡಳಿತದಿಂದ ವಿಮೋಚನೆಗೊಂಡ ಪ್ರಕ್ರಿಯೆಯಲ್ಲಿ ಕರಾವಳಿ ಕರ್ನಾಟಕದ ಈ ಸಂಘರ್ಷಗಳೂ ಒಳಗೊಂಡವು.

ವಾಣಿಜ್ಯೋದ್ಯಮದ ಮೂಲ ಆಧಾರವೇ ಸರಕು. ಕಚ್ಚಾವಸ್ತುಗಳು, ಪ್ರಕೃತಿಯಿಂದ ದೊರೆತ ಕೂಡಲೇ ತನ್ನಷ್ಟಕ್ಕೆ ತಾನೇ ಅದು ಮೌಲ್ಯವನ್ನು ಅಂದರೆ ಉಪಯುಕ್ತ ಯಾ ವಿನಿಮಯ ಮೌಲ್ಯವನ್ನು ಹೊಂದಿರುವುದಿಲ್ಲ.[೧] ಇದನ್ನೇ ಸರಳೀಕರಿಸಿ ಹೇಳುವುದಾದರೆ, ಕಚ್ಚಾವಸ್ತುಗಳು ತನ್ನಷ್ಟಕ್ಕೆ ತಾನೇ ಸರಕಾಗುವುದಿಲ್ಲ. ಅದು ನಿರ್ದಿಷ್ಟವಾದ ಪೂರ್ವಭಾವಿ ಕಾರ್ಯಗಳನ್ನು ಪೂರೈಸಲೇಬೇಕು. ಯಾವುದೇ ಉತ್ಪನ್ನಗಳು ಕೆಲವು ನಿರ್ದಿಷ್ಟ ಸಾಮಾಜಿಕ ಸಂಬಂಧಗಳೊಂದಿಗೆ ಉತ್ಪಾದನಾ ಸಂಬಂಧ ಬೇರ್ಪಟ್ಟಾಗ ಮಾತ್ರವೇ ಅದು ಸರಕಿನ ರೂಪ ಪಡೆಯುತ್ತದೆ. ಆದುದರಿಂದ ಸರಕಿನ ಉತ್ಪಾದನೆ ಎಂದರೆ ಒಂದು ನಿರ್ದಿಷ್ಟ ಚಾರಿತ್ರಿಕ ಘಟ್ಟದಲ್ಲಿ ಕಾಣಿಸಿಕೊಂಡಿರುವ ನಿರ್ದಿಷ್ಟ ಪೂರ್ವ ನಿರ್ಧರಿತ ಪ್ರಕ್ರಿಯೆಯಾಗಿದೆ. ಸರಕು ಯಾವತ್ತೂ ಕೇವಲ ಸರಕಾಗಿರುವುದಿಲ್ಲ. ಬದಲಾಗಿ ಅದು ಆಯಾ ಕಾಲಘಟ್ಟದ ಸಮಜೋ-ಆರ್ಥಿಕದ ಕೇಂದ್ರ ಬಿಂದುವಾಗಿರುತ್ತದೆ. ಅದು ಆರ್ಥಿಕತೆಯ ಕೇಂದ್ರ ಬಿಂದುವಾಗಿರುವುದರಿಂದ ಚಾರಿತ್ರಿಕ ವಿಶ್ಲೇಷಣೆಗೆ ಒಳಪಡುತ್ತದೆ. ಇದು ಸಹಜವಾಗಿಯೇ ಆಯಾ ಸಂದರ್ಭದ ಪ್ರಭುತ್ವಗಳ ವಿಶ್ಲೇಷಣೆಗೂ ದಾರಿ ಮಾಡಿಕೊಡುತ್ತದೆ. ಆದುದರಿಂದ ವಾಣಿಜ್ಯೋದ್ಯಮದ ಮೂಲಬೇರು ಸರಕು ಆಗಿರುವುದರಿಂದ ಸಹಜವಾಗಿಯೇ ಅದು ಸರಕು ಮತ್ತು ಆ ಸರಕುಗಳೊಂದಿಗೆ ಅಂತರ್ಗತವಾಗಿರುವ ವೈರುಧ್ಯಗಳ,

ಸಂಘರ್ಷಗಳ, ಸಹಕಾರಗಳ ಅಧ್ಯಯನ ಎಂದೇ ಅರ್ಥವಾಗುತ್ತದೆ. ಹೀಗಾಗಿ ಒಟ್ಟಾರೆ ಈ ವಿಶ್ಲೇಷಣೆಯನ್ನು ನಿರ್ದಿಷ್ಟ ಕಾಲಘಟ್ಟದ ಪ್ರಭುತ್ವದ ವಿಶ್ಲೇಷಣೆಯಾಗಿಯೂ ಗಮನಿಸಬಹುದು.

ಆದುದರಿಂದ ಕರಾವಳಿ ಕರ್ನಾಟಕದಲ್ಲಿ ೧೬ನೇ ಶತಮಾನದ ಪ್ರಾರಂಭದಿಂದ ವಸಾಹತುಶಾಹಿ ಕಾಲಘಟ್ಟದವರೆಗಿನ ವಾಣಿಜ್ಯೋದ್ಯಮ ಸಂಘರ್ಷದ ಸ್ವರೂಪದ ವಿಶ್ಲೇಷಣೆ ನೇರವಾಗಿ ಉತ್ಪಾದನೆ, ವಿತರಣೆ, ವಿನಿಮಯ ಮತ್ತು ಅನುಭೋಗ ಎಂಬ ಅರ್ಥಶಾಸ್ತ್ರದ[೨] ಎಳೆಗಳನ್ನು ಪರಸ್ಪರ ವೈರುಧ್ಯ ನೆಲೆಗಟ್ಟಿನಲ್ಲಿ ವಿಶ್ಲೇಷಿಸುವುದೇ ಆಗಿರುತ್ತದೆ.

ವಿವಿಧ ರಾಷ್ಟ್ರಗಳ ಮಧ್ಯೆ ಇರುವ ಪರಸ್ಪರ ವ್ಯಾಪಾರ, ವಾಣಿಜ್ಯ, ರಾಜಕೀಯ ಮತ್ತು ಇತರೆ ಸಂಬಂಧಗಳು, ಅವುಗಳು ಹೊಂದಿರುವ ಉತ್ಪಾದನಾ ಶಕ್ತಿಗಳ, 'ಅಭಿವೃದ್ಧಿ-ಬೆಳವಣಿಗೆಯ ಸ್ಥಿತಿಗತಿ', 'ಶ್ರಮ ವಿಭಜನೆ' ಮತ್ತು ಅವುಗಳ ಮಧ್ಯದ ಆಂತರಿಕ ಸಂಬಂಧಗಳನ್ನು ಸೂಚಿಸುತ್ತದೆ. ಆದುದರಿಂದ ಉತ್ಪಾದನಾ ಶಕ್ತಿಗಳ ಬೆಳವಣಿಗೆಯು ಅವುಗಳ ಶ್ರಮ ವಿಭಜನೆಯ ಮಟ್ಟವನ್ನು ಆಧರಿಸಿ ತೀರ್ಮಾನಿಸಲ್ಪಡುತ್ತದೆ. ಯಾವುದೇ ರಾಷ್ಟ್ರಗಳಲ್ಲಿ ಶ್ರಮ ವಿಭಜನೆಯು ಮೊದಲು ಕೃಷಿ ಆಧಾರಿತ ಶ್ರಮದಿಂದ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮವನ್ನು ಪ್ರತ್ಯೇಕಿಸುತ್ತದೆ. ಈ ಸ್ಥಿತ್ಯಂತರದ ಸ್ವರೂಪವನ್ನು ಪ್ರಸ್ತಾವಿತ ಕಾಲಘಟ್ಟಕ್ಕೆ ಅನ್ವಯಿಕ ನೆಲೆಯಲ್ಲಿ ನಡೆಸುವ ಅಧ್ಯಯನವೇ ವಾಸ್ತವಿಕವಾಗಿ ಇದರ ತಾತ್ತ್ವಿಕ ನೆಲೆಗಟ್ಟಾಗಿದೆ. ೧೫ನೇ ಶತಮಾನದ ಪ್ರಾರಂಭದಲ್ಲಿ ಕೃಷಿ ಉತ್ಪನ್ನಗಳು, ಕಾಡಿನ ಉತ್ಪನ್ನಗಳು ಮತ್ತು ಗೃಹ ಕೈಗಾರಿಕೆಗಳಾಧಾರಿತ ಸರಕುಗಳು ಬೃಹತ್ ಪ್ರಮಾಣದ ಶ್ರಮ ವಿಭಜನೆಗೆ ಕಾರಣವಾದವು. ಇವು ಬೃಹತ್ ಪ್ರಮಾಣದ ವಾಣಿಜ್ಯ ಸರಕುಗಳಾಗಿ ಪರಿವರ್ತನೆಗೊಂಡು, ಪ್ರಭುತ್ವದ ರಾಜಕೀಯ ಧೋರಣೆಗಳನ್ನು ನಿರ್ಣಯಿಸುವ ಹಂತಕ್ಕೆ ಬೆಳೆದು ಬಂದಿತು. ಈ ಪ್ರಕ್ರಿಯೆಯು ಜಗತ್ತಿನಾದ್ಯಂತ ನೌಕಾಯಾನದ ಬೆಳವಣಿಗೆ, ವಸಾಹತೀಕರಣ, ಹೊಸ ನಗರಗಳ ಹುಟ್ಟು ಮತ್ತು ಬೆಳವಣಿಗೆ ಹಾಗೂ ವ್ಯಾಪಕ ಶ್ರಮ ವಿಭಜನೆಗೆ ಕಾರಣವಾಯಿತು.

ಕೈಗಾರಿಕೆ ಮತ್ತು ವಾಣಿಜ್ಯಗಳ ಪ್ರತ್ಯೇಕೀಕರಣ ಪ್ರಕ್ರಿಯೆಯು ಹಳೆಯ ನಗರಗಳಲ್ಲಿ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಆದರೆ ಹೊಸ ನಗರಗಳಾಗಿ ಪರಿವರ್ತಿತವಾಗಿರುವ ಕಡೆಗಳಲ್ಲಿ ಇದು ಒಂದಕ್ಕಿಂತ ಹೆಚ್ಚು ನಗರಗಳು ಪರಸ್ಪರ ಸಹಕಾರ ಸಂಬಂಧಗಳನ್ನು ರೂಪಿಸಿಕೊಂಡ ನಂತರ ಬೆಳವಣಿಗೆಯಾಯಿತು. ಈ ತಿಳುವಳಿಕೆಯನ್ನು ಕರಾವಳಿ ಕರ್ನಾಟಕದ ಆರ್ಥಿಕತೆ, ಮತ್ತು ವಾಣಿಜ್ಯೋದ್ಯಮಗಳಿಗೆ ಸಂಬಂಧಿಸಿದಂತೆ ಎಲ್ಲಾ ಬಂದರು ನಗರಗಳಿಗೂ ಅನ್ವಯಿಸಬಹುದು. ಈ ರೀತಿಯ ಐತಿಹಾಸಿಕ ಬೆಳವಣಿಗೆಗಳು, ವ್ಯಾಪಾರ ವ್ಯವಹಾರದ ಹೊಸ ಸ್ವರೂಪದ ಆಯಾಮಗಳು, ತತ್ಪರಿಣಾಮವಾಗಿ ವಾಣಿಜ್ಯೀಕರಣದ ವಿಸ್ತರಣೆಯೊಂದಿಗೆ ಉತ್ಪಾದನೆ ಮತ್ತು ಉತ್ಪಾದಿತ ವಸ್ತುಗಳ ಚಲಾವಣೆಯ ತೀವ್ರತೆಯು ಹೆಚ್ಚಳಗೊಂಡು ಹೊಸ ಹೊಸ ಮಾರುಕಟ್ಟೆಗಳ ಹುಡುಕಾಟದೊಂದಿಗೆ ಅಗಾಧವಾಗಿ ಬೆಳೆಯಿತು. ಇದುವೇ ಅಮೇರಿಕಾ ಖಂಡವನ್ನು ಕಂಡು ಹಿಡಿಯುವಲ್ಲಿ ಮತ್ತು ಈಸ್ಟ್ ಇಂಡಿಯಾ ದೇಶಗಳಿಗೆ ಹೊಸ ಸಮುದ್ರ ಮಾರ್ಗವನ್ನು ಕಂಡು ಹಿಡಿಯಲು ಪ್ರಮುಖ ಕಾರಣವಾಯಿತು.

ಅಂದರೆ ಆಧುನಿಕ ಕೈಗಾರಿಕೆಯು ಜಾಗತಿಕ ಮಾರುಕಟ್ಟೆಯನ್ನು ಸ್ಥಾಪಿಸಿದೆ. ಅಮೇರಿಕಾದ ಆವಿಷ್ಕಾರವು ಇದಕ್ಕೆ ದಾರಿ ಮಾಡಿ ಕೊಟ್ಟಿದೆ. ಈ ಜಾಗತಿಕ ಮಾರುಕಟ್ಟೆಯು ವಾಣಿಜ್ಯ, ಸಮುದ್ರಯಾನ ಹಾಗೂ

ಭೂಮಾರ್ಗ ಸಂಪರ್ಕಗಳನ್ನು ಅಪಾರವಾಗಿ ಅಭಿವೃದ್ಧಿಗೊಳಿಸಿದೆ. ಈ ಅಭಿವೃದ್ಧಿಯು ತನ್ನ ಪ್ರಕ್ರಿಯೆಯಲ್ಲಿ ಕೈಗಾರಿಕಾ ಉತ್ಪಾದನೆಯ ಮೇಲೆ ಪ್ರಭಾವ ಬೀರಿದೆ. ಕೈಗಾರಿಕೆ, ವಾಣಿಜ್ಯ, ಸಮುದ್ರಯಾನ ಹಾಗೂ ರೈಲು ಮಾರ್ಗಗಳು ಅಭಿವೃದ್ಧಿಗೊಂಡಂತೆ ಅದೇ ಪ್ರಮಾಣದಲ್ಲಿ ಬಂಡವಾಳಶಾಹಿಯು ಅಭಿವೃದ್ಧಿಗೊಂಡಿತ್ತು. ತನ್ನ ಬಂಡವಾಳವನ್ನು ಹೆಚ್ಚಿಸಿಕೊಂಡಿತ್ತು.

ಈ ಬೆಳವಣಿಗೆಯನ್ನು ಅರ್ಥಶಾಸ್ತ್ರದ ಪಿತಾಮಹ ಎನಿಸಿಕೊಂಡ ಆಡಂಸ್ಮಿತ್‌ರವರು[೩] "ಯುಗಪ್ರವರ್ತಕ" ಆವಿಷ್ಕಾರವೆಂದು ಬಣ್ಣಿಸಿದ್ದಾರೆ. ಹೊಸ ವಸ್ತುಗಳನ್ನು ಆಮದು ಮಾಡಿಕೊಳ್ಳಲು ವಿನಿಮಯದ ಮಾಧ್ಯಮವನ್ನಾಗಿ ಚಿನ್ನ ಮತ್ತು ಬೆಳ್ಳಿಯ ಚಲಾವಣೆಯು ವಾಣಿಜ್ಯೋದ್ಯಮಕ್ಕೆ ಕತ್ತಿಯ ಅಲಗನ್ನು ನೀಡುವ ಮೂಲಕ ಪ್ರಭುತ್ವಗಳ ಸ್ವರೂಪವನ್ನು ಒಂದಕ್ಕಿಂತ ಮತ್ತೊಂದಕ್ಕೆ ಬದಲಾಗುವಂತೆ ಮಾಡಿತ್ತು. ಇದು ಯುರೋಪಿನಲ್ಲಿ ಪಾಳೆಯಗಾರಿ ಪದ್ಧತಿಯಿಂದ ಬಂಡವಾಳಶಾಹಿ ಪದ್ಧತಿಗೆ ಸ್ಥಿತ್ಯಂತರಕ್ಕೆ ಕಾರಣವಾಯಿತು. ಆದರೆ ಭಾರತದಲ್ಲಿ ಇದು ಪಾಳೆಯಗಾರಿ ಸಂಬಂಧವನ್ನು ಜೊತೆಜೊತೆಯಲ್ಲಿ ಇರಿಸಿಕೊಂಡು ನಿಧಾನಗತಿಯಲ್ಲಿ ರೈತಾಪಿ ಶ್ರಮ ಜೀವಿಗಳಿಗೆ ಹೊಡೆತ ನೀಡುವ ಪ್ರಮಾಣಕ್ಕೆ ಬೆಳೆಯಿತು. ಬಂಡವಾಳಶಾಹಿ ಸಮಾಜದ ಬೆಳವಣಿಗೆಯ ಬೀಜಾಂಕುರವಾಯಿತೇ ವಿನಃ ಅದಕ್ಕನುಗುಣವಾದ ಮೂಲಭೂತ, ಸಾಮಾಜಿಕ, ಆರ್ಥಿಕ ಬದಲಾವಣೆಗಳು ರೂಪುಗೊಳ್ಳಲಿಲ್ಲ. ಪಾಳೆಯಗಾರಿ ಊಳಿಗಮಾನ್ಯ ಸಂಬಂಧದ ಕೆಲವೊಂದು ಸ್ವರೂಪ–ಗುಣಲಕ್ಷಣಕ್ಕೆ ಮಾತ್ರ ತಡೆಯಾಯಿತು. ಇದನ್ನು ಹೊರತುಪಡಿಸಿ ಬೇರೆ ಯಾವುದೇ ಪರಿಣಾಮಗಳು ಆಗಲಿಲ್ಲ. ಸಾಹಸಮಯ ದಂಡಯಾತ್ರೆ ವ್ಯಾಪಕ ವಸಾಹತೀಕರಣ ಪ್ರಕ್ರಿಯೆ ಮತ್ತು ಅದಕ್ಕಿಂತಲೂ ಮುಖ್ಯವಾಗಿ ಸಾಮಾನ್ಯ ಮಾರುಕಟ್ಟೆ ಜಾಗತಿಕ ಮಾರುಕಟ್ಟೆಯಾಗಿ ವಿಸ್ತರಣೆಯಾಯಿತು. ಈ ಪ್ರಕ್ರಿಯೆಗೆ ಕರಾವಳಿ ಕರ್ನಾಟಕವನ್ನೊಳಗೊಂಡ ಪಶ್ಚಿಮ ಕರಾವಳಿ ಹೆಬ್ಬಾಗಿಲಾಯಿತು.

ಫ್ಯಾಕ್ಟರಿ ವಸ್ತುಗಳ ಉತ್ಪನ್ನಗಳೊಂದಿಗೆ, ವಿವಿಧ ರಾಷ್ಟ್ರಗಳು, ಸ್ಪರ್ಧಾತ್ಮಕ ಪೈಪೋಟಿಯ ಸಂಬಂಧಕ್ಕೆ ಇಳಿಯಬೇಕಾಯಿತು. ವ್ಯಾಪಾರಕ್ಕಾಗಿ ಸಂಘರ್ಷಗಳು ಯುದ್ಧಗಳಾಗಿ ಪರಿವರ್ತಿತವಾಯಿತು. ಸಂರಕ್ಷಣಾತ್ಮಕ ತೆರಿಗೆಗಳು ಮತ್ತು ನಿಷೇಧಗಳು ಪ್ರಾರಂಭವಾದುವು. ಈ ಮೊದಲು ಎಲ್ಲಾ ರಾಷ್ಟ್ರಗಳು ಯಾವುದೇ ಅಡೆ ತಡೆಗಳಿಲ್ಲದೆ ವ್ಯಾಪಾರದಲ್ಲಿ ತೊಡಗಿರುವಂತಹ ವ್ಯವಸ್ಥೆ ಬದಲಾಯಿತು. ಪರಸ್ಪರ ಆಕ್ರಮಣಕಾರಿತ್ವ ವಿನಿಮಯಕ್ಕೆ ಲಗ್ಗೆ ಇಟ್ಟವು. ೧೬ನೇ ಶತಮಾನದ ಪ್ರಾರಂಭದ ದಿನಗಳಿಂದಲೇ ವ್ಯಾಪಾರ, ವಾಣಿಜ್ಯವು, ರಾಜಕೀಯ ಪ್ರಾಮುಖ್ಯತೆಯನ್ನು ಪಡೆಯಿತು. ಫ್ಯಾಕ್ಟರಿ ವಸ್ತುಗಳ ಉತ್ಪಾದನೆಯೊಂದಿಗೆ ದುಡಿಮೆಗಾರರ ಮತ್ತು ಅವರನ್ನು ದುಡಿಸಿಕೊಳ್ಳುವವರ ಸಂಬಂಧಗಳಲ್ಲೂ ಬದಲಾವಣೆಯಾಯಿತು. ಗಿಲ್ಡ್‌ಗಳಾಗಿ ಸಂಯೋಜಿತಗೊಂಡಿದ್ದ ವ್ಯವಸ್ಥೆಯಲ್ಲಿದ್ದ ಕೂಲಿಗಾರ ಮತ್ತು ಮಾಲಕರ ಸಂಬಂಧವು ಹಾಗೆಯೇ ಮುಂದುವರಿಯಿತು. ಫ್ಯಾಕ್ಟರಿ ಸಂಬಂಧಿತ ಉತ್ಪಾದಿತ ವ್ಯವಸ್ಥೆಯಲ್ಲಿ ಕಾರ್ಮಿಕರು ಮತ್ತು ಬಂಡವಾಳಶಾಹಿ ಸಂಬಂಧಗಳನ್ನು ಹಣದ ಸಂಬಂಧಗಳಿಂದಲೇ ಗುರುತಿಸಲಾಯಿತು.

ವಾಣಿಜ್ಯೋದ್ಯಮ ಮತ್ತು ಬಂಡವಾಳಶಾಹಿ ಬೆಳವಣಿಗೆಯ ಬಗ್ಗೆ ಚರಿತ್ರೆಕಾರರಾದ ಸಂಜಯ್ ಸುಬ್ರಹ್ಮಣ್ಯಂ, ಇರ್ಫಾನ್ ಹಬೀಬ್, ಸೋವಿಯತ್ ಯೂನಿಯನ್‌ನ ಚರಿತ್ರೆಕಾರರಾದ ವಿ. ಪಾವ್‌ಲೋವ್ ಮತ್ತು ಎ.ಐ. ಚಿಕ್‌ಲೋವ್‌ರವರುಗಳ ವಿಶ್ಲೇಷಣೆಗಳನ್ನು ಆಧಾರವಾಗಿ ಪರಿಗಣಿಸಿ ಕೆಳಕಂಡಂತೆ ಕರಾವಳಿ

ಕರ್ನಾಟಕಕ್ಕೆ ಅನ್ವಯಿಸಬಹುದು. ಸಂಜಯ್ ಸುಬ್ರಹ್ಮಣ್ಯಂರವರು ಚರ್ಚಿಸುವ ತಾರ್ಕಿಕ ಪ್ರಶ್ನೆಯಾದ ಭಾರತದ ಬಂಡವಾಳಶಾಹಿ ವ್ಯವಸ್ಥೆಯ ಅಸ್ತಿತ್ವ ಮತ್ತು ಬೆಳವಣಿಗೆಯ ಸ್ಥಿತಿಗತಿಯನ್ನು ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮಕ್ಕೆ ವಿಸ್ತರಿಸಿ ವಿಮರ್ಶಿಸಬೇಕಾಗುತ್ತದೆ.

ವಸಾಹತುಶಾಹಿ ಆಳ್ವಿಕೆ ಪ್ರಾರಂಭವಾದ ನಂತರದ ಭಾರತ ಉಪಖಂಡ ಭಾಗಶಃ ಅಥವಾ ಪೂರ್ತಿಯಾಗಿ ಆಧುನಿಕ ಬಂಡವಾಳಶಾಹಿ ಚೌಕಟ್ಟಿನಡಿಗೆ ಚಲಿಸಲ್ಪಟ್ಟಿತ್ತು ಎಂಬುದಾಗಿದೆ. ಆದರೆ ಸಾಮಾನ್ಯವಾಗಿ ಚರಿತ್ರೆಕಾರರ ಅಭಿಪ್ರಾಯಗಳ ಪ್ರಕಾರ ಕೈಗಾರಿಕಾ ಬಂಡವಾಳಶಾಹಿ ಮತ್ತು ಕೃಷಿಯಲ್ಲಿ ಬಂಡವಾಳಶಾಹಿ ಬೆಳವಣಿಗೆಯು ೧೯ನೇ ಶತಮಾನದ ನಂತರವಷ್ಟೇ ವ್ಯಾಪಕವಾದ ನೆಲೆಯಲ್ಲಿ ವಿಸ್ತರಿಸಿದೆ. ಆದರೆ ಕರಾವಳಿ ಕರ್ನಾಟಕದಲ್ಲಿ ೧೬ನೇ ಶತಮಾನದ ಪ್ರಾರಂಭದ ದಿನಗಳಿಂದಲೇ ಈ ರೀತಿಯ ವಾಣಿಜ್ಯೀಕರಣದ ಲಕ್ಷಣಗಳು ಕಂಡು ಬಂದರೂ ಅದು ಮುಂದಿನ ಹಂತಕ್ಕೆ ಪೂರ್ಣ ಪ್ರಮಾಣದಲ್ಲಿ ವಿಸ್ತರಿಸಲಿಲ್ಲ. ಇದರ ಪರಿಣಾಮವಾಗಿ ಇಲ್ಲಿಯ ನಗರಗಳು ಕೇವಲ ವಾಣಿಜ್ಯ ನಗರಗಳಾಗಿ ಬೆಳವಣಿಗೆಯಾಯಿತೇ ವಿನಃ ಕೈಗಾರಿಕೆ ನಗರಗಳಾಗಿ ಬೆಳೆದು ಬರಲಿಲ್ಲ.[೪]

ಮೊಗಲ್ ಆಳ್ವಿಕೆಯ ಕಾಲದ ಆರ್ಥಿಕತೆಯ ಸ್ವರೂಪವನ್ನು ಸಮಗ್ರವಾಗಿ ಅಧ್ಯಯನ ನಡೆಸಿದ ಚರಿತ್ರೆಕಾರರಾದ ಇರ್ಫಾನ್ ಹಬೀಬ್‌ರವರ ಅಧ್ಯಯನವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಕರಾವಳಿ ಕರ್ನಾಟಕದ ಚಾರಿತ್ರಿಕ ಸನ್ನಿವೇಶದಲ್ಲಿ ಮುಖಾಮುಖಿಗೊಳಿಸಿ ಚರ್ಚಿಸಲಾಗಿದೆ. ಹಬೀಬ್‌ರವರು ಭಾರತದಲ್ಲಿ ಬಂಡವಾಳಶಾಹಿ ಪರಿವರ್ತನೆ ನಡೆದಿರುವಂತಹದು ೧೮ನೇ ಶತಮಾನದ ಕೊನೆಯಲ್ಲಿ ಎಂದು ವಾದಿಸಿದ್ದಾರೆ. ಆದರೆ ಕರಾವಳಿ ಕರ್ನಾಟಕದ ಪ್ರಾಂತ್ಯದಲ್ಲಿ ೧೬ನೇ ಶತಮಾನದಿಂದ ಮೊದಲ್ಗೊಂಡು ೧೮ನೇ ಶತಮಾನದವರೆಗಿನ ಸುಮಾರು ೩೦೦ ವರ್ಷಗಳ ಕಾಲಾವಧಿಯ ದೀರ್ಘ ಅವಧಿಯಲ್ಲಿ ಹಂತ ಹಂತದಲ್ಲಿ ಇದು ಬೆಳೆದು ಬಂದಿದೆ. ಈಗಾಗಲೇ ಮೇಲೆ ಕಾಣಿಸಿದ ಸೋವಿಯತ್ ಚಿಂತಕರುಗಳು, ವಸಾಹತುಶಾಹಿ ಆಡಳಿತದ ಕಾರಣಗಳಿಂದಾಗಿ ಭಾರತದ ಆರ್ಥಿಕ ಚೌಕಟ್ಟುಗಳಾದ ಗುಡಿಕೈಗಾರಿಕೆ, ಕೃಷಿ ಮತ್ತು ವ್ಯಾಪಾರ, ವಾಣಿಜ್ಯೋದ್ಯಮಕ್ಕೆ ಸಂಬಂಧಿಸಿ ಹೊಸ ಸ್ವರೂಪಗಳು ಬೆಳೆದು ಬಂತು ಎಂದು ವಿಶ್ಲೇಷಿಸಿದ್ದಾರೆ. ಈ ದೃಷ್ಟಿಕೋನ ಸಹ ಭಾರತದ ಆರ್ಥಿಕ ಸ್ಥಿತ್ಯಂತರದ ಮೂಲಭೂತ ಸಾರದ ಪಡಿಯಚ್ಚು ಆಗಿರುತ್ತದೆ. ಏಕೆಂದರೆ ಭಾರತದ ಉತ್ಪಾದಕತೆಯು ವಾಣಿಜ್ಯ ಬಂಡವಾಳಕ್ಕೆ ಅಧೀನವಾಗಿರುವುದಲ್ಲದೆ ಪಾಳೆಯಗಾರಿ ಆರ್ಥಿಕ ವ್ಯವಸ್ಥೆಯ ಅಡಿಯಲ್ಲಿ ಉತ್ಪಾದಕ ಬಂಡವಾಳಶಾಹಿ ಬೆಳವಣಿಗೆಯು ಮೇಲಿನ ಹಂತಕ್ಕೆ ಬೆಳೆದು ಬಂದಿರುವುದನ್ನು ಗಮನಿಸಬಹುದು. ಈಗಾಗಲೇ ತಿಳಿಸಿರುವಂತೆ ವಾಣಿಜ್ಯೋದ್ಯಮ ಮೂಲ ಆಧಾರವಾಗಿರುವ ಸರಕುಗಳು ವಾಣಿಜ್ಯೀಕರಣಗೊಳ್ಳಲು ವ್ಯಾಪಕ ಪ್ರಮಾಣದ ವಿನಿಮಯವೇ ಕಾರಣವಾಗಿದೆ. ಉತ್ಪಾದನೆಯು ಅಗತ್ಯಕ್ಕನುಗುಣವಾಗಿ ವಸ್ತುಗಳನ್ನು ಉತ್ಪಾದಿಸುತ್ತದೆ. ವಿತರಣೆಯು ಅವುಗಳನ್ನು ಸಾಮಾಜಿಕ ನಿಯಮಗಳಿಗನುಗುಣವಾಗಿ ವಿಲೇವಾರಿ ಮಾಡುತ್ತದೆ. ಈ ಸರಕು ವಿನಿಮಯ ಪ್ರಕ್ರಿಯೆಯಲ್ಲಿ ಭಾಗವಹಿಸಬೇಕಾದರೆ ಅದಕ್ಕೆ ಸಾಮಾಜಿಕ ಸಂಬಂಧಗಳು ಬೇಕಾಗುತ್ತದೆ ೧೬ನೇ ಶತಮಾನದಲ್ಲಿ ಪೋರ್ಚುಗೀಸರ ವ್ಯಾಪಕವಾದ ವಾಣಿಜ್ಯೋದ್ಯಮದ ಚಟುವಟಿಕೆಗಳು ಈ ವಿನಿಮಯ ಪ್ರಕ್ರಿಯೆಯನ್ನು ಹೊಸ ಘಟ್ಟಕ್ಕೆ ಕೊಂಡೊಯ್ಯುತ್ತದೆ. ಆದುದರಿಂದ ಕರಾವಳಿ ಕರ್ನಾಟಕದಲ್ಲಿ ಬಂಡವಾಳಶಾಹಿ ಆರ್ಥಿಕ ಸಂಚಯದ ಪ್ರಾಥಮಿಕ ಕುರುಹುಗಳನ್ನು ಈ ಘಟ್ಟದಿಂದಲೇ ನಾವು ಕಾಣಬಹುದು.

ಪೋರ್ಚುಗೀಸರ ಆಗಮನದಿಂದ ಆರಂಭಗೊಂಡು ಭಾರತದಲ್ಲಿ ವಸಾಹತುಶಾಹಿಯ ಅಂತ್ಯದ ವರೆಗಿನ ಕಾಲಘಟ್ಟವು ಭಾರತೀಯ ಚರಿತ್ರೆಯಲ್ಲಿ ಒಂದು ವಿಶಿಷ್ಟವಾದ ಕಾಲಘಟ್ಟವಾಗಿದೆ. ಪ್ರಸ್ತುತ ಅಧ್ಯಯನವನ್ನು ಕರಾವಳಿ ಕರ್ನಾಟಕದ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಸಂಕಥನಕ್ಕಷ್ಟೇ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಕಾಲಾವಧಿಯ ರಾಜಕೀಯ ವಿದ್ಯಮಾನಗಳ ಇತಿಹಾಸವನ್ನು ಪ್ರಧಾನವಾಗಿ ಈವರೆಗಿನ ಇತಿಹಾಸಕಾರರು ಅಧ್ಯಯನ ಮಾಡಿದ್ದಾರೆ. ಆದರೆ ಆರ್ಥಿಕ ಹಾಗೂ ಸಾಮಾಜಿಕ ಇತಿಹಾಸಗಳ ಅಧ್ಯಯನವು ಸಾಕಷ್ಟು ನಡೆದಿಲ್ಲ. ಈ ನಿಟ್ಟಿನಲ್ಲಿ ರಾಜಕೀಯ ಅರ್ಥಶಾಸ್ತ್ರದ ನಿಕಷದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ನೆಲೆಗಳನ್ನು ವಿಶ್ಲೇಷಣೆ ಮಾಡಲಾಗಿದೆ.

ಹೀಗೆ ಅರ್ಥಶಾಸ್ತ್ರದ ನೆಲೆಯಲ್ಲಿ ನೋಡುವಾಗಲೂ, ತತ್ಕಾಲದ ರಾಜಕೀಯ ಚೌಕಟ್ಟನ್ನು ಹೊರತುಪಡಿಸಿಕೊಳ್ಳಲಾಗುವುದಿಲ್ಲ. ಹಾಗಾಗಿ ಕರಾವಳಿ ಕರ್ನಾಟಕದ ರಾಜಕೀಯ ಆಳ್ವಿಕೆ ನಡೆಸುತ್ತಿದ್ದ ವಿಜಯನಗರದ ಸಾಮ್ರಾಟ ಅರಸರು, ಅವರ ಅಧೀನದಲ್ಲಿ ಕರಾವಳಿ ಕರ್ನಾಟಕವನ್ನು ಆಳುತ್ತಿದ್ದ ಇಕ್ಕೇರಿ ನಾಯಕರು, ಮೈಸೂರು ಸಂಸ್ಥಾನದ ಹೈದರ್ ಮತ್ತು ಟಿಪ್ಪು ಸುಲ್ತಾನರು, ದೂರದ ಯುರೋಪಿನಿಂದ ವ್ಯಾಪಾರ ವಾಣಿಜ್ಯಕ್ಕಾಗಿ ಕರಾವಳಿ ಭೂಪ್ರದೇಶಕ್ಕೆ ಬಂದ ಪೋರ್ಚುಗೀಸರು, ಕರಾವಳಿಯನ್ನೊಳಗೊಂಡು ಭಾರತ ಖಂಡದ ಬಹುಭಾಗವನ್ನು ವಶಪಡಿಸಿಕೊಂಡ ಬ್ರಿಟಿಷರು–ಇವರೆಲ್ಲರ ರಾಜಕೀಯ ಆಡಳಿತ ಹಾಗೂ ಏಳುಬೀಳುಗಳಲ್ಲಿ ವಾಣಿಜ್ಯೋದ್ಯಮ ಮತ್ತು ತತ್ಸಂಬಂಧವಾದ ಸಂಘರ್ಷಗಳು ವಹಿಸಿರುವ ಮಹತ್ವದ ಪಾತ್ರವನ್ನು ಗುರುತಿಸಲಾಗಿದೆ.

ವಿವಿಧ ರೀತಿಯ ವಾಣಿಜ್ಯ ವ್ಯಾಪಾರಗಳು ಪೋರ್ಚುಗೀಸರ ಆಗಮನದೊಂದಿಗೆ ನಡೆದುಕೊಂಡು ಬಂದಿರುವ ವಿವಿಧ ಹಂತಗಳನ್ನು ವಿಸ್ತೃತವಾಗಿಯೇ ಚರ್ಚಿಸಲಾಗಿದೆ. ಪೋರ್ಚುಗೀಸರಿಗಿಂತಲೂ ಪೂರ್ವದಲ್ಲಿಯೇ ಅರೇಬಿಯನ್ನರು ಪಶ್ಚಿಮ ಕರಾವಳಿಯೊಂದಿಗೆ ವಾಣಿಜ್ಯ ವ್ಯವಹಾರಗಳನ್ನು ನಡೆಸುತ್ತಿದ್ದರು. ನೌಕೆ ಹಾಗೂ ಸಮುದ್ರವನ್ನು ಅವರು ಸರಕು ಸಾಗಾಣಿಕೆಯಲ್ಲಿ ಆಗಲೇ ಪಳಗಿಸಿದ್ದರು. ವಿಜಯನಗರ ಸಾಮ್ರಾಜ್ಯಕ್ಕೆ ಗೋವಾ ಬಂದರುಗಳ ಮತ್ತು ಭಟ್ಕಳ ಬಂದರಿನ ಮೂಲಕ ದೊಡ್ಡ ಪ್ರಮಾಣದಲ್ಲಿ ಕುದುರೆಗಳು ಬರುತ್ತಿದ್ದವು. ಕರ್ನಾಟಕದ ಮಲೆನಾಡಿನಿಂದ ಸಾಂಬಾರು ಪದಾರ್ಥ ಮತ್ತು ಆಹಾರ ವಸ್ತುಗಳು ರಫ್ತಾಗುತ್ತಿದ್ದುದನ್ನು ನಾವು ನೋಡುತ್ತೇವೆ. ಆದರೆ ಯುರೋಪಿನಿಂದ ಬಂದ ಪೋರ್ಚುಗೀಸರ ಹಡಗುಗಳೊಂದಿಗೆ, ಮಾರಾಟದ ಸರಕುಗಳೊಂದಿಗೆ ಬೆಂಗಾವಲಾಗಿ ಬಲಿಷ್ಠ ಸೈನಿಕ ಪಡೆಯು ಇರುವ ವಿದ್ಯಮಾನ, ಕರಾವಳಿ ಕರ್ನಾಟಕದ ವಾಣಿಜ್ಯ ವ್ಯವಹಾರಗಳ ಸ್ವರೂಪವನ್ನೇ ಬದಲು ಮಾಡಿತು. ಜೊತೆಗೆ ಅವರ ಹಡಗುಗಳು ದೊಡ್ಡ ಪ್ರಮಾಣದಲ್ಲಿ ಸರಕುಗಳ ದಾಸ್ತಾನು ಇರಿಸಿಕೊಳ್ಳಬಹುದಾದ ಗಾತ್ರದ್ದಾಗಿದ್ದವು. ಇಂತಹ ನೌಕಾ ಬಲಗಳನ್ನು ಒಳಗೊಳ್ಳುವ ಮೂಲಕ ಯುರೋಪಿನ ಪೋರ್ಚುಗಲ್, ಸ್ಪೈನ್ ಮತ್ತು ಫ್ರಾನ್ಸ್ ಮೊದಲಾದ ದೇಶಗಳು ವಸಾಹತುಶಾಹಿಗಳಾಗಿ ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೇರಿಕಾ ಖಂಡಗಳ ಭೂಪ್ರದೇಶಗಳನ್ನು ತಮ್ಮ ಅಧೀನ ಮಾಡಿಕೊಂಡವು. ಅವುಗಳ ನಡುವಿನ ಪರಸ್ಪರ ಪೈಪೋಟಿ ಮತ್ತು ಸ್ಪರ್ಧೆಯಲ್ಲಿ ಭಾರತದ ಮಟ್ಟಿಗೆ ಬ್ರಿಟಿಷ್ ವಸಾಹತುಶಾಹಿ ಹೆಚ್ಚು ಯಶಸ್ವಿಯಾಯಿತೆನ್ನಬಹುದು. ಸಾಮ್ರಾಟರು, ಸಾಮಂತರು, ಸ್ಥಳೀಯ ಪಾಳೆಯಗಾರಿಕೆಯ ಆಳ್ವಿಕೆಯಲ್ಲಿದ್ದ ವ್ಯಾಪಾರ ವಾಣಿಜ್ಯದ ಸ್ವರೂಪವನ್ನು

ಪೋರ್ಚುಗೀಸರು ಸಾಕಷ್ಟು ಪಲ್ಲಟಗೊಳಿಸಿದರು. ದೇಶೀಯ ಸಾಮಂತರ ಮಾರಾಟದ ಸರಕಿನಲ್ಲಿ ಕರಿಮೆಣಸು ಪ್ರಧಾನವಾಗಿದ್ದು ಈ ಸಾಮಂತರಿಗೂ, ಪೋರ್ಚುಗೀಸರಿಗೂ ನಡೆದಿದ್ದ ದೀರ್ಘಕಾಲದ ಸಂಘರ್ಷಗಳನ್ನು ಪ್ರಸ್ತುತ ಅಧ್ಯಯನದಲ್ಲಿ ನಿರೂಪಿಸಲಾಗಿದೆ. ಈ ಘಟ್ಟದಲ್ಲಿ ಬ್ರಿಟಿಷ್ ವಸಾಹತುಶಾಹಿಗೆ ಪ್ರತಿರೋಧ ತೋರಲು ಅಶಕ್ತರಾದ ಮೈಸೂರು ಸಂಸ್ಥಾನದ ಒಡೆಯರನ್ನೇ ಮೂಲೆಗೆ ತಳ್ಳಿದ ದಂಡನಾಯಕ ಹೈದರಾಲಿ ಮತ್ತು ಬಳಿಕ ಆತನ ಮಗ ಟಿಪ್ಪುಸುಲ್ತಾನರು ಇಕ್ಕೇರಿ ಸಂಸ್ಥಾನವನ್ನು ಒಳಗೊಂಡ ಕರಾವಳಿ ಕರ್ನಾಟಕವನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿ ಬ್ರಿಟಿಷ್ ವಸಾಹತುಶಾಹಿಯನ್ನು ನಿರಂತರವಾಗಿ ಎದುರಿಸುವುದು ಒಂದು ಪ್ರಮುಖ ರಾಜಕೀಯ ವಿದ್ಯಮಾನವಾಗಿದೆ. ಇದರಲ್ಲಿ 'ಕರಿಮೆಣಸಿಗೆ ಬಂಧೂಕು' ಎಂಬ ವಾಣಿಜ್ಯ ಸಿದ್ಧಾಂತದ ಅಡಿಯಲ್ಲಿ ವಸಾಹತುಶಾಹಿ ಬ್ರಿಟಿಷರಿಂದಲೇ ಆಧುನಿಕ ಬಂಧೂಕು, ಫಿರಂಗಿ ಹಾಗೂ ಆಧುನಿಕ ಶಸ್ತ್ರಾಸ್ತ್ರ ಪಡೆದು ಬ್ರಿಟಿಷರ ವಿರುದ್ಧವೇ ಪ್ರಯೋಗಿಸುವ ವಿಶಿಷ್ಟ ಘಟನೆ ನಡೆಯುತ್ತದೆ. ಇನ್ನೊಂದೆಡೆಯಲ್ಲಿ ತನ್ನ ವಾಣಿಜ್ಯ ಹಾಗೂ ಆರ್ಥಿಕತೆಯನ್ನು ಬಲಗೊಳಿಸಲು ಇಕ್ಕೇರಿಯ ಹಳೆಯ ಗ್ರಾಮೀಣ ತೆರಿಗೆ ಪದ್ಧತಿಯನ್ನು ಟಿಪ್ಪು ಬದಲಾಯಿಸುತ್ತಾನೆ. ಸಾಮಂತರು ಪಾಳೆಯಗಾರರು ಭೂತೆರಿಗೆ ಸಂಗ್ರಹಿಸುವ ಬದಲು ರೈತರೇ ಸಂಸ್ಥಾನಕ್ಕೆ ಭೂತೆರಿಗೆಯನ್ನು ಪಾವತಿಸಲು ಅವಕಾಶ ಕಲ್ಪಿಸುತ್ತಾನೆ. ಇದು ರೈತರನ್ನು ಅಂದಿನ ಪಾಳೆಯಗಾರಿ ಶೋಷಣೆಯಿಂದ ಅಲ್ಪ ಸ್ವಲ್ಪ ಬಿಡುಗಡೆಗೊಳಿಸುತ್ತದೆ.

ಹೈದರಾಲಿ ಮತ್ತು ಟಿಪ್ಪು ಆ ಕಾಲಘಟ್ಟದಲ್ಲಿ ದೇಶೀಯ ರಾಜರುಗಳಲ್ಲೇ ಶ್ರೇಷ್ಠ ಮಟ್ಟದ ನೌಕಾಪಡೆಯನ್ನು ಫ್ರೆಂಚರ ಮತ್ತು ಇಂಗ್ಲೀಷರ ಸಹಾಯವನ್ನು ತಂತ್ರಬದ್ಧವಾಗಿ ಪಡೆದು ನಿರ್ಮಿಸುತ್ತಾರೆ. ಎ.ಆರ್ ಡಿಸ್ನಿಯವರು ವಿವರಿಸುವಂತೆ, ಸಮುದ್ರ ತೀರದ ಬಂದರು ಪಟ್ಟಣಗಳು ಮೆಟ್ರೋಪಾಲಿಟನ್ ನಗರ ಸಂಸ್ಕೃತಿಯನ್ನು ಪಡೆದುಕೊಂಡವು. ಈ ಬದಲಾವಣೆಯ ಪ್ರಮುಖ ವಾರಸುದಾರರಾಗಿ ಗೌಡ ಸಾರಸ್ವತ ಬ್ರಾಹ್ಮಣರು ಮತ್ತು ಕ್ರೈಸ್ತ ಸಮುದಾಯಗಳಾಗಿದ್ದವು. ಇವರುಗಳೇ ಹೈದರಾಲಿ ಮತ್ತು ಟಿಪ್ಪು ಕಾಲದಲ್ಲೂ ಪ್ರಮುಖ ವಾಣಿಜ್ಯ ಸಮುದಾಯವಾಗಿ ಆರ್ಥಿಕತೆಯನ್ನು ಪರೋಕ್ಷವಾಗಿ ನಿಯಂತ್ರಿಸಿದರು. ಟಿಪ್ಪುವಿನ ಆರ್ಥಿಕ ಧೋರಣೆಗಳಿಂದ ಸ್ವಲ್ಪ ಮಟ್ಟಿನ ತೊಂದರೆಗೊಳಗಾದ ಈ ವಾಣಿಜ್ಯ ಸಮುದಾಯಗಳು ಆತನಿಗೆ ವಿರುದ್ಧವಾಗಿ ಬ್ರಿಟಿಷರಿಗೆ ಮಿತ್ರರಾಗಿ ನಿರ್ಣಾಯಕ ಕಾಲಘಟ್ಟದಲ್ಲಿ ಪಾತ್ರವಹಿಸುತ್ತಾರೆ. ಇಪ್ಪತ್ತನೇ ಶತಮಾನದಲ್ಲಿ ಬ್ಯಾಂಕಿಂಗ್, ಸೇವಾರಂಗ ಮತ್ತು ಸಾರಿಗೆ ರಂಗದ ಬೆಳವಣಿಗೆಯಲ್ಲೂ ಈ ಸಮುದಾಯಗಳು ನಿರ್ಣಾಯಕ ಪಾತ್ರವಹಿಸುತ್ತವೆ. ವಾಣಿಜ್ಯೋದ್ಯಮಿಗಳಿಗೆ ವ್ಯಾಪಾರ ವ್ಯವಹಾರದಿಂದ ಲಾಭ ಮಾತ್ರವಲ್ಲದೆ ಯುದ್ಧಗಳಿಂದಲೂ ಅಪಾರ ಲಾಭಗಳಿಸುವ ಸಾಮ್ರಾಜ್ಯಶಾಹಿ ಧೋರಣೆ ಈ ಅವಧಿಯಲ್ಲಿ ಬೆಳೆದು ಬಂದಿತು. ಭಾರತದೊಂದಿಗೆ ವ್ಯಾಪಾರದಲ್ಲಿ ತೊಡಗಿದ್ದ ಪೋರ್ಚುಗೀಸ್, ಡಚ್ಚ್ ಮತ್ತು ಫ್ರೆಂಚ್ ಕಂಪೆನಿಗಳು ಬೃಹತ್ ಪ್ರಮಾಣದಲ್ಲಿ ಲಾಭವನ್ನು ಗಳಿಸುತ್ತಿವೆ ಎಂಬ ಅಂಶ ಬ್ರಿಟಿಷ್ ಸಾಹಸಿ ವರ್ತಕರಿಗೂ ತಮ್ಮದೇ ಆದ ಕಂಪೆನಿಯನ್ನು ಸ್ಥಾಪಿಸಲು ಪ್ರೇರಣೆ ನೀಡಿತು. ೧೬೦೦ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಮಹಾರಾಣಿ ಒಂದನೇ ಎಲಿಜಬೆತ್‌ರವರಿಂದ ಭಾರತ ಮತ್ತು ಸಾಂಬಾರು ಪದಾರ್ಥಗಳಿಗೆ ಪ್ರಸಿದ್ಧವಾದ ಇತರ ದ್ವೀಪಗಳೊಂದಿಗೆ ವ್ಯಾಪಾರ ನಡೆಸಲು ಸನ್ನದ್ದನ್ನು ಪಡೆಯಿತು. ಈಸ್ಟ್ ಇಂಡಿಯಾ ಕಂಪೆನಿ ೧೭೬೫ರ ವರೆಗಿನ ವಾರ್ಷಿಕ ಲಾಭಾಂಶ ನೂರಕ್ಕೆ ನೂರರಿಂದ ಇನ್ನೂರೈವತ್ತರಷ್ಟು ಇದ್ದಿತ್ತು. ಇದರಲ್ಲಿ ಭಾರತದಲ್ಲಿ ಕಂಪೆನಿ ಏಜೆಂಟರು,

ನೌಕರರು ಮಾಡಿಕೊಳ್ಳುತ್ತಿದ್ದ ಮೇಲು ಸಂಪಾದನೆ ಸೇರಿರಲಿಲ್ಲ. ಇವರನ್ನು ಇಂಗ್ಲೆಂಡಿನಲ್ಲಿ ನವಾಬ್ ಎಂದು ಕರೆಯುತ್ತಿದ್ದರು.

೧೭೬೫ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಬಂಗಾಳದ ದಿವಾನಿಯನ್ನು ಪಡೆಯಿತು[೫]. ಆ ಹೊತ್ತಿಗೆ ಅದು ಉಳಿದ ಎಲ್ಲಾ ಯುರೋಪಿಯನ್ ಸ್ಪರ್ಧಿಗಳನ್ನು ಭಾರತದ ಮಾರುಕಟ್ಟೆಯಿಂದ ಓಡಿಸಿ ಬಿಟ್ಟಿತ್ತು. ದಿವಾನಿ ಪಡೆದುದರ ಪರಿಣಾಮವಾಗಿ ಭಾರತದೊಂದಿಗಿನ ವಾಣಿಜ್ಯದಲ್ಲಿ ಹೆಚ್ಚು ಕಡಿಮೆ ಏಕಸ್ವಾಮ್ಯವನ್ನು ಪಡೆದಿದ್ದರಿಂದ ಕಂಪೆನಿ ಮತ್ತು ಅದರ ನೌಕರರ ಲಾಭ ಇನ್ನಷ್ಟೂ ಹೆಚ್ಚಿತು (ಜೋಶಿ ೨೦೦೦: ೧೭).

ಹದಿನೆಂಟನೇ ಶತಮಾನದ ಕೊನೆಯಲ್ಲಿ ಇಂಗ್ಲೀಷ್ ಕಂಪೆನಿಯು ತನ್ನ ಪ್ರತಿಸ್ಪರ್ಧಿ ಯುರೋಪಿಯನ್ ದೇಶಗಳನ್ನು ಸ್ಪರ್ಧೆಯಿಂದ ಹೊರದಬ್ಬಿತ್ತು. ಏಕಸ್ವಾಮ್ಯ ಚಕ್ರಾಧಿಪತ್ಯವಾಗಿ ಅದು ರೂಪುಗೊಂಡಿತ್ತು. ಚಕ್ರಾಧಿಪತ್ಯದ ನಿರ್ವಹಣೆಯು ಅದರ ಅಧಿಕಾರಶಾಹಿಯ ತಾಕತ್ತು ಮತ್ತು ಸೈನ್ಯದ ಬಲವನ್ನು ಆಧರಿಸಿತ್ತು. ಏಕಸ್ವಾಮ್ಯಾಧಿಕಾರವಲ್ಲದೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಭಾರತೀಯ ಸರಕುಗಳಿಗೆ ಟ್ರಾನ್ಸಿಟ್ (ಕಸ್ಟಮ್ಸ್) ತೆರಿಗೆಯನ್ನು ಹೇರಿ ಆದಾಯ ಸಂಗ್ರಹಣೆ ಮತ್ತು ಮಾರುಕಟ್ಟೆಯನ್ನು ಕುಗ್ಗಿಸಿತ್ತು. ಆದರೆ ಇಂಗ್ಲೀಷರ ಸರಕುಗಳಿಗೆ ಕಸ್ಟಮ್ಸ್ ತೆರಿಗೆ ಇಲ್ಲದೆ ೧೮೪೮ರ ವರೆಗೆ ಮುಕ್ತತೆಯನ್ನು ಜಾರಿಗೊಳಿಸಿ ಬ್ರಿಟಿಷರ ವಸ್ತುಗಳಿಗೆ ಮಾರುಕಟ್ಟೆಯ ವಿಸ್ತರಣೆಗೆ ಅವಕಾಶ ದೊರಕುವಂತೆ ಮಾಡಿ ದೇಶೀಯ ಕೈಗಾರಿಕೆಗಳಿಗೆ ಪ್ರೋತ್ಸಾಹ ದೊರೆಯದಂತೆ ಮಾಡಲಾಯಿತು. ಇದರ ಪರಿಣಾಮವಾಗಿ ಬೇಡಿಕೆ ಮತ್ತು ಸರಬರಾಜುಗಳೆರಡನ್ನೂ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ತನ್ನ ಪರವಾಗಿ ನಿರ್ಧರಿಸಿ ಆ ಮೂಲಕ ದೇಶದ ಆರ್ಥಿಕತೆಯನ್ನು ನಾಶ ಮಾಡಿತ್ತು.

ಟಿಪ್ಪುವಿನ ಅವಸಾನದ ಬಳಿಕ ಒಂದೂವರೆ ಶತಮಾನದ ಕಾಲ ಬ್ರಿಟಿಷರು ಕರಾವಳಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸುತ್ತಾರೆ. ಬ್ರಿಟಿಷರು ತಮ್ಮ ಪರವಾಗಿದ್ದ ವ್ಯಾಪಾರಿ ಸಮುದಾಯಗಳಿಗೆ ಕರಾವಳಿ ಕರ್ನಾಟಕದಲ್ಲಿ ಭೂಮಿಯನ್ನು ಒದಗಿಸುತ್ತಾರೆ. ರೈತವಾರಿ ಪದ್ಧತಿಯನ್ನು ಜಾರಿಗೊಳಿಸಿ ಭೂ ಒಡೆಯರಾದ ಭೂಮಾಲೀಕರಿಗೆ ಅನುಕೂಲ ಕಲ್ಪಿಸುತ್ತಾರೆ. ಬಡ ರೈತರನ್ನು ವಿಪರೀತ ತೆರಿಗೆಗಳಿಂದ ಶೋಷಿಸುತ್ತಾರೆ. ಬ್ರಿಟಿಷ್ ಬೊಕ್ಕಸಕ್ಕೆ ಕರಾವಳಿ ಕರ್ನಾಟಕದ ವಾಣಿಜ್ಯ ಮೂಲದಿಂದ ಮತ್ತು ಕಂದಾಯದ ಮೂಲದಿಂದ ಅಪಾರ ಸಂಪತ್ತನ್ನು ಶೇಖರಿಸಿಕೊಳ್ಳಲು ಎಲ್ಲಾ ರೀತಿಯಿಂದಲೂ ಪ್ರಯತ್ನಿಸುತ್ತಾರೆ. ಬ್ರಿಟಿಷರು ರೆವೆನ್ಯೂ ಆದಾಯವನ್ನು ಹೆಚ್ಚಿಸಲು ಇಳಿಜಾರಾಗಿರುವ ಭೂಮಿಯ ಕೃಷಿಯನ್ನು ಬೆಂಬಲಿಸಿದರು. ಆ ಪ್ರಕಾರ ಪಶ್ಚಿಮ ಮತ್ತು ಪೂರ್ವ ಘಟ್ಟಗಳಲ್ಲಿ ಕಾಡುಗಳನ್ನು ಕಡಿದು ಪ್ಲಾಂಟೇಶನ್ ಕೃಷಿಗೆ ಉತ್ತೇಜನ ನೀಡಿದರು. ಇತ್ತ ಕೃಷಿಯಲ್ಲಿ ಜೀವನ ಸಾಗಿಸುತ್ತಿದ್ದ ಜನವಿಭಾಗ ಬ್ರಿಟಿಷರ ಧೋರಣೆಯಿಂದ ದಿವಾಳಿ ಅಂಚಿಗೆ ತಲುಪಿದ್ದು ಅವರುಗಳು ಈ ಪ್ಲಾಂಟೇಶನ್‌ಗಳಲ್ಲಿ ತೋಟ ಕಾರ್ಮಿಕರಾಗಿ ಕೆಲಸಕ್ಕೆ ಸೇರಿದರು (ಜಯಕುಮಾರ್ ೨೦೦೧: ೨೫).

ಕೆನರಾ ಜಿಲ್ಲೆಯ ಪ್ರಪ್ರಥಮ ಕಲೆಕ್ಟರ್ ಆದ ಥೋಮಸ್ ಮುನ್ರೋ ಪ್ರಾರಂಭದಲ್ಲಿ ಸೆಟ್ಲ್‌ಮೆಂಟ್ ಪ್ರಕ್ರಿಯೆಯನ್ನು ನಿಜವಾದ ಬೇಸಾಯಗಾರರೊಂದಿಗೆ ಮಾಡದೇ ಭೂಮಾಲೀಕರೊಂದಿಗೆ ಮಾಡುತ್ತಾನೆ.

ಅಷ್ಟು ಮಾತ್ರವಲ್ಲದೆ ಈ ಸೆಟ್ಲ್‌ಮೆಂಟನ್ನು ಪ್ರತೀ ಬೇಸಾಯದ ಭೂಮಿಗೆ ಪ್ರತ್ಯೇಕವಾಗಿ ಮಾಡುವ ಬದಲು ಸಮಗ್ರ ಎಸ್ಟೇಟ್ ಅಥವಾ ಕಂದಾಯ ಭೂಮಿಯ ಮೇಲೆ ಸೆಟ್ಲ್‌ಮೆಂಟ್ ಮಾಡುತ್ತಾನೆ.

ಒಟ್ಟಿನಲ್ಲಿ ರೆವೆನ್ಯೂ ಸೆಟ್ಲ್‌ಮೆಂಟ್ ಎಂಬ ಮುಖವಾಡದಲ್ಲಿ ರೈತರ ಶೋಷಣೆಯನ್ನು ಕಾನೂನುಬದ್ಧಗೊಳಿಸುತ್ತಾರೆ. ಇದರ ವಿರುದ್ಧ ೧೮೦೦ ರಿಂದ ೧೮೩೭ ರವರೆಗೆ ಕರಾವಳಿ ಕರ್ನಾಟಕದ ಉದ್ದಗಲಕ್ಕೂ ರೈತಾಪಿ ಜನತೆ ಹಲವು ವಿಧದ ಪ್ರತಿಭಟನೆಗಳನ್ನು ಮಾಡುತ್ತಾರೆ. ತೆರಿಗೆ ಪಾವತಿಸದೇ ಇರುವ ಮೌನ ಹೋರಾಟ, ಕೂಟ ಬಂಡಾಯ ಮತ್ತು ಅಮರಸುಳ್ಯ ದಂಗೆಯಂತಹ ಸಮರಶೀಲ ಹೋರಾಟವನ್ನು ಕಾಣುತ್ತೇವೆ. ಈ ಹೋರಾಟಗಳನ್ನು ಬ್ರಿಟಿಷ್ ವಸಾಹತುಶಾಹಿಯು ನಿರ್ದಾಕ್ಷಿಣ್ಯವಾಗಿ ದಮನ ಮಾಡುತ್ತದೆ. ಬಿಪನ್ ಚಂದ್ರರವರು ಬ್ರಿಟಿಷರ ವಿರುದ್ಧದ ಜನ ಚಳುವಳಿಯನ್ನು ಕುರಿತು ಈ ರೀತಿ ವಿಶ್ಲೇಷಿಸಿದ್ದಾರೆ,

> ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ಮೊದಲ ನೂರು ವರ್ಷಗಳ ಕಾಲದಲ್ಲಿ ಇತಿಹಾಸದುದ್ದಕ್ಕೂ ಎಳೆಯಂತೆ ಹರಿದ ಈ ದಂಗೆಗಳಿಗೆ ಆಧಾರವಾಗಿದ್ದುದು ರೈತರು, ಜಮೀನ್ದಾರರು ಮತ್ತು ಚಿಕ್ಕಪುಟ್ಟ ನಾಯಕರ ನಡುವೆ ಇದ್ದ ಪರಂಪರಾಗತವಾದ ಸಂಬಂಧಗಳು ಮತ್ತು ವಿಧೇಯತೆಗಳು. ಅವು ಸ್ವರೂಪದಲ್ಲಿ ಸಂಪೂರ್ಣವಾಗಿ ಸ್ಥಳೀಯವಾದುವು ಹಾಗೂ ಬೇರೆ ಬೇರೆಯಾಗಿದ್ದವು. ಅವು ಹಿಂದುಳಿದ ರೀತಿಯಲ್ಲಿದ್ದವು. ಆಧುನಿಕವಾದ ರಾಷ್ಟ್ರೀಯತೆಯ ಪ್ರಜ್ಞೆಯಾಗಲೀ, ವಸಾಹತುಶಾಹಿಯ ಸ್ವರೂಪ ಮತ್ತು ಲಕ್ಷಣಗಳ ಇತ್ತೀಚಿನ ಅರಿವಾಗಲೀ, ನೂತನ ಸಾಮಾಜಿಕ ಸಂಬಂಧಗಳ ಆಧಾರದ ಮೇಲೆ ನೂತನ ಸಮಾಜವನ್ನು ಕಟ್ಟಬೇಕೆಂಬ ಭಾವನೆಯಾಗಲೀ ಇರಲಿಲ್ಲ. ಇವುಗಳ ನಾಯಕತ್ವವೂ ಅಷ್ಟೇ ಅನಿವಾರ್ಯವಾಗಿ ಸಾಂಪ್ರದಾಯಿಕ ಸ್ವರೂಪದಲ್ಲಿದ್ದು ತಮ್ಮ ಸುತ್ತ ಇರುವ ಬದಲಾಗುತ್ತಿರುವ ವಿಶ್ವದ ಅರಿವು ಸ್ವಲ್ಪವೂ ಅಲ್ಲಿ ಕಾಣಿಸುತ್ತಿರಲಿಲ್ಲ. ಅವುಗಳನ್ನು ಅಡಗಿಸಲು ಕೆಲವು ಸಾರಿ ಬ್ರಿಟಿಷರು ಭಾರೀ ಸೈನ್ಯಗಳನ್ನೇ ಬಳಸಬೇಕಾಯಿತಾದರೂ ನಿಜವಾಗಿಯೂ ಆ ಹೋರಾಟಗಳು ಬ್ರಿಟಿಷರಿಗೆ ಸವಾಲಾಗಿರಲಿಲ್ಲ. ವಿದೇಶೀ ಆಡಳಿತಕ್ಕೆ ವಿರುದ್ಧವಾಗಿ ಹೋರಾಟದ ಸ್ಥಳೀಯ ಪರಂಪರೆಯನ್ನು ನಿರ್ಮಿಸಿದುದೇ ಅವು ನೀಡಿದ ಕಾಣಿಕೆಯಾಗಿದೆ (ಬಿಪನ್ ಚಂದ್ರ ೨೦೦೭: ೪೭).

ಕರಾವಳಿ ಕರ್ನಾಟಕದಲ್ಲಿ ಅಮರ ಸುಳ್ಯ ದಂಗೆಯನ್ನು ಅಡಗಿಸಿದ ಬ್ರಿಟಿಷರ ಭೀಕರತೆಯ ನೆನಪು ಜನಮಾನಸದಲ್ಲಿ ಭದ್ರವಾಗಿ ನೆಲೆಯೂರಿತು. ಮುಂದಿನ ಒಂದು ಶತಮಾನಗಳ ಕಾಲ ಅಸಂಖ್ಯಾತ ಕಷ್ಟನಷ್ಟಗಳು ಸಂಭವಿಸಿದರೂ ಪ್ರತಿಭಟಿಸದಂತಹ ಮನೋಸ್ಥಿತಿಯನ್ನು ಇದು ನಿರ್ಮಿಸುತ್ತದೆ. ಕರಾವಳಿ ಕರ್ನಾಟಕದಲ್ಲಿ ಅಮರ ಸುಳ್ಯ ದಂಗೆಯ ನಂತರ ಗಾಂಧಿಯುಗದವರೆಗೆ ಯಾವುದೇ ಪ್ರತಿಭಟನೆಗಳು ಮೂಡಿ ಬರದಿರಲು ಕಾರಣವಾಗಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಕಾರಣಗಳನ್ನು ಚರ್ಚಿಸಲಾಗಿದೆ.

೨೦ನೇ ಶತಮಾನದ ಪ್ರಾರಂಭದಲ್ಲಿ ಕರಾವಳಿಯ ಆರ್ಥಿಕತೆ ವಾಣಿಜ್ಯೋದ್ಯಮ ವ್ಯವಹಾರಗಳಿಗೆ ಒಂದು ಗಂಭೀರ ತಿರುವು ಬರುತ್ತದೆ. ಬಾಸೆಲ್ ಮಿಶನ್ ಸಂಸ್ಥೆಯು ಆರಂಭದಲ್ಲಿ ನೇಯ್ಗೆ, ಹಂಚು, ಮುದ್ರಣ ಮೊದಲಾದ ಕೈಗಾರಿಕೆಗಳನ್ನು ಪ್ರಾರಂಭಿಸುತ್ತದೆ. ಆ ಬಳಿಕ ಇಲ್ಲಿಯ ವಾಣಿಜ್ಯ ಸಮುದಾಯಗಳ

ಮಾಲಕತ್ವದಲ್ಲಿ ಮೇಲಿನ ಉದ್ದಿಮೆಗಳು ಪ್ರಾರಂಭವಾಗುತ್ತವೆ. ಈ ಉದ್ದಿಮೆಗಳಲ್ಲಿರುವ ಕಾರ್ಮಿಕರು ಮಾಲಕರಿಂದ ಪ್ರಭುತ್ವದಿಂದ ಶೋಷಣೆಗೊಳಗಾಗಿ ೨೦ನೇ ಶತಮಾನದ ನಾಲ್ಕನೇ ದಶಕದಲ್ಲಿ ಕಮ್ಯೂನಿಸ್ಟರ ಮಾರ್ಗದರ್ಶನದಲ್ಲಿ ಸಂಘಟಿತರಾಗಿ ಪ್ರತಿಭಟನೆ ಆರಂಭವಾಗುತ್ತದೆ. ಇದರಲ್ಲಿ ನೇಯ್ಗೆ ಕಾರ್ಮಿಕರು ಮತ್ತು ಹಂಚಿನ ಕಾರ್ಮಿಕರ ಹೋರಾಟಗಳು ಗಮನಾರ್ಹವಾಗಿದ್ದು ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಯಲ್ಲೇ ನಡೆಯುತ್ತದೆ. ಬೀಡಿ ಕೈಗಾರಿಕೆಯಲ್ಲಿ ದುಡಿಯುತ್ತಿರುವ ಅಸಂಘಟಿತ ಕಾರ್ಮಿಕರು ಸಂಘಟಿತ ರಾಗಿ ಉಗ್ರವಾದ ಪ್ರತಿಭಟನೆ ನಡೆಸುತ್ತಾರೆ. ಮಾಲೀಕ ಸಮುದಾಯ ಬ್ರಿಟಿಷ್ ಪೊಲೀಸರನ್ನು ಉಪಯೋಗಿಸಿ ಕೊಂಡು ದುಡಿಯುವ ವರ್ಗದ ಚಳುವಳಿಯನ್ನು ಬಗ್ಗುಬಡಿಯಲು ತೀವ್ರ ಪ್ರಯತ್ನ ಮಾಡುತ್ತಾರೆ. ಆದರೂ ಧೈರ್ಯಗೆಡದೆ ಕರಾವಳಿ ಕರ್ನಾಟಕದ ದುಡಿಯುವ ಜನತೆ ತಮ್ಮ ಮೇಲಾಗುತ್ತಿರುವ ಶೋಷಣೆ ಯನ್ನು ಗುರುತಿಸಿಕೊಂಡು ವಸಾಹತುಶಾಹಿಗೆ ಎದುರಾಗಿ ಮತ್ತು ಶೋಷಕ ಮಾಲಕರ ವಿರುದ್ಧ ಹೋರಾಡಿ ರುವುದು ಕಂಡುಬರುತ್ತದೆ. ಪ್ರಾರಂಭದಲ್ಲಿ ರೈತಾಪಿ ಸಮುದಾಯ ಭೂಮಾಲಕರ ವಿರುದ್ಧದ ಪ್ರತಿಭಟನೆಗಳು ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲೂಕಿನಲ್ಲಿ ಸಮಾಜವಾದಿಗಳು ಮತ್ತು ಕಮ್ಯೂನಿಸ್ಟರ ಮಾರ್ಗ ದರ್ಶನದಲ್ಲಿ ನಡೆಯುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ತೆಂಕು ತುದಿಯ ಕಯ್ಯೂರಿನಲ್ಲಿ ೧೯೪೦ರ ವೇಳೆಗೆ ಸಮರಧೀರ ರೈತ ಚಳುವಳಿ ನಡೆದು ನಾಲ್ಕು ಜನ ರೈತ ಹೋರಾಟಗಾರರು ಗಲ್ಲುಗಂಬವನ್ನು ಏರುತ್ತಾರೆ[೬].

ದೇಶಕ್ಕೆ ಸ್ವಾತಂತ್ರ್ಯ ಬರುವ ಹೊತ್ತಿಗೆ ಮೆಟ್ರೋಪಾಲಿಟನ್ ಪಟ್ಟಣಗಳಾಗಿ ಬೆಳೆದಿದ್ದ ಮಂಗಳೂರು, ಉಡುಪಿ, ಬಂಟ್ವಾಳಗಳಲ್ಲಿ ಹಾಗೂ ಉತ್ತರ ಕನ್ನಡ ಜಿಲ್ಲೆಯ ಎಲ್ಲಾ ಕರಾವಳಿ ನಗರಗಳಲ್ಲಿ ಬಂಡವಾಳಶಾಹಿ ಪೂರ್ವದ ಆರ್ಥಿಕ ವ್ಯವಸ್ಥೆ ಸ್ಥಳೀಯ ಭೂಮಾಲೀಕ ಊಳಿಗಮಾನ್ಯ ವ್ಯವಸ್ಥೆಯೊಂದಿಗೆ ಬೆಳೆದು ಬಂದುದನ್ನು ನಾವು ಕಾಣುತ್ತೇವೆ. ಈ ಪರಿವರ್ತನೆಯಲ್ಲಿ ಪೋರ್ಚುಗೀಸ್ ವಾಣಿಜ್ಯದ ಪ್ರಭಾವಗಳಿವೆ. ಬಳಿಕ ಇಕ್ಕೇರಿ ಸಂಸ್ಥಾನದ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಇದನ್ನು ಹೊಸ ಆಯಾಮಕ್ಕೆ ಬೆಳೆಸಿತು. ಹೈದರ್ ಮತ್ತು ಟಿಪ್ಪು ಅವರ ಕಾಲಘಟ್ಟದಲ್ಲಿ ವಿವಿಧ ಕಂಪೆನಿಗಳ ಕಾರ್ಯನಿರ್ವಹಣೆ, ಗುತ್ತಿಗೆ ಪದ್ಧತಿಗಳ ಮೂಲಕ ಬಂಡವಾಳಶಾಹಿ ಬೆಳವಣಿಗೆಯು ವಿಸ್ತರಿಸಿರುವುದನ್ನು ಕಾಣುತ್ತೇವೆ. ಟಿಪ್ಪುವಿನ ನಂತರ ಬ್ರಿಟಿಷರು ವ್ಯವಸ್ಥಿತವಾಗಿ ಬಂಡವಾಳದ ಕ್ರೋಡೀಕರಣ ಮಾಡುತ್ತಾ ಇಲ್ಲಿಯ ಕೃಷಿ ಆರ್ಥಿಕತೆಯಿಂದ ಪೂರ್ಣ ಪ್ರಮಾಣದಲ್ಲಿ ವಾಣಿಜ್ಯೋದ್ಯಮ ಮತ್ತು ಬಂಡವಾಳಶಾಹಿ ಆರ್ಥಿಕತೆಯತ್ತ ಬದಲಾವಣೆಗೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ೨೦ನೇ ಶತಮಾನದಲ್ಲಿ ಬ್ಯಾಂಕಿಂಗ್ ಮತ್ತು ಸಂಪರ್ಕ ರಂಗದಲ್ಲಿ ಬೃಹತ್ ಪ್ರಮಾಣದ ಬೆಳವಣಿಗೆಗಳು ಹಾಗೂ ಇನ್ನಿತರೆ ಸೇವಾರಂಗದಲ್ಲಿ ಬೆಳವಣಿಗೆಗಳು ನಡೆಯುವ ಮೂಲಕ ಕರಾವಳಿ ಕರ್ನಾಟಕವನ್ನು ಬಂಡವಾಳಶಾಹಿ ಆರ್ಥಿಕತೆಯು ಮೇಲಿನ ಹಂತಕ್ಕೆ ಚಲಿಸಲ್ಪಡುತ್ತದೆ. ಈ ರೀತಿ ಹಂತ ಹಂತವಾಗಿ ನಡೆದ ಆರ್ಥಿಕ ಪಲ್ಲಟಗಳನ್ನು ಚರ್ಚಿಸಲಾಗಿದೆ.

**ಈ ಅಧ್ಯಯನದ ಫಲಿತಗಳು**

ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ಯುರೋಪಿಯನ್ನರ ಆಗಮನದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ ನಡೆದಿರುವ ಚಾರಿತ್ರಿಕ ಬೆಳವಣಿಗೆಗಳ ಸಮಗ್ರ ಅಧ್ಯಯನದ ಫಲಿತಾಂಶಗಳನ್ನು ಕೆಳಕಂಡಂತೆ ಗುರುತಿಸಬಹುದು

೧. ಪೋರ್ಚುಗೀಸರ ಆಗಮನದಿಂದ ಕರಾವಳಿ ಕರ್ನಾಟಕದಲ್ಲಿ ಅಸಂಘಟಿತವಾಗಿದ್ದ ಸಮುದ್ರವನ್ನು ಆಧಾರಿಸಿದ್ದ ವ್ಯಾಪಾರ ವ್ಯವಹಾರಗಳು ಸಂಘಟಿತ ರೂಪಕ್ಕೆ ಪಲ್ಲಟಗೊಂಡು ಏಜೆಂಟ್ ಪದ್ಧತಿ, ಫ್ಯಾಕ್ಟರಿ ಪದ್ಧತಿ, ಕಮಿಷನ್ ವ್ಯವಹಾರಗಳೆಂಬ ಹೊಸ ಸ್ವರೂಪ ಬೆಳೆದು ಬಂತು. ಇದು ವ್ಯಾಪಾರ ವ್ಯವಹಾರಗಳೆಂಬ ಪ್ರಾಥಮಿಕ ಸ್ವರೂಪದಿಂದ ಬೃಹತ್ ವ್ಯಾಪಾರೋದ್ಯಮ ಎಂಬ ಪಾರಿಭಾಷೆಯಲ್ಲಿ ಗುರುತಿಸಲ್ಪಟ್ಟಿತ್ತು.

೨. ಕೃಷಿಪ್ರಧಾನ ಪ್ರಾಂತ್ಯವಾಗಿದ್ದ ಕರಾವಳಿ ಕರ್ನಾಟಕವು ವಾಣಿಜ್ಯೋದ್ಯಮದತ್ತ ಬದಲಾವಣೆಗೊಂಡಿತ್ತು. ಇದರ ಪರಿಣಾಮವಾಗಿ ಹಲವಾರು ಬಂದರು ನಗರಗಳು ಬೆಳೆದು ಬಂದು, ಅವುಗಳ ಸುತ್ತ ಎಲ್ಲಾ ರೀತಿಯ ಸಂಪರ್ಕ ಸಂಬಂಧಗಳು ಅಣಿನೆರೆದು ಅವುಗಳೇ ಪ್ರಮುಖ ನಗರಗಳಾಗಿ ಪರಿವರ್ತನೆಗೊಂಡವು.

೩. ವಾಣಿಜ್ಯದ ಏಕಸ್ವಾಮ್ಯತೆಗಾಗಿ ನಡೆದಂತಹ ನಿರಂತರ ಸಂಘರ್ಷಗಳು ಪ್ರಾರಂಭದ ಘಟ್ಟದಲ್ಲಿ ಪ್ರತಿರೋಧಗಳನ್ನು ಎದುರಿಸಿ ಅಂತಿಮವಾಗಿ ಸರಿಸುಮಾರು ೧೫೧೬ ಹೊತ್ತಿಗೆ ಕರಾವಳಿ ಕರ್ನಾಟಕದಲ್ಲಿ ಕೃಷಿ ಪ್ರಧಾನ ವ್ಯವಸ್ಥೆಯ ಬದಲು ವಾಣಿಜ್ಯಮುಖಿಯಾದ ಪಲ್ಲಟದೊಂದಿಗೆ ಬಂಡವಾಳಶಾಹಿ ಆರ್ಥಿಕತೆಯ ಪ್ರಾರಂಭದ ಲಕ್ಷಣಗಳು ಕಂಡು ಬಂದಿತು.

೪. ಪೋರ್ಚುಗೀಸರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧಗಳು ಆಚಾರ ವಿಚಾರಗಳು ಕರಾವಳಿ ಕರ್ನಾಟಕದ ಜನ ಜೀವನದ ಮೇಲೆ ಪರಿಣಾಮ ಬೀರಿ ಹೊಸ ಮೆಟ್ರೋ ಪಾಲಿಟನ್ ಸಂಸ್ಕೃತಿಯು ಬಂದರು ನಗರಗಳಲ್ಲಿ ಬೆಳೆದು ಬರಲು ಕಾರಣವಾಯಿತು.

೫. ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರ ಆಗಮನದ ವರೆಗೆ ವ್ಯಾಪಾರ ವ್ಯವಹಾರವನ್ನು ನಿರ್ದೇಶಿಸುತ್ತಿದ್ದ ದೇಶೀಯ ಮತ್ತು ಅಂತರರಾಷ್ಟ್ರೀಯ ಮುಸ್ಲಿಂ ವ್ಯಾಪಾರಿ ಸಮುದಾಯಗಳು ಪೋರ್ಚುಗೀಸರ ಪ್ರಜ್ಞಾಪೂರ್ವಕ ಕಿರುಕುಳ ಮತ್ತು ತೊಂದರೆಗಳಿಂದ ಈ ಪ್ರದೇಶಗಳನ್ನು ತ್ಯಜಿಸಿ ಒಳನಾಡುಗಳಿಗೆ ವಲಸೆ ಹೋದರು.

೬. ಪೋರ್ಚುಗೀಸರು ನಡೆಸಿದ ದೌರ್ಜನ್ಯ, ದಬ್ಬಾಳಿಕೆ, ಕೊಲೆ, ಸುಲಿಗೆ ಮತ್ತು ಬೆಂಕಿ ಇಡುವಿಕೆಯಂತಹ ಭಯಾನಕ ಕೃತ್ಯಗಳ ಮೂಲಕ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯದ ಏಕಸ್ವಾಮ್ಯವನ್ನು ಸಂಪೂರ್ಣವಾಗಿ ತನ್ನ ಕೈವಶಪಡಿಸಿದರು. ಪಶ್ಚಿಮ ಕರಾವಳಿಯ ಅರಬ್ಬಿ ಸಮುದ್ರದಲ್ಲಿ ಸಂಚರಿಸುತ್ತಿದ್ದ ಎಲ್ಲಾ ವ್ಯಾಪಾರಿ ಹಡಗುಗಳನ್ನು ಪೋರ್ಚುಗೀಸರು ಸಾರ್ವಭೌಮತೆಯ ಅಡಿಯಲ್ಲಿ ತಂದು ಲೈಸನ್ಸ್ ಮತ್ತು ರಕ್ಷಣೆಯ ಹೆಸರಿನ 'ಖಫಿಲ' ಮತ್ತು 'ಕಾರ್ಟೇಜ್' ಎಂಬ ಪದ್ಧತಿಯ ವಿಪರೀತ ಶುಲ್ಕ ವಿಧಿಸುವ ಮೂಲಕ ತೀವ್ರ ಶೋಷಣೆ ಮಾಡಿದರು.

೭. ಕರಿಮೆಣಸಿನ ವ್ಯಾಪಾರದಲ್ಲಿ ಮಧ್ಯವರ್ತಿಗಳು ಹಾಗೂ ಏಜೆಂಟ್ ಪದ್ಧತಿಯಿಂದ ವಿಪರೀತ ಶೋಷಣೆ, ಬೆಲೆಏರಿಕೆ ಮತ್ತು ದರ ಸಮರಗಳ ಹೊಸ ಪದ್ಧತಿಯನ್ನು ಪೋರ್ಚುಗೀಸರು ಜಾರಿಗೆ ತಂದರು.

೮. ಇಕ್ಕೇರಿ ಸಂಸ್ಥಾನ ಮತ್ತು ಪೋರ್ಚುಗೀಸರು ಪರಸ್ಪರ ಪೂರಕವಾಗಿ ಕರಾವಳಿ ಕರ್ನಾಟಕದಲ್ಲಿ ಬಂಡವಾಳಶಾಹಿ ಆರ್ಥಿಕ ಪರಿವರ್ತನೆಯ ಪ್ರಾರಂಭದ ಘಟ್ಟದಿಂದ ಮುಂದಿನ ಘಟ್ಟಕ್ಕೆ ಬೆಳವಣಿಗೆ

ಹೊಂದಲು ವೇಗವರ್ಧಕವಾಗಿ ಕಾರ್ಯಾಚರಿಸಿದರು. ಇದೇ ಅವಧಿಯಲ್ಲಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿ ಮತ್ತು ಡಚ್ ಈಸ್ಟ್ ಇಂಡಿಯಾ ಕಂಪೆನಿಗಳು ಈ ಭಾಗದಲ್ಲಿ ಪ್ರವರ್ಧಮಾನಕ್ಕೆ ಬಂದು ಬಂಡವಾಳಶಾಹಿ ಬೆಳವಣಿಗೆಗೆ ಪೂರಕವಾಗಿ ಕಾರ್ಯಾಚರಿಸಿದರು.

೯. ಹೈದರಾಲಿ ಮತ್ತು ಟಿಪ್ಪುವಿನ ಕಾಲಘಟ್ಟದಲ್ಲಿ ಕರಾವಳಿ ಕರ್ನಾಟಕದಲ್ಲಿ ಸಂಘರ್ಷಕ್ಕೆ ಹೊಸ ಸಿದ್ಧಾಂತವನ್ನು ನಿರೂಪಿಸಿದ ಅವಧಿಯಾಗಿದೆ. ಹೈದರಾಲಿಯು ಅನುಸರಿಸಿದ 'ಗನ್ ಫಾರ್ ಪೆಪ್ಪರ್' ಎಂಬ ಸಿದ್ಧಾಂತ ವಾಣಿಜ್ಯೋದ್ಯಮಕ್ಕೆ ಇರುವ ಅಗಾಧ ತಾಕತ್ತಿನ ಪ್ರತಿಬಿಂಬವಾಗಿದೆ. ಬ್ರಿಟಿಷರಿಗೆ ಕರಿಮೆಣಸಿನ ಏಕಸ್ವಾಮ್ಯದ ಹಕ್ಕನ್ನು ಖಾತ್ರಿಗೊಳಿಸಿ ಅದರೊಂದಿಗೆ ಕರಿಮೆಣಸು ನೀಡಬೇಕಿದ್ದರೆ ಅದರ ಪಾವತಿಯನ್ನು ಗನ್ ಮತ್ತು ಇತರೆ ಯುದ್ಧೋಪಕರಣಗಳ ಮುಖಾಂತರ ಮಾತ್ರ ಮಾಡಬೇಕೆಂಬ ಷರತ್ತು ಭಾರತದ ರಾಜಕಾರಣದಲ್ಲಿ ಹೊಸ ಪ್ರಯೋಗವಾಗಿದೆ.

೧೦. ಹೈದರಾಲಿಯು ಬ್ರಿಟಿಷರಿಂದ ಪಡೆದ ಆಯುಧಗಳನ್ನು ಬ್ರಿಟಿಷರ ವಿರುದ್ಧವೇ ಉಪಯೋಗಿಸಿರುವುದು ಕಂಡು ಬರುತ್ತದೆ. ಈತನ ವಾಣಿಜ್ಯೋದ್ಯಮ ಧೋರಣೆಯ ಮುಖಾಂತರ ಬ್ರಿಟಿಷರನ್ನು ಇಕ್ಕಟ್ಟಿನ ಸಂದರ್ಭಕ್ಕೆ ಒಳಗಾಗಿಸಿ ರಾಜಕೀಯ ಲಾಭವನ್ನು ಪಡೆಯುತ್ತಾನೆ. ಇದೇ ರೀತಿ ಟಿಪ್ಪು ಸುಲ್ತಾನ್ ಕೂಡ ವಾಣಿಜ್ಯೋದ್ಯಮವನ್ನು ಬ್ರಿಟಿಷರ ವಿರುದ್ಧ ಸಮರ್ಥವಾಗಿ ಉಪಯೋಗಿಸುತ್ತಾನೆ.

೧೧. ಹೈದರಾಲಿ ಮತ್ತು ಟಿಪ್ಪು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಾಣಿಜ್ಯೋದ್ಯಮಿಗಳೊಂದಿಗೆ ಸೌಹಾರ್ದಯುತ ಸಂಬಂಧಗಳನ್ನು ಬೆಳೆಸುತ್ತಾರೆ. ಹಲವಾರು ವ್ಯಾಪಾರಿ ನಿಯೋಗಗಳನ್ನು ವಿದೇಶಗಳಿಗೆ ಕಳುಹಿಸುತ್ತಾರೆ. ಇದೇ ರೀತಿ ಕರಾವಳಿ ಕರ್ನಾಟಕದಲ್ಲಿ ವ್ಯಾಪಾರ ವ್ಯವಹಾರದ ಗುತ್ತಿಗೆಯನ್ನು ವಿದೇಶೀ ಕಂಪೆಗಳಿಗೆ ನೀಡುತ್ತಾರೆ. ನಗದು ರೂಪದ ತೆರಿಗೆ ಪಾವತಿ ಮತ್ತು ಚಲಾವಣೆಯು ವ್ಯಾಪಕವಾಗಿ ನಡೆಯುತ್ತದೆ. ಒಟ್ಟಾರೆಯಾಗಿ ಈ ಅವಧಿಯು ಕರಾವಳಿ ಕರ್ನಾಟಕದಲ್ಲಿ ಬಂಡವಾಳಶಾಹಿ ಪದ್ಧತಿಯ ಕ್ರೋಢೀಕರಣ ನಡೆದ ಅವಧಿಯಾಗಿದೆ.

೧೨. ಟಿಪ್ಪುವಿನ ಮರಣಾ ನಂತರ ಕರಾವಳಿ ಕರ್ನಾಟಕದಲ್ಲಿ ಅಧಿಕಾರವನ್ನು ಕೈವಶಪಡಿಸಿಕೊಂಡ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ರೈತವಾರಿ ಪದ್ಧತಿಯ ಮುಖಾಂತರ ಹೊಸ ರೀತಿಯ ಭೂಹಿಡುವಳಿ ಪದ್ಧತಿಯನ್ನು ಕಾನೂನುಬದ್ದಗೊಳಿಸಿತ್ತು. ವಸಾಹತುಶಾಹಿ ಶೋಷಣೆಗೆ ಅನುಕೂಲವಾಗುವಂತೆ ಲೇವಾದೇವಿ ಮಧ್ಯವರ್ತಿ ವರ್ಗವನ್ನು ಪ್ರೋತ್ಸಾಹಿಸಿತ್ತು. ವಿಪರೀತ ತೆರಿಗೆ ವಸೂಲಾತಿ ಮತ್ತು ಇತರೆ ಹಲವಾರು ವಾಣಿಜ್ಯ ಏಕಸ್ವಾಮ್ಯ ಕಾನೂನುಗಳನ್ನು ಜಾರಿಗೊಳಿಸಿ ಕರಾವಳಿ ಕರ್ನಾಟಕದಲ್ಲಿ ರೈತಾಪಿ ಕೃಷಿಕೂಲಿಕಾರ ದುಡಿಯುವ ವರ್ಗವನ್ನು ವಿನಾಶದಂಚಿಗೆ ದೂಡಿತ್ತು.

೧೩. ಬ್ರಿಟಿಷರ ದಬ್ಬಾಳಿಕೆ ಮತ್ತು ಶೋಷಣೆಯ ವಿರುದ್ಧ ತೆರಿಗೆ ಪಾವತಿಸದೇ ಇರುವ ಮೌನ ಪ್ರತಿಭಟನೆ, ಕೂಟ ಬಂಡಾಯ ಮೊದಲಾದ ಪ್ರತಿರೋಧಗಳು ಸ್ಫೋಟಗೊಂಡವು. ಇದಲ್ಲದೆ ೧೮೩೭ರ ಹಿಂಸಾತ್ಮಕ ಅಮರಸುಳ್ಯ ದಂಗೆ ಒಂದು ಪ್ರಮುಖ ಘಟನೆಯಾಗಿದೆ. ಈ ದಂಗೆಯನ್ನು ಹಿಂಸಾತ್ಮಕವಾಗಿ

ದಮನಗೊಳಿಸಿದ ಬ್ರಿಟಿಷರಿಗೆ ಅನಂತರ ಸುಮಾರು ಗಾಂಧಿಯುಗದವರೆಗೆ ಯಾವುದೇ ರೀತಿಯ ಪ್ರತಿರೋಧಗಳು ಬೆಳೆದು ಬರಲಿಲ್ಲ. ಇದಕ್ಕೆ ಬ್ರಿಟಿಷರು ಅನುಸರಿಸಿದ ಭಯಾನಕ ದಬ್ಬಾಳಿಕೆ, ಕರಾವಳಿ ಕರ್ನಾಟಕದಲ್ಲಿ ಇದ್ದ ಸಾಮಾಜಿಕ ಕಟ್ಟುಪಾಡುಗಳು, ಕಾನೂನನ್ನು ಗೌರವಿಸುವ ಮೆಟ್ರೋ ಪಾಲಿಟನ್ ಸಂಸ್ಕೃತಿ ಮತ್ತು ಲಾಭದ ದೃಷ್ಟಿಯಿಂದ ವ್ಯವಹರಿಸುವ ವ್ಯಾವಹಾರಿಕ ದೃಷ್ಟಿಕೋನಗಳು ಅತೀ ಮುಖ್ಯ ಕಾರಣಗಳಾಗಿವೆ.

೧೪. ಕರಾವಳಿ ಕರ್ನಾಟಕವು ೧೮೬೩ರಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹತ್ತಿಯ ವಾಣಿಜ್ಯೋದ್ಯಮಿಗಳ ಹಿತಾಸಕ್ತಿಗಾಗಿ ವಿಭಜನೆಗೆ ಒಳಗಾಗುತ್ತದೆ.

೧೫. ಮಿಶನರಿ ಸಂಸ್ಥೆಗಳು ಕರಾವಳಿ ಕರ್ನಾಟಕದಲ್ಲಿ ಕಾರ್ಯಾಚರಿಸಲು ಪ್ರಾರಂಭಿಸಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಪರವಾಗಿ ಸೈದ್ಧಾಂತಿಕ ಭೂಮಿಕೆಯನ್ನು ನಿರ್ಮಾಣ ಮಾಡಲು ಶ್ರಮಿಸಿತ್ತು. ಸರಕಾರದ ವಿರುದ್ಧದ ಪ್ರತಿಭಟನೆಗಳ ಸಂದರ್ಭದಲ್ಲಿ ಮಿಶನರಿ ಸಂಸ್ಥೆಗಳು ಮತ್ತು ಕ್ರೈಸ್ತ ಧರ್ಮಿಯರು ಸರಕಾರದ ಪರವಾಗಿ ಕಾರ್ಯಾಚರಿಸುತ್ತಾರೆ.

೧೬. ಬ್ರಿಟಿಷ್ ಪ್ರಭುತ್ವವು ಕರಾವಳಿ ಕರ್ನಾಟಕದಲ್ಲಿ ತನ್ನ ವಸಾಹತುಶಾಹಿ ನಗ್ನ ಶೋಷಣೆಯನ್ನು ತೀವ್ರವಾಗಿ ಮಾಡಿತ್ತು. ಇಲ್ಲಿಯ ಕೃಷಿ ಮತ್ತು ವಾಣಿಜ್ಯೋದ್ಯಮವನ್ನು ಬಂಡವಾಳಶಾಹಿ ಬೆಳವಣಿಗೆಗೆ ಪೂರಕವಾಗುವಂತೆ ಪ್ಲಾಂಟೇಶನ್ ಮೊದಲಾದವುಗಳನ್ನು ಅನುಷ್ಠಾನಗೊಳಿಸಿತ್ತು.

೧೭. ದೊಡ್ಡ ಪ್ರಮಾಣದಲ್ಲಿ ಬ್ಯಾಂಕಿಂಗ್ ರಂಗ ಅಸ್ತಿತ್ವಕ್ಕೆ ಬಂದು ವಾಣಿಜ್ಯೋದ್ಯಮಿಗಳ ಮತ್ತು ಕೈಗಾರಿಕಾ ಮಾಲೀಕರ ಹಿತಾಸಕ್ತಿಯನ್ನು ಮತ್ತಷ್ಟು ಭದ್ರಪಡಿಸಲು ಸಹಕಾರಿಯಾಯಿತೇ ವಿನಃ ಈ ಪ್ರಾಂತ್ಯದ ಜನಸಾಮಾನ್ಯರ ಬದುಕನ್ನು, ಜೀವನ ಮಟ್ಟವನ್ನು, ಬಡತನವನ್ನು ಸುಧಾರಿಸಲು ಸಹಕಾರಿಯಾಗಲಿಲ್ಲ.

೧೮. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ವ್ಯಾಪಕವಾಗಿ ಬೆಳೆದು ಬಂದ ಸಾರಿಗೆ ಮತ್ತು ಸಂಪರ್ಕ ಸಂವಹನ ಮಾಧ್ಯಮಗಳು ಮತ್ತೆ ಬ್ರಿಟಿಷ್ ಪ್ರಭುತ್ವಕ್ಕೆ, ವಾಣಿಜ್ಯೋದ್ಯಮಿಗಳು ಮತ್ತು ಕೈಗಾರಿಕಾ ಮಾಲೀಕರ ಶೋಷಣೆಗೆ ಸಹಕಾರಿಯಾಗಿ ಬೆಳೆದು ಬಂತು.

೧೯. ವಸಾಹತುಶಾಹಿಯ ಅಂತಿಮ ಘಟ್ಟದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷ ತೀವ್ರ ಸ್ವರೂಪ ಪಡೆಯಿತು. ಸಾಮ್ರಾಜ್ಯಶಾಹಿ ದೇಶಗಳು ತನ್ನ ವಸಾಹತುಗಳನ್ನು ವಿಸ್ತರಿಸುವ ಉದ್ದೇಶದೊಂದಿಗೆ ಒಂದನೇ ಮತ್ತು ಎರಡನೇ ಮಹಾಯುದ್ಧ ಪ್ರಾರಂಭಿಸಿದಾಗ ಕರಾವಳಿ ಕರ್ನಾಟಕದಲ್ಲಿ ಸುಮಾರು ಎಂಟು ದಶಕಗಳ ಕಾಲ ಬ್ರಿಟಿಷ್ ಪ್ರಭುತ್ವದ ಪರವಾಗಿ ಎಲ್ಲಾ ರೀತಿಯ ಸಹಾಯ ಸಹಕಾರ ನೀಡಿದ ಬಾಸೆಲ್ ಮಿಶನ್ ಸಂಸ್ಥೆಯ ಮೇಲೆ ತೀವ್ರ ಸ್ವರೂಪದ ದಾಳಿ ನಡೆಯಿತು. ಇದರಿಂದ ಬಾಸೆಲ್ ಮಿಶನಿನ ಕೈಗಾರಿಕಾ ಮತ್ತು ವಾಣಿಜ್ಯ ಘಟಕಗಳು ಗಂಭೀರ ಬಿಕ್ಕಟ್ಟಿಗೆ ಒಳಗಾಯಿತು. ಈ ಸಂಘರ್ಷವು ಭವಿಷ್ಯದಲ್ಲಿ ಎಂದೂ ಚೇತರಿಸಲ್ಪಡದ ಆರ್ಥಿಕ ಮತ್ತು ವಾಣಿಜ್ಯ ಬಿಕ್ಕಟ್ಟಿಗೆ ಗುರಿಯಾಯಿತು.

೨೦. ಇಪ್ಪತ್ತನೇ ಶತಮಾನದಲ್ಲಿ ವಿವಿಧ ಕೈಗಾರಿಕಾ ಘಟಕಗಳಲ್ಲಿ ದುಡಿಯುತ್ತಿದ್ದ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕ ವರ್ಗ ದೇಶದ ಸ್ವಾತಂತ್ರ್ಯ ಚಳುವಳಿಯ ಜೊತೆ ಜೊತೆಯಲ್ಲಿಯೇ ಮಾಲೀಕರ

ಶೋಷಣೆ, ಬ್ರಿಟಿಷ್ ಪ್ರಭುತ್ವದ ದಬ್ಬಾಳಿಕೆಯನ್ನು ಎದುರಿಸಿ ಹಲವಾರು ತೀವ್ರ ಸ್ವರೂಪದ ಚಳುವಳಿಗಳನ್ನು ಸಂಘಟಿಸಿದರು. ಇದೇ ರೀತಿ ರೈತಾಪಿ ಸಮುದಾಯ ಭೂಮಾಲೀಕ ಜಮೀನ್ದಾರಿ ಪದ್ಧತಿಯ ವಿರುದ್ಧ ಕಯ್ಯೂರಿನಂತಹ ಸಮರಧೀರ ಚಳುವಳಿಗಳನ್ನು ನಡೆಸಿದರು. ಇದು ಬ್ರಿಟಿಷ್ ಪ್ರಭುತ್ವಕ್ಕೆ ಗಂಭೀರ ಪ್ರಮಾಣದಲ್ಲಿ ಕರಾವಳಿ ಕರ್ನಾಟಕದಲ್ಲಿ ವಾಣಿಜ್ಯೋದ್ಯಮ ಮತ್ತು ಸಂಘರ್ಷದ ಮುಖಾಮುಖಿಯಾಗಿದೆ. ಇದು ಆರ್ಥಿಕ, ಆಡಳಿತಾತ್ಮಕ ಮತ್ತು ಕಾನೂನಿನ ಸಮಸ್ಯೆಗಳನ್ನು ಸೃಷ್ಟಿಸಿ ಬಿಕ್ಕಟ್ಟನ್ನು ನಿರ್ಮಿಸಿತು.

೨೧. ದೇಶಕ್ಕೆ ಸ್ವಾತಂತ್ರ್ಯ ದೊರೆಯುವ ಸಂದರ್ಭದಲ್ಲಿ ವಸಾಹತುಶಾಹಿಗೆ ಪೂರಕವಾಗಿ ಖಾಸಗಿ ರಂಗದಲ್ಲಿ ವಾಣಿಜ್ಯೋದ್ಯಮವು ಪ್ರಬಲವಾಗಿ ಬೆಳೆದಿತ್ತು. ಇದರ ಪರಿಣಾಮವಾಗಿ ಈಗಲೂ ಕೂಡ ಕರಾವಳಿ ಕರ್ನಾಟಕದ ಮೂರು ಜಿಲ್ಲೆಗಳಾಗಿರುವ ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು ವಾಣಿಜ್ಯೋದ್ಯಮ ಮತ್ತು ಸೇವಾರಂಗ ವ್ಯಾಪಕವಾಗಿ ಬೆಳೆದಿರುವ ಜಿಲ್ಲೆಯಾಗಿದೆಯೇ ಹೊರತು ಕೈಗಾರಿಕಾ ಜಿಲ್ಲೆಯಾಗಿ ಬೆಳೆದು ಬಂದಿಲ್ಲ.

೨೨. ಕೃಷಿಯಲ್ಲಿ ಬಂಡವಾಳಶಾಹಿ ಬೆಳವಣಿಗೆ, ವಾಣಿಜ್ಯೋದ್ಯಮದ ಬೆಳವಣಿಗೆ ಮತ್ತು ಅಲ್ಪಪ್ರಮಾಣದ ಕೈಗಾರಿಕಾ ಬಂಡವಾಳಗಳು ಕರಾವಳಿ ಕರ್ನಾಟಕದಲ್ಲಿ ಪರಸ್ಪರ ಸಹಕರಿಸಿದ ಪರಿಣಾಮವಾಗಿ ಜಾತೀಯ, ಮತೀಯ, ಪ್ರತಿಗಾಮಿ ಮೌಲ್ಯಗಳು ಹಾಗೂ ಸಾಮಾಜಿಕ ಕಟ್ಟುಪಾಡುಗಳು ಕರಾವಳಿ ಕರ್ನಾಟಕದ ಜನರ ಬದುಕನ್ನು ಸಮಕಾಲೀನ ಸಂದರ್ಭದಲ್ಲೂ ನಿಯಂತ್ರಿಸುತ್ತಿದೆ.

## ಟಿಪ್ಪಣಿಗಳು

೧. ಪ್ರಕೃತಿಯಿಂದ ದೊರೆಯುವ ಯಾವುದೇ ವಸ್ತುಗಳು ಪ್ರಾರಂಭದ ಹಂತದಲ್ಲಿ ಕೆಲವೇ ಕೆಲವು ವಸ್ತುಗಳು ಮಾತ್ರ ಉಪಯುಕ್ತ ಮೌಲ್ಯವನ್ನು ಹೊಂದಿರುತ್ತದೆ. ಆದರೆ ಅವುಗಳು ವಿನಿಮಯ ಮೌಲ್ಯವನ್ನು ಹೊಂದಿರುವುದಿಲ್ಲ. ಯಾವಾಗ ವಿನಿಮಯ ಮೌಲ್ಯವನ್ನು ಹೊಂದಿರುವುದಿಲ್ಲವೋ ಆಗ ಅಂತಹ ವಸ್ತುಗಳನ್ನು ಸರಕುಗಳೆಂದು ಪರಿಗಣಿಸಲಾಗುವುದಿಲ್ಲ. ಕಾಡಿನಲ್ಲಿ ತನ್ನಿಂದ ತಾನೇ ಸಹಜವಾಗಿ ಬೆಳೆದ ಅರಣ್ಯ ಸಂಪತ್ತಿನಿಂದ ದೊರೆಯುವ ವಸ್ತುಗಳು ಕೇವಲ ಕಚ್ಚಾ ವಸ್ತುಗಳಾಗಿರುತ್ತವೆ. ಅದರ ಮೇಲೆ ಮಾನವ ಶ್ರಮ ಶಕ್ತಿಯನ್ನು ವಿನಿಯೋಗಿಸಿದ ಮೇಲೆ ಅಂದರೆ ಸಂಸ್ಕರಣೆ ಮತ್ತು ಆಯ್ದುಕೊಳ್ಳುವ ಪ್ರಕ್ರಿಯೆಯನ್ನು ನಡೆಸಿದ ಮೇಲೆ ಮಾತ್ರ ಅದು ಸರಕಾಗುತ್ತದೆ. ಇಲ್ಲಿ ಪ್ರಸ್ತಾಪಿಸಿದ ಮಾನವ ಶ್ರಮಕ್ಕೂ, ಶ್ರಮಶಕ್ತಿಗೂ ರಾಜಕೀಯ ಅರ್ಥಶಾಸ್ತ್ರದ ಪ್ರಕಾರ ಬಹಳಷ್ಟು ಸೂಕ್ಷ್ಮ ವ್ಯತ್ಯಾಸಗಳಿವೆ. ಇದೇ ರೀತಿ ಖನಿಜ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಈ ಮೇಲಿನ ವಿಶ್ಲೇಷಣೆಯನ್ನು ವ್ಯವಸ್ಥಿತವಾಗಿ ಅನ್ವಯಿಸಿದಾಗ ಉಪಯುಕ್ತ ಮೌಲ್ಯ ಮತ್ತು ವಿನಿಮಯ ಮೌಲ್ಯಗಳ ವ್ಯತ್ಯಾಸ ಕಂಡು ಬರುತ್ತದೆ. ಆದ್ದರಿಂದ ಸರಕುಗಳು ಯಾವುದೇ ನೈಸರ್ಗಿಕ ರೂಪದಲ್ಲಿ ಅಸ್ತಿತ್ವದಲ್ಲಿರಲಿ, ಅವು ಉಪಯುಕ್ತ ಮೌಲ್ಯಗಳಾಗಿ ಅವಶ್ಯಕತೆಗಳನ್ನು ಪೂರೈಸುವ ಯಾವುದೇ ನಿರ್ದಿಷ್ಟ ಗುಣಗಳನ್ನು ಹೊಂದಿರಲಿ, ಅವು ನಿರ್ದಿಷ್ಟ ಪ್ರಮಾಣಗಳಲ್ಲಿ ಒಂದು ಇನ್ನೊಂದಕ್ಕೆ ಸಂಪೂರ್ಣವಾಗಿ ಅನುಗುಣವಾಗಿರುತ್ತವೆ. ಅವು ವಿನಿಮಯ ಪ್ರಕ್ರಿಯೆಯಲ್ಲಿ ಒಂದು ಇನ್ನೊಂದರ ಸ್ಥಾನವನ್ನು ತೆಗೆದುಕೊಳ್ಳುತ್ತವೆ. ಅವನ್ನು ಸಮಾನಕಗಳೆಂದು ಭಾವಿಸಲಾಗುತ್ತದೆ; ಮತ್ತು ಅವು ಮೇಲ್ನೋಟಕ್ಕೆ ಬೇರೆ ಬೇರೆಯಾಗಿ ಕಂಡು ಬಂದರೂ ಒಂದೇ ಭೇದವನ್ನು ಹೊಂದಿರುತ್ತದೆ.

೨. ಸಾಮಾಜಿಕ ವಸ್ತು ಮತ್ತು ಅದರ ಸಂಚಲನ ಪ್ರಕ್ರಿಯೆಯನ್ನು ಕ್ಲಾಸಿಕಲ್ ಅರ್ಥಶಾಸ್ತ್ರಜ್ಞರು ನಾಲ್ಕು ವಿಧದಲ್ಲಿ ವಿಂಗಡಿಸುತ್ತಾರೆ. ಅವುಗಳೆಂದರೆ ಉತ್ಪಾದನೆ, ವಿತರಣೆ, ವಿನಿಮಯ ಮತ್ತು ಬಳಕೆ ಎಂಬುದಾಗಿದೆ. ಆಡಂಸ್ಮಿತ್‌ರವರು ಇದನ್ನು ವಾಣಿಜ್ಯ ಚಟುವಟಿಕೆಯ ಮುಖ್ಯ ಭಾಗವೆಂದು ಪರಿಗಣಿಸುತ್ತಾರೆ.

ಉತ್ಪಾದನೆಯು ಯಾವತ್ತೂ ಒಬ್ಬ ವ್ಯಕ್ತಿಯು ಒಂದು ನಿರ್ದಿಷ್ಟ ಸಾಮಾಜಿಕ ಸಂಘಟನೆಯೊಳಗೆ ಮತ್ತು ಆ ಸಂಘಟನೆಯ ಸಹಾಯದಿಂದ ನಿಸರ್ಗವನ್ನು ತನ್ನ ಸ್ವಂತಕ್ಕೆ ಉಪಯೋಗಿಸಿಕೊಳ್ಳುವುದಾಗಿದೆ. ಉತ್ಪಾದನೆಯ ಪ್ರಕ್ರಿಯೆಯಲ್ಲಿ ಸಮಾಜದ ಸದಸ್ಯರು ಮಾನವ ಅಗತ್ಯಗನುಗುಣವಾಗಿ ನೈಸರ್ಗಿಕ ಉತ್ಪನ್ನಗಳನ್ನು ವಿನಿಯೋಗಿಸುತ್ತಾರೆ. ಈ ಉತ್ಪನ್ನಗಳು ವ್ಯಕ್ತಿಯು ಪಡೆಯುವ ಪಾಲನ್ನು ವಿತರಣೆಯು ನಿರ್ಧರಿಸುತ್ತದೆ. ಈ ವಿತರಣೆಯ ಫಲವಾಗಿ ತನಗೆ ಲಭಿಸಿದ ಭಾಗವನ್ನು ಅವನು ಯಾವ ನಿರ್ದಿಷ್ಟ ಉತ್ಪನ್ನಗಳನ್ನಾಗಿ ಪರಿವರ್ತಿಸ ಬಯಸುತ್ತಾನೋ ಆ ಉತ್ಪನ್ನಗಳನ್ನು ಅವನಿಗೆ ವಿನಿಮಯವು ಒದಗಿಸುತ್ತದೆ. ಕೊನೆಯದಾಗಿ ಬಳಕೆಯಲ್ಲಿ ಆ ಉತ್ಪನ್ನಗಳು ಉಪಯೋಗದ ವಸ್ತುಗಳಾಗಿ ಆಗುತ್ತವೆ. ಅಂದರೆ ವ್ಯಕ್ತಿಗಳು ಅವನ್ನು ವಿನಿಯೋಗಿಸಿಕೊಳ್ಳುತ್ತಾರೆ.

ಉತ್ಪಾದನೆಯು ಅಗತ್ಯಗನುಗುಣವಾಗಿ ವಸ್ತುಗಳನ್ನು ಸೃಜಿಸುತ್ತದೆ; ವಿತರಣೆಯು ಅವುಗಳನ್ನು ಸಾಮಾಜಿಕ ನಿಯಮಗಳಿಗನುಗುಣವಾಗಿ ವಿಲೇವಾರಿ ಮಾಡುತ್ತದೆ. ವಿನಿಮಯವು ತನ್ನ ಸರದಿಯಲ್ಲಿ ಆಗಲೇ ವಿಲೇವಾರಿ ಮಾಡಲಾದ ವಸ್ತುಗಳನ್ನು ವೈಯಕ್ತಿಕವಾದ ಆವಶ್ಯಕತೆಗಳಿಗೆ ಸರಿ ಹೊಂದುವಂತೆ ಹಂಚುತ್ತದೆ. ಕೊನೆಯದಾಗಿ ಬಳಕೆಯಲ್ಲಿ ಉತ್ಪನ್ನವು ಈ ಸಾಮಾಜಿಕ ಚಲನೆಯನ್ನು ಬಿಟ್ಟು ಹೊರಹೋಗುತ್ತದೆ. ಅದು ಒಂದು ವೈಯಕ್ತಿಕ ಆವಶ್ಯಕತೆಯ ನೇರ ವಸ್ತು ಹಾಗೂ ಸೇವಕನಾಗುತ್ತದೆ. ಅದರ ಬಳಕೆಯು ಈ ಆವಶ್ಯಕತೆಯನ್ನು ತೃಪ್ತಿಗೊಳಿಸುತ್ತದೆ. ಹೀಗೆ ಉತ್ಪಾದನೆಯು ಆರಂಭ ಬಿಂದುವಾಗಿ, ಬಳಕೆಯು ಅಂತಿಮ ಗುರಿಯಾಗಿ ವಿತರಣೆ ಹಾಗೂ ವಿನಿಮಯಗಳು ಮಧ್ಯಬಿಂದುವಾಗಿ ಕಾಣಿಸಿಕೊಳ್ಳುತ್ತವೆ. ಈ ಮಧ್ಯಬಿಂದು ದ್ವಂದ್ವರೂಪ ಹೊಂದಿರುತ್ತದೆ. ಏಕೆಂದರೆ ವಿತರಣೆಯು ಸಮಾಜದಿಂದ ನಡೆಸಲ್ಪಡುತ್ತದೆ. ವಿನಿಮಯವು ವ್ಯಕ್ತಿಗಳಿಂದ ನಡೆಸಲ್ಪಡುತ್ತದೆ. ಉತ್ಪಾದನೆಯಲ್ಲಿ ವ್ಯಕ್ತಿಗಳು ಒಂದು ವಸ್ತುನಿಷ್ಠ ಸ್ವರೂಪವನ್ನು ಪಡೆದುಕೊಳ್ಳುತ್ತಾರೆ. ಮತ್ತು ಬಳಕೆಯಲ್ಲಿ ವಸ್ತುಗಳು ಒಂದು ವ್ಯಕ್ತಿನಿಷ್ಠ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ವಿತರಣೆಯಲ್ಲಿ ಸಮಾಜವು ಪ್ರಮುಖ ಸಾಮಾನ್ಯ ನಿಯಮಗಳ ಮೂಲಕ ಉತ್ಪಾದನೆ ಹಾಗೂ ಬಳಕೆಗಳ ಮಧ್ಯೆ ಮಧ್ಯಸ್ಥಿಕೆಯನ್ನು ನಿರ್ವಹಿಸುತ್ತದೆ. ವಿನಿಮಯದಲ್ಲಿ ಈ ಮಧ್ಯಸ್ಥಿಕೆಯು ವ್ಯಕ್ತಿಗಳು ಮನಬಂದಂತೆ ನಿರ್ಧಾರ ಮಾಡುವುದರ ಪರವಾಗಿ ಕಾಣಿಸಿಕೊಳ್ಳುತ್ತದೆ. (ಹೆಚ್ಚಿನ ವಿವರಗಳಿಗಾಗಿ ಮಾರ್ಕ್ಸ್‌ರವರ ರಾಜಕೀಯ ಅರ್ಥಶಾಸ್ತ್ರದ ಪರಾಮರ್ಶೆಗೆ ಒಂದು ಕಾಣಿಕೆ ಎಂಬ ಕೃತಿಯನ್ನು ಗಮನಿಸಬಹುದು).

೩. ಆಡಂಸ್ಮಿತ್ ೧೭೨೩ರಲ್ಲಿ ಸ್ಕಾಟ್‌ಲ್ಯಾಂಡ್‌ನಲ್ಲಿ ಜನಿಸಿದರು. ಇವರನ್ನು ಆರ್ಥಶಾಸ್ತ್ರದ ಪಿತಾಮಹ ಎಂದು ಪರಿಗಣಿಸುತ್ತಾರೆ. ಇವರು ಕೇವಲ ಅರ್ಥಶಾಸ್ತ್ರಜ್ಞರು ಮಾತ್ರವೇ ಅಲ್ಲದೆ ತತ್ತ್ವಶಾಸ್ತ್ರಜ್ಞರೂ ಆಗಿದ್ದರು. ಇವರನ್ನು ಬಂಡವಾಳಶಾಹಿ ಆರ್ಥಿಕತೆಯಾದ ಮುಕ್ತ ಮಾರುಕಟ್ಟೆಯ ಪ್ರಬಲ ಪ್ರತಿಪಾದಕರು ಎಂದೂ ಪರಿಗಣಿಸುತ್ತಾರೆ. ಅರ್ಥಶಾಸ್ತ್ರವನ್ನು ರಾಜಕೀಯ ಅರ್ಥಶಾಸ್ತ್ರ ಎಂಬ ಪರಿಭಾಷೆಯಲ್ಲಿ ವಿಶ್ಲೇಷಣೆ ನಡೆಸಿರುವ ಇವರು 'ವೆಲ್ತ್ ಆಫ್ ನೇಷನ್' ಎಂಬ ಬೃಹತ್ ಗ್ರಂಥವನ್ನು ಬರೆದಿರುತ್ತಾರೆ. ಇದರಲ್ಲಿ ಆರ್ಥಿಕ ಚಟುವಟಿಕೆಯ ಸಿದ್ಧಾಂತಗಳನ್ನು ಕ್ಲಾಸಿಕಲ್ ಸ್ವರೂಪದಲ್ಲಿ ನಿರ್ವಚಿಸಿರುತ್ತಾರೆ. ಇವರು 'ಥಿಯರಿ ಆಫ್ ಮೋರಲ್ ಸೆಂಟಿಮೆಂಟ್ಸ್' ಎಂಬ ಇನ್ನೊಂದು ಪ್ರಮುಖ ಗ್ರಂಥವನ್ನು ಬರೆದಿರುತ್ತಾರೆ. ಸಾಮಾಜಿಕ ನೈತಿಕತೆಗೆ ಸಂಬಂಧಪಟ್ಟಂತಹ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ಆಡಂಸ್ಮಿತ್‌ರವರು ೧೪೯೮ರಲ್ಲಿ ಭಾರತಕ್ಕೆ ಸಮುದ್ರ ಮಾರ್ಗವನ್ನು ಕಂಡು ಹಿಡಿದಿರುವ ಘಟನೆಯನ್ನು ಯುಗಪ್ರವರ್ತಕ ಆವಿಷ್ಕಾರವೆಂದು ಬಣ್ಣಿಸಿ ಅದರ ನಂತರ ಜಾಗತಿಕ ಮಟ್ಟದಲ್ಲಿ ಆಗಿರುವ ವಾಣಿಜ್ಯೋದ್ಯಮ ಮತ್ತು ಆರ್ಥಿಕ ಚಟುವಟಿಕೆಗಳು ಬೃಹತ್ ಸ್ವರೂಪದಲ್ಲಿ ಬೆಳೆದು ಬಂದಿದೆ ಎಂದು ವಿಶ್ಲೇಷಿಸುತ್ತಾರೆ.

೪. ಕರಾವಳಿ ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲೂ ಮತ್ತು ಸ್ವಾತಂತ್ರ್ಯ ನಂತರವೂ ಬೃಹತ್ ಕೈಗಾರಿಕೆಗಳು ಬೆಳೆದು ಬಂದಿಲ್ಲ. ಅದರ ಬದಲಾಗಿ ಲಕ್ಷಾಂತರ ಸಂಖ್ಯೆಯಲ್ಲಿ ಉದ್ಯೋಗ ಅವಕಾಶ ನೀಡುವ ಬ್ಯಾಂಕಿಂಗ್, ಸಾರಿಗೆ ಮತ್ತು ಸಂಪರ್ಕ ರಂಗ ೨೦ನೇ ಶತಮಾನದಲ್ಲೇ ವ್ಯವಸ್ಥಿತವಾಗಿ

ಬೆಳೆದು ಬಂದಿದೆ. ಕೈಗಾರಿಕೆಗಳು ಬೃಹತ್ ಪ್ರಮಾಣದಲ್ಲಿ ಬೆಳೆದು ಬರದೇ ಇರಲು ಮುಖ್ಯ ಕಾರಣ ಬಂಡವಾಳಶಾಹಿ ಮತ್ತು ಭೂಮಾಲೀಕರು ತಮ್ಮ ಲಾಭದಾಯಕ ಉದ್ಯಮವನ್ನು ವಾಣಿಜ್ಯದ ಹಿನ್ನೆಲೆಯಲ್ಲಿ ಕಂಡುಕೊಂಡರು. ಇದೇ ರೀತಿ ಕಳೆದ ಐದು ಶತಮಾನಗಳಲ್ಲಿ ವಾಣಿಜ್ಯೋದ್ಯಮ ಮತ್ತು ವಾಣಿಜ್ಯ ಬೆಳೆಗಳು ಪರಸ್ಪರ ಪೂರಕವಾಗಿ ಬೆಳೆದು ಬಂದವು. ಇದೇ ಪರಿಸ್ಥಿತಿ ಸಮಕಾಲಿನ ಸನ್ನಿವೇಶದಲ್ಲೂ ಮುಂದುವರಿಯುತ್ತಿದೆ.

೫. ಬಕ್ಸಾರ್ ಕದನ (೧೭೬೪)ದಲ್ಲಿ ಸ್ಪಷ್ಟ ಜಯವನ್ನು ಗಳಿಸಿದ ರಾಬರ್ಟ್ ಕ್ಲೈವ್ ನೇತೃತ್ವದ ಬ್ರಿಟಿಷ್ ಸೈನ್ಯವು ಮೊಗಲ್ ದೊರೆ ಎರಡನೇ ಶಾಹಿ ಆಲಂನೊಂದಿಗೆ ಆಗಸ್ಟ್ ೧೨, ೧೭೬೫ರಲ್ಲಿ ಒಪ್ಪಂದವೊಂದಕ್ಕೆ ಸಹಿ ಮಾಡಲಾಯಿತು. ಈ ಒಪ್ಪಂದವು ಭಾರತದಲ್ಲಿ ಬ್ರಿಟಿಷ್ ಅಧಿಪತ್ಯದ ಆಡಳಿತಾತ್ಮಕ ಮತ್ತು ರಾಜಕೀಯ ಸಾರ್ವಭೌಮತೆಯ ಶಕೆಯ ಪ್ರಾರಂಭವೆಂದು ಚರಿತ್ರೆಯಲ್ಲಿ ಪರಿಗಣಿಸಲಾಗುತ್ತಿದೆ. ಈ ಒಪ್ಪಂದ ಮುಖಾಂತರ ಬ್ರಿಟಿಷರಿಗೆ ದಿವಾನಿ ಹಕ್ಕು ದೊರೆಯಿತು. ಈ ದಿವಾನಿ ಹಕ್ಕಿನ ಮುಖಾಂತರ ಬ್ರಿಟಿಷರು ಮೊಗಲ್ ಸಾಮ್ರಾಜ್ಯದ ಪೂರ್ವ ಪ್ರಾಂತ್ಯಗಳಾದ ಬಿಹಾರ, ಬಂಗಾಳ ಮತ್ತು ಒರಿಸ್ಸಾಗಳಲ್ಲಿ ಜನತೆಯಿಂದ ನೇರವಾಗಿ ತೆರಿಗೆಯನ್ನು ವಸೂಲು ಮಾಡುವ ಹಕ್ಕು ದೊರೆಯಿತು. ಇದಕ್ಕಾಗಿ ಈಸ್ಟ್ ಇಂಡಿಯಾ ಕಂಪೆನಿಯು ಇಂಪೀರಿಯಲ್ ಟ್ಯಾಕ್ಸ್ ಕಲೆಕ್ಟರ್ ಎಂಬ ಅಧಿಕಾರಿಯನ್ನು ನೇಮಕ ಮಾಡಿತ್ತು. ಬ್ರಿಟಿಷರು ಮೊಗಲ್ ಸಾಮ್ರಾಜ್ಯದ ಬೊಕ್ಕಸಕ್ಕೆ ಪ್ರತೀ ವರ್ಷ ೨೬ ಲಕ್ಷ ರೂಪಾಯಿಯನ್ನು ಕಪ್ಪ ಕಾಣಿಕೆಯಾಗಿ ಪಾವತಿಸಬೇಕಾಯಿತು. ಈ ಕಪ್ಪಕಾಣಿಕೆಯಿಂದ ಮೊಗಲ್ ಸಾಮ್ರಾಜ್ಯದ ಅಲಹಾಬಾದ್ ಕೋಟೆ ಮತ್ತು ದರ್ಬಾರಿಗೆ ಸಂಬಂಧಿಸಿ ಆಗುವ ಖರ್ಚುವೆಚ್ಚಗಳಿಗೆ ಉಪಯೋಗಿಸಲಾಗುತ್ತಿತ್ತು. ಆದುದರಿಂದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗೆ ದೊರೆತ ದಿವಾನಿಯ ಹಕ್ಕು ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಸಾರ್ವಭೌಮ ಅಧಿಕಾರ ಚಲಾವಣೆಗೆ ನಾಂದಿ ಹಾಡಿತ್ತು.

೬. 'ನಿರಂಜನ' ಎಂಬ ಕಾವ್ಯ ನಾಮದಿಂದ ಪ್ರಖ್ಯಾತರಾದ ಕುಳಕುಂದ ಶಿವರಾಯರು ಮೂಲತಃ ಕರಾವಳಿ ಕರ್ನಾಟಕದವರು. ಇವರು ಕರ್ನಾಟಕದ ಪ್ರಥಮ ಸಾಲಿನ ಪ್ರಗತಿಪರ ಬರಹಗಾರರಾಗಿರುತ್ತಾರೆ. ತನ್ನ ವಿದ್ಯಾರ್ಥಿದೆಸೆಯಿಂದ ಕಮ್ಯೂನಿಸ್ಟ್ ಚಳುವಳಿಯೊಂದಿಗೆ ಗುರುತಿಸಿಕೊಂಡಿದ್ದ ಇವರು ಶಿಕ್ಷಣ ಮುಗಿದ ನಂತರ ಭಾರತ ಕಮ್ಯೂನಿಸ್ಟ್ ಪಕ್ಷದ ಸದಸ್ಯರಾಗಿ ಸಂಘಟನೆಯಲ್ಲಿ ತೊಡಗಿಸಿಕೊಂಡಿದ್ದರು. ಇವರು ಪಕ್ಷದ ಮುಖಪತ್ರಿಕೆ ಜನಶಕ್ತಿ (ವಾರಪತ್ರಿಕೆ)ಯ ಪ್ರಪ್ರಥಮ ಸಂಪಾದಕರಾಗಿದ್ದಾರೆ. ಇವರು ಕಯ್ಯೂರಿನ ರೈತ ಚಳುವಳಿ ಮತ್ತು ನೇಣುಗಂಬ ರೈತ ಹುತಾತ್ಮರ ಘಟನೆಯನ್ನು ಆಧರಿಸಿ ರಚಿಸಿರುವ ಚಿರಸ್ಮರಣೆ ಎಂಬ ಕಾದಂಬರಿ ಅತ್ಯಂತ ಪ್ರಭಾವಿ ಪೂರ್ಣ ಕೃತಿಯಾಗಿದೆ. ಲಕ್ಷಾಂತರ ಸಂಖ್ಯೆಯಲ್ಲಿ ಜಗತ್ತಿನ ಬೇರೆಬೇರೆ ಭಾಷೆಗಳಲ್ಲೂ ಇದು ಪ್ರಕಟಗೊಂಡಿದೆ. ಈ ಕೃತಿಗೆ ಸೋವಿಯತ್ ಲ್ಯಾಂಡ್ ಪ್ರಶಸ್ತಿ ಕೂಡ ಲಭಿಸಿದೆ. ಈ ಕಾದಂಬರಿಯನ್ನು ಆಧರಿಸಿ ಹಲವಾರು ಭಾಷೆಗಳಲ್ಲಿ ಕಿರುಚಿತ್ರ ಕೂಡ ರಚನೆಯಾಗಿದೆ.

# ಪರಾಮರ್ಶನ ಗ್ರಂಥಗಳು


**I ಪ್ರಕಟಿತ ಆಕರಗಳು**

**ಅ. ಆನುಷಂಗಿಕ ಆಕರಗಳು**

೧. ಅಶೋಕ್ ರಾಕೇಶ್ ಡಿ'ಸೋಜಾ, ೨೦೧೫. ಬಾಸೆಲ್ ಮಿಶನಿನ ಮೇಲೆ ಜಾಗತಿಕ ಮಹಾಯುದ್ಧಗಳ ಪ್ರಭಾವ, ಪುರ್ಟಾದೋ ಸಿ.ಎಲ್.(ಸಂ), ಪರ್‌ಸ್ಪೆಕ್ಟಿವ್ ಎಂಡ್ ರಿಸೋರ್ಸ್ ಫಾರ್ ಎ ಹಿಸ್ಟರಿ ಆಫ್ ಕ್ರಿಶ್ಚಿಯನ್ಸ್ ಇನ್ ಕರ್ನಾಟಕ(೧೯ ಆ್ಯಂಡ್ ೨೦ ಸೆಂಚುರೀಸ್), ಮಂಗಳೂರು: ಸಮನ್ವಯ ಪ್ರಕಾಶನ.

೨. ಆಲ್‌ಫ್ರೆಡ್ ಲ್ಯಾಲ್ ಅರ್, ೧೯೦೨. ದಿ ರೈಸ್ ಆಫ್ ಬ್ರಿಟಿಷ್ ಡೊಮಿನಿಯನ್ ಇನ್ ಇಂಡಿಯಾ, ಲಂಡನ್: ಜಾನ್ ಮುರ್ರೆ ಅಲ್ಬರ್ ಮೆಬಲ್

೩. ಆಲಿ ಬಿ. ಷೇಕ್, ೧೯೬೩. ಇಂಗ್ಲಿಷ್ ರಿಲೇಷನ್ಸ್ ವಿಥ್ ಹೈದರಾಲಿ, ೧೭೬೦-೧೭೮೨ ಮೈಸೂರು: ನ್ಯಾಷನಲ್ ಬುಕ್ ಟ್ರಸ್ಟ್.

೪. ಆಲಿ ಬಿ. ಷೇಕ್, ೨೦೧೫(೧೯೭೧). ಟಿಪ್ಪು ಸುಲ್ತಾನ್, ನವದೆಹಲಿ: ನ್ಯಾಷನಲ್ ಬುಕ್ ಟ್ರಸ್ಟ್.

೫. ಆಸಿಯಾ ಸಿದ್ದಿಕ್, ೧೯೯೫. ಟ್ರೇಡ್ ಆ್ಯಂಡ್ ಫೈನಾನ್ಸ್ ಇನ್ ಕೊಲೋನಿಯಲ್ ಇಂಡಿಯಾ ೧೭೫೦-೧೮೬೦, ನ್ಯೂ ಡೆಲ್ಲಿ: ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್.

೬. ಇಗ್ನೋ(IGNOU), ೨೦೦೫. ಎಂಎಚ್ಐ ೦೮(೦೧), ನವದೆಹಲಿ: ಡೈರೆಕ್ಟರ್ ಸ್ಕೂಲ್ ಆಫ್ ಸೋಷಿಯಲ್ ಸೈನ್ಸ್.

೭. ಇರ್ಫಾನ್ ಹಬೀಬ್, ೨೦೧೨. ರಾಷ್ಟ್ರೀಯ ಆಂದೋಲನ ಸಿದ್ಧಾಂತದ ಮತ್ತು ಇತಿಹಾಸದ ಅಧ್ಯಯನಗಳು, ಎಂ. ಅಬ್ದುಲ್ ರೆಹಮಾನ್ ಪಾಷ (ಅನುವಾದ) ಬೆಂಗಳೂರು: ನವ ಕರ್ನಾಟಕ ಪ್ರಕಾಶನ.

೮. ನಂಬೂದಿರಿಪಾದ್ ಇಎಂಎಸ್. ೨೦೧೦. ಹಿಸ್ಟರಿ ಸೊಸೈಟಿ ಎಂಡ್ ಲ್ಯಾಂಡ್ ರಿಲೇಶನ್ಸ್, ನವದೆಹಲಿ: ಲೆಫ್ಟ್ ವರ್ಡ್ ಬುಕ್ಸ್.

೯. ಉದಯ ಬಾರ್ಕೂರು, ೨೦೦೩. ಹೈದರಾಲಿ ಟಿಪ್ಪು ಇತಿಹಾಸ ಕಥನ, ಮಂಗಳೂರು: ಮಾನವತಾ ವೇದಿಕೆ.

೧೦. ಕಕ್ಕಿಲಾಯ ಬಿ.ವಿ, ೨೦೦೩. ಬರೆಯದ ದಿನಚರಿಯ ಮರೆಯದ ಪುಟಗಳು, ಬೆಂಗಳೂರು: ನವಕರ್ನಾಟಕ ಪ್ರಕಾಶನ.

೧೧. ಕರುಣಾಕರ ಕೆ. ಉಚ್ಚಿಲ್, ೨೦೦೩. ನೆನಪಿನ ಎಲೆಗಳು (ಸ್ವಾತಂತ್ರ್ಯ ಹೋರಾಟಗಾರನ ಅನುಭವ ಕಥನ), ಕೋಟೆಕಾರ್: ಪ್ರಕೃತಿ ಪ್ರಕಾಶನ.

೧೨. ಕಲ್ಪನ ರಾಜಾರಾಮ್(ಸಂ), ೨೦೦೯. ಜಿಯೋಗ್ರಾಫಿ, ನವದೆಹಲಿ: ಸ್ಪೆಕ್ಟ್ರಮ್ ಬುಕ್ಸ್ ಪ್ರೈ. ಲಿ.

೧೩. ಕಾರ್ಲ್‌ಮಾರ್ಕ್ಸ್ ವಿಲ್ಕ್ಸ್, ೧೮೭೮. ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸದರ್ನ್ ಇಂಡಿಯಾ, ಸಂಪುಟ–೧, ಲಂಡನ್.

೧೪. ಕಾರ್ಲ್‌ಮಾರ್ಕ್ಸ್, ೧೯೮೧. ಕೂಲಿಕೆಲಸ ಹಾಗೂ ಬಂಡವಾಳ, ಕೆ.ಎಲ್ ಗೋಪಾಲಕೃಷ್ಣ (ಅನುವಾದ) ಮಾಸ್ಕೋ: ಪ್ರಗತಿ ಪ್ರಕಾಶನ.

೧೫. ಕಾರ್ಲ್‌ಮಾರ್ಕ್ಸ್, ೧೯೮೧. ಬಂಡವಾಳದ ಉದ್ಭವ, ಕೆ.ಎಲ್ ಗೋಪಾಲಕೃಷ್ಣ (ಅನುವಾದ) ಮಾಸ್ಕೋ: ಪ್ರಗತಿ ಪ್ರಕಾಶನ.

೧೬. ಕಾರ್ಲ್‌ಮಾರ್ಕ್ಸ್, ೧೯೮೦. ರಾಜಕೀಯ ಅರ್ಥಶಾಸ್ತ್ರದ ಪರಾಮರ್ಶೆಗೆ ಒಂದು ಕಾಣಿಕೆ, ಕೆ.ಎಲ್ ಗೋಪಾಲಕೃಷ್ಣ (ಅನುವಾದ) ಮಾಸ್ಕೋ: ಪ್ರಗತಿ ಪ್ರಕಾಶನ.

೧೭. ಕಾರ್ಲ್‌ಮಾರ್ಕ್ಸ್, ಫ್ರೆಡ್ರಿಕ್ ಏಂಗೆಲ್ಸ್, ೧೯೮೦(೧೯೮೭). ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ–೧೮೫೭–೧೮೫೯, ಕೆ.ಎಲ್ ಗೋಪಾಲಕೃಷ್ಣ ರಾವ್(ಅನುವಾದ), ಮಾಸ್ಕೋ: ಪ್ರಗತಿ ಪ್ರಕಾಶನ.

೧೮. ಕಾರ್ಲ್‌ಮಾರ್ಕ್ಸ್, ಫ್ರೆಡ್ರಿಕ್ ಏಂಗೆಲ್ಸ್, ೧೯೮೪. ಧರ್ಮದ ಕುರಿತು, ಕೆ.ಎಲ್ ಗೋಪಾಲಕೃಷ್ಣ (ಅನುವಾದ) ಮಾಸ್ಕೋ: ಪ್ರಗತಿ ಪ್ರಕಾಶನ.

೧೯. ಕಾರ್ಲ್‌ಮಾರ್ಕ್ಸ್, ಫ್ರೆಡ್ರಿಕ್ ಏಂಗೆಲ್ಸ್, ೧೯೭೮. ಕಮ್ಯೂನಿಸ್ಟ್ ಪಾರ್ಟಿ ಪ್ರಣಾಳಿಕೆ, ಕೆ.ಎಲ್ ಗೋಪಾಲಕೃಷ್ಣ(ಅನುವಾದ) ಮಾಸ್ಕೋ: ಪ್ರಗತಿ ಪ್ರಕಾಶನ.

೨೦. ಕಾರ್ಲ್‌ಮಾರ್ಕ್ಸ್, ಫ್ರೆಡ್ರಿಕ್ ಏಂಗೆಲ್ಸ್, ೧೯೭೩. ಸೆಲೆಕ್ಟೆಡ್ ವರ್ಕ್ಸ್ ಸಂಪುಟ–೧, ಮಾಸ್ಕೋ: ಪ್ರೋಗ್ರೆಸಿವ್ ಪಬ್ಲಿಷರ್ಸ್.

೨೧. ಕುಲಾಲ್ ಡಿ.ಎಂ, ೨೦೦೫. ಬಂಟ್ವಾಳ ಸ್ವಾತಂತ್ರ್ಯ ಹೋರಾಟಗಾರ ಡಾ. ಅಮ್ಮೆಂಬಳ ಬಾಳಪ್ಪ, ಮಂಗಳೂರು: ಅರುಣೋದಯ ಪ್ರಕಾಶನ.

೨೨. ಕೃಷ್ಣಪ್ಪ ಕೊಂಚಾಡಿ, ೨೦೧೭. ಕೂಲಿಕಾರ ರೈತರು ಮತ್ತು ಭೂಮಿಯ ಪ್ರಶ್ನೆ(ಅವಿಭಜಿತ ದ.ಕ ಭೂಸುಧಾರಣಾ ಚಳವಳಿಯ ನೋಟದಲ್ಲಿ, ಮೇಟಿ ಮಲ್ಲಿಕಾರ್ಜುನ(ಸಂ), ರೈತ ಕಾರ್ಮಿಕ ಓದು, ಬೆಂಗಳೂರು: ಕನ್ನಡ· ಸಾಹಿತ್ಯ ಅಕಾಡೆಮಿ.

೨೩. ಕ್ರಾಂತಿ ಕೆ. ಪರಾಯಸ್, ೧೯೯೯. ಕ್ರಿಶ್ಚಿಯನ್ ಇಂಪ್ಯಾಕ್ಟ್ ಇನ್ ಸೌತ್ ಕೆನರಾ, ಮುಂಬಯಿ: ಚರ್ಚ್ ಹಿಸ್ಟರಿ ಅಸೋಸಿಯೇಶನ್ ಆಫ್ ಇಂಡಿಯಾ ವೆಸ್ಟ್ ಇಂಡಿಯಾ ಬ್ರಾಂಚ್.

೨೪. ಗುರುರಾಜ್ ಭಟ್ ಪಿ, ೧೯೭೫. ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್, ಉಡುಪಿ.

೨೫. ಗಂಗೂಲಿ ಡಿ.ಸಿ, ೧೯೫೮. ಸಿಲೆಕ್ಟೆಡ್ ಡಾಕ್ಯುಮೆಂಟ್ಸ್ ಫ್ರಮ್ ದ ಬ್ರಿಟಿಷ್ ಪಿರೇಡ್, ಕಲ್ಕತ್ತಾ: ಡೈರೆಕ್ಟರ್ಸ್ ಆಫ್ ಆರ್ಕೇವ್ಸ್.

೨೬. ಗೋಪಾಲ್ ಆರ್, ೨೦೧೦. ಟಿಪ್ಪು ಸುಲ್ತಾನ್ ದಿ ಟೈಗರ್ ಆಫ್ ಮೈಸೂರು, ಮೈಸೂರು: ದ ಡೈರೆಕ್ಟರೇಟ್ ಆಫ್ ಆರ್ಕಿಯಾಲೋಜಿ ಆಂಡ್ ಮ್ಯೂಸಿಯಂ.

೨೭. ಜಯ್ನೆ ಕೆ.ಜಿ, ೧೯೯೭. ವಾಸ್ಕೋಡಿಗಾಮ ಎಂಡ್ ಹಿಸ್ಸ ಸಸೆಸ್ಸರ್ಸ್ ೧೪೬೦–೧೫೮೦, ನವದೆಹಲಿ: ಏಷ್ಯನ್ ಎಜ್ಯುಕೇಶನಲ್ ಸರ್ವಿಸಸ್.

೨೮. ಜಾರ್ಜ್ ಎಂ ಮೋರಸ್, ೧೯೨೭. ಮ್ಯಾಂಗಲೂರ್ ಹಿಸ್ಟಾರಿಕಲ್ ಸ್ಕೆಚಸ್, ನವಹೆಹಲಿ. ಏಷ್ಯನ್ ಎಜ್ಯುಕೇಶನಲ್ ಸರ್ವಿಸಸ್.

೨೯. ಜೆರೋಮ್ ಎ. ಸಲ್ಡಾನ, ೧೯೨೭. ಪಂಚಕಜ್ಜಾಯ (ಸ್ಮರಣ ಸಂಚಿಕೆ), ಮಂಗಳೂರು: ೧೩ನೇಯ ಕರ್ನಾಟಕ ಸಾಹಿತ್ಯ ಸಮ್ಮೇಳನ ಸಮಿತಿ.

೩೦. ಜಿತೇಂದ್ರ ಸನ್ಯಾಲ್, ೨೦೧೦. ಅಮರ ಹುತಾತ್ಮ ಭಗತ್ ಸಿಂಗ್, ಪ್ರಭುಶಂಕರ್ ಪ್ರೇಮಿ (ಅನುವಾದ) ನವದೆಹಲಿ: ನ್ಯಾಷನಲ್ ಬುಕ್ ಟ್ರಸ್ಟ್.

೩೧. ಜೋನ್ ಕೊರಿಯಾ ಅಫಾನ್ಸೋ, ೧೯೮೦. ಲೆಟರ್ಸ್ ಫ್ರಮ್ ದ ಮೊಗಲ್ ಕೋರ್ಟ್ಸ್ – ದಿ ಫಸ್ಟ್ ಜ್ಯೇಸ್ಯುವೆಟ್ಸ್ ಮಿಶನ್ ಟು ಅಕ್ಬರ್ ೧೫೮೦–೧೫೮೩, ಮುಂಬಯಿ: ಹೀರಾಸ್ ಇನ್ಸ್ಟ್ಯೂಟ್ ಆಫ್ ಇಂಡಿಯನ್ ಹಿಸ್ಟರಿ ಎಂಡ್ ಕಲ್ಚರ್ ಪಬ್ಲಿಕೇಷನ್ಸ್.

೩೨. ಜೋಶಿ ಪಿ.ಸಿ, ೨೦೧೦. ಬಂಡಾಯ–೧೮೫೭, ಎಂ. ಅಬ್ದುಲ್ ರೆಹಮಾನ್ ಪಾಷ (ಅನುವಾದ) ನವದೆಹಲಿ: ನ್ಯಾಷನಲ್ ಬುಕ್ ಟ್ರಸ್ಟ್.

೩೩. ತಿಂಗಳಾಯ ಯನ್.ಕೆ, ೨೦೧೬. ಬ್ಯಾಂಕಿಂಗ್‌ನ ಆರಂಭ ಮತ್ತು ಬೆಳವಣಿಗೆ, ವಿವೇಕ ರೈ ಬಿ.ಎ. (ಸಂ), ಮಂಗಳೂರು ದರ್ಶನ, ಸಂಪುಟ–೧, ಮಂಗಳೂರು: ನಗರಾಭಿವೃದ್ಧಿ ಪ್ರಾಧಿಕಾರ ಮಂಗಳೂರು.

೩೪. ದೇವದತ್ತ ಜೆ. ಐ, ೨೦೦೪. ಆ್ಯನ್ ಆಟೋ ಬಯೋಗ್ರಾಫಿ, ಬೆಂಗಳೂರು: ದೇವದತ್ತ ಪಬ್ಲಿಕೇಷನ್ಸ್.

೩೫. ಡಿಸ್ನಿ ಎ.ಆರ್, ೨೦೧೦. ಟ್ವಿ ಲೈಟ್ ಆಫ್ ದ ಪೆಪ್ಪರ್ ಎಂಪೈರ್– ಪೋರ್ಚುಗೀಸ್ ಟ್ರೇಡ್ ಇನ್ ಸೌತ್ ವೆಸ್ಟ್ ಇಂಡಿಯಾ ಇನ್ ದ ಅರ್ಲಿ ಸೆವೆಂಟೀನ್ತ್ ಸೆಂಚುರಿ, ನವದೆಹಲಿ:ಮನೋಹರ ಪ್ರೆಸ್.

೩೬. ನರಸಿಂಹ ಮೂರ್ತಿ ಪಿ.ಎನ್, ೨೦೦೭. ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಒಂದು ಸಂಕ್ಷಿಪ್ತ ಪರಿಚಯ, ಗೋಪಾಲ್ ಆರ್(ಸಂ), ದ.ಕ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ ಮೈಸೂರು: ದ ಡೈರೆಕ್ಟರೇಟ್ ಆಫ್ ಆರ್ಕಿಯಾಲೋಜಿ ಆಂಡ್ ಮ್ಯೂಸಿಯಂ.

೩೭. ನಾಗರಾಜಯ್ಯ ಹಂಪ, ೨೦೧೧. ವುಮೆನ್ ರೂಲರ್ಸ್ ಇನ್ ಕೋಸ್ಟಲ್ ಕರ್ನಾಟಕ, ಬೆಂಗಳೂರು: ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್.

೩೮. ನಂಜುಂಡಪ್ಪ ಸಿ, ೧೯೯೮. ಕಾರ್ಮಿಕ ಚಳುವಳಿಯ ಕುರಿತು, ಮೈಸೂರು: ಭಾರತೀ ಪ್ರಕಾಶನ.

೩೯. ನಂಬೂದಿರಿಪಾದ್ ಇಎಂಎಸ್, ೨೦೧೦. ಹಿಸ್ಟರಿ ಸೊಸೈಟಿ ಎಂಡ್ ಲ್ಯಾಂಡ್ ರಿಲೇಶನ್ಸ್, ನವದೆಹಲಿ: ಲೆಫ್ಟ್ ವರ್ಡ್ ಬುಕ್ಸ್.

೪೦. ನಾಡಕರ್ಣಿ ಎಂ.ವಿ, ೧೯೮೭. ಫಾರ್ಮರ್ಸ್ ಮೂವ್‌ಮೆಂಟ್ ಇನ್ ಇಂಡಿಯಾ, ಡೆಲ್ಲಿ: ಕಾಂತ್ ಪಬ್ಲಿಕೇಷನ್ಸ್.

೪೧. ನಾರಾಯಣ ಪಿ.ಕೆ, ೧೯೮೧. ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ, ಮಂಗಳೂರು: ಕಾರ್ನಾಡು ಸದಾಶಿವ ರಾವ್ ಸ್ಮಾರಕ ಟ್ರಸ್ಟ್.

೪೨. ಪಣಿಕ್ಕರ್ ಕೆ.ಎಂ, ೧೯೨೯. ಮಲಬಾರ್ ಎಂಡ್ ದ ಪೋರ್ಚುಗೀಸ್, ಮುಂಬೈ: ಡಿ.ಬಿ. ತಾರಾಪೋರೇವಾಲಾ ಸನ್ಸ್ ಆ್ಯಂಡ್ ಕಂಪೆನಿ.

೪೩. ಪಾರ್ಥ ಸಾರಥಿ ಕೆ.ಎಸ್, ೨೦೦೯. ನಿರಂತರ – ಬಿ.ವಿ. ಕಕ್ಕಿಲ್ಲಾಯ ಸಂಭಾವನ ಗ್ರಂಥ, ಬೆಂಗಳೂರು: ಎಂ.ಎಸ್. ಕೃಷ್ಣನ್ ಸ್ಮರಣ ಸಂಸ್ಥೆ.

೪೪. ಪಿಯರ್‌ಸನ್ ಎಂ.ಎನ್, ೨೦೦೪. ಕೋಸ್ಟಲ್ ವೆಸ್ಟರ್ನ್ ಇಂಡಿಯಾ– ಸ್ಟಡೀಸ್ ಫ್ರಮ್ ದ ಪೋರ್ಚುಗೀಸ್ ರೆಕಾರ್ಡ್ಸ್, ನವದೆಹಲಿ: ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ.

೪೫. ಪಿಯೂಸ್ ಎಫ್.ಸಿ ಪಿಂಟೋ, ೨೦೧೬. ಎ ಹಿಸ್ಟೋರಿಕಲ್ ಪರ್‌ಸ್ಪೆಕ್ಟಿವ್ ಆಫ್ ಕೊಂಕಣಿ ಕ್ರಿಶ್ಚಿಯನ್ಸ್ ಇನ್ ಕರ್ನಾಟಕ ೧೮೦೦–೧೯೪೭, ಪುರ್ಟಾದೋ ಸಿ.ಎಲ್(ಸಂ), ಪರ್‌ಸ್ಪೆಕ್ಟಿವ್ ಎಂಡ್ ರಿಸೋರ್ಸ್ ಫಾರ್ ಎ ಹಿಸ್ಟರಿ ಆಫ್ ಕ್ರಿಶ್ಚಿಯನ್ಸ್ ಇನ್ ಕರ್ನಾಟಕ(೧೯ ಆ್ಯಂಡ್ ೨೦ ಸೆಂಚುರೀಸ್), ಮಂಗಳೂರು: ಸಮನ್ವಯ ಪ್ರಕಾಶನ.

೪೬. ಪೀಟರ್ ವಿಲ್ಸನ್ ಪ್ರಭಾಕರ್, ೨೦೧೫. ಬಾಸೆಲ್ ಮಿಶನ್ ಭಾರತದಲ್ಲಿ: ಕೈಗಾರಿಕೆ ಮತ್ತು ಮುದ್ರಣ– ಬಾಸೆಲ್ ಮಿಶನ್ ಮತ್ತು ಕೈಗಾರಿಕಾ ಬೆಳವಣಿಗೆ, ಪುರ್ಟಾದೋ ಸಿ.ಎಲ್.(ಸಂ), ಮಿಷನ್ ಮೂವ್ಸ್ ೨೦೧೫, ೨೦೦ ಈಯರ್ಸ್ ಆಫ್ ಬಾಸೆಲ್ ಮಿಶನ್, ಮಂಗಳೂರು: ಚರ್ಚ್ ಆಫ್ ಸೌತ್ ಇಂಡಿಯಾ–ಕರ್ನಾಟಕ ಸದರ್ನ್ ಡಯೋಸಿಸ್.

೪೭. ಪೋರ್ಬಿಸ್ ಜೇಮ್ಸ್. ಸಿ.ಎಫ್, ೧೮೩೪. ಓರಿಯಂಟಲ್ ಮೆಮೋರಿಸ್, ಸಂಪುಟ–೧, ಲಂಡನ್: ಜೆ.ಬಿ. ಮಿಚೋಲ್ಪ್ ಆ್ಯಂಡ್ ಸನ್ಸ್.

೪೮. ಫ್ರಾನ್ಸಿಸ್ ಬುಕಾನನ್, ೧೯೮೮(೧೮೦೭). ಎ ಜರ್ನಿ ಪ್ರಮ್ ಮೆದ್ರಾಸ್ ತ್ರೋ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್, ಸಂಪುಟ–೧, ನವದೆಹಲಿ: ಏಷ್ಯನ್ ಎಜ್ಯುಕೇಷನಲ್ ಸರ್ವಿಸಸ್.

೪೯. ಫ್ರಾನ್ಸಿಸ್ ಬುಕಾನನ್, ೧೯೮೮(೧೮೦೭). ಎ ಜರ್ನಿ ಪ್ರಮ್ ಮೆದ್ರಾಸ್ ತ್ರೋ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್, ಸಂಪುಟ–೨, ನವದೆಹಲಿ: ಏಷ್ಯನ್ ಎಜ್ಯುಕೇಷನಲ್ ಸರ್ವಿಸಸ್.

೫೦. ಫ್ರಾನ್ಸಿಸ್ ಬುಕಾನನ್, ೧೯೮೮(೧೮೦೭). ಎ ಜರ್ನಿ ಪ್ರಮ್ ಮೆದ್ರಾಸ್ ತ್ರೋ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್, ಸಂಪುಟ–೩, ನವದೆಹಲಿ: ಏಷ್ಯನ್ ಎಜ್ಯುಕೇಷನಲ್ ಸರ್ವಿಸಸ್.

೫೧. ಬಿಪನ್ ಚಂದ್ರ, ೨೦೧೭(೨೦೧೨, ೨೦೧೩, ೨೦೧೪, ೨೦೧೬). ಆಧುನಿಕ ಭಾರತ ಇತಿಹಾಸ, ಎಚ್.ಎಸ್ ಗೋಪಾಲ ರಾವ್(ಅನುವಾದ) ಬೆಂಗಳೂರು: ನವಕರ್ನಾಟಕ ಪ್ರಕಾಶನ.

೫೨. ಬಿಪನ್ ಚಂದ್ರ–ತ್ರಿಪಾರ್ಟಿ–ಬರೂನ್‌ಡೇ, ೧೯೭೨(೧೯೭೨, ೧೯೭೪). ಸ್ವಾತಂತ್ರ್ಯದ ಹೋರಾಟ, ಆರ್.ಎಲ್. ಅನಂತ ರಾಮಯ್ಯ (ಅನುವಾದ) ನವದೆಹಲಿ: ನ್ಯಾಷನಲ್ ಬುಕ್ ಟ್ರಸ್ಟ್.

೫೩. ಟ್ರಾವೆಲಿನ್ ಜಿ.ಎಂ, ೧೯೮೭. ಇಂಗ್ಲಿಷ್ ಸೋಷಿಯಲ್ ಹಿಸ್ಟರಿ, ಲಂಡನ್: ಪೆಂಗ್ವಿನ್.

೫೪. ಮ್ಹಾಹ್ಮಿ ಎಸ್.ಕೆ(ಸಂ), ೨೦೦೧. ಗೋವಾ ದ ಇಂಡಿಯನ್ ಸಬ್ ಕಾಂಟಿನೆಂಟ್, ಗೋವಾ: ಡೈರೆಕ್ಟರೇಟ್ ಆಫ್ ಆರ್ಕೆವ್ಸ್ ಆ್ಯಂಡ್ ಆರ್ಕಿಯಾಲೊಜಿ ಗೋವಾ.

೫೫. ಮುಕುಂದ ರಾವ್ ಎಚ್– ಜೆ.ಆರ್. ಶೆಣೈ, ೧೯೩೩. ಬ್ರೀಫ್ ಹಿಸ್ಟರಿ ಆಫ್ ಇಂಡಿಯಾ, ಮಂಗಳೂರು: ಸಾಹಿತ್ಯ ಸಂಘ.

೫೬. ಮಾಧವ ವಸಂತ ಕೆ.ಜಿ, ೧೯೮೦(೧೯೮೫). ರಿಲೀಜಿಯನ್ಸ್ ಇನ್ ಕೋಸ್ಟಲ್ ಕರ್ನಾಟಕ ೧೫೦೦–೧೭೬೩, ನವದೆಹಲಿ: ಸ್ಪೋಯಿಸ್ ಪಬ್ಲಿಕೇಶನ್.

೫೭. ಮುಝಾಫರ್ ಎಚ್ ಅಸ್ಸಾದಿ, ೧೯೯೭. ಪೆಸೆಂಟ್ಸ್ ಮೂವ್‌ಮೆಂಟ್ ಇನ್ ಕರ್ನಾಟಕ ೧೮೯೦–೯೪, ಡೆಲ್ಲಿ: ಸಿಪ್ರ ಪಬ್ಲಿಕೇಷನ್ಸ್.

೫೮. ಮೂರ್ಸ್ ಸ್ಟೈನ್ ಎಚ್, ೧೮೯೭. ಅಲ್ಬುಕರ್ಕ್– ರೂಲರ್ಸ್ ಆಫ್ ಇಂಡಿಯಾ, ಲಂಡನ್: ಹೆನ್ರಿ ಫ್ರೌಡೆ ಯುನಿವರ್ಸಿಟಿ ಆರ್ಕ್ಸ್‌ಫರ್ಡ್.

೫೯. ಮೂರೇ ಎಸ್.ಜೆ, ೧೯೦೫. ದ ಹಿಸ್ಟರಿ ಆಫ್ ಡಯಾಸಿಸ್ ಆಫ್ ಮ್ಯಾಂಗಳೂರು, ಮಂಗಳೂರು: ಡಯಾಸಿಸ್ ಆಫ್ ಮಂಗಳೂರು.

೬೦. ಮಲೆಕಾಂಡತ್ತಿಲ್ ಪಿಯೂಸ್, ೨೦೧೦. ಮಾರಿಟೈಮ್ ಇಂಡಿಯಾ ಟ್ರೇಡ್ ರೀಲಿಜನ್ ಎಂಡ್ ಪೋಲಿಟಿ ಇನ್ ದ ಇಂಡಿಯನ್ ಓಫಿಯನ್, ದೆಹಲಿ: ಪ್ರಿಮಸ್ ಬುಕ್ಸ್.

೬೧. ಮೋಹನ್‌ಕೃಷ್ಣ ರೈ ಕೆ, ೨೦೧೦. ಕೆನರಾದ ವಿಭಜನೆ– ಹತ್ತಿ ರಾಜಕೀಯದ ವಿಶ್ಲೇಷಣೆ, ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೬೨. ಮೋಹನ್ ಕೃಷ್ಣರೈ ಕೆ, ೨೦೧೭. ಯುದ್ಧ ಮತ್ತು ಒಪ್ಪಂದ, ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೬೩. ಯಂ.ಯಂ.ಡಿ.ಎಲ್.ಟಿ, ೧೯೮೮. ಹೈದರಾಲಿ ಆ್ಯಂಡ್ ರೆವೆಲ್ಯೂಶನ್ ಇನ್ ಇಂಡಿಯಾ, ನವದೆಹಲಿ: ಏಷ್ಯನ್ ಎಜ್ಯುಕೇಶನಲ್ ಬುಕ್ಸ್.

೬೪. ರಮಾನಾಥ ಕೋಟೆಕಾರ್, ೨೦೧೨. ತುಳುನಾಡಿನ ಬಿಲ್ಲವರು ಒಂದು ಅಧ್ಯಯನ, ಕೋಟೆಕಾರ್: ಸಾಯಿ ಸುಂದರಿ ಸೇವಾ ಟ್ರಸ್ಟ್.

೬೫. ರಮಾನಾಥ ಕೋಟೆಕಾರ್, ೨೦೧೨. ಬಿಲ್ಲವರು ಮತ್ತು ಬಾಸೆಲ್ ಮಿಷನ್ ಒಂದು ಅಧ್ಯಯನ, ಕೋಟೆಕಾರ್: ಸಾಯಿ ಸುಂದರಿ ಸೇವಾ ಟ್ರಸ್ಟ್.

೬೬. ರಾಬರ್ಟ್ ಸೀವೆಲ್, ೧೮೯೪. ಎ ಫರ್ಗಾಟನ್ ಎಂಪೈರ್, ನವದೆಹಲಿ: ಏಷ್ಯನ್ ಎಜ್ಯುಕೇಶನಲ್ ಸರ್ವಿಸಸ್.

೬೭. ರುಚಿರಾ ಬ್ಯಾನರ್ಜಿ, ೨೦೦೧. ದ ಕ್ರೋನಿಕಲ್ ಆಫ್ ಎ ವಾರ್ ಫಾರ್‌ಟೋಲ್ಡ್ : ಹೆನ್ರಿ ಬೆಕ್ಕರ್ಸ್ ಇಂಪ್ರೆಷನ್ ಆಫ್ ಟಿಪ್ಪು ಸುಲ್ತಾನ್ಸ್ ಮೈಸೂರು, ಇಂಡಿಕಾ(ಅರ್ಧ ವಾರ್ಷಿಕ ಜರ್ನಲ್), ವಾಲ್ಯೂಮ್ ೩೮, ನಂ.೧,೨, ಮುಂಬೈ: ಝೇವಿಯರ್ ಇನ್ಸ್‌ಟಿಟ್ಯೂಟ್.

೬೮. ರಂಗನಾಥ ಪೂಂಜಾ ರಾವ್ ಸಾಹೇಬ್, ೧೯೪೮. ಇಂಡಿಯಾಸ್ ಲೆಗೆಸ್ಸಿ ದ ವರ್ಡ್ಸ್ ಹೆರಿಟೆಜ್ ಡ್ರಾವಿಡಿಯನ್, ಸಂಪುಟ–೧, ಮಂಗಳೂರು: ಬಾಸೆಲ್ ಮಿಶನ್ ಬುಕ್ ಡಿಪೋ.

೬೯. ಲಕ್ಷ್ಮೀ ಸುಬ್ರಹ್ಮಣಿಯನ್, ೨೦೧೦. ಹಿಸ್ಟರಿ ಆಫ್ ಇಂಡಿಯಾ ೧೭೦೭–೧೮೫೭, ನವದೆಹಲಿ: ಓರಿಯಂಟ್ ಬ್ಲಾಕ್ ಸ್ವಾನ್.

೭೦. ಲೋಗನ್ ಡಬ್ಲ್ಯೂ, ೧೮೭೯. ಟ್ರೀಟೀಸ್ ಎಂಗೇಜ್‌ಮೆಂಟ್ಸ್ ಆ್ಯಂಡ್ ಅದರ್ ಪೇಪರ್ಸ್ ಆಫ್ ಇಂಪೋರ್ಟನ್ಸ್–ರಿಲೇಟೆಡ್ ಟು ಬ್ರಿಟೀಷ್ ಎಫೇರ್ಸ್ ಇನ್ ಮಲಬಾರ್– ಸೆಲಿಟೆಡ್ ವಿತ್ ನೋಟ್ಸ್, ಕ್ಯಾಲಿಕಟ್.

೭೧. ವಿಜಯ್ ಪೂಣಚ್ಚ ತಂಬಂಡ, ೧೯೯೯. ರೈತ ಚಳುವಳಿಗಳು ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೭೨. ವಿಜಯ್ ಪೂಣಚ್ಚ ತಂಬಂಡ, ೨೦೦೯. ಕೆಳವರ್ಗದ ಪ್ರತಿಭಟನೆ, ಸಬಾಲ್ಟರ್ನ್ ಚರಿತ್ರೆ: ಬರವಣಿಗೆ ಕ್ರಮ ಮತ್ತು ವಿಮರ್ಶೆ, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೭೩. ವಿಜಯ್ ಪೂಣಚ್ಚ ತಂಬಂಡ, ೨೦೧೭. ವರ್ಗದಿಂದ ಸಂಸ್ಕೃತಿಯೆಡೆಗೆ: ಸಬಾಲ್ಟರ್ನ್ ಅಧ್ಯಯನ ಮಾರ್ಕಿಸ್ಟ್ ಮತ್ತು ಮಾರ್ಕಿಸ್ಟೇತರ ವಿಮರ್ಶೆಗಳು, ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೭೪. ವಿಲಿಯಂ ವಿಲ್ಸನ್ ಹಂಟರ್ ಸರ್, ೧೯೧೨. ಎ ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ ಸಂಪುಟ ೧, ಲಂಡನ್.

೭೫. ವೆನ್ ಟಿ ಡಬ್ಲ್ಯೂ, ೧೯೪೫. ಮ್ಯಾಂಗಲೂರ್, ಬ್ರಿಟಿಷ್ ಕೊಚ್ಚಿನ್: ಲೇಖಕರು.

೭೬. ವೆಲಿಂಕರ್ ಜೋಸೆಫ್, ೨೦೧೬(೧೯೯೮). ಇಂಡಿಯಾ ಎಂಡ್ ದಿ ವೆಸ್ಟ್: ದಿ ಪಸ್ಟ್ ಎಂಕೌಂಟರ್, ಮುಂಬಯಿ: ಚಿನ್ನಾ ಮೋಂಟಿಯಲ್ ಪಬ್ಲಿಷಿಂಗ್.

೭೭. ವೈಟ್‌ವೇ ಆರ್.ಎಸ್, ೧೮೯೯. ದಿ ರೈಸ್ ಆಫ್ ಪೋರ್ಚುಗೀಸ್ ಪವರ್ ಇನ್ ಇಂಡಿಯಾ, ಲಂಡನ್: ಆರ್ಚಿಬಾಲ್ಡ್ ಕಾನ್ಸ್ಟೇಬಲ್ ಎಂಡ್ ಕಂಪೆನಿ.

೭೮. ಶಾಸ್ತ್ರಿ ಬಿ.ಎಸ್, ೨೦೦೦. ಕೆನರಾ-ಗೋವಾ ಪೋರ್ಚುಗೀಸ್ ರಿಲೇಷನ್ಸ್ ೧೪೯೮-೧೭೬೩, ನವದೆಹಲಿ: ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ.

೭೯. ಶ್ಯಾಮ್ ಭಟ್ ಎನ್, ೧೯೯೮. ಸೌತ್‌ಕೆನರಾ-(೧೭೯೯-೧೮೬೦) ಎ ಸ್ಟಡಿ ಇನ್ ಕೊಲೋನಿಯಲ್ ಎಡ್‌ಮಿನಿಸ್ಟ್ರೇಶನ್ & ರೀಜನಲ್ ರೆಸ್ಪಾನ್ಸ್, ನವದೆಹಲಿ: ವಿಟ್ಟಲ ಪಬ್ಲಿಕೇಷನ್ಸ್.

೮೦. ಶ್ಯಾಮ್ ರಾವ್ ಎಂ, ೧೯೩೬. ಮೋರ್ಡನ್ ಮೈಸೂರು ಫ್ರಮ್ ದ ಬಿಗಿನಿಂಗ್ ಟು ೧೮೬೮, ಬೆಂಗಳೂರು: ಹಿಗ್ಗಿನ್ ಭೋಥಮ್ಸ್ ಸೌತ್ ಪರೇಡ್.

೮೧. ಶಿರಿ ಜಿ, ೨೦೦೩. ಕಾಮ್ರೇಡ್ ಸಿಂಪನ್ಸ್ ಸೋನ್ಸ್- ಪರಿಶ್ರಮದ ಹಾದಿಯಲ್ಲಿ ಮುನ್ನಡೆದ ಹೆಜ್ಜೆಗಳು, ಮಂಗಳೂರು: ಜನ ಜಾಗೃತಿ ವೇದಿಕೆ.

೮೨. ಶ್ರೀಕಂಠನ್ ಕೆ.ಎಸ್, ೧೯೦೫. ಹಿಸ್ಟರಿ ಆಫ್ ಇಂಡಿಯಾ, ಮದ್ರಾಸ್: ಗವರ್ನ್‌ಮೆಂಟ್ ಪ್ರೆಸ್.

೮೩. ಶಿವರಾಮ ಕಾರಂತ ಕೆ, ೧೯೯೬(೧೯೯೪, ೧೯೯೬). ವಿಶಾಲ ಸಾಗರಗಳು, ಬೆಂಗಳೂರು: ಕರ್ನಾಟಕ ಬುಕ್ ಏಜೆನ್ಸಿ.

೮೪. ಶಿವವರ್ಮ, ೧೯೬೩. ಸೆಲೆಕ್ಟೆಡ್ ರೈಟಿಂಗ್ಸ್ ಆಫ್ ಸಾಹಿದ್ ಭಗತ್ ಸಿಂಗ್, ಕಾನ್ಪುರ: ಸಮಾಜವಾದಿ ಸಾಹಿತ್ಯ ಸದನ.

೮೫. ಸಾಮ್ಯುವೆಲ್ ಮಿಲ್ಲೆ, ೧೮೭೩. ಕೆನರಾ ಫಾಸ್ಟ್ ಎಂಡ್ ಪ್ರೆಸೆಂಟ್ಸ್, ಮಂಗಳೂರು: ಲೇಖಕರು.

೮೬. ಸುಂದರಯ್ಯ ಪಿ, ೨೦೧೨. ವೀರ ತೆಲಂಗಾಣ- ತೆಲಂಗಾಣ ಜನತೆಯ ಸಶಸ್ತ್ರ ಹೋರಾಟ ೧೯೪೬-೫೧, ಬೆಂಗಳೂರು: ಕ್ರಿಯಾ ಪ್ರಕಾಶನ ಪ್ರೈ.ಲಿ.

೮೭. ಸೆಲ್ಸ್ ಪಿಂಟೋ, ೧೯೯೪. ಟ್ರೇಡ್ ಎಂಡ್ ಫೈನಾನ್ಸ್ ಇನ್ ಪೋರ್ಚುಗೀಸ್ ಗೋವಾ, ನವದೆಹಲಿ: ಕಾನ್ಸೆಪ್ಟ್ ಪಬ್ಲಿಸಿಂಗ್ ಹೌಸ್.

೮೮. ಸಂಜಯ ಸುಬ್ರಹ್ಮಣ್ಯಂ, ೨೦೦೪. ದಿ ಪೊಲಿಟಿಕಲ್ ಇಕಾನಮಿ ಆಫ್ ಕಾಮರ್ಸ್ ಇನ್ ಸದರ್ನ್ ಇಂಡಿಯಾ ೧೫೦೦-೧೬೫೦, ನವದೆಹಲಿ: ಕೇಂಬ್ರಿಜ್ ಯುನಿವರ್ಸಿಟಿ ಪ್ರೆಸ್.

೮೯. ಹ್ಯಾಮಿಲ್ಟನ್ ಸಿ ಜೆ, ೧೯೧೯. ಟ್ರೇಡ್ ಆ್ಯಂಡ್ ಟ್ರೇಡ್ ರಿಲೇಷನ್ಸ್ ಬಿಟ್ವೀನ್ ಇಂಗ್ಲೇಂಡ್ ಆ್ಯಂಡ್ ಇಂಡಿಯಾ ೧೬೦೦-೧೮೯೬, ಲಂಡನ್: ಥಕ್ಕೇರ್ ಸ್ಪಿಂಕ್ ಆ್ಯಂಡ್ ಕಂಪೆನಿ.

**ಆ. ವಿಶ್ವಕೋಶಗಳು**

೧. ಮೋಹನ್ ಕೃಷ್ಣರೈ ಕೆ(ಸಂ), ೨೦೧೦. ವಿಜಯ್ ಪೂಣಚ್ಚ ತಂಬಂಡ(ಪ್ರಧಾನ ಸಂಪಾದಕರು), ಯುರೋಪ್-ವಿವಿಧ ಆಯಾಮಗಳು, ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೫, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೨. ವಿಜಯ್ ಪೂಣಚ್ಚ ತಂಬಂಡ(ಸಂ), ೨೦೧೦. ಸಬಾಲ್ಟರ್ನ್ ಚರಿತ್ರೆ: ಬರವಣಿಗೆ ಕ್ರಮ ಮತ್ತು ವಿಮರ್ಶೆ, ವಿಜಯ್ ಪೂಣಚ್ಚ ತಂಬಂಡ(ಪ್ರಧಾನ ಸಂಪಾದಕರು), ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೧, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೩. ವಿಜಯ್ ಪೂಣಚ್ಚ ತಂಬಂಡ(ಸಂ), ೨೦೧೦. ಭಾರತ ಉಪಖಂಡದ ಆಧುನಿಕ ಪೂರ್ವ ಚರಿತ್ರೆ ವಿವಿಧ ಆಯಾಮಗಳು, ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೨, ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

**ಇ. ಸ್ಮರಣ ಸಂಚಿಕೆಗಳು**

೧. ಅಮೃತ ಸೋಮೇಶ್ವರ(ಸಂ), ೨೦೧೧. ಅಬ್ಬಕ್ಕ ಸಂಕಥನ, ಉಳ್ಳಾಲ: ವೀರರ ರಾಣಿ ಅಬ್ಬಕ್ಕರಾಣಿ ಉತ್ಸವ ಸಮಿತಿ ಮಂಗಳೂರು.

೨. ಅರಬ್ ಮರಿಟೈಮ್ ಟ್ರೇಡಿಷನ್ಸ್ ಆಫ್ ದ ಇಂಡಿಯನ್ ಓಷಿಯನ್ ಸೆಮಿನಾರ್ ಪೇಪರ್ಸ್ ೨೦೦೬, ಮುಂಬೈ.

೩. ದಿ ಜರ್ನಲ್ ಆಫ್ ದ ಇಂಡಿಯನ್ ಓಷಿಯನ್ ಆರ್ಕಿಯಾಲಜಿ, ೨೦೦೬, ನವದೆಹಲಿ.

೪. ದಿ ಟ್ರಾವೆಲ್ಸ್ ಅಲಾಂಗ್ ನೋರ್ತ್ ಕೊಂಕಣ್ ಕೋಸ್ಟ್ ಎಂಡ್ ಗುಜರಾತ್ ಇನ್ ದ ೧೫ ಸೆಂಚುರಿ, ಸೆಮಿನಾರ್ ಪೇಪರ್, ೨೦೧೪, ಮುಂಬೈ.

೫. ದ ವೆನಿಷಿಯನ್ ಟ್ರಾವೆಲರ್ಸ್ ನಿಕೋಲೋ ಡಿ ಕಾಂಟಿ ಮತ್ತು ಲೂಡೋವಿಕೋ ಡ ವರ್ತೆಮ್, ನಿಕೆಟಿನ್ಸ್, ಸೆಮಿನಾರ್ ಪೇಪರ್ಸ್, ೨೦೦೮, ಮುಂಬೈ.

೬. ದ ಸಿಲ್ಕ್ ರೂಟ್ ಆಫ್ ಮಾರ್ಕೋ ಪೊಲೋ ಇನ್ ಸೌತ್ ಏಷ್ಯಾ, ಸೆಮಿನಾರ್ ಪೇಪರ್ಸ್, ೨೦೦೭, ಮುಂಬೈ.

೭. ಮರೈನ್ ಹಿಸ್ಟರಿ ಸೊಸೈಟೀಸ್ ಸೆಮಿನಾರ್ ಪೇಪರ್ಸ್, ೧೯೯೫, ಮುಂಬೈ.

೮. ಮುಕ್ಕುಂದ ಪ್ರಭು ಎಂ(ಸಂ), ೨೦೦೦. ಪೊಲಿ–ಕೆನರಾ, ೨೦೦೦, ಮಂಗಳೂರು: ದಕ್ಷಣ ಕನ್ನಡ ಜಿಲ್ಲಾಡಳಿತ.

೯. ವಿವೇಕ ರೈ ಬಿ.ಎ, ೨೦೧೬. ಮಂಗಳೂರು ದರ್ಶನ ಸಂಪುಟ ೧,೨,೩, ಮಂಗಳೂರು: ನಗರಾಭಿವೃದ್ಧಿ ಪ್ರಾಧಿಕಾರ.

**ಈ. ನಿಯತಕಾಲಿಕೆಗಳು**

೧. ಇಂಟರ್ ನ್ಯಾಷನಲ್ ಜರ್ನಲ್ ಆಫ್ ಅಕಾಡೆಮಿಕ್ ರಿಸರ್ಚ್, ಸಂ–(೨), ಏಪ್ರಿಲ್, ೨೦೧೫, ಮೈಸೂರು.

೨. ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್, ಚರಿತ್ರೆ ವಿಭಾಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ದಿ ಜರ್ನಲ್ ಆಫ್ ಸೋಶಿಯಲ್ ಆ್ಯಂಡ್ ಎಕಾನಾಮಿಕ್ ಡೆವೆಲಪ್‌ಮೆಂಟ್(ಅರ್ಧವಾರ್ಷಿಕ), ಇನ್ಸ್‌ಟಿಟ್ಯೂಟ್ ಆಫ್ ಸೋಶಿಯಲ್ ಆ್ಯಂಡ್ ಎಕಾನಾಮಿಕ್ ಚೇಂಜ್, ಬೆಂಗಳೂರು.

೪. ಚರಿತ್ರೆ ಅಧ್ಯಯನ, ಚರಿತ್ರೆ ವಿಭಾಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಹೊಸತು, ಮಾಸಿಕ ನವಕರ್ನಾಟಕ ಪ್ರಕಾಶನ, ಬೆಂಗಳೂರು.

**ಉ. ದಿನಪತ್ರಿಕೆಗಳು**

೧. ವಿಜಯ ಕರ್ನಾಟಕ ದಿನಪತ್ರಿಕೆ, ಬೆಂಗಳೂರು.

೨. ವಾರ್ತಾ ಭಾರತಿ ದಿನಪತ್ರಿಕೆ, ಮಂಗಳೂರು.

೩. ಉದಯವಾಣಿ ದಿನಪತ್ರಿಕೆ,ಮಣಿಪಾಲ್.

೪. ದಿ ಹಿಂದೂ ದಿನಪತ್ರಿಕೆ, ಬೆಂಗಳೂರು.

೫. ಕನ್ನಡ ಪ್ರಭ ದಿನಪತ್ರಿಕೆ, ಬೆಂಗಳೂರು.

**ಊ. ಅಂತರ್ಜಾಲ ಆಕರಗಳು**

1. www.archive.org/web
2. https://en.m.wkipedia. org/
3. https://www.thfamouspeople.com.
4. https://www.gktoday.in/.../moplah
5. https://self.studyhistory.com/.../peasant
6. www.mainstrermweekly.net/article7406
7. https://www.utsavapedia.com

8. shodhganga.inflibnet/ac.in/.../...12_

9. www.gloriousinda.com/g/tamil-nadu.

10. www.ggde.net/maddison/.../moghal-3.pd

**II ಅಪ್ರಕಟಿತ ಆಕರಗಳು**

**ಅ. ಪತ್ರಾಗಾರ ದಾಖಲೆಗಳು**

೧. ಅಬ್‌ಸ್ಟ್ರಾಕ್ಟ್ ಆಫ್ ದ ಡಿಸ್ಪೆಚೆಸ್ ಫ್ರಮ್ ಇಂಗ್ಲೆಂಡ್ ೧೭೮೬–೧೮೩೦(ನಂಬ್ರ ೧೬೭ ೧೭೫)– ಚೆನ್ನೈ ಪತ್ರಾಗಾರ.

೨. ಅಬ್‌ಸ್ಟ್ರಾಕ್ಟ್ ಆಫ್ ದ ಡಿಸ್ಪಾಚೆಸ್ ಟು ದ ಇಂಗ್ಲೆಂಡ್ ೧೭೬೬–೧೭೯೪ ನಂಬ್ರ ೪೯–೫೧, ೫೧, ೫೫–೫೬–ಚೆನ್ನೈ ಪತ್ತಾಗಾರ.

೩. ಕಮರ್ಷಿಯಲ್ ಡಿಫಾರ್ಟ್‌ಮೆಂಟ್ ಫೈಲ್ ನಂ, –೧೮೨೩ (ಸಂಖ್ಯೆ–೨೩)–ಮುಂಬೈ ಪತ್ರಾಗಾರ.

೪. ದಿ ರೆಕಾರ್ಡ್ ಆಫ್ ಫ್ಯಾಕ್ಟರೀಸ್ ಎಂಡ್ ರೆಸಿಡೆನ್ಸ್ (ಪಿಯುಬಿ) ಕಾರವಾರ್ ಫ್ಯಾಕ್ಟರಿ ೧೭೫೧–೫೨–ಮುಂಬೈ ಪತ್ರಾಗಾರ.

೫. ರೆಕಾರ್ಡ್ ಆಫ್ ದ ಪೋರ್ಟ್ ಸೆಂಟ್ ಜೋರ್ಜ್, ೧೭೬೩, ಚೆನ್ನೈ ಪತ್ರಾಗಾರ.

೬. ಮಿಲಿಟರಿ ಡಿಫಾರ್ಟ್‌ಮೆಂಟ್ ಫೈಲ್ ನಂ, ೧೮೩೧ (ಸಂಖ್ಯೆ ೬೦)–ಮುಂಬೈ ಪತ್ರಾಗಾರ.

೭. ಮಿನಿಟ್ಸ್ ಬುಕ್ಸ್, ಕಮರ್ಷಿಯಲ್ ಆ್ಯಂಡ್ ಮಿಲಿಟರಿ ಡಿಫಾರ್ಟ್‌ಮೆಂಟ್ (೧೭೮೬–೧೭೮೯) ಸಂಪುಟ–೧೧, ಮುಂಬೈ ಪತ್ರಾಗಾರ

೮. ರೆವೆನ್ಯೂ ಡಿಪಾರ್ಟ್‌ಮೆಂಟ್ ಡೈರೀಸ್(೧೭೭೯–೧೮೩೦)–ಮುಂಬೈ ಪತ್ರಾಗಾರ

೯. ಲಿವ್ರೋ ಡ ಕರೆಸ್ಪಾಂಡೆನ್ಸ್ ಡೋ ಕೆನರಾ (ದ ಬುಕ್ ಆಫ್ ಕರೆಸ್ಪಾಂಡೆನ್ಸ್ ಆನ್ ಕೆನರಾ I (೧೯೯೮–೧೭೩೦) ಮತ್ತು II (೧೭೪೭–೯೯):– ಇದರಲ್ಲಿ ಗೋವಾದ ವೈಸರಾಯ್, ಗವರ್ನರ್‌ಗಳು, ಇಕ್ಕೇರಿ ಮತ್ತು ಪೋರ್ಚುಗೀಸರ ಕೆನರಾ ಪ್ರಾಂತ್ಯದ ಅಧಿಕಾರಿಗಳಿಗೆ, ಚರ್ಚುಗಳ ವಿಕಾರ್‌ಗಳಿಗೆ ಮತ್ತು ಸ್ಥಳಿಯ ರಾಜರುಗಳಿಗೆ ಸಂಬಂಧಿಸಿ ನಡೆಸಿದ ಪತ್ರವ್ಯವಹಾರಗಳ ಮೂಲ ದಾಖಲೆಗಳು, ಪಣಜಿ ಪತ್ರಾಗಾರ.

೧೦. ಲಿವ್ರೋ ಡ ರೆಜಿಮೆಂಟೋಸ್(ದ ಬುಕ್ ಆಫ್ ಅರ್ಡಿನೆನ್ಸ್ ಎಂಡ್ ಇನ್‌ಸ್ಟ್ರಕ್ಷನ್ಸ್) ನಂ ೧೪, ೧೭೪೭–೫೨, ಮಂಗಳೂರಿನ ಪೋರ್ಚುಗೀಸ್ ಫ್ಯಾಕ್ಟರ್‌ಸಗಳಿಗೆ ಮತ್ತು ನೌಕಾದಳ ಕಮಾಂಡರ್‌ಗಳಿಗೆ ನೀಡಿರುವ ಆಜ್ಞೆಗಳ ಸಂಪುಟ–ಪಣಜಿ ಪತ್ರಾಗಾರ.

೧೧. ಸೀಕ್ರೇಟ್ ಎಂಡ್ ಪೊಲಿಟಿಕಲ್ ಡಿಫಾಟ್‌ಮೆಂಟ್(೭೧) ಡೈರೀಸ್(೧೭೫೫–೧೮೦೧) ಮುಂಬೈ ಪತ್ರಾಗಾರ.

೧೨. ದಿ ರೆಕಾರ್ಡ್ ಆಫ್ ಫ್ಯಾಕ್ಟರೀಸ್ ಆ್ಯಂಡ್ ರೆಸಿಡೆನ್ಸ್(ಪಿಯುಬಿ), ಕಾರವಾರ್ ಫ್ಯಾಕ್ಟರಿ, ೧೭೫೧–೫೨, ಮುಂಬೈ ಪತ್ರಾಗಾರ.೧೨. ಪಿಯಂಬಿಆರ್ ೧೮೮೯, ೨೩೨ ಭಾಗ ೪೧೫: ೧೨೧೪ ಚೆನ್ನೈ ಪತ್ರಾಗಾರ.

**ಆ. ಗೆಜೆಟಿಯರ್‌ಗಳು**

೧. ಅಭಿಶಂಕರ್ ಕೆ(ಸಂ), ೧೯೭೩. ಸೌತ್ ಕೆನರಾ ಡಿಸ್ಟ್ರಿಕ್ಟ್ ಗೆಜೆಟಿಯರ್, ಬೆಂಗಳೂರು: ಸರಕಾರಿ ಮುದ್ರಣಾಲಯ.

೨. ಇಂಫೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ ಪ್ರಾವಿನ್ಸಿಯಲ್ ಸೀರೀಸ್, ೧೯೦೧. ಮುಂಬೈ: ಗವರ್ನಮೆಂಟ್ ಪ್ರೆಸ್.

೩. ಗೆಜೆಟಿಯರ್ ಆಫ್ ಉತ್ತರ ಕನ್ನಡ ಡಿಸ್ಟ್ರಿಕ್, ೧೯೦೫. ಬೆಂಗಳೂರು: ಸರಕಾರಿ ಮುದ್ರಣಾಲಯ.

೪. ರೈಸ್ ಬಿ.ಎಲ್, ೧೦೦೯. ಇಂಪೀರಿಯಲ್ ಗಜೆಟಿಯರ್ ಆಫ್ ಇಂಡಿಯಾ, ಮೈಸೂರು ಆ್ಯಂಡ್ ಕೂರ್ಗ್, ಮದ್ರಾಸ್: ಆರ್ಚಿಬಾಲ್ಡ್ ಕಾನ್ಸ್ಟೇಬಲ್ ಆ್ಯಂಡ್ ಕಂಪನಿ.

೫. ಗೆಜೆಟಿಯರ್ ಆಫ್ ಇಂಡಿಯಾ ಲಕ್ಷ ದ್ವೀಪ, ೧೯೦೫. ಕೊಯಂಬತ್ತೂರು:ಗವರ್ನಮೆಂಟ್ ಪ್ರೆಸ್.

೬. ಗೆಜೆಟಿಯರ್ ಆಫ್ ಬೊಂಬೆ ಪ್ರೆಸಿಡೆನ್ಸಿ ಬೆಳಗಾಂ(xxi), ೧೮೮೪, ಮುಂಬೈ: ಸೆಂಟ್ರಲ್ ಪ್ರೆಸ್.

೭. ಗೆಜೆಟಿಯರ್ ಆಫ್ ಬೊಂಬೆ ಪ್ರಸಿಡೆನ್ಸಿ ಕೆನರಾ(xv), ಮುಂಬೈ: ಸೆಂಟ್ರಲ್ ಪ್ರೆಸ್.

೮. ಮದ್ರಾಸ್ ದ ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ(೧೯೦೪) ಗವರ್ನಮೆಂಟ್ ಪ್ರೆಸ್ ಮದ್ರಾಸ್

೯. ಸ್ಟರಕ್ ಜೆ., ೧೮೯೪. ಮದ್ದಾಸ್ ಡಿಸ್ಟ್ರಿಕ್ ಮ್ಯಾನ್‌ವೆಲ್ಸ್ ೧೮೯೪ ಭಾಗ–೧, ಮದ್ರಾಸು: ಗವರ್ನ್‌ಮೆಂಟ್ ಪ್ರೆಸ್.

೧೦. ಹೆರಾಲ್ಡ್ ಎ ಸ್ಟೂವರ್ಟ್, ೧೮೯೫. ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನ್‌ವೆಲ್ಸ್ – ಸೌತ್ ಕೆನರಾ ಭಾಗ–೨ ಮದ್ರಾಸ್: ಗವರ್ನ್‌ಮೆಂಟ್ ಪ್ರೆಸ್.

೧೧. ಹಂಟರ್ ಡಬ್ಲ್ಯೂ ಡಬ್ಲ್ಯೂ ೧೮೮೧. ದ ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ, ಲಂಡನ್: ಅರ್ಚಿಬಾಲ್ಡ್ ಕಾನ್ಸ್ಟೆಬಲ್ ಎಂಡ್ ಕಂಪನಿ.

**ಇ. ಅಪ್ರಕಟಿತ ಎಂ.ಫಿಲ್ ಪ್ರಬಂಧಗಳು**

೧. ಗುಣವತಿ ಡಿ, ೨೦೦೭. ಹಿಸ್ಟರಿ ಆಫ್ ಸಾಲ್ಟ್ ಅಡ್ಮಿನಿಸ್ಟ್ರೇಷನ್ ಇನ್ ಮದ್ರಾಸ್ ಪ್ರೆಸಿಡೆನ್ಸಿ, ೧೮೦೦–೧೯೪೭, ಚರಿತ್ರೆ ವಿಭಾಗ, ಮದ್ರಾಸ್ ವಿಶ್ವವಿದ್ಯಾಲಯ.

೨. ಜಯಕುಮಾರ್ ಎಂ, ೨೦೦೧. ಡೆವೆಲಪ್‌ಮೆಂಟ್ ಆಫ್ ಪ್ಲಾಂಟೇಶನ್ ಎಕಾನಮಿ ಇನ್ ಕೊಲೋನಿಯಲ್, ಮದ್ರಾಸ್, ೧೮೦೦–೧೯೦೦, ಚರಿತ್ರೆ ವಿಭಾಗ, ಚೆನ್ನೈ: ಮಾನಮಲ್ಲೈ ಸುಂದರಂ ವಿಶ್ವವಿದ್ಯಾನಿಲಯ.

**ಈ. ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧಗಳು**


೧. ಅರುಣ್ ಎಚ್.ಟಿ, ೨೦೦೨. ಕೆಳದಿ ನಾಯಕರ ಕಾಲದ ತೆರಿಗೆ ಪದ್ಧತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಆಲ್ವಾರೀಸ್ ಆರ್ಸೆಸ್ಟ್, ೧೯೩೦. ದಿ ನಾಯಕಾಸ್ ಆಫ್ ಇಕ್ಕೇರಿ, ಮುಂಬೈ ವಿಶ್ವವಿದ್ಯಾನಿಲಯ.

೩. ಕಲ್ಲಾಪುರ ಜಿ.ಎ. ೧೯೯೨. ಕೆಳದಿ ಅರಸರ ಆಳ್ವಿಕೆಯಲ್ಲಿ ಸಂಸ್ಕೃತ, ಸಾಹಿತ್ಯ ಒಂದು ಸಮೀಕ್ಷೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಕಾಡ ದೇವರ ಮಠ, ೧೯೫೫. ದಿ ಕನ್ನಡ ಲಿಟರೇಚರ್ ಡ್ಯೂರಿಂಗ್ ದಿ ಪಿರಿಯಡ್ ಆಫ್ ಕೆಳದಿ ಕಿಂಗ್‌ಡಂ, ಮುಂಬೈ ವಿಶ್ವವಿದ್ಯಾಲಯ.

೫. ಕುಂಜ್ಞಿ, ಇಬ್ರಾಹಿಂ ಎ.ಪಿ, ೧೯೭೫. ಟೆನೆನ್ಸಿ ಲೆಜಿಸ್ಲೇಷನ್ ಇನ್ ಮಲಬಾರ್ ೧೮೮೦-೧೯೭೦: ಯ್ಯಾನ್ ಹಿಸ್ಟಾರಿಕಲ್ ಅನಾಲಿಸಿಸ್, ಕ್ಯಾಲಿಕಟ್ ವಿಶ್ವವಿದ್ಯಾಲಯ.

೬. ಕುರೂಪ್ ನಾರಾಯಣ ಕೆ.ಕೆ, ೧೯೭೬. ಹಿಸ್ಟರಿ ಆಫ್ ದ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿ ಸೆಟ್ಲ್‌ಮೆಂಟ್ ಇನ್ ತಲಶ್ಯೇರಿ, ಕ್ಯಾಲಿಕಟ್ ವಿಶ್ವವಿದ್ಯಾಲಯ.

೭. ಕುಟಿನ್ಹಾ ರೋನಾಲ್ಡ್, ೧೯೯೮. ಸೋಷಿಯೋ ಎಕಾನಾಮಿಕ್ ಸ್ಟಡಿ ಆಫ್ ದಿ ಕ್ರೈಷಿಯತ್ಸ್ ಆಫ್ ಸೌತ್ ಆ್ಯಂಡ್ ನಾರ್ತ್ ಕೆನರಾ, ಮೈಸೂರು ವಿಶ್ವವಿದ್ಯಾನಿಲಯ.

೮. ಖಾನ್ ಮುಜಾಹಿದ್, ೨೦೦೭. ಆ್ಯನ್ ಅಡ್ಮಿನಿಸ್ಟ್ರೇಟಿವ್ ಹಿಸ್ಟರಿ ಆಫ್ ಮೈಸೂರು ಅಂಡರ್ ಹೈದರಾಲಿ ಆ್ಯಂಡ್ ಟಿಪ್ಪುಸುಲ್ತಾನ್ ಫ್ರಮ್ ೧೭೬೧ ಟು ೧೭೯೯ ಎ.ಡಿ(ವಿತ್ ಸ್ಪೆಷಲ್ ಎಂಪಾಸಿಸ್ ಆನ್ ಮಿಲಿಟರಿ ಅಡ್ಮಿನಿಸ್ಟ್ರೇಷನ್), ಬೆಂಗಳೂರು ವಿಶ್ವವಿದ್ಯಾಲಯ.

೯. ಗಂಗಮ್ಮ, ೧೯೯೯. ಕೆಳದಿ ಅರಸರ ಕಾಲದ ಕೃಷಿ ವ್ಯವಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೧೦. ಚಿಟ್ನೀಸ್ ಕೆ.ಎನ್, ೧೯೭೯. ದಿ ಕೆಳದಿ ಪಾಲಿಟಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೧. ನಾಯ್ಕ್ ಶ್ರೀಧರ್ ಜಿ, ೨೦೦೭. ದ ಸೊಸೈಟಿ ಆ್ಯಂಡ್ ಪಾಲಿಟಿಕ್ಸ್ ಇನ್ ಸೌತ್ ಕೆನರಾ(೧೫೦೦-೧೮೦೦), ಮಂಗಳೂರು ವಿಶ್ವವಿದ್ಯಾಲಯ.

೧೨. ನಾಯಕ್ ಭಾಗ್ಯ ಎಚ್, ೨೦೧೪. ಉತ್ತರ ಕನ್ನಡ ಡಿಸ್ಟ್ರಿಕ್(೧೮೬೭-೧೯೪೭) ಎ ಸ್ಟಡಿ ಇನ್ ಕೊಲೋನಿಯಲ್ ಅಡ್ಮಿನಿಸ್ಟ್ರೇಷನ್ ಆ್ಯಂಡ್ ರೀಜನಲ್ ರೆಸ್ಪಾನ್ಸ್, ಗೋವಾ ವಿಶ್ವವಿದ್ಯಾಲಯ.

೧೩. ಪ್ರಭಾಕರ್ ಪೀಟರ್ ವಿಲ್ಸನ್, ೧೯೮೮. ಬಾಸೆಲ್ ಮಿಶನ್ ಇನ್ ಸೌತ್ ಕೆನರಾ(೧೮೩೪ ೧೯೪೭), ಮಂಗಳೂರು ವಿಶ್ವವಿದ್ಯಾಲಯ.

೧೪. ಮರುಳಯ್ಯ ಸಾ.ಶಿ. ೧೯೭೯. ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ ಬೆಂಗಳೂರು ವಿಶ್ವವಿದ್ಯಾಲಯ.

